# ಮಣಿಹ

ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ





. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ
ಬೆಂಗಳೂರು

# ಮಣಿಹ

ದಿ|| ಪೂಜ್ಯ ಡಾ. ಫ. ಗು. ಹಳಕಟ್ಟಿ ಜನ್ಮಶತಮಾನೋತ್ಸವ ಸಂಸ್ಮರಣ ಸಂಪುಟ

ಪ್ರಧಾನ ಸಂಪಾದಕರು :

**ಡಾ|| ಸಿದ್ಧಯ್ಯ ಪುರಾಣಿಕ**

ಸಂಪಾದಕರು :

**ಪ್ರೊ|| ಎಂ. ವಿ. ಸೀತಾರಾಮಯ್ಯ**
**ಡಾ|| ಆರ್. ಶೇಷಶಾಸ್ತ್ರಿ**

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.)
೫೪, 'ಅರವಿಂದ', ೩ನೆಯ ಅಡ್ಡಬೀದಿ, ಗವಿಪುರಂ ವಿಸ್ತರಣ
ಬೆಂಗಳೂರು-೫೬೦ ೦೧೯

MAṆIHA — Dr. P. G. Haḷakaṭṭi Commemorative Volume; Chief Editor: Dr. Siddaiya Puranik; Editors: Prof. M. V. Seetha Ramaiah and Dr. R. Sesha Sastri; Published by B. M. Sri. Memorial Foundation (Regd.), Kannada Literary and Research Service Centre, 54, III Cross, Gavipuram Extension, Bangalore-560 019

Pages: 432+16



Price: Rs. 50-00

First Edition: 1982





Printed at:

LIPI MUDRANA
Bugle Rock Road, Bangalore-560 004

# ಮುನ್ನುಡಿ

ದಿ|| ಫ. ಗು. ಹಳಕಟ್ಟಿಯವರು ಕನ್ನಡ ನಾಡಿನ ಕಾರಣ ಪುರುಷರಲ್ಲಿ ಒಬ್ಬರು. ವಚನಸಾಹಿತ್ಯಕ್ಕೆ ಸಂಬಂಧಪಟ್ಟ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಅವುಗಳ ಪ್ರಕಟನೆಗಾಗಿಯೇ 'ಶಿವಾನುಭವ' ಮಾಸಪತ್ರಿಕೆಯನ್ನು ಹೊರಡಿಸಿ ಅವರು ಕನ್ನಡ ಸಾಹಿತ್ಯಕ್ಕೂ ಸಂಸ್ಕೃತಿಗೂ ಸಲ್ಲಿಸಿದ ಸೇವೆಯನ್ನು ಬಿ. ಎಂ. ಶ್ರೀಯವರು ಅಪಾರವಾಗಿ ಮೆಚ್ಚಿಕೊಂಡಿದ್ದರು. ಅವರು ಒಮ್ಮೆ ಬಿಜಾಪುರಕ್ಕೆ ತೆರಳಿದ್ದಾಗ ಆ ಇತಿಹಾಸ ಪ್ರಸಿದ್ಧ ಸ್ಥಳದ ನೆಲವನ್ನು ಮೆಟ್ಟಿದಾಗ ಮೊತ್ತಮೊದಲು ಅವರು ಕಾಣಬಯಸಿದ್ದು ಗೋಲಗುಮ್ಮಟವನ್ನಲ್ಲ; ಅವರೇ ಅಲ್ಲಿನ ಮಿತ್ರರಿಗೆ ಹೇಳಿದಂತೆ 'ವಚನಗುಮ್ಮಟ'ವನ್ನು. ಅವರಿಬ್ಬರನ್ನೂ ಅವ್ಯಾಜವಾದ ಮೈತ್ರಿಯಲ್ಲಿ ಬಂಧಿಸಿದ್ದು ವಚನ ಸಾಹಿತ್ಯ ಪ್ರೇಮ. ಈ ಹಿನ್ನೆಲೆಯಲ್ಲಿ ಯೋಚನೆಮಾಡಿದಾಗ ಫ. ಗು. ಹಳಕಟ್ಟಿ ಜನ್ಮ ಶತಮಾನೋತ್ಸವದ ನೆನಪಿಗೆಂದು ಬಿ. ಎಂ. ಶ್ರೀ. ಪ್ರತಿಷ್ಠಾನವು ಈ ಸ್ಮರಣಸಂಪುಟವನ್ನು ಹೊರತರುತ್ತಿರುವುದು ಎಷ್ಟು ಉಚಿತವಾಗಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಪ್ರತಿಷ್ಠಾನವು ಮೊದಲು ನಿಶ್ಚಯಿಸಿದಂತೆ ಜನ್ಮಶತಮಾನೋತ್ಸವ ವರ್ಷದಲ್ಲಿಯೇ ಈ ಸಂಪುಟವನ್ನು ಪ್ರಕಟಿಸುವುದು ಸಾಧ್ಯವಾಗಲಿಲ್ಲ. ನಮ್ಮ ನಿರೀಕ್ಷೆಗೆ ಮೀರಿ ಸಂಪುಟದ ಗಾತ್ರವೂ ಅನಿರೀಕ್ಷಿತವಾಗಿ ಬೆಳೆಯುತ್ತಬಂದುದು ಸ್ವಲ್ಪ ತಡವಾದುದಕ್ಕೆ ಮುಖ್ಯಕಾರಣ. ಆದರೂ ಬಹಳ ಬೇಗನೆಯೇ ಸಂಪುಟ ಸಿದ್ಧವಾಗಿ ಹೊರಬರುತ್ತಿರುವುದು ಸಂತೋಷದ ಸಂಗತಿ. ಈ ಕಾರ್ಯದಲ್ಲಿ ಸಹಕರಿಸಿದವರೆಲ್ಲರೂ ನಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಈ ಸಂಪುಟದ ಲೇಖಕರು ಅಖಿಲ ಕರ್ನಾಟಕವನ್ನು ಪ್ರತಿನಿಧಿಸುವವರಾಗಿದ್ದು 'ಮಣಿಹ'ದ ಮೂಲಕ ಅಖಿಲ ಕರ್ನಾಟಕವೇ ದಿವಂಗತರ ವ್ಯಕ್ತಿತ್ವಕ್ಕೆ ತನ್ನ ನಮನವನ್ನು ಅರ್ಪಿಸುತ್ತಿದೆ ಎಂದು ನಾನು ಭಾವಿಸಿದ್ದೇನೆ. ಈ ಸಂಪುಟದ ಮಹತ್ವವೇನು, ಅದರ ಸಿದ್ಧತೆಯಲ್ಲಿ ಯಾರು ಯಾರು ಎಷ್ಟರ ಮಟ್ಟಿಗೆ ಸಹಕರಿಸಿದ್ದಾರೆ ಎಂಬುದನ್ನು ಪ್ರಧಾನ ಸಂಪಾದಕರೂ, ಸಂಪಾದಕರೂ ತಮ್ಮ ಮಾತಿನಲ್ಲಿ ಬಿನ್ನವಿಸಿದ್ದಾರೆ. ಈ ಸಂಪುಟವನ್ನು ವಿದ್ವತ್ಪ್ರೇಮಿಗಳೆಲ್ಲರೂ ಕೊಂಡು ಪ್ರತಿಷ್ಠಾನದ ವಿದ್ವತ್ಸೇವೆಯಲ್ಲಿ ನೆರವಾಗಬೇಕೆಂದು ಕೇಳಿಕೊಳ್ಳುತ್ತೇನೆ. ಮುಖ್ಯವಾಗಿ ಕರ್ನಾಟಕ ಸರ್ಕಾರವು ಪ್ರತಿಷ್ಠಾನದ ಸೇವಾ ಕಾರ್ಯಕ್ಕೆ ಇನ್ನು ಮುಂದಿನ ದಿನಗಳಲ್ಲಿ ಉದಾರವಾಗಿ ಧನಸಹಾಯ ನೀಡುತ್ತ ಬರಬೇಕೆಂದು ಪ್ರಾರ್ಥಿಸುತ್ತೇನೆ.

೩೧–೧೨–೧೯೮೧

ಶ್ರೀ ವಿಟ್ಟೂರು ಶ್ರೀನಿವಾಸರಾವ್

ಅಧ್ಯಕ್ಷರು

# ಮೊದಲ ಮಾತು

ಮೊದಲ ಮಾತಾಗಿ ನಾನು ಹೇಳಬೇಕಾದದ್ದು ಬಹಳವೇನೂ ಇಲ್ಲ. ಆದರೂ ಪ್ರತಿಷ್ಠಾನದ ಅಧ್ಯಕ್ಷರಾದ ನ್ಯಾಯಮೂರ್ತಿ ಸನ್ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸ ರಾಯರೂ, ಸಂಸ್ಥಾಪಕ ಕಾರ್ಯದರ್ಶಿಯವರಾದ ಪ್ರೊ|| ಎಂ. ವಿ. ಸೀತಾರಾಮಯ್ಯ ನವರೂ, 'ಮಣಿಹ' ಸಂಪುಟದ ಪ್ರಧಾನ ಸಂಪಾದಕನಾಗಿ ಇದ್ದುಕೊಂಡು ಸಹಕರಿಸ ಬೇಕೆಂದು ಕೇಳಿಕೊಂಡಿದ್ದರಿಂದ, ಪ್ರಧಾನ ಸಂಪಾದಕನಾಗಿ ಎರಡು ಮಾತನ್ನು ಹೇಳು ವುದು ನನ್ನ ಸಂತೋಷದ ಕರ್ತವ್ಯವಾಗಿದೆ. 'ಮಣಿಹ'ದ ಸಿದ್ಧತೆ ಮತ್ತು ಪ್ರಕಟನೆಯ ಕಾರ್ಯಕ್ಕೆ ಒಪ್ಪಿಗೆ ನೀಡಿ ಒತ್ತಾಸೆ ಕೊಟ್ಟವರು ಪ್ರತಿಷ್ಠಾನದ ಕಾರ್ಯಸಮಿತಿಯ ಸದಸ್ಯರು. ಸಂಪಾದಕ ದ್ವಯರು ಸಿದ್ಧಪಡಿಸಿದ ಲೇಖಕ-ಲೇಖನಗಳ ಪಟ್ಟಿಯನ್ನು ಪರಿಶೀಲಿಸಿ, ಉಪಯುಕ್ತ ಸಲಹೆಗಳನ್ನು ನೀಡಿ, ಸಹಕರಿಸಿದವರು ಸಂಪಾದಕ ಮಂಡಲಿಯ ಮಿತ್ರರು. ವಿದ್ವಾಂಸರಿಗೆ ಬರೆದ ಮನವಿ ಪತ್ರಕ್ಕೆ ನನ್ನ ಸಹಿಯ ಅಧಿಕಾರ ಮುದ್ರೆ ಇದ್ದರೂ, ಲೇಖನಗಳನ್ನು ವಿದ್ವಾಂಸಮಿತ್ರರಿಂದ ತರಿಸಿಕೊಂಡು, ಮುದ್ರಣಕ್ಕೆ ಅಣಿಮಾಡಿಕೊಟ್ಟು, ಕರಡುಗಳನ್ನು ತಿದ್ದಿ ಉದ್ದಕ್ಕೂ ದುಡಿದಿರುವವರು ಸಂಪಾದಕ ದ್ವಯರು. ಎಲ್ಲಕ್ಕಿಂತ ಮೊದಲು ಇಂಥ ಒಂದು ಅಮೂಲ್ಯ ಬರಹಗಳುಳ್ಳ ಅಭೂತಪೂರ್ವವಾದ ಹೆಬ್ಬೊತ್ತಗೆಯನ್ನು ಹೊರತಂದಿರುವ ಪ್ರತಿಷ್ಠಾನದ ಮಣಿಹದಲ್ಲಿ ನನ್ನ ಹೆಸರೂ ಸೇರುವಂತಾದುದು ನನ್ನ ಭಾಗ್ಯವೆಂದೇ ಬಗೆದಿದ್ದೇನೆ.

ಬಿ. ಎಂ. ಶ್ರೀ. ಪ್ರತಿಷ್ಠಾನ ದಿ|| ಪೂಜ್ಯ ಫ. ಗು. ಹಳಕಟ್ಟಿಯವರ ಜನ್ಮ ಶತಾಬ್ದದ ಸವಿನೆನಪಿಗೆಂದು ಈ ಸಂಪುಟವನ್ನು ಹೊರತರುತ್ತಿರುವುದರ ಸಂದರ್ಭ, ಪ್ರಕಟನ ಕಾರ್ಯದಲ್ಲಿ ಬೆಂಬಲವಾಗಿ ನಿಂತವರ ಸಹಾಯದ ಸ್ವರೂಪ, ಈ ಕುರಿತು ಸಂಪಾದಕರು ಮನೋಜ್ಞವಾಗಿ ವಿವರಿಸಿದ್ದಾರೆ. ಅವರ ಮಾತಿಗೆ ದನಿಗೂಡಿಸುವು ದಷ್ಟೆ ನನ್ನ ಪಾಲಿನ ಕರ್ತವ್ಯ. ಬಿ.ಎಂ.ಶ್ರೀ.ಯವರಿಗೂ ಫ. ಗು. ಹಳಕಟ್ಟಿಯವರಿಗೂ ಇದ್ದ ಮೈತ್ರಿ; ಪ್ರಾಚೀನ ಹಸ್ತಪ್ರತಿಗಳನ್ನು ಬೆಳಕಿಗೆ ತರಬೇಕೆಂಬ ವಿಷಯದಲ್ಲಿ ಶ್ರೀಯವರಿಗಿದ್ದ ಕಳಕಳಿ; ವಚನ ಸಾಹಿತ್ಯ ಪ್ರಪಂಚವನ್ನು, ಅದರ ಮಹತ್ವವನ್ನು, ಅದರ ನೆಲೆ ಬೆಲೆಗಳನ್ನು ಮೊತ್ತಮೊದಲಿಗೆ ವಿಶಾಲ ಲೋಕಕ್ಕೆ ತೋರಿಕೊಟ್ಟ ಹಳಕಟ್ಟಿ ಯವರ ಏಕಾಂಗ ಸಾಹಸ; ಹಸ್ತಪ್ರತಿಗಳ ಸಂಗ್ರಹಣ, ಸಂರಕ್ಷಣ, ಪ್ರಕಟನ ಕಾರ್ಯ ಗಳನ್ನು ತನ್ನ ಮುಖ್ಯ ಉದ್ದೇಶಗಳಲ್ಲಿ ಪ್ರತಿಷ್ಠಾನ ಅಳವಡಿಸಿಕೊಂಡಿರುವುದು—ಈ ಹಿನ್ನೆಲೆಯನ್ನು ಪರಿಭಾವಿಸಿದರೆ ಹಸ್ತಪ್ರತಿ ಶಾಸ್ತ್ರಕ್ಕೆ ಮಹತ್ವದ ಕೊಡುಗೆಯಾಗಬಲ್ಲ ಈ ಅಮೂಲ್ಯ ಸಂಪುಟವನ್ನು ಹೊರತರುತ್ತಿರುವ ಪ್ರತಿಷ್ಠಾನ ಎಲ್ಲ ಕನ್ನಡಿಗರ ಕೃತಜ್ಞತೆಗೆ ಪಾತ್ರವಾಗಿದೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ

ಹೆಬ್ಬೊತ್ತಗೆಯ ಮುದ್ರಣದ ವೆಚ್ಚವನ್ನು ಹೊರುವ ಚೈತನ್ಯ ಇನ್ನೂ ಶೈಶವಾವಸ್ಥೆಯಲ್ಲಿರುವ ಪ್ರತಿಷ್ಠಾನಕ್ಕೆ ಎಷ್ಟು ಮಾತ್ರವೂ ಸಾಧ್ಯವಿಲ್ಲ. ಪ್ರಕಟನಪೂರ್ವ ಬೆಲೆ ಚೀಟಿಗಳನ್ನು ಕೊಳ್ಳುವುದರ ಮೂಲಕವೂ ಮತ್ತು ಇತರ ವಿಧಗಳಲ್ಲಿಯೂ ಈಗ ನಮಗೆ ದೊರೆತಿರುವ ವರಮಾನ ಪ್ರಕಟನ ಕಾರ್ಯದ ವೆಚ್ಚದ ಕಾಲುಭಾಗಕ್ಕೂ ಎಟುಕುವುದಿಲ್ಲ. ಈ ಪರಿಸ್ಥಿತಿಯಲ್ಲಿ ಅಭಿಮಾನಿಗಳಾದ ಕನ್ನಡಿಗರು ಈ ಸಂಪುಟವನ್ನು ಕೊಂಡುಕೊಳ್ಳಬೇಕು. ಕನ್ನಡ ನಾಡಿನ ಎಲ್ಲ ಕಾಲೇಜುಗಳೂ ಎರಡೆರಡು ಪ್ರತಿಗಳನ್ನಾದರೂ ಸಂಗ್ರಹಿಸುವುದರಿಂದ ಪ್ರತಿಷ್ಠಾನಕ್ಕೆ ಸಹಾಯವಾಗುವುದು; ಹಾಗೂ ಕಾಲೇಜುಗಳ ಭಂಡಾರಕ್ಕೆ ಒಂದು ಬೆಲೆಯುಳ್ಳ ಪುಸ್ತಕ ಸೇರಿದಂತಾಗುವುದು. ಮುದ್ರಣ ವೆಚ್ಚ ಸರಿತೂಗಿದರೆ ಮಾತ್ರ ಸಾಲದು. ಈ ಪ್ರಕಟನ ಕಾರ್ಯದಿಂದ ಸಾಕಷ್ಟು ಲಾಭವೂ ದೊರೆತು ಆ ಲಬ್ಧ ದ್ರವ್ಯದಿಂದ ಪ್ರತಿಷ್ಠಾನದ ಮುಂದಿನ ಪ್ರಕಟನ ಕಾರ್ಯದ ಚಟುವಟಿಕೆಗೆ ಸಹಾಯವಾಗಬೇಕು. ಈ ಗುರಿ ಮುಟ್ಟಬೇಕಾದರೆ ನಮ್ಮ ಕರ್ನಾಟಕ ರಾಜ್ಯ ಸರ್ಕಾರದ ಸಹಾಯ ಎಷ್ಟು ಅಗತ್ಯವೆಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ಸರ್ಕಾರದ ವಿದ್ಯಾ ಇಲಾಖೆಯವರೂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಅಧಿಕಾರಿಗಳೂ, ಕರ್ನಾಟಕ ರಾಜ್ಯದ ಗ್ರಂಥಾಲಯ ಇಲಾಖೆಯೂ ಮುಂದೆ ಬಂದು ತಮ್ಮ ಸಹಾಯ ಹಸ್ತವನ್ನು ನೀಡಬೇಕೆಂದು ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇನೆ.

ಕೊನೆಯದಾಗಿ 'ಮಣಿಹ'ದ ಪ್ರಕಟನ ಕಾರ್ಯದಲ್ಲಿ ಸಲಹೆ ಸೂಚನೆಗಳನ್ನು ನೀಡುವ ಮೂಲಕ ಸಹಕರಿಸಿದ ಸಂಪಾದಕ ಮಂಡಲಿಯ ಸದಸ್ಯರಿಗೂ, ಅತ್ಯುತ್ತಮವಾಗಿ ಸಂಪಾದನ ಕಾರ್ಯವನ್ನು ನಿರ್ವಹಿಸಿ ನನ್ನ ಹೊಣೆಗಾರಿಕೆಯನ್ನು ಹಗುರಮಾಡಿದ ಸಂಪಾದಕ ದ್ವಯರಿಗೂ ನಾನು ಋಣಿಯಾಗಿದ್ದೇನೆ.

೨೧–೧೨–೧೯೮೧
ಬೆಂಗಳೂರು–೫೨

ಸಿದ್ಧಯ್ಯ ಪುರಾಣಿಕ
ಪ್ರಧಾನ ಸಂಪಾದಕ

# ನಮ್ಮ ಮಾತು

ಬಿ. ಎಂ. ಶ್ರೀ. ಪ್ರತಿಷ್ಠಾನವು ದಿವಂಗತ ಫ. ಗು. ಹಳಕಟ್ಟಿಯವರ ಶತಮಾನೋತ್ಸವ ಸಂದರ್ಭದಲ್ಲಿ, ಹಳಕಟ್ಟಿಯವರು ಕನ್ನಡ ನಾಡು ನುಡಿಗಳಿಗೆ ಸಲ್ಲಿಸಿದ ಸೇವೆಯನ್ನು ಸ್ಮರಿಸಿ, ಅವರ ಬದುಕು ಮತ್ತು ಸಾಧನೆಗಳನ್ನು ನಾಡಿನ ಜನತೆಗೆ ತಿಳಿಸುವ 'ಮಣಿಹ'ವನ್ನು ತುಂಬುಹೃದಯದಿಂದ ಆರಂಭಿಸಿತು. ಹಲವಾರು ಜನರ ಬೆಂಬಲದಿಂದ ಈ ಸ್ಮಾರಕ ಗ್ರಂಥ ಹೊರಬರುತ್ತಿರುವುದು ಪ್ರತಿಷ್ಠಾನಕ್ಕೆ ಹೆಮ್ಮೆಯ ಸಂಗತಿ.

ಈ ಕೃತಿಯ ರೂಪರೇಷೆಗಳನ್ನು ರೂಪಿಸುವಾಗ ಈ ಸ್ಮಾರಕ ಗ್ರಂಥ ಶತಮಾನೋತ್ಸವ ಸಂದರ್ಭಕ್ಕೆಂದು ಹೊರತಂದ ಸಾಂದರ್ಭಿಕ ಕೃತಿಯಾಗಬಾರದು, ಹಲವಾರು ವರ್ಷಗಳ ಕಾಲ ಉಳಿಯಬೇಕಾದ ಕೃತಿಯಾಗಬೇಕು ಎಂಬುದು ನಮ್ಮ ಉದ್ದೇಶವಾಗಿತ್ತು. ಆ ದಿಸೆಯಲ್ಲಿ ನಡೆದಿದ್ದೇವೆ ಎಂಬ ಭರವಸೆ ನಮಗಿದೆ.

ಈ ಕೃತಿಯಲ್ಲಿ ದಿವಂಗತ ಫ. ಗು. ಹಳಕಟ್ಟಿಯವರ ಜೀವನದ ಪರಿಚಯ ಭಾಗವನ್ನು ಉದ್ದೇಶಪೂರ್ವಕವಾಗಿಯೇ ನಾವು ಕಡಿಮೆ ಮಾಡಿದ್ದೇವೆ. ಹಳಕಟ್ಟಿಯವರ ಜೀವನ ಪರಿಚಯವನ್ನು ಮಾಡಿಕೊಡುವ 'ವಚನ ಪಿತಾಮಹ'—ಮುಂತಾದ ಕೃತಿಗಳು ಈಗಾಗಲೇ ಹೊರಬಂದಿರುವುದರಿಂದ ನಾವೂ ಆ ಕೆಲಸವನ್ನು ಮಾಡುವುದು ಪುನರುಕ್ತಿಯಷ್ಟೇ ಅಲ್ಲ, ಅನಗತ್ಯ ಶ್ರಮವೆನ್ನಿಸೀತು. ಆದರೂ ಈ ದಿಸೆಯಲ್ಲಿ ಏನಾದರೂ ಮಾಡಬೇಕೆಂದು ಭಾವಿಸಿ ಹಳಕಟ್ಟಿಯವರ ಪತ್ರಗಳನ್ನು ಪ್ರಕಟಿಸುವ ಯೋಜನೆಯನ್ನು ಹಾಕಿಕೊಂಡೆವು. ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಹಳಕಟ್ಟಿಯವರ ಪತ್ರಗಳನ್ನು ಕೋರಿ ಮನವಿ ಮಾಡಿಕೊಂಡೆವು. ನಮ್ಮ ಮನವಿಗೆ ಪ್ರೋತ್ಸಾಹದಾಯಕ ಉತ್ತರಗಳು ಬಾರದೆಹೋದರೂ ತಿಪಟೂರಿನ ಶ್ರೀ ಎಸ್.ಆರ್. ಮಲ್ಲಪ್ಪನವರು ತಮ್ಮ ಬಳಿಯಿದ್ದ ಬಹು ಸಂಖ್ಯೆಯ ಕಾಗದಗಳನ್ನು ಪ್ರಕಟನೆಗಿತ್ತು ಸಹಕರಿಸಿದರು. ಹಾಗೆಯೇ ತೀ.ನಂ.ಶ್ರೀ. ಅವರ ಪುತ್ರರಾದ ಶ್ರೀ ತೀ. ಶ್ರೀ. ನಾಗಭೂಷಣರೂ ತಮ್ಮ ಬಳಿ ಇದ್ದ ಹಳಕಟ್ಟಿಯವರ ಪತ್ರಗಳನ್ನಿತ್ತು ಸಹಕರಿಸಿದ್ದಾರೆ. ನಾವು ಇಲ್ಲಿ ಪ್ರಕಟಿಸಿರುವ ಹಳಕಟ್ಟಿಯವರ ಪತ್ರಗಳು ಹಸ್ತಪ್ರತಿಗಳ ಬಗ್ಗೆ, ಗ್ರಂಥ ಸಂಪಾದನೆಯ ಬಗ್ಗೆ ಅವರಿಗಿದ್ದ ಅದಮ್ಯ ಉತ್ಸಾಹ; ಅದಕ್ಕಾಗಿ ಅವರು ಪಟ್ಟ ಪಾಡು; ಹೀಗೆ ಅವರ ಬದುಕಿನ ವಿವಿಧ ಮುಖಗಳನ್ನು ತಿಳಿಸುವ ಮೂಲ ಸಾಮಗ್ರಿಗಳಾಗಿವೆ. ಈ ದಿಸೆಯಲ್ಲಿ ನಮ್ಮ ಈ 'ಮಣಿಹ'ಕ್ಕೆ ವಿಶೇಷವಾದ ಮಹತ್ತ್ವವಿದೆ ಎಂದರೆ ಆತ್ಮಪ್ರಶಂಸೆಯಾಗಲಾರದು.

ಹಿರಿಯರಿಗೆ ನಾವು ನಿಜವಾಗಿ ಸಲ್ಲಿಸುವ ಗೌರವವೆಂದರೆ ಅವರಿಗೆ ಆಸಕ್ತಿಯಿದ್ದ ಕ್ಷೇತ್ರದಲ್ಲಿ ಅವರಿಗಿಂತ ಒಂದು ಹೆಜ್ಜೆ ಮುಂದಿಡುವುದು ; ಅದು ನಮ್ಮಿಂದ ಆಗದೆ ಹೋದರೆ ಆ ಕ್ಷೇತ್ರದಲ್ಲಿ ಏನೇನು ಕೆಲಸ ನಡೆದಿದೆ ಎಂಬುದನ್ನಾದರೂ ತಿಳಿಯುವುದು —ಎಂಬುದಾಗಿ ನಾವು ಭಾವಿಸಿದ್ದೇವೆ.

ದಿವಂಗತ ಫ. ಗು. ಹಳಕಟ್ಟಿಯವರಿಗೆ ತುಂಬಾ ಪ್ರಿಯವಾದ ಕಾರ್ಯಕ್ಷೇತ್ರ ವೆಂದರೆ ಹಸ್ತಪ್ರತಿಗಳ ಸಂಗ್ರಹಣ ಮತ್ತು ಅವುಗಳ ಸಂಪಾದನ ಕಾರ್ಯ. ಹಸ್ತಪ್ರತಿಗಳ ಸಂಗ್ರಹ ಕಾರ್ಯದಲ್ಲಿ ಮೊದಲಿಗೆ ದುಡಿದ ಅಗ್ರಗಣ್ಯರು ಅವರು. ಹಸ್ತಪ್ರತಿಗಳ ಬಗ್ಗೆ ಜನಸಾಮಾನ್ಯರಲ್ಲಿ ಅಭಿಮಾನ, ಜಾಗೃತಿ ಮೂಡಬೇಕೆಂಬ ಉದ್ದೇಶದಿಂದ ಹಲವಾರು ದಶಕಗಳ ಹಿಂದೆಯೇ ಹಸ್ತಪ್ರತಿಗಳ ಪ್ರದರ್ಶನವನ್ನು ಮಾಡಿ ಜಾಗೃತಗೊಳಿಸಿದವರು.

ಈ ಎಲ್ಲಾ ಅಂಶಗಳನ್ನು ಮನಗಂಡು ಸಂಪಾದಕ ಮಂಡಳಿ ದಿವಂಗತ ಹಳಕಟ್ಟಿಯವರಿಗೆ ತುಂಬಾ ಪ್ರಿಯವಾಗಿದ್ದ 'ಹಸ್ತಪ್ರತಿ ಶಾಸ್ತ್ರ'ಕ್ಕೆ ಈ ಸ್ಮಾರಕ ಕೃತಿಯಲ್ಲಿ ಆದ್ಯತೆಯನ್ನು ನೀಡಬೇಕೆಂದು ತೀರ್ಮಾನಿಸಿತು. ಹಸ್ತಪ್ರತಿ ಶಾಸ್ತ್ರದ ಎಲ್ಲಾ ಮುಖಗಳನ್ನೂ ಪರಿಚಯಿಸಿ ಕೊಡುವಹಾಗೆ ಮುಖ್ಯವಾಗಿ ನಾಲ್ಕು ವಿಭಾಗ ಗಳನ್ನು ಮಾಡಿಕೊಂಡು ಅದರಲ್ಲಿ ಉಪವಿಭಾಗಗಳನ್ನು ರೂಪಿಸಿತು. ಆಯಾ ವಿಷಯ ದಲ್ಲಿ ಪರಿಣತರಾದ ವಿದ್ವಾಂಸರಿಗೆ ವಿಷಯಗಳನ್ನು ಸೂಚಿಸಿ ಲೇಖನಗಳನ್ನು ಬರೆದು ಕೊಡುವಂತೆ ಕೋರಲಾಯಿತು. ಈ ದಿಸೆಯಲ್ಲಿ ಎಲ್ಲಾ ವಿದ್ವಾಂಸರೂ ಹಳಕಟ್ಟಿ ಯವರ ಬಗೆಗಿನ ಅಭಿಮಾನದಿಂದ, ಬಿ.ಎಂ.ಶ್ರೀ. ಪ್ರತಿಷ್ಠಾನದ ಬಗೆಗಿನ ಆದರದಿಂದ ಸಹಕರಿಸಿದ್ದಾರೆ.

ನಾವು ಈಗಾಗಲೇ ಅರಿಕೆ ಮಾಡಿಕೊಂಡಿರುವಂತೆ ನಮ್ಮ ಈ.'ಮಣಿಹ' ಆಕರ ಗ್ರಂಥವಾಗಬೇಕು ಎಂಬುದಷ್ಟೇ ಅಲ್ಲ ; ಈ ದಿಸೆಯಲ್ಲಿ ಕಾರ್ಯಪ್ರವೃತ್ತರಾಗುವವರಿಗೆ ತೀರಾ ಅಗತ್ಯವಾಗಿ ತಿಳಿದಿರಬೇಕಾದ ಮಾಹಿತಿಯನ್ನೊಳಗೊಂಡ ಕೈದೀವಿಗೆಯೂ ಈ ಸ್ಮಾರಕ ಗ್ರಂಥವಾಗಬೇಕು ಎಂಬುದೂ ಇತ್ತು. ಆದ್ದರಿಂದಲೇ ಈ ಕ್ಷೇತ್ರದಲ್ಲಿ ಕೆಲಸ ಮಾಡುವವರು ಎದುರಿಸಬಹುದಾದ ಸಿಹಿ ಕಹಿ ಅನುಭವಗಳನ್ನೂ, ಅವರಿಗೆ ಇರಬೇಕಾದ ಪಾಂಡಿತ್ಯದ ಅಗತ್ಯವನ್ನೂ ಒತ್ತಿ ತಿಳಿಸುವ ಲೇಖನಗಳನ್ನು ಸೇರಿಸಿದ್ದೇವೆ.

ಕನ್ನಡ ಹಸ್ತಪ್ರತಿಗಳ ಸಂಪೂರ್ಣ ಪರಿಚಯವಾಗಬೇಕಾದರೆ ಇತರ ದೇಶ ಭಾಷೆಗಳ ಹಸ್ತಪ್ರತಿಗಳ ಬಗ್ಗೆಯೂ ತಿಳಿಯಬೇಕಾದ ಆವಶ್ಯಕತೆ ಇದೆ. ಈ ಉದ್ದೇಶ ದಿಂದ ತೆಲುಗು, ತಮಿಳು ಮತ್ತು ಸಂಸ್ಕೃತ ಹಸ್ತಪ್ರತಿಗಳ ಪರಿಚಯವನ್ನು. ಮಾಡಿ ಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹಸ್ತಪ್ರತಿಗಳು ಆಯಾ ದೇಶದ ಅಮೂಲ್ಯ ಆಸ್ತಿಗಳು. ಅವುಗಳನ್ನು ಹಿಂದಿನವರು ಹೇಗೆ ಸಂರಕ್ಷಿಸಿಕೊಂಡು ಬಂದರು ಎಂಬುದನ್ನೂ, ಅವುಗಳ ಬಗ್ಗೆ ಅವರಿಗಿದ್ದ ಪೂಜ್ಯ ಭಾವನೆಯನ್ನೂ ತಿಳಿಯುವುದು ಸೂಕ್ತ. ಈ ದಿಸೆಯಲ್ಲಿ 'ಸರಸ್ವತಿ ಪೂಜೆ' ಮತ್ತು 'ಪುರಾಣಗಳಲ್ಲಿ ಗ್ರಂಥಲೇಖನದ ವಿಚಾರ'—ಎಂಬ ಲೇಖನಗಳು ತುಂಬಾ ಮಹತ್ವದವು ಎಂಬ ಭರವಸೆ ನಮಗಿದೆ.

ಹಸ್ತಪ್ರತಿಗಳು ಕೇವಲ ಬರವಣಿಗೆಯನ್ನೊಳಗೊಂಡ ಬರಹಗಳ ಕಟ್ಟುಗಳಲ್ಲ. ಅವು ಸುಂದರ ಕಲಾಕೃತಿಗಳೂ ಸಹ. ಅವುಗಳ ಲಿಪಿವಿನ್ಯಾಸ, ಅವುಗಳಲ್ಲಿನ ಚಿತ್ರಕಲೆ ಮುಂತಾದುವುಗಳನ್ನು ಆಳವಾಗಿ ಅಭ್ಯಾಸಮಾಡಬೇಕಾದ ಅವಶ್ಯಕತೆ ಇದೆ ಎಂಬ ಅಂಶವನ್ನು ಇಲ್ಲಿನ ಆ ವಿಭಾಗದ ಲೇಖನಗಳು ಒತ್ತಿ ಹೇಳುತ್ತವೆ.

ಹಸ್ತಪ್ರತಿಗಳೆಂದರೆ ತಾಳೆಯೋಲೆಗಳಷ್ಟೇ ಎಂಬ ಅಭಿಪ್ರಾಯವು ಜನ ಸಮಾನ್ಯರಲ್ಲಿ ಮೂಡಿದೆ. ಇದರಲ್ಲಿಯೇ ಮತ್ತೊಂದು ಅಂಶವೆಂದರೆ ನಮ್ಮ ವಿದ್ವಾಂಸರು ಸಾಹಿತ್ಯಿಕ ಹಸ್ತಪ್ರತಿಗಳತ್ತ ಗಮನ ಕೊಡುತ್ತಿರುವಷ್ಟು ಇತರ ಹಸ್ತಪ್ರತಿಗಳತ್ತ ಗಮನ ನೀಡುತ್ತಿಲ್ಲ. ಈ ದಿಸೆಯಲ್ಲಿ ಜನಸಾಮಾನ್ಯರ, ವಿದ್ವಾಂಸರ ಗಮನವನ್ನು ಕೈಫಿಯತ್ತು, ಕಡತ ಮತ್ತು ಉಪೇಕ್ಷಿತ ಹಸ್ತಪ್ರತಿಗಳತ್ತ ಸೆಳೆಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಹಸ್ತಪ್ರತಿಗಳಲ್ಲಿನ ಸಾಮುಗ್ರಿಗಳ ಪರಿಚಯದಷ್ಟೆ ಮುಖ್ಯವಾದುದು ಆ ಹಸ್ತ ಪ್ರತಿಗಳಲ್ಲಿನ ಲಿಪಿಗಳೂ ಸಹ. ಇದುವರೆಗೆ ಲಿಪಿಶಾಸ್ತ್ರವೆನ್ನುವುದು ಶಾಸನಗಳ ಲಿಪಿಯ ಜಾಡನ್ನೇ ಹಿಡಿದು ನಡೆದಿದೆ. ಹಸ್ತಪ್ರತಿಗಳಲ್ಲಿನ ಲಿಪಿಗಳ ಬಗ್ಗೆ ಆಗಿರುವ ಕೆಲಸ ತೀರಾ ಕಡಿಮೆ. ನಮ್ಮ ಸೀಮಿತ ವ್ಯಾಪ್ತಿಯಲ್ಲಿ ಈ ಕೊರತೆಯನ್ನು ತುಂಬುವ ಪ್ರಮಾಣಿಕ ಪ್ರಯತ್ನ ನಡಸಿದ್ದೇವೆ.

ಪ್ರತಿಯೊಂದು ತಲೆಮಾರೂ ತನ್ನ ದೇಶದ ಇತಿಹಾಸವನ್ನು ಪುನರ್ವಿರಚಿಸುತ್ತದೆ. ಈ ರೀತಿಯ ಪುನರ್ವಿರಚನೆ ವಿಮರ್ಶಾತ್ಮಕವೂ ಕ್ರಿಯಾತ್ಮಕವೂ ಆಗಿದ್ದರೆ ಅದು ಮುಂದಿನ ಜನಾಂಗಕ್ಕೆ ದಾರಿದೀವಿಗೆಯಾಗುತ್ತದೆ. ಹಸ್ತಪ್ರತಿಗಳ ಸಂಗ್ರಹ ಕಾರ್ಯ, ಗ್ರಂಥಸಂಪಾದನೆಯನ್ನು ಕುರಿತಂತೆ ನಮ್ಮ ಹಿಂದಿನ ತಲೆಮಾರಿನ ವಿದ್ವಾಂಸರು ಮಾಡಿದ ಸೇವೆಯನ್ನು ಪರಿಚಯ ಮಾಡಿಕೊಡುವ, ಅವರ ಸೇವೆಯನ್ನು ಗುರುತಿಸುವ ಪ್ರಯತ್ನವೂ ಇಲ್ಲಿ ನಡೆದಿದೆ. ಆ ಹಿರಿಯರು ತಮ್ಮ ಸೀಮಿತ ವ್ಯಾಪ್ತಿಯಲ್ಲಿ, ಮಿತಿ ಗಳಲ್ಲಿಯೂ ಅಪಾರವಾಗಿ ದುಡಿದು ಹಸ್ತಪ್ರತಿಶಾಸ್ತ್ರಕ್ಕೆ ಸಲ್ಲಿಸಿದ 'ಮಣಿಹ' ನಮ್ಮ ಮುಂದಿದೆ. ಅದು ನಮ್ಮ ಜವಾಬ್ದಾರಿಯನ್ನು, ನಾವು ಮುಂದೆ ಮಾಡಬೇಕಾದ ಕೆಲಸಗಳನ್ನು ಬೆರಳಿಟ್ಟು ತೋರಿಸುತ್ತಿದೆ.

ದಿವಂಗತ ಹಳಕಟ್ಟಿಯವರಿಗೆ ನಾವು ಸಲ್ಲಿಸಿದ ಈ 'ಮಣಿಹ' ಹಸ್ತಪ್ರತಿ ಶಾಸ್ತ್ರದ ಬಗ್ಗೆ ಹಲವರ ಗಮನವನ್ನಾದರೂ ಸೆಳೆದರೆ ಹಳಕಟ್ಟಿಯವರ ಆತ್ಮಕ್ಕೆ ತೃಪ್ತಿ. ತನ್ಮೂಲಕ ಎಲ್ಲರ ಶ್ರಮವೂ ಸಾರ್ಥಕ.

ನಾಡಿನ ವಿದ್ವಾಂಸರ ಸಹಕಾರದಿಂದ ದಿವಂಗತ. ಪೂಜ್ಯ ಹಳಕಟ್ಟಿಯವರಿಗೆ ಪರೋಕ್ಷ ಗೌರವ ಸಮರ್ಪಣೆಯಾಗಿ ನಮ್ಮ ಈ ಮಣಿಹವನ್ನು ಸಲ್ಲಿಸುವಲ್ಲಿ ನಮಗೆ ತುಂಬಾ ಹೆಮ್ಮೆ ಎನ್ನಿಸುತ್ತದೆ.

## ಕೃತಜ್ಞತೆ

ನಮ್ಮ ಯೋಜನೆಗೆ ಮೊದಲಿನಿಂದಲೂ ಉತ್ತೇಜನ ಕೊಟ್ಟು ಬೆಂಬಲವಾದ ಪ್ರತಿಷ್ಠಾನದ ಅಧ್ಯಕ್ಷರು—ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ಅವರಿಗೆ; ಅಮೂಲ್ಯವಾದ ಸಲಹೆ ಸೂಚನೆಗಳನ್ನು ಕೊಟ್ಟು ಸಹಕರಿಸಿರುವ ಸಂಪಾದಕ ಮಂಡಲಿಯ ಸದಸ್ಯರಿಗೆ; ಬೆಲೆಯುಳ್ಳ ಲೇಖನಗಳನ್ನು ಸಕಾಲಕ್ಕೆ ನೀಡಿ 'ಮಣಿಹ'ಕ್ಕೆ ಮೂರ್ತ ಸ್ವರೂಪವನ್ನು ಕೊಟ್ಟಿರುವ ವಿದುಷ-ವಿದುಷಿಯರಿಗೆ; ನಮ್ಮ ಮನವಿಯನ್ನು ಮನ್ನಿಸಿ 'ಮಣಿಹ'ದ ಪ್ರಧಾನ ಸಂಪಾದಕರಾಗಿ ಮಾರ್ಗದರ್ಶನ ನೀಡಿದ ಡಾ|| ಸಿದ್ಧಯ್ಯ ಪುರಾಣಿಕ ಅವರಿಗೆ; ಪ್ರಕಟನಪೂರ್ವ ಬೆಲೆಚೀಟಿಗಳನ್ನು ವಿಕ್ರಯಮಾಡುವ ಮುಜುಗರದ ಕೆಲಸವನ್ನು ಪ್ರೀತಿಯಿಂದ ಮಾಡಿಕೊಟ್ಟಿರುವ ಸದಸ್ಯರಿಗೆ, ಅಭಿಮಾನಿಗಳಿಗೆ; ಕರಡು ತಿದ್ದುವುದು, ಪತ್ರವ್ಯವಹಾರ ಮುಂತಾದ ಅಗತ್ಯ ಕೆಲಸ ಕಾರ್ಯಗಳಲ್ಲಿ ಸಹಕರಿಸಿದ ಶ್ರೀ ವಿ. ವೆಂಕಟ ರಾವ್ ಮತ್ತು ಶ್ರೀ ನಾ. ಗೀತಾಚಾರ್ಯ ಅವರಿಗೆ; ಅಂದವಾದ ಹೊದಿಕೆ ಚಿತ್ರ ಬರೆದುಕೊಟ್ಟ ಚಿತ್ರಕಾರರಿಗೆ; ಸಾಂದರ್ಭಿಕ ಚಿತ್ರ, ನಕ್ಷೆ, ಛಾಯಾಚಿತ್ರ, ಪಡಿಯಚ್ಚುಗಳನ್ನು ಒದಗಿಸಿಕೊಟ್ಟ ಲೇಖಕಮಿತ್ರರಿಗೆ; 'ಮಣಿಹ'ದ ವೆಚ್ಚವನ್ನು ಸರಿದೂಗಿಸಲು ಸಹಾಯಧನ ನೀಡಿ ಬೆಂಬಲವಾಗಿರುವ ಮಹನೀಯರಿಗೆ, ಸಹಾಯಧನದ ಭರವಸೆ ನೀಡಿರುವ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ವಿಭಾಗದ ನಿರ್ದೇಶಕರಿಗೆ—

ಪ್ರತಿಷ್ಠಾನದ ಪರವಾಗಿ ನಮ್ಮ ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುತ್ತೇವೆ.

ಎಂ. ವಿ. ಸೀತಾರಾಮಯ್ಯ
ಆರ್. ಶೇಷಶಾಸ್ತ್ರಿ
ಸಂಪಾದಕರು

೧-೧-೧೯೮೨
ಬೆಂಗಳೂರು-೧೯

# ಪರಿವಿಡಿ



## ಫ. ಗು. ಹಳಕಟ್ಟಿ : ಬದುಕು, ಬರೆಹ



## ಹಸ್ತಪ್ರತಿಗಳ ಸಂಗ್ರಹಣ ಮತ್ತು ಗ್ರಂಥಸಂಪಾದನ : ಅನುಭವ ನಿವೇದನ

## ಗ್ರಂಥಸಂಪಾದನೆ: ಕೆಲವು ಮುಖಗಳು



## ಹಸ್ತಪ್ರತಿಗಳು: ನಾಡಿನ ಆಸ್ತಿ

## ಗ್ರಂಥಸಂಪಾದನೆ: ಪೂರ್ವ ವಿದ್ವಾಂಸರ ಕೊಡುಗೆ

## ಹಸ್ತಪ್ರತಿಗಳು: ಲಿಪಿವೈವಿಧ್ಯ



## ಅನುಬಂಧಗಳು

## ಕರುನಾಡ ಕಾರಣಿಕ

ಹಗಲೆಲ್ಲ ಹುಟ್ಟುವರೆ
   ಹಳಕಟ್ಟಿಯಂಥವರು—
ಶತಕಸುಕೃತದ ಸತ್ವ
   ಕೊಟ್ಟು ನಿಂತವರು ?

ಈ ನಾಡ ಭಾಗ್ಯತರು
   ಬಿಟ್ಟಮೃತ ಫಲವೊಂದು—
ಸವಿದರೂ ಸವೆಯದಿದೆ
   ಕೋಟಿ ಶುಕ ಬಂದು.

ಶರಣಕುಲ ದೀಪಕನು
   ಜ್ಞಾನ-ದಾಸೋಹಿ
ಕರುನಾಡ ಕಾರಣಿಕ
   ಖ್ಯಾತಿ-ನಿರ್ಮೋಹಿ !

ತಪಿಸಿದನು ನುಡಿಗಾಗಿ
   ಜಪಿಸಿ ಕನ್ನಡ ಮಂತ್ರ !
ನಾಡಿನೇಳಿಗೆಗಿತ್ತ
   ಏಕತೆಯ ತಂತ್ರ !!

ಶಿಕ್ಷಣವೊ, ದುರ್ಭಿಕ್ಷ—
   ಪರಿಹಾರ ಕಾರ್ಯವೋ,
ಸಹಕಾರವೋ, ಬ್ಯಾಂಕೊ,
   ಸ್ವಾತಂತ್ರ್ಯ ಘುರ್ಯವೋ,

ಶೋಧನೆಯೊ ಬೋಧನೆಯೊ,
   ಸುಗತಿಸಾಧನೆಯೋ,
ವಚನ ಪ್ರಕಾಶನವೊ
   ಪತ್ರಸಂಪಾದನೆಯೊ—

ಎಲ್ಲೆಲ್ಲು ಹಳಕಟ್ಟಿ
   ನಿಂತರ್ಕೈ ನಡಕಟ್ಟಿ—
ನೆಲದಮೇಲಡಿಯಿಟ್ಟು
   ಮುಗಿಲಲ್ಲಿ ದಿಟ್ಟಿ.

ಕಷ್ಟಗಳೆ ಆಹಾರ,
   ನಷ್ಟಗಳೆ ನೀರು,
ಕ್ಲೇಶಗಳೆ ಹಾಸಿಗೆಯು—
   ದೊರೆತುವಿವು ಮೂರು.

ಆದರೂ ಶರಣನಿವ
   ಕಂಗೆಡಲೆ ಇಲ್ಲ !
ಆದರ್ಶ ಧ್ಯೇಯಗಳ
   ಕೈಬಿಡಲೆ ಇಲ್ಲ.

ಕೊನೆಯ ಉಸಿರಿನವರೆಗೆ
   ನಮಗಾಗಿ ದುಡಿದ ;
ನಮಗಾಗಿ ಬದುಕಿದನು,
   ನಮಗಾಗಿ ಮಡಿದ !

ನೆನೆಯಿರಿವನನು ನಿತ್ಯ,
   ನಮಿಸಿರಿವನಿಗೆ ನಿತ್ಯ ;
ಇವನು ಕರುನಾಡಿನ
   ಕಾರಣಿಕ ಸತ್ಯ !

—ಸಿದ್ಧಯ್ಯ ಪುರಾಣಿಕ



# ಫಕೀರಪ್ಪನ ನೆನೆದು

ಗೌ. ಮ. ಉಮಾಪತಿ ಶಾಸ್ತ್ರಿ

ಗುರುಬಸವ ಫಕೀರನಾಗಿ
ಕನ್ನಡ ತಾಯ ಕಂದನಾಗಿ
ಬೆಳೆದು ನಿಂದ ;
ಕಂದಿ ಕುಂದಿದ
ಚೆನ್ನುಡಿಯ ನಂದಾದೀಪದ
ಮಂಕು ಕಳೆಯ ಬಂದ.
ನಾಡಿನ ಮನೆ - ಮಠಗಳಲಿ
ಹುಳು ಹತ್ತಿ, ಇಲಿ ಕಡಿದು,
ದೇವರ ಜಗುಲಿಯ ಮೇಲೆ
ಕುರುಡು ಪೂಜೆಗೆ ಬಲಿಯಾಗಿ
ಅಳಿದುಳಿದ ಹೊತ್ತಿಗೆಗಳ ಭಿಕ್ಷೆ ಬೇಡಿ,
ಓಲೆಯ ಕಟ್ಟುಗಳ ಮೇಲೆ ದಟ್ಟವಾಗಿದ್ದ
ನೂರಾರು ವರ್ಷಗಳ ದೂಳಿಯ ಜಾಡಿಸಿ,
ವಿಜಾಪುರದ ಬಾಡಿಗೆಯ ಮನೆಯ
ಕತ್ತಲು ಕೋಣೆಯ ಮೂಲೆಯಲಿ
ಹೊರಸಿನ ಸುತ್ತಲೂ ಹೊತ್ತಿಗೆಗಳ ಹುತ್ತವನೇರಿಸಿ,
ದಿವಾರಾತ್ರಿ ಸ್ವಾಧ್ಯಯನದ ತಪದಗ್ನಿಯಲಿ
ಬೆಂದು ನೊಂದು ಕುಂದಣವಾದ ಅಭಿನವ ಸಿದ್ಧಲಿಂಗನಿವ.
ವಚನಶಾಸ್ತ್ರದ ಬೆಡಗ ಕಂಡು
ಹುಚ್ಚೆದ್ದು ಕುಣಿದಾಡಿದ ಪರಮಹಂಸನಿವ.
ಪುರಾತನರ ಭಾಷೆಯ ಮೋಡಿಗೆ ಮರುಳಾಗಿ,
ಓಲೆಗರಿಯ ಕರಿಯಕ್ಕರಗಳ
ಒದ್ದೆಯಲಿ ನಿಚ್ಚಳಿಸಿ ಓದಿ
ಬಿಳಿ ಹಾಳೆಯ ಬರೆ ಬರೆದು
ಒಟ್ಟಿದ ದ್ವಿತೀಯ ಶಾಂತಯ್ಯನೀತ.
ವಚನಗಳ ರಹಸ್ಯದ

ಶೂನ್ಯದ ಒಳತಿರುಳ
ತಾನು ಮೊದಲು ಸವಿದು,
ಅದರ ರುಚಿಯ ಸಮಾಜ ಶಿವಲಿಂಗನಿಗೆ
ತಿಳಿಗನ್ನಡದಿ ಎಡೆ ಮಾಡಿದ ಬೇಡರ ಕಣ್ಣಪ್ಪನಿವ.
"ಹಾವಸೆಗಟ್ಟಿದ ಮೆಟ್ಟಲಿಳಿದು
ಪಾವಡದಲಿ ಮುಚ್ಚಿ ಮಡಿನೀರ ತರುವಣ್ಣಗಳಿರಾ,
ಜುಳು ಜುಳು ಹರಿವ
ವಚನ ಜರಿಯಲಿ ಮಿಾಯ ಬನ್ನಿ.
ಅಯ್ಯಾ ಗುರುಗಳೇ,
ಮೇಣೆ – ಪಲ್ಲಕ್ಕಿಗಳು ಬಣ್ಣಗೆಟ್ಟವೆ.
ಬೋವಿಗಳ ಬೆನ್ನು ಬಾಗಿವೆ.
ಸಾಕಿನ್ನು ಇಳಿದು ನೆಲಕೆ ಬನ್ನಿ.
ಜಡ್ಡುಗಟ್ಟಿದ ಮಂಡೆಯ ಜುಟ್ಟ ಬಿಚ್ಚಿ ಬನ್ನಿ.
ಅಂದಗೆಟ್ಟ ಕಿರೀಟವ ಬಿಸುಟಿ ಬನ್ನಿ.
ನಿಮ್ಮ ಸಿಸುಮಕ್ಕಳಿಗಿದೋ
ರೇಣುಕರ ಸಿದ್ಧಾಂತಗಳ ಮಣಿಯ ಜೆಳಕ ತೋರ ಬನ್ನಿ.
ಮರಿ ತೋಂಟದಯ್ಯ
ಸಕ್ಕದದ ಜೇನ ಚೆನ್ನುಡಿಯಲ್ಲಿ ತುಂಬಿರುವ
ಬನ್ನಿ, ಬನ್ನಿ ಸವಿಯ ಬನ್ನಿ !!
ಮಣಿ ಭಂಗಾರದಾವುಗೆಯ ಮೆಟ್ಟಿ
ಮಂಡೆ ಬೋಳಾದಯ್ಯಗಳೇ,
ತೂಗು ಮಂಚವ ಬಿಟ್ಟು
ಚೆನ್ನನ ಗುಡಿಸಲಿಗೆ ದಯಮಾಡಿ ಬನ್ನಿ
ನಿಮ್ಮ ದರುಶನಕೆ
ನಿಮ್ಮ ಸೂಳ್ನುಡಿಗೆ
ಕಾತರಿಸಿದ ಮುಗ್ಧ ಭಕ್ತರ
ಉದ್ಧರಿಸ ಬನ್ನಿ ಬನ್ನಿ !
ನಿರಂಜನ ಪ್ರಭುವಾಗಿ,
ಭಕ್ತಿಯ ಭಂಡಾರಿ ದಣ್ಣಾಯಕರಾಗಿ
ಶಿವಾನುಭವ ಚರವರ್ಯ
ತೋಂಟದ ಸಿದ್ಧಲಿಂಗಯತಿಯಾಗಿ
ಬನ್ನಿ ಬನ್ನಿ ಬನ್ನಿ !!!"

ಎಂದು ಕರುಬಿ, 'ಶಿವಾನುಭವ' ದ –
ಚಕ್ಕುಮನೆಯಲಿ ಸಮಾಜಪ 'ಹಿತ ಚಿಂತಕ' ನಾಗಿ
ಹಗಲು – ರಾತ್ರಿ ಎಚ್ಚರಿದ್ದು
'ಸ್ಫುಟ ವಿಚಾರ'ಗಳ ಕರಡು ತಿದ್ದಿ ತಿದ್ದಿ,
'ಕರ್ನಾಟಕ'ದ ಮಕ್ಕಳಿಗೆ
ನಡೆಗಲಿಸಿ ನುಡಿಗಲಿಸಿ,
'ಜಯ' ವಾಗಲೆಂದು ಹರಸಿದ
ಕಾಯ್ಪ ತಂದೆ ಗುರುಬಸವನ ಕರಜಾತನಿವ.
ನಮಗಾಗಿ ತನು–ಧನವನೇ ತೇದು ಸಣ್ಣಾದ
ಫಕೀರಪ್ಪ ಮಣ್ಣುಗೂಡಿ –
ಅಲ್ಲಲ್ಲ, ಒಳಿತೆನ್ನಿ !
ಲಿಂಗೈಕ್ಯನಾಗಿ ಅವೆಷ್ಟು ವರುಷ ಸಂದಿವೆ?
ನಾವಿಂದು ಅವನ ನೆನೆಯುವ ತವಕದಲಿ
ನೂರು ಬರಿಸದ ಹುಟ್ಟು ಹಬ್ಬವ
ಸದ್ದುಗದ್ದಲದಲೇ ಮಾಡುತಿರುವೆವು.
'ವಚನ ಪಿತಾಮಹ' ನೆಂದು
ಹಾಡಿದ್ದೇ ಹಾಡುವ ಕಿಸುಬಾಯ ದಾಸರಾಗಿಹೆವು.
ಗುರು ಫಕೀರನ ಮಂಡೆಗೆ ಹೂವ ತಾರೆವು ನಾವು.
ಏಳನೂರ ಎಪ್ಪತ್ತು ಬರೀ ಕರೀ ಕಲ್ಲು ಲಿಂಗಗಳ
ಬಡವ ಸ್ಥಾವರದಾಯತದ ಪಡಿನೆಳಲಲಿ,
ಬಿಸಿಲು - ಮಳೆ - ಗಾಳಿಗಳಿಯದ
ಜ್ಞಾನಮಯ ಜಂಗಮವೆ ತಾನಾದ
ನಿಜಗುಣಿ ಫ. ಗು. ಹಳಕಟ್ಟಿಯ ಗೋಪೆಗೆ
ಹುಲ್ಲು ಬೆಳೆಸಿದ
ಮುಳ್ಳು ತಂತಿಯ ಸುತ್ತಿದ
ಲಿಂಗವಂತರು ನಾವು !
ಸಾಯುವ ಮುನ್ನವೆ ನಮ್ಮ ಗೋರಿಗಳ
ಸಿಂಗರಿಸಿಕೊಂಡ ವೀರ ವಿರತರು ನಾವು.

ಕೃಪೆ : 'ಹೇಮಕೂಟ'

## 'ಮಣಿಹ'

---

**ನಾ. ಗೀತಾಚಾರ್ಯ**

ಫಕೀರಪ್ಪ ಗುರುಬಸವ ಹಳಕಟ್ಟಿ ನಿಮಗೆ,
ಮಣಿಹ ಎನ್ನುವೆ ನೀವು ಗೈದ ಗೈಮೆಗಳಗೆ.
    ಕನ್ನಡದ ಹೊಸ್ತಿಲಲಿ ರಂಗವಲ್ಲಿಯ ಬಿಡಿಸಿ ;
    ವಚನ ಸಾಹಿತ್ಯದ ಪಿತಾಮಹ ಎನಿಸಿದಿರಿ,
ಗಳಕೆ ವೃತ್ತಿಯ ತೊರೆದು, ಬಿಗಿದು ಟೊಂಕವ ಕಟ್ಟಿ ;
ಕಾಯಕವ ಹಿಡಿದಿರಿ ಕರಗಿಸಲು ಗಟ್ಟಿ.
    ಮೂಲೆ ಮೂಲೆಯ ತಡಕಿ, ಅಕ್ಕರದ ತೆನೆಕೆದಕಿ ;
    ಬಣವೆಯನ್ನೊಟ್ಟಿದಿರಿ ಕನ್ನಡದ ಕಣವಲಿ.
ಇಂದು ಅದನು ಬಿಚ್ಚಿ ಕಣದ ತುಂಬ ಹರಡಿದೆ,
ಕಾಳು ಹೆಕ್ಕುವ ಕಾರ್ಯನಿಂದೀಗ ನಡೆಯುತಿದೆ.
    ಹೆಕ್ಕಿದಂತೆಲ್ಲ ಹೆಚ್ಚುತಿದೆ ಕನ್ನಡದ ಶ್ರೀ.
    ಕೊಯ್ಯಲಿನ್ನೂ ಬಹಳವಿದೆ ಫಸಲಿನ್ನೈಸಿರಿ.
ಕುಡುಗೋಲ ಹಿಡಿದು ಕೊಯ್ಯಲ್ಕಾನು ಬಂದಿಹೆ,
ನನ್ನ ಕಾಯಕಕಿರಲಿ ನಿಮ್ಮ ಬೆಂಬಲ ಹರಕೆ.

# ಫ. ಗು. ಹಳಕಟ್ಟಿ : ಜೀವನ ಪರಿಚಯ

**ಪ್ರೊ॥ ಸ. ಸ. ಮಾಳವಾಡ**

ಡಾ. ಹಳಕಟ್ಟಿ ಅವರು ಜನಿಸಿದ್ದು ಧಾರವಾಡದಲ್ಲಿ. ವಕೀಲಿ ವೃತ್ತಿಯನ್ನು ಆರಂಭಿಸಿದ್ದು ಬೆಳಗಾವಿಯಲ್ಲಿ. ನೆಲೆಯಾಗಿ ನಿಂತದ್ದು ವಿಜಾಪುರದಲ್ಲಿ. ವಕೀಲಿ ವೃತ್ತಿಯನ್ನು ತ್ಯಜಿಸಿ ತಮ್ಮ ಬಾಳನ್ನು ವಚನಸಾಹಿತ್ಯಕ್ಕಾಗಿ ಮುಡಿಪಾಗಿಟ್ಟದ್ದು ಅಲ್ಲಿಯೇ. ವಿಜಾಪುರವು ಅವರ ಕರ್ಮಭೂಮಿ ; ಪುಣ್ಯಭೂಮಿ.

ಅವರು ಜನಿಸಿದ್ದು ೧೮೮೦ ರ ಜುಲೈ ೨ ರಂದು ; ೧೯೬೪ ಜೂನ್ ೨೯ ರಂದು ಲಿಂಗೈಕ್ಯರಾದರು.

ಅವರ ತಂದೆ ಗುರುಬಸಪ್ಪನವರು ಪ್ರಾಥಮಿಕ ಶಾಲೆಯ ಶಿಕ್ಷಕರು. ಹಳೆಯ ಸಂಪ್ರದಾಯದ ಪ್ರಾಥಮಿಕಶಾಲಾಶಿಕ್ಷಕರು ತಮ್ಮ ಮಕ್ಕಳ ವಿದ್ಯಾಭ್ಯಾಸ, ಸದಾಚಾರಗಳ ಬಗೆಗೆ ವಿಶೇಷ ಕಾಳಜಿ ವಹಿಸುತ್ತಿದ್ದರು. ಅಂತೆಯೇ ವಿದ್ವಾಂಸರೂ ಸದಾಚಾರಿಗಳೂ ಆಗಿ ನಾಡಿನ ಸಾಮಾಜಿಕ ಜೀವನದಲ್ಲಿ ಪ್ರತಿಷ್ಠಿತರಾದ ಹಲವರು ಪ್ರಾಥಮಿಕ ಶಾಲಾ ಶಿಕ್ಷಕರ ಮಕ್ಕಳಾಗಿರುವುದನ್ನು ನಾವು ಕಂಡಿದ್ದೇವೆ. ಅಂತಹ ಒಂದು ಉದಾಹರಣೆ ಡಾ. ಹಳಕಟ್ಟಿ ಅವರದಾಗಿದೆ.

ಗುರುಬಸಪ್ಪನವರದು ಬಡತನದ ಮನೆತನ. ಆದರೆ ಅವರು ವಿದ್ಯೆ, ಸಾಹಿತ್ಯ, ಸಂಸ್ಕೃತಿಗಳ ಪ್ರೇಮಿಗಳಾಗಿದ್ದರು. ಆ ಬಳುವಳಿ ಡಾ. ಹಳಕಟ್ಟಿಯವರಲ್ಲಿ ಕಂಡು ಬಂದಿತು. ಅವರ ಪ್ರಥಮ ನಾಮ ಫಕೀರಪ್ಪ. ಈ ಅಂಕಿತ ನಾಮವನ್ನು ಅವರು ಅನ್ವರ್ಥಗೊಳಿಸಿದರು. ಕವಿ ಈಶ್ವರ ಸಣಕಲ್ಲ ಅವರು—

> **ಏನು ಏನೂ ಇಲ್ಲದ ಘನ ಫಕೀರಾ**
> **ಸೂರೆಗೈದೆಯೊ ಜಗಕೆ ವಚನ ಭಾಂಡಾರಾ**

ಎಂದು ಹಾಡಿದ್ದಾರೆ.

ಧಾರವಾಡದ ಬಾಸೆಲ್ ಮಿಶನ್ ಹಾಯ್‌ಸ್ಕೂನಲ್ಲಿ, ಮುಂಬಯಿಯ ಸೇಂಟ್ ಝೇವಿಯರ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ನಡೆಯಿತು. ಮಿಶನರಿ ವಿದ್ಯಾಲಯಗಳು ಹಿಂದೆ ಶಿಸ್ತು, ವ್ಯಾಸಂಗನಿಷ್ಠೆ, ಸೇವಾಮನೋಭಾವಗಳನ್ನು ಪ್ರೇರೇಪಿಸುವುದಕ್ಕೆ ಹೆಚ್ಚಿನ ಗಮನ ಕೊಡುತ್ತಿದ್ದವು. ಮುಂಬಯಿಯ ಝೇವಿಯರ್ ಕಾಲೇಜಿನ ಅಧ್ಯಾಪಕರೆಲ್ಲ ವಿರಕ್ತ (ಫಕೀರ) ರಾಗಿದ್ದು ತಮ್ಮ ಬಾಳನ್ನು ವಿದ್ಯಾವ್ಯಾಸಂಗ, ಸಂಶೋಧನೆಗಳಿಗೆ ಮೀಸಲಾಗಿಡುತ್ತಿದ್ದರು. ಇಂತಹ ಪರಿಸರದ ಪ್ರಭಾವ ಎಳೆಯ

ವಯಸ್ಸಿನ ಫಕೀರಪ್ಪ ಹಳಕಟ್ಟಿಯವರ ಮೇಲೆ ಆಗಿರಬೇಕು. ಅವರು ೧೯೦೨ರಲ್ಲಿ ಬಿ.ಎ. ಪದವಿ ಪಡೆದರು. ಆ ಕಾಲದಲ್ಲಿ ವೀರಶೈವ ಪದವೀಧರರಿಗೆ ಅಂದಿನ ದೊಡ್ಡ ಸರಕಾರಿ ನೌಕರಿಗಳು ತಾವಾಗಿಯೇ ದೊರೆಯುವಂತಿದ್ದವು. ಆದರೆ ಫಕೀರಪ್ಪನವರಲ್ಲಿ ಸಾರ್ವಜನಿಕ ಸೇವಾ ಮನೋಭಾವವಿತ್ತು. ಅದಕ್ಕೆ ಅನುಕೂಲವಾಗುವ ದೃಷ್ಟಿಯಿಂದ ಅವರು ಎಲ್. ಎಲ್. ಬಿ. ವರ್ಗ ಸೇರಿ ಅಭ್ಯಾಸವನ್ನು ಮುಂದುವರಿಸಿದರು.

ಹಳಕಟ್ಟಿ ಎಳೆಯುವರಾಗಿದ್ದಾಗ ಧಾರವಾಡದಲ್ಲಿ ಕನ್ನಡಕ್ಕೆ ಆವರಿಸಿದ ಕತ್ತಲೆ ಪೂರ್ತಿಯಾಗಿ ಅಳಿದಿರಲಿಲ್ಲ. ಈ ಪ್ರದೇಶದಲ್ಲಿ ಕನ್ನಡ ದೀಪವನ್ನು ಮೊದಲು ಹಚ್ಚಿದ ಡೆಪ್ಯೂಟಿ ಚೆನ್ನಬಸಪ್ಪನವರ ಅವಿರತ ಪ್ರಯತ್ನದಿಂದಾಗಿ ಇಲ್ಲಿ ಕನ್ನಡ ಟ್ರೈನಿಂಗ್ ಕಾಲೇಜು ಅಸ್ತಿತ್ವಕ್ಕೆ ಬಂದಿತ್ತು. ಅಲ್ಲಿ ಕನ್ನಡ ಸಾಹಿತ್ಯದ ಬಗೆಗೆ ಶ್ರದ್ಧೆಯಿದ್ದ ಕೆಲವು ಅಧ್ಯಾಪಕರಿದ್ದರು. ತಮ್ಮ ತಂದೆಯಿಂದ ಕನ್ನಡ ಸಾಹಿತ್ಯ ಪ್ರೇಮವನ್ನು ಬಳುವಳಿಯಾಗಿ ಪಡೆದ ಹಳಕಟ್ಟಿಯವರು ಟ್ರೈನಿಂಗ್ ಕಾಲೇಜಿನ ಅಧ್ಯಾಪಕರ ನೆರವಿನಿಂದ ಕನ್ನಡ ಸಾಹಿತ್ಯದ ವ್ಯಾಸಂಗ ಕೈಗೊಂಡರು.

ಅವರು ಪದವೀಧರರಾದಾಗ ಒಮ್ಮೆ ಒಬ್ಬ ವೀರಶೈವ ಸದ್ಗೃಹಸ್ಥರ ಮನೆಯ ಭೋಜನಕೂಟದಲ್ಲಿ ಭಾಗವಹಿಸಬೇಕಾಗಿತ್ತು. ಅತಿಥಿಗಳೆಲ್ಲ ಭೋಜನಕ್ಕೆ ಕೂಡುವ ವೇಳೆಗೆ ಅಲ್ಲಿ ಹಳಕಟ್ಟಿಯವರ ಸುಳವೇ ಇರಲಿಲ್ಲ. ಆ ಮನೆಯಲ್ಲಿಯ ವಚನ ಸಾಹಿತ್ಯದ ಕೈಬರಹದ ಕಟ್ಟುಗಳನ್ನು ನಿರೀಕ್ಷಿಸುವಲ್ಲಿ ಮಗ್ನರಾಗಿ ಅವರು ಭೋಜನವನ್ನೇ ಮರೆತಿದ್ದರು. ಇದು ನಡೆದುದು ೧೯೦೩ರಲ್ಲಿ. ಅಂದಿನಿಂದ ೧೯೬೪ರ ವರೆಗೆ ಅಂದರೆ ೬೧ ವರುಷಗಳ ವರೆಗೆ ಅವರು ಸದಾ ವಚನ ಸಾಹಿತ್ಯದ ವ್ಯಾಸಂಗದಲ್ಲಿ ತೊಡಗಿದ್ದರು. ಇಷ್ಟೊಂದು ದೀರ್ಘ ಅವಧಿಯವರೆಗೆ ಒಂದೇ ಮನದಿಂದ ವಚನ ಸಾಹಿತ್ಯದ ವಾಸಂಗ ಕೈಕೊಂಡವರು ಡಾ. ಹಳಕಟ್ಟಿ ಅವರೊಬ್ಬರೇ ಆಗಿರುವುದು ಅವರ ಜೀವದದ ವೈಶಿಷ್ಟವಾಗಿದೆ.

೧೯೦೪ರಲ್ಲಿ ಅವರ ವಕೀಲಿ ವೃತ್ತಿಯ ಆರಂಭ. ಈಗಾಗಲೆ ಅವರ ಗಮನವು ತಾಡವಾಲಿ ಗ್ರಂಥಗಳತ್ತ ಹರಿದಿತ್ತು. ಅವುಗಳ ಸಂಗ್ರಹದ ಕಾರ್ಯವನ್ನು ಅವರು ಕೈಕೊಂಡರು. ಈಗಲೂ ಸುಲಭವಲ್ಲದ ಆ ಕಾರ್ಯವನ್ನು ಅವರು ನಿಷ್ಠೆಯಿಂದ ಮುಂದುವರಿಸಿದರು. ೧೯೨೦ರ ಸುಮಾರಿಗೆ ಅವರು ಸಾವಿರಾರು ಗ್ರಂಥಗಳನ್ನು ಸಂಗ್ರಹಿಸಿದ್ದರು. ತಾಡವಾಲಿಯ ಕಟ್ಟುಗಳಲ್ಲಿಯ ವಚನಗಳನ್ನು ಕ್ರಮವಾಗಿ ಹೊಂದಿಸುವ ಕಾರ್ಯವನ್ನು ಅವರು ಮೊದಲು ಕೈಕೊಳ್ಳಬೇಕಾಯಿತು. ಅದಕ್ಕಾಗಿ ಆ ಎಲ್ಲ ವಚನಗಳ ಪ್ರತಿಮಾಡುವ ಶುಷ್ಕವಾದ ಪರಿಶ್ರಮದ ಕೆಲಸವು ಅವಶ್ಯಕವೆನಿಸಿತು. ಸರಕಾರ, ಯು.ಜಿ.ಸಿ. (U.G.C.), ಸಾರ್ವಜನಿಕ ಸಂಸ್ಥೆಗಳ ನೆರವು ಲಭ್ಯವಾಗದ ಆ ಕಾಲದಲ್ಲಿ, ವಚನ ಸಾಹಿತ್ಯದ ಕಡೆಗೆ ಜನತೆ ಗಮನ ಹರಿಸದೆ ಇದ್ದ

ಆ ಪರಿಸರದಲ್ಲಿ ಹಳಕಟ್ಟಿಯವರು ನೆರವೇರಿಸಿದ ಕಾರ್ಯವು ಅತ್ಯಂತ ಶ್ಲಾಘನೀಯ ವಾದುದು.

ವಚನಗಳ ಪ್ರತಿಗಳು ಸಿದ್ಧವಾದನಂತರ ಒಬ್ಬೊಬ್ಬ ವಚನಕಾರನ ಇಲ್ಲವೆ ವಚನಕಾರ್ತಿಯ ವಚನಗಳು ಒಂದೆಡೆ ಬರುವಂತೆ ಸಂಕಲನ ಮಾಡುವ ಕಾರ್ಯ ನಡೆಯಿತು. ಈ ಕಾರ್ಯ ನಡೆಯುವ ಪೂರ್ವದಲ್ಲಿ ಸುಮಾರು ೫೦ ಜನ ವಚನ ಕಾರರ ಹೆಸರುಗಳು ತಿಳಿದುಬಂದಿದ್ದವು. ಹಳಕಟ್ಟಿಯವರ ದುಡಿಮೆಯಿಂದಾಗಿ ಸುಮಾರು ೨೫೦ ಜನ ವಚನಕಾರರ ಹೆಸರುಗಳು ತಿಳಿದು ಬರುವಂತಾಯಿತು. ವಚನ ಸಾಹಿತ್ಯದ ಬಗೆಗೆ ಹಳಕಟ್ಟಿಯವರು ಕೈಕೊಂಡುದು ಸೇವೆ ಮಾತ್ರವಾಗದೆ ತಪಸ್ಸಾಗ ಬೇಕಾಯಿತು. ಸಂಗ್ರಹ, ಪ್ರತಿಮಾಡುವುದು, ಸಂಕಲನ, ಸಂಪಾದನೆ, ಅಚ್ಚು ಮಾಡಿ ಪ್ರಕಟಿಸುವುದು, ಕೆಲವು ಸಲ ವ್ಯಾಖ್ಯಾನ ಬರೆಯುವುದು — ಇತ್ಯಾದಿ ಕಾರ್ಯಗಳಲ್ಲಿ ಅವರು ಮಗ್ನರಾಗಿದ್ದರು.

೧೯೨೩ರಲ್ಲಿ ಅವರನ್ನು ಮುಂಬಯಿ ಸರಕಾರ 'ಪಬ್ಲಿಕ್ ಪ್ರಾಸಿಕ್ಯೂಟರ್' ಸ್ಥಾನಕ್ಕೆ ನೇಮಕ ಮಾಡಿತು. ಈ ಸ್ಥಾನವು ಜಿಲ್ಲಾ ನ್ಯಾಯಾಧೀಶ ಸ್ಥಾನಕ್ಕೆ ಪ್ರವೇಶ ಒದಗಿಸುವಂತಹದು. ಆದರೆ ಹಳಕಟ್ಟಿಯವರು ಮುಂದುವರಿಯಲು ಅಪೇಕ್ಷಿಸಲಿಲ್ಲ. ಮುಂದೆ ವಕೀಲಿ ವೃತ್ತಿಯನ್ನೇ ತೊರೆದು ತಮ್ಮನ್ನು, ತಮ್ಮ ಶಕ್ತಿಯನ್ನು ವಚನ ಸಾಹಿತ್ಯಕ್ಕಾಗಿ ಮಾರಿಕೊಂಡರು.

೧೯೨೬ರಲ್ಲಿ "ಹಿತಚಿಂತಕ" ಮುದ್ರಣಾಲಯವನ್ನು ಸ್ಥಾಪಿಸಿದರು. ತಾವು ಸಿದ್ಧಗೊಳಿಸಿದ ವಚನ ಸಾಹಿತ್ಯದ ಕೃತಿಗಳನ್ನು ಕ್ರಮಶಃ ತಾವೇ ಪ್ರಕಟಿಸುವ ದೃಷ್ಟಿಯಿಂದ ಅವರು ಮುದ್ರಣಾಲಯವನ್ನು ಸ್ಥಾಪಿಸಿರಬೇಕು. ಅದೇ ವರುಷ 'ಶಿವಾನುಭವ' ಪತ್ರಿಕೆಯನ್ನು ಆರಂಭಿಸಿದರು. ಆ ಪತ್ರಿಕೆಯು ಕರ್ನಾಟಕದ ವಿದ್ವತ್ ಸಂಪ್ರದಾಯದ ಪತ್ರಿಕೆಗಳಲ್ಲಿ ಶ್ರೇಷ್ಠ ಸ್ಥಾನಕ್ಕೆ ಅರ್ಹವಾಗಿದೆ. ಅದರ ಮೂಲಕ ವಚನಸಾಹಿತ್ಯದ ಕೃತಿಗಳು — ವೀರಶೈವ ಕವಿಗಳ ಕಾವ್ಯಗಳು, ವೀರಶೈವ ಧರ್ಮ, ಸಂಸ್ಕೃತಿ, ವೀರಶೈವ ಅರಸು ಮನೆತನಗಳು, ಶಿವಶರಣ ಚರಿತ್ರೆಗಳು — ಇತ್ಯಾದಿ ನೂರಾರು ಕೃತಿಗಳು ಬೆಳಕಿಗೆ ಬರುವಂತಾಯಿತು. ನೂರಾರು ಹೊಸ ಲೇಖಕರನ್ನು ರೂಪುಗೊಳಿಸಿದ ಶ್ರೇಯಸ್ಸೂ ಹಳಕಟ್ಟಿಯವರದಾಗಿದೆ.

ಹಳಕಟ್ಟಿಯವರು ಬಡತನದ ಬಾಳನ್ನೇ ಕೊನೆಯವರೆಗೆ ಬಾಳಿದರು. ಶಿವಾನು ಭವ ಪತ್ರಿಕೆಯ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಆದರೂ ಜಿಗಟುತನದಿಂದ, ನಿಷ್ಠೆ ಯಿಂದ ಆ ಪತ್ರಿಕೆಯನ್ನು ಮುಂದುವರಿಸಿದರು. ಆ ಪತ್ರಿಕೆ ಮತ್ತು ತನ್ಮೂಲಕ ಬಳಕೆಗೆ ಬಂದ ಸಾಮುಗ್ರಿ ವಿಪುಲವೂ ಮೌಲಿಕವೂ ಆಗಿದೆ. ಇಂದಿಗೂ ನಮ್ಮ ವಿಶ್ವವಿದ್ಯಾಲಯಗಳು, ವಿದ್ವತ್ ಸಂಸ್ಥೆಗಳು, ವಿದ್ವಾಂಸರು ಡಾ|| ಹಳಕಟ್ಟಿ ಸಂಗ್ರಹಿ ಸಿದ ಭಂಡವಲವನ್ನು ಬಳಸುತ್ತಿರುವುದುಂಟು. ನಮ್ಮ ನಾಡಿನ ಹಿರಿಯ ವಿದ್ವಾಂಸ ರಾದ ಡಾ|| ರಂ. ರಾ. ದಿವಾಕರ, ಕೀ. ಶೇಷ. ಪ್ರೊ|| ಬಸವನಾಳ, ಎಂ. ಆರ್.

ಶ್ರೀನಿವಾಸಮೂರ್ತಿ, ಚನ್ನಪ್ಪ ಉತ್ತಂಗಿ ಅವರು ಹಳಕಟ್ಟಿಯವರ ವ್ಯಾಸಂಗದಿಂದ ಪ್ರೇರಿತರಾಗಿ ವಚನ ಸಾಹಿತ್ಯದ ಬಗೆಗೆ ಮಹತ್ವಪೂರ್ಣ ಕೃತಿಗಳನ್ನು ರಚಿಸಿದರು. ಅವು ಹೊಸ ತಲೆಮಾರಿನವರಲ್ಲಿ ವ್ಯಾಸಂಗಕ್ಕೆ ಪ್ರಚೋದನೆ ಒದಗಿಸಿದವು. ಹೀಗೆ ಡಾ|| ಹಳಕಟ್ಟಿ ವಚನ ಸಾಹಿತ್ಯದ ದಿಸೆಯಲ್ಲಿ ಪರಮ ಗುರು ಸ್ವರೂಪರಾಗಿದ್ದಾರೆ. ಅವರನ್ನು "ವಚನ ಪಿತಾಮಹ" ಎಂದು ಸಂಬೋಧಿಸುವುದು ಸಮರ್ಪಕವಾಗಿದೆ.

ಆದರೆ ಅವರ ಚೇತನವು ವಚನ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ವಿಜಾಪುರದಲ್ಲಿ ಸಿದ್ಧೇಶ್ವರ ವಿದ್ಯಾಸಂಸ್ಥೆ ಸ್ಥಾಪಿಸಿದರು. ಆ ಸಂಸ್ಥೆಯೀಗ ವಿಪುಲವಾದ ವಿದ್ಯಾದಾನ ಕಾರ್ಯದಲ್ಲಿ ನಿರತವಾಗಿದೆ. ಅವರು ಸ್ಥಾಪಿಸಿದ ಸಿದ್ಧೇಶ್ವರ ಬ್ಯಾಂಕ್ ಆರ್ಥಿಕವಲಯದಲ್ಲಿ ಮಹತ್ವದ ಪಾತ್ರ ವಹಿಸುತ್ತಿದೆ. ಅವರು ನೆಯ್ಗೆಯ ಕಾಯಕದವರ ಸಮ್ಮೇಳನವನ್ನು ಸಂಘಟಿಸಿದರು. ಧರ್ಮಪ್ರಚಾರ ಸಭೆಯನ್ನು ಸ್ಥಾಪಿಸಿದರು. ಬರಗಾಲ-ನಿವಾರಣೆ ಸಂಸ್ಥೆಯ ಪದಾಧಿಕಾರಿಗಳಾಗಿ ರೈತ ಬಾಂಧವರ ಹಿತಗೈದರು. ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದರು. ಕರ್ನಾಟಕ ಏಕೀಕರಣ ಪರಿಷತ್ತು, ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷ ಪದವಿಯನ್ನು ಅಲಂಕರಿಸಿದರು. ವಿಜಾಪುರ ಮುನಿಸಿಪಾಲಿಟಿ, ಸ್ಕೂಲ್ ಬೋರ್ಡುಗಳಲ್ಲಿ ಸ್ಮರಣೀಯ ಕಾರ್ಯ ಸಾಧಿಸಿದರು. ಮರಾಠಿ ಪ್ರಭಾವವಿದ್ದ ವಿಜಾಪುರ ಪ್ರದೇಶದಲ್ಲಿ ಕನ್ನಡ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸಿದರು. ಮುಂಬಯಿ ರಾಜ್ಯದ ಶಾಸನಸಭಾ ಸದಸ್ಯರಾಗಿದ್ದರು. ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯಗಳ ಸ್ಥಾಪನೆಯ ದಿಸೆಯಲ್ಲಿ ದುಡಿದರು. ಮುಂಬಯಿ ವಿಶ್ವವಿದ್ಯಾಲಯದಲ್ಲಿ ಕನ್ನಡ ವ್ಯಾಸಂಗಕ್ಕೆ ಭದ್ರವಾದ ತಳಹದಿಯನ್ನು ಒದಗಿಸಿದರು. ಒಬ್ಬ ವ್ಯಕ್ತಿ ಇಷ್ಟೊಂದು ವಿವಿಧ ವ್ಯಾಪಕ ಸೇವಾವಲಯ ಪ್ರವೇಶಿಸಿ ಯಶಸ್ವಿಯಾಗಬಹುದು; ಸ್ವಕೀಯ ಪ್ರಯೋಜನದ ಪ್ರತಿಷ್ಠೆಯ ಸಂಕುಚಿತ ದೃಷ್ಟಿ ಇಲ್ಲವಾದರೆ, ನಿಷ್ಠೆ ಪರಿಶ್ರಮಗಳಿದ್ದರೆ ಒಬ್ಬ ವ್ಯಕ್ತಿ ಅನನುಕೂಲ ಪರಿಸ್ಥಿತಿಯಲ್ಲಿ ಕೂಡ ಏನನ್ನು ಸಾಧಿಸಬಹುದು ಎಂಬ ಮಾತಿಗೆ ಡಾ|| ಹಳಕಟ್ಟಿಯವರ ಜೀವನವು ಒಂದು ಸ್ಪಷ್ಟವಾದ ಉದಾಹರಣೆಯಾಗಿದೆ.

"ಸಾದಾ ಬದುಕು ; ಉದಾತ್ತ ವಿಚಾರ" ಎಂಬ ಸೂತ್ರಕ್ಕೆ ಡಾ|| ಹಳಕಟ್ಟಿ ಜೀವನವು ಒಂದು ಭಾಷ್ಯವಾಗಿತ್ತು. ಅವರು ಯಾವಾಗಲೂ ವಿಧಾಯಕ-ವಿಚಾರಗಳಿಂದ ನಮ್ಮ ಜನತೆಗೆ, ಸಂಸ್ಥೆಗಳಿಗೆ ಒಳ್ಳೆಯ ಮಾರ್ಗದರ್ಶನ ಒದಗಿಸುತ್ತಿದ್ದರು.

ನಾಡಿನ ಸರ್ವತೋಮುಖ ಅಭಿವೃದ್ಧಿಗಾಗಿ ದುಡಿ-ದುಡಿದು ಹಣ್ಣಾದ ಪುಣ್ಯಪುರುಷ ಹಳಕಟ್ಟಿ.

ಪರಂಪರೆಯನ್ನು ಅಳುಕಿಸಬೇಕೆನ್ನುವ, ಮೌಲ್ಯಗಳನ್ನು ವಿಕೃತಗೊಳಿಸುವ ಮನೋಭಾವ ಬೆಳೆಯುತ್ತಿರುವ ಈ ಕಾಲದಲ್ಲಿ ಹಳಕಟ್ಟಿಯವರಂತಹ ಪುಣ್ಯಜೀವಿಗಳ ಸ್ಮರಣೆ ನಾಡಿಗೆ ಕಲ್ಯಾಣಕಾರಿಯಾಗಬಲ್ಲದು.

# ಗ್ರಂಥಸಂಪಾದನಾಶಾಸ್ತ್ರಕ್ಕೆ
# ಡಾ|| ಹಳಕಟ್ಟಿಯವರ ಕೊಡುಗೆ

---

**ಸೀತಾರಾಮ ಜಾಗೀರ್‌ದಾರ್**

ಗ್ರಂಥ ಸಂಪಾದನಾ ಶಾಸ್ತ್ರದ ರೂಪರೇಖೆಗಳನ್ನು ನಿರ್ದೇಶಿಸುವ ಕನ್ನಡದ ಗ್ರಂಥಗಳು ತೀರ ಇತ್ತೀಚೆಗೆ ಬಂದರೂ[1] ಪ್ರಾಚೀನರಿಗೆ ಅದರ ಪರಿಕಲ್ಪನೆಯೇ ಇದ್ದಿಲ್ಲವೆಂದಲ್ಲ. ಅದರಲ್ಲೂ ಪಾಶ್ಚಾತ್ಯ ರೀತಿಯಲ್ಲೇ ಕನ್ನಡದಲ್ಲಿ ಗ್ರಂಥಗಳನ್ನು ಮೊದಲು ಸಂಪಾದಿಸಿದ ಕೀರ್ತಿ ರೆ. ಎಫ್. ಕಿಟ್ಟೆಲ್ ಅವರಿಗೆ ಸಲ್ಲುತ್ತದೆ. ಶ್ರೀಯುತರ ಶಬ್ದಮಣಿದರ್ಪಣ (೧೮೭೨), ಛಂದೋಂಬುಧಿ (೧೮೭೫), ಅನಂತರದಲ್ಲಿ ಇದೇ ಸುಮಾರಿಗೆ ಅಚ್ಚಾದ ಬಿ. ಎಲ್. ರೈಸರ-ನಾಗಚಂದ್ರನ 'ಪಂಪ ರಾಮಾಯಣ' (೧೮೮೨), ನಾಗವರ್ಮನ 'ಕರ್ಣಾಟಕ ಭಾಷಾ ಭೂಷಣ' (೧೮೮೪), ಭಟ್ಟಾಕಳಂಕನ 'ಶಬ್ದಾನುಶಾಸನ' (೧೮೯೦) ಮತ್ತು ಪಂಪನ 'ವಿಕ್ರಮಾರ್ಜುನ ವಿಜಯಂ' (೧೮೯೮) ಇತ್ಯಾದಿಗಳು ದಿವಂಗತ ಹಳಕಟ್ಟಿಯವರು ತಮ್ಮ ಕೆಲಸವನ್ನು ಆರಂಭಿಸುವುದಕ್ಕಿಂತ ಮುಂಚೆಯೇ ಪ್ರಕಟಿಸಲ್ಪಟ್ಟಿದ್ದವು. ಅವುಗಳನ್ನು ಶ್ರೀಯುತರು ನೋಡಿರಲಿಕ್ಕೆ ಸಾಕು. ಮನಸ್ಸು ಮಾಡಿದ್ದರೆ ಡಾ|| ಹಳಕಟ್ಟಿಯವರಿಗೆ ಆಧುನಿಕ ರೀತಿಯಲ್ಲೇ ಸಂಪಾದಿಸಿಕೊಡಲು ಕಷ್ಟವೇನಾಗುತ್ತಿದ್ದಿಲ್ಲ. ಆದರೆ ಹಾಗೆ ಮಾಡಿದ್ದರೆ ಅವರು ಈಗ ಪ್ರಕಟಿಸಿರುವಷ್ಟು ಕೃತಿಗಳನ್ನು ಪ್ರಕಟಿಸಲು ಸಾಧ್ಯವಾಗುತ್ತಿದ್ದಿಲ್ಲ. ಅವರ ಮುಂದೆ ಇದ್ದ ಅಪ್ರಕಟಿತ ಸಾಮಗ್ರಿ ಹಿಮಗಿರಿಯ ಸದೃಶವಾದುದು. ಆಗ, ವಚನ ಸಾಹಿತ್ಯ ಧಾರ್ಮಿಕ ಸ್ವರೂಪದಲ್ಲಿ 'ಗುಪ್ತ ಸರಸ್ವತೀ' ರೂಪದಲ್ಲಿ ಹರಿಯುತ್ತಿತ್ತು. ಆ ರಸಸರಸ್ವತಿಯ ಅಮೃತದ ಸವಿಯು ನಾಡಿನ ಶ್ರೀಸಾಮಾನ್ಯರೆಲ್ಲರಿಗೂ ಮುಟ್ಟುವಂತೆ ಮಾಡಿದ ಘನ ಶ್ರೇಯಸ್ಸು ಡಾ|| ಫ. ಗು. ಹಳಕಟ್ಟಿಯವರಿಗೆ ಸಲ್ಲುತ್ತದೆ. ಡಾ|| ಹಳಕಟ್ಟಿಯವರು ಪ್ರಕಟಿಸಿದ ಕೃತಿಗಳ ವ್ಯಾಪ್ತಿ ಕೇವಲ ಸಂಖ್ಯೆಯಲ್ಲಿ ಬರೆಯುತ್ತಾ ಹೋದರೂ ಹಲವು ಪುಟಗಳಷ್ಟಾಗುತ್ತದೆ![2] ಡಾ|| ಹಳಕಟ್ಟಿಯವರ ಹಸ್ತಪ್ರತಿಗಳ ಸಂಗ್ರಹದ ವಿಸ್ತಾರದ ಬಗ್ಗೆ ಅವರ ಕೆಳಗಿನ ಮಾತುಗಳೇ ಸಾಕ್ಷಿ:

> "೧೯೩೦ರೊಳಗಾಗಿ ನಾನು ಅನೇಕ ಹಳೆಯ ತಾಡೋಲೆಗಳನ್ನು ಸಂಗ್ರಹಿಸಿದ್ದೆ. ಅವು ಸುಮಾರು ಒಂದು ಸಾವಿರ ಪುಸ್ತಕಗಳಷ್ಟಾದವು. ಅವುಗಳಲ್ಲಿ ಕೆಲವು ಅಪೂರ್ವ ಗುಣಗಳನ್ನು ಹೊಂದಿದ್ದವು. ಜನರಿಗೆ ಅವುಗಳಲ್ಲಿ ಅಡಕ

ವಾದ ಕನ್ನಡ ಸಾಹಿತ್ಯದ ಕಲ್ಪನೆ ಇಲ್ಲದ್ದರಿಂದ ನಾನು ಅವುಗಳ ಒಂದು ಪ್ರದರ್ಶನವನ್ನು ಏರ್ಪಡಿಸಿದ್ದೆ. ಅದನ್ನು ಆಗಿನ ಕಲೆಕ್ಟರರು ಉದ್ಘಾಟಿಸಿದರು. ಈ ತಾಡೋಲೆಗಳಲ್ಲಿ ಹೆಚ್ಚಾಗಿ ವೀರಶೈವರ ಗ್ರಂಥಗಳಿದ್ದವು. ಅವುಗಳಲ್ಲಿ ಅತಿ ಮುಖ್ಯವಾದವುಗಳು ೧೧ ಹಾಗೂ ೧೨ನೆಯ ಶತಮಾನದ ಶರಣರು ಹಾಗೂ ಸಂತರಿಂದ ಬರೆಯಲ್ಪಟ್ಟಿದ್ದವು. ವಚನಗಳೆಂದು ಪ್ರಸಿದ್ಧವಾದ ಈ ಬರಹಗಳ ಭಾಷೆ, ಶೈಲಿ ಹಾಗೂ ಅಲ್ಲಿ ನಿರೂಪಿತ ತತ್ವಜ್ಞಾನ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾಗಿವೆ. ಆ ವೇಳೆಯಲ್ಲಿ ಈ ವಚನಗಳ ಬಗೆಗೆ ಜನರಿಗೆ ಏನೂ ಗೊತ್ತಿರಲಿಲ್ಲ. ಕಾವ್ಯಕೃತಿಗಳನ್ನೊಳಗೊಂಡ ಈ ಹಸ್ತಪ್ರತಿಗಳು ಅತಿ ಅಮೂಲ್ಯ ಸಾಹಿತ್ಯಕೃತಿಗಳಾಗಿದ್ದವು. ಅವು ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಹಾಡು ಮೊದಲಾದ ರಚನೆಗಳಾಗಿದ್ದವು. ಸಾಹಿತ್ಯವನ್ನು ಪ್ರಕಟಿಸಲು ಪ್ರಾರಂಭಿಸಬೇಕೆಂದು ನಾನು ನಿರ್ಧರಿಸಿದೆ. **ಮೊದಲು ಈ ಹಸ್ತಪ್ರತಿಗಳನ್ನು ನಕಲು ಮಾಡಲು ಇಬ್ಬರು ಕಾರಕೂನರನ್ನು ನಿಯಮಿಸಿದೆ. ಅವರು ಸತತವಾಗಿ ಎರಡು ವರ್ಷಗಳವರೆಗೆ ಈ ಕಾರ್ಯ ಮಾಡಿದರು.** ವಚನಗಳ ಪ್ರಕಟನೆ ಮೊದಲು ಪ್ರಾರಂಭಿಸಬೇಕೆಂದು ನಾನು ವಿಚಾರ ಮಾಡಿದೆ. ಆ ಕಾಲದಲ್ಲಿ ಕೇವಲ ೫೦ ವಚನಕಾರರ ಹೆಸರು ಗೊತ್ತಿದ್ದವು. ಆದರೆ ನಾನು ಸಂಗ್ರಹಿಸಿದ ಕೃತಿಗಳಿಂದ ಅವರು ೨೫೦ ಇರಬಹುದೆಂದು ಗೊತ್ತಾಯಿತು. ಆ ವಚನಗಳು ಅನೇಕ ಹಸ್ತಪ್ರತಿಗಳಲ್ಲಿ ಹರಡಿದ್ದು ಕಂಡುಬಂದಿತು. ಆದ್ದರಿಂದ ಪ್ರತಿಯೊಂದನ್ನೂ ಬೇರೆ ಬೇರೆಯಾಗಿ ನಕಲು ಮಾಡಬೇಕಾಯಿತು. ಪ್ರತಿಯೊಬ್ಬ ವಚನಕಾರನ ವಚನಗಳನ್ನು ಒಂದೇ ಪುಸ್ತಕ ಮಾಡಲು ಒಂದೆಡೆಗೆ ಕೂಡಿಸಲಾಯಿತು. ಇದನ್ನು ಮಾಡಲು ಅನೇಕ ದಿನಗಳು ಬೇಕಾದವು. ಆಗ ಇದು ಜನರಿಗೆ ಗೊತ್ತಿರದ ಅಪೂರ್ವ ಸಾಹಿತ್ಯವೆಂದು ಗೊತ್ತಾಯಿತು."[3]

ಈ ಅವತರಣಿಕೆಯಲ್ಲಿ ಡಾ|| ಹಳಕಟ್ಟಿಯವರು ಗ್ರಂಥ ಸಂಪಾದನೆಯ ಕೆಲಸದಲ್ಲಿ ಅನುಸರಿಸಿದ ಮಾರ್ಗದ ಹೊಳಹು ಇನಿತು ದೊರೆಯುತ್ತದೆ. ಹಸ್ತಪ್ರತಿಗಳನ್ನು ಅವರು ಮೊದಲು ಪ್ರತಿಮಾಡಿಸಿ ಅನಂತರ ಅವುಗಳ ಪರಿಷ್ಕರಣಕ್ಕೆ ಕೈ ಹಾಕಿದರು.[4] ಪಾಠ ಸಂಯೋಜನೆ, ಪಾಠ ಪರಿಷ್ಕರಣ ಪದ್ಧತಿಗಳಲ್ಲಿ ಒಂದಾದ ಮೇಲೆ ಇನ್ನೊಂದು ಆಗಬೇಕೆಂಬುದು ಇಲ್ಲಿ ಸುಸ್ಪಷ್ಟ. ಪಾಠಗಳನ್ನು ಪರಿಷ್ಕರಿಸಿ ಅವನ್ನು ಅನುಸ್ಯೂತವಾಗಿ ಬರೆದಂತೆ ಅಚ್ಚಿಡಿಸಿದ್ದಾರೆ. ಅವರು ಪಾಠ ಪರಿಷ್ಕರಣವನ್ನು ಮಾಡದೆಯೆ ವಚನಗಳನ್ನು ಅಚ್ಚಿಡಿಸಿದ್ದರೆ ಪ್ರಾಯಃ ಅವು ಇಂದು ಯಾವ ಒಂದು ಮಹತ್ವದ ಸ್ಥಾನವನ್ನು ಪಡೆದಿವೆಯೋ ಆ ಒಂದು ಹಿರಿಯ ಸ್ಥಾನವನ್ನು ಪಡೆಯಲು ಇನ್ನೂ ಅನೇಕ ವರ್ಷಗಳವರೆಗೆ ಕಾಯಬೇಕಾಗಿತ್ತು. ಡಾ|| ಹಳಕಟ್ಟಿಯವರು ಅಂದು ಪರಿಷ್ಕರಣ ಕಾರ್ಯದಲ್ಲಿ ಬಹಳ ಶ್ರಮವಹಿಸಿ ಅನೇಕ ಎಡೆಗಳಲ್ಲಿ ಸುಸ್ಫುಟರೂಪವನ್ನು

ಕೊಟ್ಟಿದ್ದುಂಟು. ಈ ದಿಶೆಯಲ್ಲಿ ವಚನ ಶಾಸ್ತ್ರಸಾರ ವಿಭಾಗ-೧; ೨, ಬಸವೇಶ್ವರರ ವಚನಗಳು; ಹೊಸ ಪದ್ಧತಿಯ ಬಸವೇಶ್ವರನ ವಚನಗಳು; ಶೂನ್ಯ ಸಂಪಾದನೆ; ಪ್ರಭುದೇವರ ವಚನಗಳು ಮತ್ತು ಸಿದ್ಧರಾಮೇಶ್ವರನ ವಚನಗಳು ಇತ್ಯಾದಿ ಗ್ರಂಥಗಳಿಗೆ ಬರೆದ ಪ್ರಸ್ತಾವನೆಗಳನ್ನು ಇನಿತು ಅವಲೋಕಿಸಬೇಕು. ವಚನಶಾಸ್ತ್ರಸಾರ ಭಾಗ-೧ರಲ್ಲಿ ಬರೆದಿರುವ ಈ ಹೇಳಿಕೆಯನ್ನು ನೋಡಿ:

> "ನನಗೆ ದೊರೆತ ವಚನಗ್ರಂಥಗಳ ಪ್ರತಿಗಳೆಲ್ಲವೂ ಬಹಳ ಅಶುದ್ಧವಾದವುಗಳು. ಬಹಳ ಕಡೆ ಅವುಗಳ ಅರ್ಥವೇ ಆಗುವುದಿಲ್ಲ. ಆದರೂ ಅವುಗಳಲ್ಲಿಯ ಅಶುದ್ಧತೆಯನ್ನು ಆದಷ್ಟುಮಟ್ಟಿಗೆ ತಿದ್ದಿ ಅವುಗಳನ್ನು ನಾನು ಇಲ್ಲಿ ಪ್ರಸಿದ್ಧಿಸಿದ್ದೇನೆ. ಆದರೂ ಅರ್ಥ ತಿಳಿಯದಂಥ ವಾಕ್ಯಗಳು ಈ ಗ್ರಂಥದಲ್ಲಿ ಎಷ್ಟೋ ಉಳದಿವೆ. ಇದರಂತೆ ಈ ಪ್ರತಿಗಳಲ್ಲಿ ಇರುವ ಸಂಸ್ಕೃತ ಅವತರಣಗಳಂತೂ ಅತ್ಯಂತ ಅಶುದ್ಧವಾದವುಗಳು. ಸಂಸ್ಕೃತ ಭಾಷೆಯನ್ನರಿಯದವರು ಈ ಪ್ರತಿಗಳನ್ನು ಬರೆದದ್ದೇ ಇದಕ್ಕೆ ಕಾರಣವು. ವಾಚಕರಲ್ಲಿ ಯಾರಿಗಾದರೂ ಈ ಅವತರಣಗಳ ಮತ್ತು ವಚನಗಳ ಶುದ್ಧ ಪಾಠಗಳು ದೊರೆತರೆ, ಅವುಗಳನ್ನು ಅವರು ನನಗೆ ತಿಳಿಸಿದಲ್ಲಿ ನಾನು ಅವರಿಂದ ಬಹಳ ಉಪಕೃತನಾಗುವೆನು. ಮತ್ತು ಆ ಮೇರೆಗೆ ಗ್ರಂಥದ ಮುಂದಿನ ಆವೃತ್ತಿಯಲ್ಲಿ ತಿದ್ದುಪಡಿ ಮಾಡಲಿಕ್ಕೆ ಅನುಕೂಲವಾಗುವುದು."5

—ಗ್ರಂಥ ಸಂಪಾದನಾ ಕಾರ್ಯದಲ್ಲಿ ಸಂಪಾದಕನಿಗೆ ಇರಬೇಕಾದ 'ಸತ್ಯಸಂಧತೆ', 'ಶುದ್ಧ ಪಾಠಗಳ ಅರಿವು', 'ವಿಶಾಲ ಹೃದಯ', 'ತನ್ನ ಅರೆಕೊರೆಗಳ ಪ್ರಜ್ಞೆ' ಇತ್ಯಾದಿಗಳನ್ನು ಡಾ|| ಹಳಕಟ್ಟಿಯವರು ಇಲ್ಲಿ ಸೂಚ್ಯವಾಗಿ ತಿಳಿಸಿದ್ದಾರೆ; ಮುಂದಿನ ಸಂಪಾದನೆಯ ರೀತಿಗೆ ಮಾರ್ಗದರ್ಶಕವಾಗಿದ್ದಾರೆ. ಇದು ಗ್ರಂಥ ಸಂಪಾದನಾ ಶಾಸ್ತ್ರಕ್ಕೆ ಅವರ ಕೊಡುಗೆಯಲ್ಲವೆ? ಹಳಕಟ್ಟಿಯವರಿಗೆ ಆಗ ಮೊದಲು ಉಪಲಬ್ಧವಾದ ಸಾಮಗ್ರಿಯೆಲ್ಲವನ್ನೂ ತಾವು ಜನತೆಯ ಅವಗಾಹನೆಗೆ ತರಬೇಕೆಂಬ ತನ್ಮೂಲಕ ಅವರಲ್ಲಿ ವಚನ ಸಾಹಿತ್ಯದ ಹಿರಿಮೆ-ಗರಿಮೆಗಳ ಅರಿವನ್ನು ಉಂಟುಮಾಡಬೇಕೆಂಬ ಮೂಲಭೂತ ಸಮಸ್ಯೆಯ ಪರಿಹಾರ ಕಾರ್ಯವು ಮುಖ್ಯವಾಗಿತ್ತು. ವಚನ ಸಾಹಿತ್ಯಕ್ಕೆ ಸಲ್ಲಬೇಕಾದ ಸ್ಥಾನ-ಮಾನಗಳನ್ನು ಕಲ್ಪಿಸಿಕೊಡುವುದೇ ಅವರ ಮಣಿಹವಾಗಿತ್ತು.

ವಚನ ಸಾಹಿತ್ಯವು ಜನತೆಗೆ ತಲುಪಲು ಅಚ್ಚಿನರೂಪದಲ್ಲಿ ಅಣುವಿನಾಕಾರದಲ್ಲಿ ಸುಮಾರು ೧೯ನೆಯ ಶತಮಾನದ ಅಂತ್ಯದಲ್ಲಿಯೇ ಆರಂಭವಾಗಿತ್ತು. ಕ್ರಿ. ಶ. ೧೮೮೯ರಲ್ಲಿಯೇ ಬಸವಣ್ಣನವರ ವಚನಗಳನ್ನು ಮುರಿಶಂಕರದ್ಯಾವರು ಎಂಬುವರು ಸಾಂಪ್ರದಾಯಿಕವಾದ ಹಳೇ ಪುಸ್ತಕಗಳ ವಹಿಗಳ ಮೇರೆಗೆ ಪರಿಶೋಧಿಸಿ ಪರಿಷ್ಕರಿಸಿ ಪ್ರಕಟಿಸಿದ್ದರು.6 ಇದೇ ಗ್ರಂಥ ಆಗ ಜನಬಳಕೆಯಲ್ಲಿ ಬಹು ಪ್ರಚಲಿತವಾಯಿತು. ಇದೊಂದು ಮುದ್ರಿತಪ್ರತಿಯೊಂದಿಗೆ ಇವರಲ್ಲಿನ ಓಕ್ಕಣೆಯಿಂದ ಸ್ಪಷ್ಟವಿದ್ದರೂ ತುಂಬ

ಅಶುದ್ಧವಾಗಿದೆಯೆಂಬುದೂ ಅದನ್ನು ನೋಡಿದ ಯಾರಿಗೂ ಹೊಳೆಯದಿರದು. ಇದಕ್ಕೂ ಡಾ|| ಹಳಕಟ್ಟಿಯವರು ಮಾಡಿದ ಸಂಪಾದನೆಯಲ್ಲಿನ ಪಾಠಾಂತರಕ್ಕೂ ಇರುವ ವ್ಯತ್ಯಾಸವನ್ನು ತಿಳಿದುಕೊಳ್ಳಬೇಕಾದರೆ ಆರಂಭದ ವಚನದಿಂದ ಹಿಡಿದು ಎಲ್ಲಿಯಾದರೂ ಒಂದನ್ನು ಪರಿಶೀಲನೆಗೆ ಎತ್ತಿಕೊಳ್ಳಬಹುದು. ಒಂದು ಉದಾಹರಣೆಯಿಂದ ಇದು ಸ್ಪಷ್ಟವಾಗಬಹುದು :

**ಮರಿಶಂಕರದ್ಯಾವರ ಸಂಸ್ಕರಣ :** ಹೃದಯಮೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದೀತು। ಶಶಿಯೊಳಗಣ ರಸದ ರುಚಿಯಂತೆ ಯಿದ್ದೀತು। ನನೆಯೊಳಗಣ ಪರಿಮಳದಂತಿದ್ದೀತು। ಕೂಡಲಸಂಗಮದೇವಾ ಕನ್ಯೆಯ ಸ್ನೇಹದಂತಿದ್ದೀತು ||೧|| [7]

**ಡಾ|| ಫ. ಗು. ಹಳಕಟ್ಟಿಯವರ ಒಂದು ಪಾಠ :** ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು. ಸಸಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲಸಂಗಮದೇವ ಕನ್ನೆಯ ಸ್ನೇಹದಂತಿದ್ದಿತ್ತು.[8]

**ಎಂ. ಆರ್. ಶ್ರೀ. ವಚನಸಂಗ್ರಹ ಪಾಠ :** ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು. ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು.[9]

**ಪ್ರೊ|| ಬಸವನಾಳರ ಸಂಸ್ಕರಣ :**

ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು ;
ಸಸಿಯೊಳಗಣ ರಸದರುಚಿಯಂತಿದ್ದಿತ್ತು ;
ನನೆಯೊಳಗಣ ಪರಿಮಳದಂತಿದ್ದಿತ್ತು ;
ಕೂಡಲಸಂಗಮದೇವಾ, ಕನ್ಯೆಯ ಸ್ನೇಹದಂತಿದ್ದಿತ್ತು ||೧||[10]

ಪ್ರೊ. ಬಸವನಾಳರ ಈ ಪಾಠ ಶಾಸ್ತ್ರೀಯ ಪದ್ಧತಿಯಲ್ಲಿ ಸಂಪಾದನೆಗೊಂಡುದು ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

**ಡಾ|| ಹಿರೇಮಠರ ಸಂಸ್ಕರಣ :**

ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು ;
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು ;
ನನೆಯೊಳಗಣ ಮರಿಮಳದಂತಿದ್ದಿತ್ತು ;
ಕೂಡಲಸಂಗಮದೇವರ ನಿಲವು
ಕನ್ನೆಯ ಸ್ನೇಹದಂತಿದ್ದಿತ್ತು.[11]

— ಈ ಎಲ್ಲ ಸಂಸ್ಕರಣಗಳನ್ನು ನೋಡಿದರೆ, ವಸ್ತುತಃ ಬಸವಣ್ಣನವರು ಹೇಳಿದ ರೂಪ ಈ ವಚನದಲ್ಲಿ ಎಷ್ಟರ ಮಟ್ಟಿಗೆ ಇದೆ? ಮೊದಲನೆಯ ಪಂಕ್ತಿಯು ಮರಿಶಂಕರದ್ಯಾವರ ಸಂಸ್ಕರಣದಲ್ಲಿ ಸಂಪೂರ್ಣ ಭಿನ್ನಗತಿಯದ್ದಾಗಿದೆ; ಅದು

ಎಷ್ಟು ಅರ್ಥವತ್ತಾದರೂ ಏಕೈಕ ಆಕರದ್ದಾಗಿದ್ದು ಮಿಶ್ರಪ್ರತಿಯಾಗಿದ್ದು ನಂಬಿಗೆಗೆ ಅನರ್ಹವಾಗಿದೆ. 'ನಿಲವು' ಎಂಬ ಪದ ಕೆಲವು ಹಸ್ತಪ್ರತಿಗಳಲ್ಲಿದೆ. ಅದಿಲ್ಲದಿದ್ದರೂ ಧ್ವನಿಪೂರ್ಣಕವಾಗಿ 'ಕೂಡಲಸಂಗನ' ಅಸ್ತಿತ್ವ ಎಂದು ಇಲ್ಲಿ ಅರ್ಥೈಸಲು ಬರುತ್ತದೆ.[12] ಡಾ|| ಹಳಕಟ್ಟಿಯವರ ಸಂಪಾದನೆಯು ಬಹುಭಾಗ ಸ್ವೀಕಾರ ಯೋಗ್ಯವಾಗಿದ್ದುದು ಅನಂತರದ ಸಂಸ್ಕರಣಗಳಿಂದ ಸುಸ್ಪಷ್ಟ. ಇದು ಗಮನಾರ್ಹವಾದ ಅಂಶ. ಇದಕ್ಕೆ ಕಾರಣ ಅವರು ಹಿಡಿದ ಸಂಪಾದನಾಕಾರ್ಯದಲ್ಲಿಯ ನಿಶ್ಚಿತ ನಿಲವು. ಡಾ|| ಎಸ್. ವಿದ್ಯಾಶಂಕರರು ಈಗಾಗಲೇ ಗುರುತಿಸಿದ ಹಾಗೆ ಡಾ|| ಹಳಕಟ್ಟಿಯವರ ಸಂಪಾದನಾ ವಿಧಾನ ಸಶಾಸ್ತ್ರೀಯವೇ? ಎಂಬ ಪ್ರಶ್ನೆಗೆ ಉತ್ತರ ಹೇಳುವುದು ತುಂಬ ಕಷ್ಟ. ವಚನ ಸಾಹಿತ್ಯವೇ ಆಗಲಿ ಹರಿಹರನ ರಗಳೆಗಳೇ ಆಗಲಿ ಯಾವಲ್ಲಿಯೂ ಅವರು ಬಳಸಿದ ಮಾರ್ಗ ಅನುಸ್ಯೂತವಾಗಿ ಬರೆದು ಪ್ರಕಟಿಸುವುದು. ಆದಷ್ಟು ಶುದ್ಧ ರೂಪದಲ್ಲಿ ಪ್ರಕಟಿಸುವುದು. "ಶರಣ ಸಾಹಿತ್ಯವನ್ನು ಬೆಳಕಿಗೆ ತರುವುದೇ ಡಾ|| ಹಳಕಟ್ಟಿಯವರ ಲಿಂಗಪೂಜೆಯಾಯಿತು"[13] ಎಂಬ ಮಾತು ಗಮನಾರ್ಹವಾದುದು. ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆಗಳಲ್ಲಿ ಡಾ|| ಹಳಕಟ್ಟಿಯವರ ಕೃತಿಗಳಿಗೆ ಸಲ್ಲಬೇಕಾದ ಒಂದು ಸಂಪ್ರದಾಯದ ಸ್ಥಾನ ಸಂದಿದೆ. ಗ್ರಂಥ ಸಂಪಾದನಾ ಶಾಸ್ತ್ರಕ್ಕೆ ಅವರು ಕೊಟ್ಟ ಕೊಡುಗೆಯೆಂದರೆ, ಗ್ರಂಥಸಂಪಾದಕನಿಗೆ ಇರಬೇಕಾದ ಗುಣನಿರ್ಣಯದ ರೂಪರೇಷೆಗಳು : ಪ್ರಾಮಾಣಿಕತೆ, ನಿರ್ಣಯಾತ್ಮಕತೆ, ವಿಚಾರ ಪರಿಪಕ್ವತೆ ಮತ್ತು ಆಯಾ ವಿಷಯಕ್ಕೆ ಸಂಬಂಧಿಸಿದ ಪಾಂಡಿತ್ಯ — ಎಂಬ ಸಂಗತಿಗಳು.[14]

---

1 ಈ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಮೊದಲ ಕೃತಿ ಪ್ರೊ|| ಡಿ. ಎಲ್. ಎನ್. ಅವರ 'ಕನ್ನಡ ಗ್ರಂಥ ಸಂಪಾದನೆ' ಕ್ರಿ. ಶ. ೧೯೬೪ರಲ್ಲಿ ಪ್ರಕಟವಾಯಿತು.

2 ಡಾ|| ಹಳಕಟ್ಟಿಯವರ ಬರಹದ ವಿಸ್ತಾರವನ್ನು ನೋಡಬಯಸುವವರು ಕೆಳಗಿನ ಎರಡು ಬರಹಗಳನ್ನು ನೋಡಬೇಕು :

(a) 'ವಚನ ಪಿತಾಮಹ' ಗ್ರಂಥದಲ್ಲಿ ಶ್ರೀ ಎಸ್. ಆರ್. ಗುಂಜಾಳ ಅವರ ಲೇಖನ 'ಶಿವಾನುಭವ ಗ್ರಂಥಮಾಲಾ'—ಇಲ್ಲಿ ಸುಮಾರು ನೂರು ಪುಸ್ತಕಗಳ ಪಟ್ಟಿಯಿದೆ.

(b) ಎಸ್. ಶಿವಣ್ಣ ಅವರ ಬರಹ 'ಡಾ|| ಫ. ಗು. ಹಳಕಟ್ಟಿಯವರ ಲೇಖನ, ಕೃತಿ, ಇತ್ಯಾದಿಗಳ ಸೂಚಿ' ; 'ಬಸವಪಥ' ಪತ್ರಿಕೆ ಸಂ. ೨, ಸಂ. ೨, ಪು. ೧೦೮-೧೨೪ ಮತ್ತು ಅದೇ ಪತ್ರಿಕೆಯ ಸಂಪುಟ-೨, ಸಂ. ೪, ಪು. ೯೫-೧೧೯.

3 'ವಚನ ಪಿತಾಮಹ' ಗ್ರಂಥದಲ್ಲಿ ಡಾ|| ಹಳಕಟ್ಟಿಯವರ ಲೇಖನ 'ನನ್ನ ಎಪ್ಪತ್ತೈದು ವರ್ಷಗಳು' ; ಪು. ೫-೬.

4 ಈ ಪದ್ಧತಿ, ಡಾ|| ವಿ. ಎಸ್. ಸುಖಠಣಕರ್ ಅವರು ಮಹಾಭಾರತದ ಆದಿಪರ್ವದಲ್ಲಿ ನಿರೂಪಿಸಿರುವ ಪದ್ಧತಿಗೆ ಹತ್ತಿರವಾಗಿದೆ. ನೋಡಿ : ಪ್ರೊಲೆಗೊಮಿನಾ (Prolegomena) ಪು iv-v. ಡಾ|| ಹಳಕಟ್ಟಿಯವರು ಸಂಪೂರ್ಣ ಕೂಲಂಕಷವಾಗಿ ತಮ್ಮ ಪದ್ಧತಿಯನ್ನು ಎಲ್ಲಿಯೂ ವಿವರಿಸಿರುವುದಿಲ್ಲವೆಂಬುದರ ಅರಿವು ನನಗಿದೆ.

5 'ವಚನಶಾಸ್ತ್ರಸಾರ' ಭಾಗ-೧, ಪ್ರಸ್ತಾವನೆ, ಪು. ೧೧ (೨ನೆಯ ಆವೃತ್ತಿ ೧೯೩೧). ಮೊದಲನೆಯ ಆವೃತ್ತಿಯು ೧೯೨೩ರಲ್ಲಿಯೇ ಅಚ್ಚಾಗಿತ್ತು.

6 'ಬಸವಣ್ಣನವರ ವಚನಗಳು' (ಸಂ. ಬ. ಮರಿಶಂಕರದ್ಯಾವರು). ಈ ಗ್ರಂಥವನ್ನು ಬಳ್ಳಾರಿಯ ಪುಸ್ತಕ ವ್ಯಾಪಾರಿಗಳಾದ ಮ॥ ರಾ॥ ಎಸ್. ಕೋನೇರಿಶೆಟ್ರವರು ಗ್ರಂಥರತ್ನಾಕರ ಮುದ್ರಾಕ್ಷರ ಶಾಲೆಯಲ್ಲಿ ಛಾಪಿಸಿದರು.

7 ಅದೇ ಗ್ರಂಥ, ಪು. ೧

8 'ವಚನಶಾಸ್ತ್ರಸಾರ' ಭಾಗ-೨, ಪಿಂಡಸ್ಥಲ, ಪು. ೩೫೪

9 ಎಂ. ಆರ್. ಶ್ರೀ. ; 'ವಚನಧರ್ಮಸಾರ' ಪು. ೨೨೮ (೨ನೆಯ ಮುದ್ರಣ 1946)

10 ಪ್ರೊ. ಶಿ. ಶಿ. ಬಸವನಾಳ, 'ಬಸವಣ್ಣನವರ ಷಟ್‌ಸ್ಥಳದ ವಚನಗಳು' ಪು. ೧ (1962)

11 ಡಾ॥ ಆರ್. ಸಿ. ಹಿರೇಮಠ, 'ಭಕ್ತಿಭಂಡಾರಿ ಬಸವಣ್ಣನವರ ವಚನಗಳು' (ಕ.ವಿ.ವಿ ಪ್ರಕಟನೆ) ಪು. ೧. ಪ್ರೊ॥ ಬಸವನಾಳರ ಸಂಸ್ಕರಣಕ್ಕಿಂತಲೂ ಹೆಚ್ಚು ಪ್ರತಿಗಳ ಆಧಾರದಿಂದ ಈ ಸಂಸ್ಕರಣವನ್ನು ಸಿದ್ಧಪಡಿಸಲಾಗಿದೆ.

12 ಈ ವಚನದ ಒಂದು ಸುಂದರ ವಿಶ್ಲೇಷಣೆಯನ್ನು ಡಾ॥ ಎಂ. ಎಂ. ಕಲ್ಬುರ್ಗಿ ಅವರು 'ಬಸವಪಥ' ಪತ್ರಿಕೆಯಲ್ಲಿ ಮಾಡಿದ್ದಾರೆ. 'ಬಸವಪಥ' ಸಂ.೨, ಸಂ.೩. ಪು. ೩೮-೪೧.

13 'ವಚನ ಪಿತಾಮಹ', ಡಾ॥ ಆರ್. ಸಿ. ಹಿರೇಮಠರ "ಮೊದಲ ಮಾತು", ಪು. ೯.

14 ಈ ಲೇಖನವನ್ನು ಬರೆಯುವಲ್ಲಿ ಹಿರಿಯರಾದ ಡಾ॥ ಹಾ. ಮಾ. ನಾಯಕರಿಗೆ ಋಣಿ ಆಗಿದ್ದೇನೆ.

# ಡಾ|| ಫ. ಗು. ಹಳಕಟ್ಟಿಯವರ ವಾಙ್ಮಯ ಸೂಚಿ

---

ಸಿದ್ಧಪಡಿಸಿದವರು : **ಡಾ|| ಎಸ್. ಆರ್. ಗುಂಜಾಳ**

ಪೂಜ್ಯ ಹಳಕಟ್ಟಿಯವರು ಸ್ವಾರ್ಥಕ್ಕಾಗಿ ಬದುಕಿದವರಲ್ಲ. ಪರಹಿತಕ್ಕಾಗಿ ಜೀವಿಸಿದವರು. ನಾಡಿನ ಏಳ್ಗೆಗಾಗಿ, ಸಾಹಿತ್ಯದ ಉಳವಿಗಾಗಿ ದುಡಿದ ಮಹಂತರು. ಅವರದು ವೈವಿಧ್ಯಮಯ ಬಾಳು. ಸಾಹಿತ್ಯಸೇವೆ ಅವರ ವರ್ಣಮಯ ಬದುಕಿನ ಒಂದು ಮುಖ. ವೀರಶೈವ ಸಾಹಿತ್ಯ ಪ್ರಕಟನೆಗಾಗಿ ಅವರು ಪಟ್ಟ ಪರಿಶ್ರಮ ಅಷ್ಟಿಷ್ಟಲ್ಲ. ಅವರ ಅವಿರತ ಪರಿಶ್ರಮದ ಫಲವಾಗಿ ಸುಮಾರು ೬೦ಕ್ಕೂ ಮಿಕ್ಕಿ ಗ್ರಂಥಗಳು ಬೆಳಕು ಕಂಡಿವೆ. ಇವುಗಳಲ್ಲಿ ಬಹು ಸಂಖ್ಯಾತ ಗ್ರಂಥಗಳನ್ನು ಅವರು ಸಂಪಾದಿಸಿ, ಸಂಸ್ಕರಿಸಿ, ಪ್ರಸ್ತಾವನೆಗಳೊಂದಿಗೆ ಪ್ರಕಟಿಸಿರುವರು. ಇನ್ನುಳಿದವು ಸ್ವರಚಿತ ಕೃತಿಗಳು.

ಭೂಮಿಯನ್ನು ಅಗೆದು, ಪರ್ವತವನ್ನು ಕೊರೆದು, ಬೆಲೆಯುಳ್ಳ ಬಂಗಾರದ ಅದಿರನ್ನು ಹೊರತೆಗೆದಂತೆ ಅವರು ವೀರಶೈವ ಗ್ರಂಥರಾಶಿಯನ್ನು ಬಯಲಿಗೆ ತಂದರು. ತಮ್ಮ ವೈಯುಕ್ತಿಕ ಶ್ರಮದ ಕುಪ್ಪೆಯಲ್ಲಿ ಕಾಯಿಸಿ, ಚಿನ್ನದಂಥ ಸಾಹಿತ್ಯ ಕೃತಿಗಳನ್ನು ಮುದ್ರಣ ಮಾಡಿದರು; ನಾಡಿನ ಜನತೆಯಲ್ಲಿ ಪ್ರಚಾರ ಮಾಡಿದರು. ಹೀಗೆ ಅವರು ಪ್ರಕಟಿಸಿದ ಗ್ರಂಥ ಸಂಖ್ಯೆ ಇಷ್ಟೇ ಎಂದು ನಿಖರವಾಗಿ ಹೇಳುವದು ಇಂದು ಬಹಳ ಕಷ್ಟವಾಗಿದೆ.

ಡಾ|| ಹಳಕಟ್ಟಿಯವರ ಗ್ರಂಥಗಳನ್ನೆಲ್ಲ ಲೆಕ್ಕಮಾಡಿ ನೋಡಲು ಹವಣಿಸಿದ ನನಗೆ, ಅನೇಕ ಗ್ರಂಥಗಳ ಅನುಪಲಬ್ಧತೆಯಿಂದಾಗಿ, ತೃಪ್ತಿಯಾಗಲಿಲ್ಲ. ಸಿಕ್ಕಷ್ಟು ಗ್ರಂಥಗಳನ್ನು ಎಣಿಸಿ ಅವರ **ವಾಙ್ಮಯ ಸೂಚಿ**ಯನ್ನು ಸಿದ್ಧಪಡಿಸಿದ್ದೇನೆ. ಪ್ರತಿಯೊಂದು ಗ್ರಂಥದ ಶಿರೋನಾಮ, ಪ್ರಥಮ ಆವೃತ್ತಿಯಾಗಿ ಪ್ರಕಟವಾದ ವರುಷ, ಒಟ್ಟು ಪುಟಗಳು ಮತ್ತು ಅವಶ್ಯವೆನಿಸಿದಲ್ಲಿ ಗ್ರಂಥದ ಸಾರಾಂಶ-ಇವುಗಳನ್ನು ಕೊಟ್ಟಿದ್ದೇನೆ. ಅಲ್ಲಲ್ಲಿ ಕರ್ತೃವಿನ ಹೆಸರು ಶಿರೋನಾಮದಲ್ಲಿ ಕಾಣಿಸಿಕೊಳ್ಳದಿದ್ದರೆ ಪ್ರತ್ಯೇಕವಾಗಿ ಕೊಟ್ಟಿದ್ದೇನೆ. ಕೆಲವು ಗ್ರಂಥಗಳು ೨, ೩, ೪, ೫ ಭಾಗಗಳಲ್ಲಿ ಪ್ರಕಟವಾಗಿವೆ. ಅಂಥ ಎಲ್ಲ ಭಾಗಗಳನ್ನು ಸಾಧ್ಯವಾದಮಟ್ಟಿಗೆ ಒಂದೇ ಶಿರೋನಾಮದ ಅಡಿಯಲ್ಲಿ ತೆಗೆದುಕೊಂಡಿದ್ದೇನೆ. ಕೆಳಕಂಡ ಸಂಕ್ಷೇಪ ಸಂಕೇತಗಳನ್ನು ಬಳಸಿಕೊಂಡಿದ್ದೇನೆ : ಪ್ರ. ಆ = ಪ್ರಥಮ ಆವೃತ್ತಿ; ದ್ವಿ. ಆ = ದ್ವಿತೀಯ ಆವೃತ್ತಿ; ತೃ. ಆ = ತೃತೀಯ ಆವೃತ್ತಿ; ಚ. ಆ = ಚತುರ್ಥ ಆವೃತ್ತಿ; ಪು = ಪುಟ. ಮುಖ

ಪುಟ ಅಥವಾ ಕೊನೆಯ ಪುಟಗಳು ತ್ರುಟಿತವಾದ ಗ್ರಂಥಗಳ ಬಗೆಗೆ ಊಹೆಯಿಂದ ಅವುಗಳ ಪ್ರಕಟಿತ ವರುಷ ಮತ್ತು ಪುಟಗಳನ್ನು ಪ್ರಶ್ನಾರ್ಥಕ ಚಿನ್ಹೆಯಿಂದ ಸೂಚಿಸಿದ್ದೇನೆ.

ಲಿಂಗೈಕ್ಯ ಹಳಕಟ್ಟಿಯವರನ್ನು ಕುರಿತು ಪ್ರಕಟಿತವಾದ ಗ್ರಂಥಗಳ ಸೂಚಿಯನ್ನು ಕೊನೆಯಲ್ಲಿ ಕೊಟ್ಟಿದ್ದೇನೆ. ವಿವಿಧ ಪತ್ರಿಕೆಗಳಲ್ಲಿ ಅವರನ್ನು ಕುರಿತು ಪ್ರಕಟವಾದ ಲೇಖನ ಸೂಚಿಯನ್ನು ಸಮಯಾಭಾವದ ಮೂಲಕ ಸಿದ್ಧಪಡಿಸಲು ಸಾಧ್ಯವಾಗಲಿಲ್ಲ. ಅಪೂರ್ಣವಾಗಿದ್ದರೂ ಉಪಯುಕ್ತವಾದ ಈ ವಾಙ್ಮಯ ಸೂಚಿಯಿಂದ ಓದುಗರು ಪ್ರಯೋಜನ ಪಡೆಯುವರೆಂದು ಆಶಿಸಿದ್ದೇನೆ.

## (ಅ) ಡಾ॥ ಹಳಕಟ್ಟಿಯವರಿಂದ ಸ್ವರಚಿತ/ಸಂಪಾದಿತ ಕೃತಿಗಳು

**೧ ಶ್ರೀ ಬಸವೇಶ್ವರನ ವಚನಗಳು**

ಪ್ರ. ಆ : ೧೯೨೬. ಚ. ಆ : ೧೯೪೦. ಪು : ೧೯೫

ಷಟ್‌ಸ್ಥಲಾನುಕ್ರಮವಾಗಿ ಜೋಡಿಸಿದ ವಚನಗಳ ಸಂಗ್ರಹವಿದು.

**೨ ಹೊಸ ಪದ್ಧತಿಯ ಬಸವೇಶ್ವರನ ವಚನಗಳು**

ಪ್ರ. ಆ : ೧೯೪೨ ದ್ವಿ. ಆ : ೧೯೫೦ ಪು : ೧೪೫

ಷಟ್‌ಸ್ಥಲ ಮತ್ತು ಅಷ್ಟಾವರಣಗಳ ಕೆಳಗೆ ೧೦೭ ಉಪವಿಷಯಗಳನ್ನಾಗಿ ವಿಂಗಡಿಸಿ ಜೋಡಿಸಿದ ವಚನ ಸಂಗ್ರಹ.

**೩ ಮಹಿಮ್ನ ಸ್ತೋತ್ರ**

ಪ್ರ. ಆ : ೧೯೨೬ ಪು : ೪೮

ಕರ್ತೃ : ವೀರಮಾಹೇಶ್ವರಾಚಾರ್ಯ ಪುಷ್ಪದಂತ

ಟೀಕಾಕಾರ : ಶಂಭುಲಿಂಗಸ್ವಾಮಿ ಹಿರೇಮಠ

**೪ ಮಹದೇವಿಯಕ್ಕನ ವಚನಗಳು**

ಪ್ರ. ಆ : ೧೯೨೭ ಪು : ೫೭

ಅಕ್ಕಮಹಾದೇವಿಯ ೧೮೧ ವಚನಗಳನ್ನು ೧೨ ಬೇರೆ ಬೇರೆ ವಚನಗ್ರಂಥಗಳಿಂದ ಆಯ್ದು ಸಂಗ್ರಹಿಸಲಾಗಿದೆ.

**೫ ಲಿಂಗಪೂಜೆಯ ತತ್ವಗಳು**

ತೃ. ಆ : ೧೯೩೫ ಪು : ೨೬

ಷಟ್‌ಸ್ಥಲ ಮಾರ್ಗಾನುಸಾರ ಇಷ್ಟಲಿಂಗ ಪೂಜಾವಿಧಾನವನ್ನು ವಿವರಿಸಲಾಗಿದೆ.

**೬ ವೀರಶೈವ ರಗಳೆ**

ಪ್ರ. ಆ : ೧೯೨೬ ಪು : ೧೩

ಜನತೆಯಲ್ಲಿ ಧರ್ಮಜಾಗೃತಿಯನ್ನುಂಟುಮಾಡುವ ಉದ್ದೇಶದಿಂದ ರಚಿತ

ವಾದ (ರಗಳೆಯ ಛಂದಸ್ಸಿನಲ್ಲಿರುವ) ಗ್ರಂಥ.

೭ **ವರದಾನಿ ಗುಡ್ಡವ್ವೆಯ ಚರಿತ್ರೆಯು**

ಪ್ರ. ಆ: ೧೯೨೬ ಪು: ೧೬

ಕರ್ತೃ: ಲಕ್ಕಣ್ಣ ದಂಡೇಶ

ಜತ್ತ ತಾಲ್ಲೂಕಿನ ಗುಡ್ಡಾಪುರ ಗ್ರಾಮದ ಶರಣೆ ದಾನಮ್ಮನ ಚರಿತ್ರೆ. ಇದಕ್ಕೆ ಲಕ್ಕಣ್ಣ ದಂಡೇಶನ 'ಶಿವತತ್ವಚಿಂತಾಮಣಿ' ಗ್ರಂಥ ಆಧಾರ.

೮ **ಗಣದಾಸಿ ವೀರಣ್ಣನವರ ವಚನಗಳು**

ಪ್ರ. ಆ: ೧೯೨೬ ಪು: ೨೪

೯ **ಪ್ರಭುದೇವರ ವಚನಗಳು**

ಪ್ರ. ಆ: ೧೯೩೧ ಪು: ೩೩೬

೧೦ **ತೋಂಟದಾರ್ಯರ ರಗಳೆ**

ಪ್ರ. ಆ: ೧೯೨೬? ಪು: ೧೨

ತೋಂಟದ ಸಿದ್ಧಲಿಂಗ ಶಿವಯೋಗಿಗಳನ್ನು ಕುರಿತ ರಗಳೆ. ಆದಿಯಲ್ಲಿ ೧ ವೃತ್ತ, ೯೮ ನುಡಿ, ಕೊನೆಯಲ್ಲಿ ೩ ಕಂದಪದ್ಯಗಳಿವೆ.

೧೧ **ಭಕ್ತಿಯ ವಚನಗಳು**

ಪ್ರ. ಆ: ೧೯೪೩ ಪು: ೪೭

೧೨ **ಪರಮಾತ್ಮನ ಸ್ವರೂಪ**

ದೇವರ ನಿಲವನ್ನು ಬಣ್ಣಿಸುವ ಬಸವಣ್ಣನವರ ೧೦೧ ವಚನಗಳ ಸಂಗ್ರಹ.

೧೩ **ಸಂಗನ ಬಸವೇಶ್ವರ ವಚನಗಳು**

ಪ್ರ. ಆ: ೧೯೨೭ ಪು: ೭೩

ದೀಕ್ಷಾವಿಧಿ, ಸಮಾಧಿ ವಿಧಿ, ಅಂತ್ಯ ವಿಧಿ, ನವಲಿಂಗಪೂಜೆ, ಅಷ್ಟಾವರಣ — ಮುಂತಾದ ವಿಷಯಗಳನ್ನು ಕುರಿತ ವಚನ ಸಂಗ್ರಹ.

೧೪ **ಘನಲಿಂಗಿಯ ವಚನಗಳು**

ಪ್ರ. ಆ: ೧೯೨೭ ಪು: ೪೫

ಮೈಸೂರಿಗೆ ಸಮೀಪದ ಸುತ್ತೂರು ಮಠಕ್ಕೆ ಸಂಬಂಧಿಸಿದ ಶರಣ ಘನಲಿಂಗಿ ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯನಾಗಿದ್ದಾನೆ.

೧೫ **ಏಕೋತ್ತರ ಶತಸ್ಥಲ**

ಪ್ರ. ಆ: ೧೯೩೦? ಪು: ೧೪೭

ವಚನಗಳನ್ನು ೧೦೧ ಸ್ಥಲಗಳಲ್ಲಿ ವಿಂಗಡಿಸಿಕೊಡಲಾಗಿದೆ.

೧೬ **ದೇವರದಾಸಿಮಯ್ಯನ ವಚನಗಳು**

ಪ್ರ. ಆ: ೧೯೩೯? ಪು ೮೬

ದೇವರದಾಸಿಮಯ್ಯನ ೧೪೭ ವಚನಗಳನ್ನು ಸಂಗ್ರಹಿಸಿಕೊಡಲಾಗಿದೆ.

೧೭ **ಹಡಪದ ಅಪ್ಪಣ್ಣನ ವಚನಗಳು**
ಪ್ರ. ಆ: ೧೯೪೦? ಪು: ?

೧೮ **ಲಿಂಗಮ್ಮನ ವಚನಗಳು**
ತೃ. ಆ: ೧೯೫೨ ಪು: ೨೮

೧೯ **ಲಿಂಗಾಯತ ಮತತತ್ವ**
ಪ್ರ. ಆ: ೧೯೨೮ ಪು: ೨೦?

೨೦ **ಮೈಲಾರ ಬಸಪ್ಪನವರ ಶಿವಾನುಭವ ದರ್ಪಣ**
ದ್ವಿ. ಆ: ೧೯೩೭ ಪು: ೮೬
ಬಳ್ಳಾರಿ ಜಿಲ್ಲಾ ಮೈಲಾರ ಗ್ರಾಮದ ಬಸಪ್ಪ ಶರಣರು ಬರೆದ ತತ್ವಪದಗಳ ಸಂಗ್ರಹವಿದು.

೨೧ **ಸಕಲೇಶ ಮಾದರಸನ ವಚನಗಳು**
ಪ್ರ. ಆ: ೧೯೨೯ ಪು: ೨೮

೨೨ **ಕೈ ವಾ. ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು**
ಪ್ರ. ಆ: ೧೯೩೦ ಪು: ೪೫
ಕರ್ನಾಟಕದ ವಿದ್ಯಾರಂಗದಲ್ಲಿ ಅನುಪಮ ಸೇವೆ ಸಲ್ಲಿಸಿದ ಡೆಪ್ಯೂಟಿ ಚನ್ನಬಸಪ್ಪನವರ ಜೀವನ ಚರಿತ್ರೆ.

೨೩ **ಶೂನ್ಯ ಸಂಪಾದನೆ**
ಪ್ರ. ಆ: ೧೯೩೦ ಪು: ೪೧೧
ಸಂಕಲನಕಾರ: ಗೂಳೂರು ಸಿದ್ಧವೀರಣಾಚಾರ್ಯ
ಗ್ರೀಕ್ ತತ್ವಜ್ಞಾನಿ ಪ್ಲೇಟೋನ 'ಡಾಯಲಾಗ್ಸ್' ಗ್ರಂಥವನ್ನು ಸ್ಮರಣೆಗೆ ತರುವ ವೀರಶೈವ ತತ್ವಜ್ಞಾನವನ್ನು ಕುರಿತ [illegible] ಸಂಕಲನವಿದಾಗಿದೆ ಯೆಂದು ವಿದ್ವಾಂಸರ ಅಭಿಪ್ರಾಯ.

೨೪ **ಆದಯ್ಯನ ವಚನಗಳು**
ಪ್ರ. ಆ: ೧೯೩೦? ಪು: ?

೨೫ **ಶ್ರೀಮದ್ರಾಘವಾಂಕ ಮಹಾಕವಿ ವಿರಚಿತವಾದ ಆದಿಶೆಟ್ಟಿ ಪುರಾಣವು**
ಪ್ರ. ಆ: ೧೯೩೧ ಪು: ೧೪೯
ಸೌರಾಷ್ಟ್ರದಿಂದ ಆಗಮಿಸಿದ ಆದಿಶೆಟ್ಟಿ (ಆದಯ್ಯ) ಲಕ್ಷ್ಮೇಶ್ವರದಲ್ಲಿ ಜೈನ ಕನ್ಯೆ ಪದ್ಮಾವತಿಯನ್ನು ಮದುವೆಯಾದ ಪ್ರಸಂಗವನ್ನು ಬಣ್ಣಿಸುವ ಷಟ್ಪದಿಕಾವ್ಯ.

೨೬ **ವಚನಶಾಸ್ತ್ರಸಾರ ಭಾಗ-೧**
ಪ್ರ. ಆ: ೧೯೩೧ ಪು: ೪೧೦
ವಚನಗಳನ್ನಾಧರಿಸಿ ಲಿಂಗಾಯತ ಮತ ತತ್ವಗಳನ್ನು ವಿವೇಚಿಸಲಾಗಿದೆ.

೨೭ **ವಚನಶಾಸ್ತ್ರಸಾರ (ವೀರಶೈವ ಸಿದ್ಧಾಂತ) ಭಾಗ ೨**
ದ್ವಿ. ಆ : ೧೯೩೩ ಪು : ೬೩೧
ವೀರಶೈವ ಸಿದ್ಧಾಂತದ ಮುಖ್ಯ ಅಂಗಗಳಾದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ — ಸ್ಥಲಗಳಿಗೆ ಸಂಬಂಧಿಸಿದ ವಚನಗಳನ್ನು ಸಂಗ್ರಹಿಸಿ ಷಟ್‌ಸ್ಥಲ ಸಿದ್ಧಾಂತದ ವಿವೇಚನೆಯನ್ನು ಮಾಡಲಾಗಿದೆ. ಸೃಷ್ಟಿ, ದೇವರ ಜ್ಞಾನ, ಏಕೋತ್ತರ ಶತಸ್ಥಲ — ಇತ್ಯಾದಿ ವಿಷಯಗಳೂ ಅಡಕವಾಗಿವೆ.

೨೮ **ಶಿವಾನುಭವ ಶಬ್ದಕೋಶ**
ದ್ವಿ. ಆ : ೧೯೪೩ ಪು : ೨೪೬
ವೀರಶೈವ ಪಾರಿಭಾಷಿಕ ಶಬ್ದಗಳಿಗೆ ವಿವರಣೆಯುಳ್ಳ ಕೋಶ.

೨೯ **ಸಿದ್ಧರಾಮೇಶ್ವರನ ವಚನಗಳು**
ಪ್ರ. ಆ : ೧೯೩೨ ಪು : ೧೪೭

೩೦ **ಕೊಡಗಿನ ಸಂಸ್ಥಾನದ ರಾಜೇಂದ್ರನಾಮೆ**
ಪ್ರ. ಆ : ೧೯೩೨ ಪು : ೪೦ ?
ವೀರಶೈವ ರಾಜನಾದ ವೀರರಾಜನು ಹಾಲೇರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕೊಡಗು ಪ್ರದೇಶವನ್ನಾಳಿದ ವೃತ್ತಾಂತವಿದೆ.

೩೧ **ಶ್ರೀ ಚೆನ್ನಬಸವೇಶ್ವರನ ವಚನಗಳು**
ಪ್ರ. ಆ : ೧೯೩೨ ಪು : ೧೧೧

೩೨ **ನಿರಂಜನ ವಂಶ ರತ್ನಾಕರ**
ಪ್ರ. ಆ : ೧೯೩೨ ಪು : ೬೭
ವೀರಶೈವ ಮಠಾಧಿಪತಿಗಳು ಮತಪ್ರಸಾರ ಕಾರ್ಯದಲ್ಲಿ ಮಾಡಿದ ಸೇವೆ ವರ್ಣಿತವಾಗಿದೆ.

೩೩ **ಹರಿಹರನ ರಗಳೆಗಳು ಭಾಗ ೧–೪**
ಪ್ರ. ಆ : ೧೯೩೩ ಪು : ಸುಮಾರು ೨೦೦
(೧) ಪುಷ್ಪ (೨) ಲಿಂಗಾರ್ಚನೆ (೩) ತಿರುನೀಲಕಂಠ (೪) ಕಣ್ಣಪ್ಪ (೫) ಆನಾಯನಾರ (೬) ಚನ್ನಯ್ಯ (೭) ಇಳೆಯಾಂಡ ಗುಡಿಮಾರ (೮) ಪ್ರಭುದೇವ (೯) ರೇವಣಸಿದ್ಧ (೧೦) ಶಂಕರ ದಾಸಿಮಯ್ಯ (೧೧) ಆದಯ್ಯ (೧೨) ಕಾರಿಕಾಲಮ್ಮೆ (೧೩) ರುದ್ರಪಶುಪತಿ (೧೪) ತಿರುನಾಳ್ಪೂರ್ ಮುಂತಾದವರ ರಗಳೆಗಳ ಸಂಗ್ರಹ.

೩೪ **ಸೋಮುಕಟ್ಟೆ ಕರಿವೃಷಭೇಂದ್ರ ಕೈವಲ್ಯ ಪದ್ಯಗಳು**
ಪ್ರ. ಆ : ೧೯೩೩ ಪು : ೩೭, ತತ್ವಪದಗಳ ಸಂಗ್ರಹ

**೩೫ ಕಾಲಜ್ಞಾನದ ವಚನಗಳು**
ದ್ವಿ. ಆ : ೧೯೪೪? ಪು :೭೨ (ಅಪೂರ್ಣ)
ಅನೇಕ ಕನ್ನಡ ಅರಸರ, ಪಾಳೇಗಾರರ ಉಲ್ಲೇಖಗಳನ್ನೊಳಗೊಂಡ ವಚನ ಗಳಿವು.

**೩೬ ಅಂಬಿಗರ ಚೌಡಯ್ಯನ ವಚನಗಳು**
ಪ್ರ. ಆ : ೧೯೩೪ ಪು : ? (ಅಪೂರ್ಣಕೃತಿ)

**೩೭ ಬಸವೇಶ್ವರನ ಷಟ್‌ಸ್ಥಳ ವಚನದ ಕಥಾಸಾರ**
ಪ್ರ. ಆ : ೧೯೩೪ ಪು : ೧೧೨
ಬಸವಣ್ಣನವರ ವಚನಗಳಲ್ಲಿ ನಾಮಮಾತ್ರವಾಗಿ ಉದಾಹೃತವಾದ ಕಥೆ ಗಳನ್ನು ಇದರಲ್ಲಿ ವಿಸ್ತೃತಗೊಳಿಸಲಾಗಿದೆ.

**೩೮ ಹರಿಹರನ ರಗಳೆಗಳು. ಭಾಗ : ೫–೭**
೧೯೩೫–೧೯೪೦
ಬಸವಕಾಲೀನ, ಪೂರ್ವಕಾಲೀನ ಶಿವಶರಣರ ರಗಳೆಗಳಿವೆ.

**೩೯ ಉರಿಲಿಂಗ ಪೆದ್ದಿಯ ವಚನಗಳು**
ಪ್ರ. ಆ : ೧೯೩೬ ಪು : ೧೪೮

**೪೦ ಶಿವಾನುಭವ ಸತ್ಯಮಾರ್ಗ**
ಪ್ರ. ಆ : ೧೯೩೯ ಪು : ೧೩೪
'ಶಿವಾನುಭವ' ವಿಷಯವನ್ನು ಕುರಿತ ವಿದ್ವಾಂಸರ ೭ ಲೇಖನಗಳ ಸಂಗ್ರಹ.

**೪೧ ಶಿವಶರಣರ ಸಂಕೀರ್ಣ ವಚನಗಳು ಭಾಗ : ೧–೨**
ಪ್ರ. ಆ : ೧೯೩೮–೪೦ ಪು : ಒಟ್ಟು ೨೪೩
ಗಜೇಶ ಮಸಣಯ್ಯ, ಚಂದಿಮರಸ, ಅರಿವಿನ ಮಾರಿತಂದೆ, ಹಾವಿನಹಾಳ ಕಲ್ಲಯ್ಯ, ಮಧುವರಸ, ಸತ್ಯಕ್ಕ, ಶಿವಲೆಂಕ ಮಂಚಣ್ಣ, ಉರಿಲಿಂಗದೇವ, ಬಾಹೂರ ಬೊಮ್ಮಯ್ಯ–ಇವರ ವಚನ ಸಂಗ್ರಹ.

**೪೨ ಶಿವಶರಣರ ಸಂಗೀತ ವಚನಗಳು**
ಪ್ರ. ಆ : ೧೯೩೮ ಪು : ೧೯
ವಚನಗಳನ್ನು ರಾಗ-ತಾಳಗಳಗೆ ಅಳವಡಿಸಲಾಗಿದೆ.

**೪೩ ಶ್ರೀ ಮಡಿವಾಳ ಮಾಚಿದೇವನ ವಚನಗಳು**
ಪ್ರ. ಆ : ೧೯೩೯ ಪು : ೭೩

**೪೪ ವಚನಶಾಸ್ತ್ರಸಾರ ಭಾಗ–೩**
ಪ್ರ. ಆ : ೧೯೩೯ ಪು : ೨೪೪
ವೀರಶೈವ ಅಷ್ಟಾವರಣಗಳ ವಿವೇಚನೆಯಿದೆ,




೪೫ **ಶಿವಾನುಭವ ಸೃಷ್ಟಿಯ ವಚನಗಳು**
ಪ್ರ. ಆ: ೧೯೪೧ ಪು: ೫೩
'ಮುಕ್ತಾಂಗನಾ ಕಂಠಮಾಲೆ' ಮತ್ತು 'ಜ್ಯೋತಿರ್ಮಯ ಶಾಂಭವೀ ದೀಕ್ಷೆ' ಎಂಬೆರಡು ಗ್ರಂಥಗಳು ಇವರಲ್ಲಿ ಅಡಕವಾಗಿವೆ.

೪೬ **ಹರಳಯ್ಯನ ತ್ರಿಪದಿಗಳು**
ಪ್ರ. ಆ: ೧೯೪೧ ಪು: ೨೫
ಅಸ್ಪೃಶ್ಯ ಹರಳಯ್ಯ, ಸ್ಪೃಶ್ಯ ಮಧುವಯ್ಯಗಳ ನಡುವಣ ರಕ್ತಸಂಬಂಧದ ಕಥೆ

೪೭ **ಕೆಳದಿ ಸಂಸ್ಥಾನದ ರಾಯರ ವಂಶಾವಳಿ**
ಪ್ರ. ಆ: ೧೯೪೩ ಪು ೧೭
ಕೆಳದಿ ಅರಸರ ಐತಿಹಾಸಿಕ ಘಟನೆಗಳು ನಿರೂಪಿತವಾಗಿವೆ.

೪೮ **ಹಾವಿನಹಾಳ ಕಲ್ಲಿದೇವನ ವಚನಗಳು**
ಪ್ರ. ಆ: ೧೯೩೯ ಪು: ೩೦

೪೯ **ಸತ್ಯಕ್ಕನ ವಚನಗಳು**
ಪ್ರ. ಆ: ೧೯೩೯ ಪು: ೪

೫೦ **ಮಧುವರಸನ ವಚನಗಳು**
ಪ್ರ. ಆ: ೧೯೩೯ ಪು: ೨೦

೫೧ **ಬಾಹೂರ ಬೊಮ್ಮಯ್ಯನ ವಚನಗಳು**
ಪ್ರ. ಆ: ೧೯೪೦ ಪು: ೧೩

೫೨ **ಶಿವಲೆಂಕ ಮಂಚಣ್ಣನ ವಚನಗಳು**
ಪ್ರ. ಆ: ೧೯೪೦ ಪು: ೨೦

೫೩ **ಏಲೇಶ ಕೇತಯ್ಯನ ವಚನಗಳು**
ಪ್ರ. ಆ: ೧೯೪೧ ಪು: ೧೦ ?

೫೪ **ಸೊಡ್ಡಳ ಬಾಚರಸನ ವಚನಗಳು**
ಪ್ರ. ಆ: ೧೯೪೧ ಪು: ೪೦

೫೫ **ಗುಮ್ಮಳಾಪುರದ ಸಿದ್ಧಲಿಂಗದೇವರ ವಚನಗಳು**
ಪ್ರ. ಆ: ೧೯೪೩ ಪು: ೪೭

೫೬ **ಮೋಳಿಗೆ ಮಾರಯ್ಯನ ವಚನಗಳು**
ಪ್ರ. ಆ: ೧೯೪೩ ಪು: ೩೨

೫೭ **ಶ್ರೀ ನಾಗಭೂಷಣ ಘನಮಠದಾರ್ಯರ ಕೃಷಿವಿಜ್ಞಾನ ದೀಪಿಕೆ**
ಪ್ರ. ಆ: ೧೯೩೮ ಪು: ೩೭೭
ಉತ್ತಮ ತರಗತಿಯ ಬೇಸಾಯ ಪದ್ಧತಿಯನ್ನು ವಿವರಿಸಲಾಗಿದೆ. ಒಕ್ಕಲುತನವನ್ನು ಕುರಿತಾದ ಕನ್ನಡದ ಪ್ರಥಮ ಗ್ರಂಥ ಇದಾಗಿರಬಹುದು.

೫೮ **ಶಿವಶರಣರ ಪದಗಳು**
ಪ್ರ. ಆ : ೧೯೪೩ ಪು : ೬೪
ಕರಸ್ಥಲದ ನಾಗಲಿಂಗಪ್ಪ, ಹಾಗಲವಾಡಿ ಮುದಿಯಪ್ಪ ನಾಯಕರ ಮಗಳು, ಮಲ್ಲೀನಹಳ್ಳಿಯ ಚೆನ್ನಬಸವದೇವರು, ಹೊನ್ನುಡಿಕೆ ಗಂಗಾಧರಸ್ವಾಮಿಗಳು ಇವರ ತತ್ವಪದಗಳ ಸಂಗ್ರಹ.

೫೯ **ಶಿವಶರಣರ ಚರಿತ್ರೆಗಳು ಭಾಗ-೧-೩**
ಭಾಗ : ೧ : ೧೯೪೪ ಭಾಗ : ೨ : ೧೯೪೮ ? ಭಾಗ : ೩ : ೧೯೫೧
ಪು : ಒಟ್ಟು ಸುಮಾರು ೭೦೦
ಪುರಾಣ ಹಾಗೂ ವಚನಗಳನ್ನಾಧರಿಸಿ ಐತಿಹಾಸಿಕ ದೃಷ್ಟಿಯಿಂದ ಶಿವಶರಣರ ಜೀವನ ಚರಿತ್ರೆಗಳನ್ನು ನಿರೂಪಿಸಲಾಗಿದೆ.

೬೦ **ಸಂಗೀತದಲ್ಲಿ ಶಿವಶರಣರ ವಚನಗಳು**
ದ್ವಿ. ಆ : ೧೯೫೪ ಪು : ೩೬
ರಾಗಬದ್ಧವಾಗಿ ಹಾಡಲು ಬರುವಂತೆ ವಚನಗಳನ್ನು ಅಳವಡಿಸಲಾಗಿದೆ.

೬೧ **೭೭೦ ಅಮರಗಣಾಧೀಶ್ವರರ ಚರಿತ್ರೆಗಳು**
ಪ್ರ. ಆ : ೧೯೫೪ ಪು : ೨೨೦

೬೨ **ಮೆರೆಮಿಂಡದೇವನ ವಚನಗಳು**
ಪ್ರ. ಆ : ೧೯೫೦ ಪು : ೨೨
ಮೆರೆಮಿಂಡದೇವನು ತಮಿಳುನಾಡಿನ ತಿರುವಾರೂರು ಗ್ರಾಮದವನು.

೬೩ **ಬಸವೇಶ್ವರನ ತತ್ವಗಳು**
ಪ್ರ. ಆ : ೧೯೫೦ ಪು : ೧೦೧
'ಶಿವಾನುಭವ' ಪತ್ರಿಕೆಯಲ್ಲಿ ಬಸವಣ್ಣನವರನ್ನು ಕುರಿತು ವಿವಿಧ ಲೇಖಕರಿಂದ ಬರೆಯಲ್ಪಟ್ಟ ಲೇಖನಗಳನ್ನು ಸಂಕಲಿಸಿಕೊಡಲಾಗಿದೆ.

೬೪ **ವೇಮಣ್ಣಯೋಗಿಯ ವಚನಗಳು**
ಪ್ರ. ಆ : ೧೯೫೧ ಪು : ೯೭
ತೆಲುಗುನಾಡಿನ ವೇಮಣ್ಣನ ತತ್ವಪದಗಳ ಸಂಗ್ರಹ.

೬೫ **ಸಟೀಕ ಶೂನ್ಯಸಂಪಾದನೆ ಭಾಗ-೧೫**
ಪ್ರ. ಆ : ೧೯೫೪
ವಚನಗಳಿಗೆ ಟೀಕೆಯನ್ನೊಳಗೊಂಡ 'ಶೂನ್ಯಸಂಪಾದನೆ'ಯ ಭಾಗಗಳವು.

೬೬ **ಶಿವಶರಣರ ಅಹಿಂಸಾಧರ್ಮ**
ಪ್ರ. ಆ : ೧೯೫೬ ಪು : ೪೦
ಅಹಿಂಸೆಗೆ ಸಂಬಂಧಿಸಿದ ೧೪ ಶರಣರ ವಚನ ಸಂಗ್ರಹ.

೬೭ **ಸಾರಂಗ ಮಠಾಧೀಶ್ವರರು**
ಪ್ರ. ಆ : ೧೯೫೬ ಪು : ೨೫
ಕೇರಳ. ಕರ್ನಾಟಕದಲ್ಲಿ ಧರ್ಮಪ್ರಸಾರ ಮಾಡಿದ ಸಾರಂಗಮಠಾಧೀಶ್ವರರ ಚರಿತ್ರೆ.

೬೮ **ಶಿವಶರಣೆಯರ ಚರಿತ್ರೆಗಳು**
ಪ್ರ. ಆ : ೧೯೫೯ ಪು : ೧೫೪

## (ಆ) ಡಾ|| ಹಳಕಟ್ಟಿ ಅವರನ್ನು ಕುರಿತ ಗ್ರಂಥಗಳು

(೧) **ವಚನಪಿತಾಮಹ** (ಲಿಂಗೈಕ್ಯ ಡಾ|| ಹಳಕಟ್ಟಿಯವರ ಸ್ಮಾರಕ ಸಂಪುಟ)
ಸಂಪಾದಕ : ಪ್ರೊ|| ಸಂಗಮನಾಥ ಹಂಡಿ
ಸಂಗನ ಬಸವೇಶ್ವರ ಆರ್ಟ್ಸ್ ಕಾಲೇಜ್ ಪ್ರಕಟನೆ, ವಿಜಾಪುರ, ೧೯೬೮

(೨) **ವಚನಪಿತಾಮಹ ಹಳಕಟ್ಟಿ ಫಕೀರಪ್ಪನವರು**
ಡಾ|| ಎಸ್. ಆರ್. ಗುಂಜಾಳ
ಇಂಡಿಯಾ ಬುಕ್ ಹೌಸ್, ಬೆಂಗಳೂರು–೧೯೭೪

(೩) **ಫ. ಗು. ಹಳಕಟ್ಟಿ**
ಡಾ|| ವಿ. ಶಿವಾನಂದ
ಭಾರತ ಭಾರತಿ ಪುಸ್ತಕ ಸಂಪದ, ಬೆಂಗಳೂರು–೧೯೭೪

(೪) **ಹಳಕಟ್ಟಿ ಫಕೀರಪ್ಪನವರು**
ಪ್ರೊ|| ಸಂಗಮನಾಥ ಹಂಡಿ
ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೧೯೮೦

(೫) **ದಿವ್ಯಜ್ಯೋತಿ ಹಳಕಟ್ಟಿಯವರು**
ವಚನ ಪಿತಾಮಹ ಡಾ|| ಹಳಕಟ್ಟಿಯವರ ಜನ್ಮಶತಾಬ್ದಿ ಸಮಾರಂಭದ ಸಂಸ್ಮರಣ ಗ್ರಂಥ.
ಸಂಪಾದಕರು : ಡಾ|| ಆರ್. ಸಿ. ಮುದ್ದೇಬಿಹಾಳ ಮುಂತಾದವರು.
ಜಿಲ್ಲಾ ಕನ್ನಡ ಸಾಹಿತ್ಯ ವರ್ಧಕ ಸಂಘ, ವಿಜಾಪುರ, ೧೯೮೦.

(೬) **ವಚನ ಸಂಶೋಧನ ಪಿತಾಮಹ ಶರಣ ಫ. ಗು. ಹಳಕಟ್ಟಿಯವರು**
ಲೇ : ಸಿದ್ಧಣ್ಣ ಲಂಗೋಟಿ.
ಪ್ರ : ಬಸವತತ್ವ ಪ್ರಸಾರ ಸಂಸ್ಥೆ, ಕಲ್ಬುರ್ಗಿ, ೧೯೮೦

(೭) **ಚೇತನ :** (ವಚನ ಪಿತಾಮಹ ಡಾ|| ಫ. ಗು. ಹಳಕಟ್ಟಿಯವರ ಶತಮಾನೋತ್ಸವ ನೆನಪಿನ ಸಂಪುಟ.)
ಆರ್. ಎಲ್. ಎಸ್. ಕಾಂಪೋಜಿಟ್ ಜೂನಿಯರ್ ಕಾಲೇಜು,
ಧಾರವಾಡ, ೧೯೮೧

(೮) **ಮಣಿಹ :** (ದಿವಂಗತ ಪೂಜ್ಯ ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ)
ಪ್ರಧಾನ ಸಂಪಾದಕ : ಡಾ|| ಸಿದ್ಧಯ್ಯ ಪುರಾಣಿಕ
ಸಂಪಾದಕ : ಡಾ|| ಆರ್. ಶೇಷಶಾಸ್ತ್ರಿ
ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ (ರಿ.), ಕನ್ನಡ ಸಾಹಿತ್ಯ ಸಂಶೋಧನ ಕೇಂದ್ರ, ಬೆಂಗಳೂರು, ೧೯೮೧






# ಫ. ಗು. ಹಳಕಟ್ಟಿಯವರ ಕೆಲವು ಪತ್ರಗಳು

[ ಇತಿಹಾಸವನ್ನು ಸ್ಪಷ್ಟವಾಗಿ ಗುರುತಿಸುವಲ್ಲಿ ಪತ್ರವ್ಯವಹಾರಗಳು ಸಂಶೋಧಕರಿಗೆ ಮೂಲ ಸಾಮಗ್ರಿಗಳಾಗುತ್ತವೆ ಎಂಬುವರಲ್ಲಿ ಸಂಶಯವಿಲ್ಲ. ಈ ತೆರನ ಮೂಲ ಸಾಮಗ್ರಿಗಳ ಪ್ರಕಟನೆ ಕನ್ನಡದಲ್ಲಿ ಸ್ವಲ್ಪ ಮಟ್ಟಿಗೆ ನಡೆದಿದೆಯಾದರೂ ಆ ಬಗ್ಗೆ ಅತೃಪ್ತಿ ಉಳಿದಿದೆ. ಈ ಕಾರ್ಯವು ತೃಪ್ತಿಕರವಾಗಿ ನಡೆಯಲು ಸಂಶೋಧಕರ ಸತತ ಪ್ರಯತ್ನದ ಜೊತೆಗೆ ಪತ್ರಗಳನ್ನು ಹೊಂದಿರುವ ವ್ಯಕ್ತಿಗಳ ಸಹಕಾರವೂ ತೀರಾ ಮುಖ್ಯವೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇವೆ.

ಶ್ರೀ ಎಸ್. ಆರ್. ಮಲ್ಲಪ್ಪನವರ ಬಳಿ ಈಗ ಶ್ರೀ ಹಳಕಟ್ಟಿಯವರು ಶ್ರೀ ಮಲ್ಲಪ್ಪನವರಿಗೆ ಬರೆದ ಪತ್ರಗಳು ಒಂದು ನೂರರಷ್ಟು ಇವೆ. ಇಲ್ಲಿ ಕೇವಲ ಐವತ್ತು ಪತ್ರಗಳನ್ನು ಮಾತ್ರ ಪ್ರಕಟಿಸಿರುತ್ತೇವೆ. ಉಳಿದವುಗಳನ್ನು ಶ್ರೀ ಎಸ್. ಆರ್. ಮಲ್ಲಪ್ಪನವರು ಪ್ರಕಟನೆಗೆ ನೀಡಿಲ್ಲ. ಕಾರಣ: ಆ ಪತ್ರಗಳ ಕೊನೆಯಲ್ಲಿ ಶ್ರೀ ಹಳಕಟ್ಟಿಯವರೇ 'ಈ ಸಂಗತಿಗಳನ್ನು ಪ್ರಕಟಿಸಬೇಡಿ' ಎಂದು ಬರೆದಿರುವುದು. ಶ್ರೀ. ಎಸ್. ಆರ್. ಮಲ್ಲಪ್ಪನವರು ಶ್ರೀ ಹಳಕಟ್ಟಿಯವರ ಮಾತನ್ನು ಮೀರಲಾರದವರಾಗಿದ್ದಾರೆ. ತಮ್ಮ ಮತ್ತು ಶ್ರೀ ಹಳಕಟ್ಟಿಯವರ ಪತ್ರವ್ಯವಹಾರವನ್ನು ಕುರಿತು "ಶಿವೈಕ್ಯ ಫ. ಗು. ಹಳಕಟ್ಟಿಯವರಿಗೂ ನನಗೂ ಪತ್ರಗಳ ಮೂಲಕವಾಗಿಯೇ ಮೊದಲ ಪರಿಚಯವಾಯಿತು. ಬಹುಶಃ ೧೯೩೩ರಿಂದಲೂ ಪತ್ರವ್ಯವಹಾರ ನಡೆದಿರಬಹುದು. ೧೯೩೦ರಲ್ಲಿ ಅವರು ಬರೆದ ಪತ್ರವೂ ಇದೆ. ಈ ಸ್ನೇಹ ಅಂತ್ಯದವರೆಗೂ ಇತ್ತು. ಅವರು ನೂರಾರು ಪತ್ರಗಳನ್ನು ಬರೆದಿದ್ದಾರೆ" ಎಂಬುದಾಗಿ ದಿನಾಂಕ ೧೭-೬-೭೫ರಲ್ಲಿ ನಮಗೆ ಬರೆದ ಪತ್ರವೊಂದರಲ್ಲಿ ಮಲ್ಲಪ್ಪನವರು ತಿಳಿಸಿದ್ದಾರೆ.

ಪೂಜ್ಯ ಶ್ರೀ ಹಳಕಟ್ಟಿಯವರ ಪತ್ರಗಳನ್ನು ಜೋಪಾನವಾಗಿ ಕಾಪಾಡಿಕೊಂಡು ಬಂದುದಷ್ಟೇ ಅಲ್ಲ; ನಮ್ಮ ಕರೆಗೆ ಮನ್ನಣೆ ನೀಡಿ ಅವುಗಳನ್ನು ಪ್ರಕಟಿಸಲು ನೆರವಾದ ಶ್ರೀ ಎಸ್. ಆರ್. ಮಲ್ಲಪ್ಪನವರ ಮನೋವೈಶಾಲ್ಯಕ್ಕೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು. ಶ್ರೀ ಮಲ್ಲಪ್ಪನವರಂತೆಯೇ ಶ್ರೀ ಹಳಕಟ್ಟಿಯವರ ಪತ್ರಗಳನ್ನು ಕಾಪಾಡಿಕೊಂಡುಬಂದ ಇತರರೂ ಅವುಗಳನ್ನು ಪ್ರಕಟನೆಗೆ ನೀಡಿದ್ದರೆ ಈ ಕೃತಿಯ ಮೌಲ್ಯ ಇನ್ನೂ ಹೆಚ್ಚುತ್ತಿತ್ತು. ಶ್ರೀ ಮಲ್ಲಪ್ಪನವರ ಮೇಲ್ಪಂಕ್ತಿಯನ್ನು ನಮ್ಮ ಜನ ಅನುಸರಿಸುತ್ತಾರೆಂದು ನಂಬುತ್ತೇವೆ.

ತಮ್ಮ ತಂದೆ ದಿ|| ತೀ. ನಂ. ಶ್ರೀ. ಯವರ ಪತ್ರಸಂಗ್ರಹದಲ್ಲಿದ್ದ ಹಳಕಟ್ಟಿಯವರ ಎರಡು ಪತ್ರಗಳನ್ನು ಶ್ರೀ ತೀ. ಶ್ರೀ. ನಾಗಭೂಷಣ ಅವರು ಕೊಟ್ಟಿರುತ್ತಾರೆ. ಅವರಿಗೂ ನಮ್ಮ ವಂದನೆಗಳು.—ಸಂ.]

## ಹಳಕಟ್ಟಿ – ಮಲ್ಲಪ್ಪನವರ ಪತ್ರವ್ಯವಹಾರ

೧

೪–೧–೪೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ ಅನೇಕ ಶ.ಶ. ಗಳು. ನಾನು ಹೋದ ತಿಂಗಳಿಲ್ಲ ಬೆಂಗಳೂರು, ಮೈಸೂರು, ಆಮೇಲೆ ಮದ್ರಾಸ್ ಈ ಸ್ಥಳಗಳಲ್ಲಿದ್ದೆನು. ಈ ಪ್ರಕಾರ ಒಂದು ತಿಂಗಳವರೆಗೆ ಪ್ರವಾಸದಲ್ಲಿ ಇದ್ದೆನು. ಈ ಕಾಲದಲ್ಲಿ ತಮ್ಮ ಬಿಡುಗಡೆಯಾದದ್ದನ್ನು ಪತ್ರಿಕೆಗಳಲ್ಲಿ ನೋಡಿದೆನು.* ಬಹಳ ಆನಂದವಾಯಿತು. ನಾನು ಮೊನ್ನಿನ ದಿವಸ ವಿಜಾಪುರಕ್ಕೆ ಬಂದೆನು. ಆಗ್ಗೆ ತಮ್ಮ ಪತ್ರಗಳನ್ನು ನೋಡಿದೆನು. ನಾನು ಈ ದಿನ ಬಸವೇಶ್ವರ ವಚನ ಈ ಗ್ರಂಥವನ್ನು ತಮಗೆ ಕಳಿಸಿಕೊಟ್ಟಿದ್ದೇನೆ. ಅದನ್ನೇ ಆಧಾರವಾಗಿಟ್ಟುಕೊಂಡು ಶಿವಾನುಭವದ ತತ್ವಗಳನ್ನು ಪ್ರಚಾರ ಮಾಡಲು ಅನುಕೂಲವು. ಈ ಕಾರ್ಯವನ್ನು ತಾವು ಕೈಕೊಳ್ಳುವುದನ್ನು ಯೋಚಿಸಿದ್ದು ತಿಳಿದು ಆನಂದವಾಯಿತು. ಈ ಕಡೆಗೆ ತಾವು ಅವಶ್ಯವಾಗಿ ಲಕ್ಷ್ಯಕೊಡಬೇಕು. ಅಲ್ಲಲ್ಲಿ ಶಿವಾನುಭವ ಸಂಘಗಳನ್ನು ಸ್ಥಾಪಿಸಬೇಕು. ಇವು ಅಲ್ಲಿ ನಡೆಯಬೇಕಾದರೆ ಈ ಕಾರ್ಯವನ್ನು ನಡೆಸಲು ಅಪೇಕ್ಷೆಯುಳ್ಳ ಒಬ್ಬರಾದರೂ ಆ ಗ್ರಾಮದಲ್ಲಿ ಇರುವದು ಅವಶ್ಯವು. ಅಂಥವರನ್ನು ಕಂಡುಹಿಡಿದು ಅವರ ಸಹಾಯದಿಂದ ಆಯಾ ಗ್ರಾಮಗಳಲ್ಲಿ ಕಾರ್ಯವನ್ನು ನಡೆಸಬೇಕು. ಮುಂದಿನ ವರ್ಷದಲ್ಲಿ ನಡೆಯತಕ್ಕ ಶ್ರೀ ಸಿದ್ಧರಾಮೇಶ್ವರ ಜಯಂತಿಯ ಕಾಲದಲ್ಲಿ ತಾವು ಮಾಡಲೆಣಿಸಿರುವ ಪರಿಷತ್ತಿನಲ್ಲಿ ಇವುಗಳಿಗೆ ಸುಸಂಘಟಿತ ಸ್ಥಿತಿಯನ್ನು ಬರುವಂತೆ ಈಗಾಗಲೇ ಪ್ರಯತ್ನಪಡಿಸಬೇಕೆಂದು ನನ್ನ ಸೂಚನೆ ಇದೆ. ಇತಿ ತಮ್ಮ

ಫ. ಗು. ಹಳಕಟ್ಟಿ

[*ಶ್ರೀ ಎಸ್. ಆರ್. ಮಲ್ಲಪ್ಪನವರು ಸ್ವಾತಂತ್ರ್ಯ ಹೋರಾಟಗಾರರು. ಹಲವಾರು ಬಾರಿ ಸೆರೆಮನೆಯಲ್ಲಿಯೂ ಇದ್ದವರು.—ಸಂ.]

೨

೧೪–೧–೪೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ —

ಅನೇಕ ವಿಜ್ಞಾಪನೆಗಳು. ತಮ್ಮ ೭–೧೦–೧೯೪೧ನೇ ತಾರೀಖಿನ ಪತ್ರವು ಮುಟ್ಟಿತು. ಮಕರ ಸಂಕ್ರಮಣವು ೨ ತಿಂಗಳು ಮಾತ್ರ ಉಳಿದಿರುತ್ತದೆ. ತಾವು ಶ್ರೀ ಸಿದ್ಧರಾಮೇಶ್ವರರ ಪುಣ್ಯ ತಿಥಿಯನ್ನು ವಿಜೃಂಭಣೆಯಿಂದ ನೆರವೇರಿಸುವ ಕುರಿತು ಆರಂಭದ ಪ್ರಯತ್ನಗಳನ್ನು ವಿಶೇಷವಾಗಿ ಮಾಡಲೆಣಿಸಿರುವಿರಿ. ಹಾಗಿದ್ದರೆ ಈ ಅವಧಿಯು ಬಹು ಕಡಿಮೆ ಇದೆ. ಆದ್ದರಿಂದ ಈ ಕಾರ್ಯಕ್ರಮವನ್ನು ಈ ವರ್ಷ

ಬಿಟ್ಟು ಮುಂದಿನ ವಿಚಾರ ಮಾಡುವದು ಅವಶ್ಯ ತೋರುತ್ತದೆ. ತಮ್ಮ ಕಡೆಯ ಮಹನೀಯರ ಅಭಿಪ್ರಾಯದಂತೆ ಮಾಡುವದು ಯೋಗ್ಯವಿರುತ್ತದೆ. ಇತಿ ತಮ್ಮ

ಫ. ಗು. ಹಳಕಟ್ಟಿ

೩

೧೧–೭–೪೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ

ಅನೇಕ ಶ. ಶ. ತಮ್ಮ ೭ನೇ ತಾರೀಖಿನ ಪತ್ರವು ಮುಟ್ಟಿರುತ್ತದೆ. ತಾವು ಅದರಲ್ಲಿ ನಿಮ್ಮ ಕಡೆಯ ಶ್ರೀ ಸಿದ್ಧರಾಮೇಶ್ವರರ ದೇವಾಲಯಗಳ ವಿಷಯವಾಗಿ ಸವಿಸ್ತಾರವಾಗಿ ಬರೆದಿರುವಿರಿ. ಅದು ಬಹಳ ಬೋಧಪ್ರದವಾಗಿದೆ. ನೀವು ಬರೆದದ್ದರ ಮೇಲಿಂದ ಅವುಗಳ ಮುಖ್ಯ ದೇವತೆಯಾದ ಶ್ರೀ ಸಿದ್ಧರಾಮೇಶ್ವರರು ಈಚಿನವರಲ್ಲವೆಂದು ಸ್ಪಷ್ಟವಾಗುತ್ತದೆ. ನಿಮ್ಮ ಪ್ರಾಂತದಲ್ಲಿ ಈಚೆಗೆ ಕೆಲವು ಸಿದ್ಧರಾಮೇಶ್ವರರು ಆಗಿಹೋಗಿದ್ದಾರೆ. ಅವರು ಈ ದೇವಾಲಯಗಳಿಗೆ ಸಂಬಂಧ ಪಡುವುದಿಲ್ಲ. ಇಷ್ಟು ಖ್ಯಾತಿಯನ್ನು ಪಡೆದ ಮಹಾನುಭಾವರು ಸೊನ್ನಲಿಗೆಯ ಸಿದ್ಧರಾಮೇಶ್ವರರ ಹೊರ್ತು ನಿಮ್ಮ ಸಮಾಜದಲ್ಲಿ ಬೇರೆ ಯಾರೂ ಇರುವುದಿಲ್ಲ. ಜಿಲ್ಹಾ ಶಿವಮೊಗ್ಗ ಸೊರಬ ತಾಲ್ಲೂಕಿನಲ್ಲಿ 'ಕೋಳಿಸಾಲೆ' ಎಂಬ ಗ್ರಾಮವಿದೆ. ಅಲ್ಲಿ ಒಂದು ಶಿಲಾಶಾಸನವಿದ್ದು ಅದರಲ್ಲಿ ಸೊಲ್ಲಾಪುರ ಸಿದ್ಧರಾಮೇಶ್ವರ ಮತ್ತು ಕಪಿಲಸಿದ್ಧ ಮಲ್ಲಿಕಾರ್ಜುನ ಇವರ ಉಲ್ಲೇಖಗಳಿವೆ. ಆದ್ದರಿಂದ ಸಿದ್ಧರಾಮೇಶ್ವರರು ನಿಮ್ಮ ಪ್ರಾಂತದಲ್ಲಿಯೂ ಪ್ರಸಿದ್ಧರಾಗಿದ್ದರು. ಹರಿಹರಕವಿಯು ಇವರು ಜಗದ್ಗುರುಗಳೆಂದು ತನ್ನ ರಗಳೆಯೊಂದರಲ್ಲಿ ಬರೆದಿದ್ದಾನೆ.

ಸಿದ್ಧರಾಮೇಶ್ವರರ ಜನ್ಮತಿಥಿಯನ್ನು ಶೋಧಿಸಲು ಸೊಲ್ಲಾಪುರದ ಒಬ್ಬ ಮಹನೀಯರಿಗೆ ಸೂಚಿಸಿದ್ದೆನು. ಅವರು ೧೦-೧೨ ದಿವಸಗಳ ಹಿಂದೆ ಇಲ್ಲಿ ನನ್ನನ್ನು ಕಂಡಿದ್ದರು. ಸಿದ್ಧರಾಮೇಶ್ವರರ (ಪ್ರಜಾವಲ್ಲಿ) ಹಬ್ಬಗಳು ಎಂಬ ಪಂಗಡದವರು ಇದ್ದಾರೆ. ಅವರಲ್ಲಿ ನನ್ನ ಸ್ನೇಹಿತರು ಈ ವಿಷಯದ ಬಗ್ಗೆ ಶೋಧಿಸಲು ಅವರಲ್ಲಿ ಯಾವ ಉಲ್ಲೇಖಗಳೂ ದೊರೆಯಲಿಲ್ಲ. ಗ್ರಂಥಾಂತರಗಳಲ್ಲಿಯೂ ಈ ವರೆಗೆ ಈ ವಿಷಯವಾಗಿ ನನಗೆ ಯಾವ ಆಧಾರವೂ ದೊರೆತಿಲ್ಲ. ಆದ್ದರಿಂದ ಸೊಲ್ಲಾಪುರದ ಸ್ಥಾನಿಕ ಜಾತ್ರೆಯಲ್ಲಿ ನಡೆಯುವ ಪದ್ಧತಿಯ ಮೇಲಿಂದ ಈ ವಿಷಯದ ಬಗ್ಗೆ ಅನುಮಾನವನ್ನು ತೆಗೆಯಬೇಕಾಗುತ್ತದೆ. ಸೊಲ್ಲಾಪುರದ ಸಿದ್ಧರಾಮೇಶ್ವರರ ಜಾತ್ರೆಯಲ್ಲಿ ಸಿದ್ಧರಾಮೇಶ್ವರರ ಮತ್ತು ಮಲ್ಲಿಕಾರ್ಜುನರ ಸಂಬಂಧಗಳು ಬರುತ್ತವೆ. ಆ ಉಭಯ ದೇವತೆಗಳಿಗೂ ಅವರ ವಿಧಾನಗಳು ಸಂಬಂಧಪಡುತ್ತವೆ. ಆದ್ದರಿಂದ ಈ ವಿಧಾನಗಳ ಸವಿಸ್ತಾರ ವರ್ಣನೆಯನ್ನು ಸಂಕ್ಷೇಪಿಸಿ ತಿಳಿಸಲು ನನ್ನ ಸ್ನೇಹಿತರಿಗೆ ಹೇಳಿದ್ದೇನೆ.

ಆದರೆ ಸೊಲ್ಲಾಪುರದಂತೆ ನಿಮ್ಮಲ್ಲಿಯ ಸಿದ್ಧರಾಮೇಶ್ವರ ದೇವಾಲಯಗಳಲ್ಲಿ ಜಯಂತಿಗಳನ್ನು ಮಕರಸಂಕ್ರಾಂತಿಯಲ್ಲಿ ಜರುಗಿಸಿದಲ್ಲಿ ಯಾವ ಪ್ರತ್ಯವಾಯವಿಲ್ಲ. ಆದರೆ ಮಿತಿ ಶಕೆ ಇವುಗಳನ್ನು ಕುರಿತು ನಾನು ಇನ್ನು ಕೆಲವು ಶೋಧನವನ್ನ ಮಾಡಿ ತಮಗೆ ತಿಳಿಸುವೆನು. ಇದಕ್ಕೆ ಕೆಲವುಕಾಲ ಬೇಕು. ನಾನು ಸೊಲ್ಲಾಪುರಕ್ಕೆ ಹೋಗುವ ಪ್ರಸಂಗವಿದೆ. ಆಗ ನಾನು ಅಲ್ಲಿ ಶೋಧಿಸುವೆನು. ಆದರೆ ಮಕರ ಸಂಕ್ರಾಂತಿಯ ಕಾಲವನ್ನು ಸದ್ಯಕ್ಕೆ ನಿರ್ಧರಿಸಲು ಯಾವ ಅಭ್ಯಂತರವೂ ತೋರು ವುದಿಲ್ಲ.

ಇತಿ ತಮ್ಮ

ಫ. ಗು. ಹಳಕಟ್ಟಿ

೪

೧೮-೮-೧೯೪೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ

ಅನೇಕ ಶ.ಶ.ಗಳು. ಶ್ರೀ ಸಿದ್ಧರಾಮೇಶ್ವರರ ಜಯಂತಿ ದಿನದ ವಿಷಯ ತಾವು ಬರೆದುದು ವಿದಿತವಾಯಿತು. ಇದನ್ನು ಕುರಿತು ಒಬ್ಬ ಜ್ಯೋತಿಷಜ್ಞರನ್ನು ಕೇಳ ಬೇಕಾಗುತ್ತದೆ. ಅವರಿಂದ ತಿಳಿದುಕೊಂಡು ತಮಗೆ ಪತ್ರ ಹಾಕುವೆನು. ನಾನು ನಾಳೆ ಸೊಲ್ಲಾಪುರಕ್ಕೆ ಅಲ್ಲಿಯ 'ಕರ್ನಾಟಕ ಸಂಘದ' ವಾರ್ಷಿಕೋತ್ಸವಕ್ಕೆ ಆಹ್ವಾನಿಸಲ್ಪಟ್ಟಿರುವುದರಿಂದ ಹೋಗುವೆನು. ಅಲ್ಲಿ ಈ ವಿಷಯವಾಗಿ ಹೆಚ್ಚಿನ ಸಂಗತಿಗಳು ದೊರೆಯುವಂತಿದ್ದರೆ ಸಂಶೋಧಿಸುವೆನು.

ಇತಿ ತಮ್ಮ

P. G. Halakatti

೫

೪-೧೦-೪೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ತಮ್ಮ ೧-೮-೪೧ರ ಮತ್ತು ೧೨-೯-೪೧ನೇ ತಾರೀಖಿನ ಪತ್ರಗಳು ಮುಟ್ಟಿವೆ. ಅವುಗಳಲ್ಲಿ ಶ್ರೀ ಸಿದ್ಧರಾಮೇಶ್ವರರ ಜನ್ಮತಿಥಿಯನ್ನು ತಿಳಿಸಲು ಬರೆ ದಿರುವಿರಿ. ಆದರೆ ಅವರ ವಿಷಯವಾಗಿ ಜನ್ಮತಿಥಿ ಅಥವಾ ದೀಕ್ಷಾದಿನ ಅಥವಾ ಅಂತ್ಯದಿನ ಇವಾವೂ ತಿಳಿದಿರುವುದಿಲ್ಲ. ಅವರ ಅನೇಕ ಚರಿತ್ರೆಗಳವೆ. ಅವುಗಳಲ್ಲಿ ಈ ಮಿತಿಗಳು ಉಪಲಬ್ಧವಿರುವುದಿಲ್ಲ. ಮುಂದೆ ಶೋಧದಲ್ಲಿ ಇವು ದೊರೆಯಬಹುದು. ಈ ಸ್ಥಿತಿಯಲ್ಲಿ ಅನಿಶ್ಚಯಾತ್ಮಕವಾದ ತಿಥಿಯನ್ನು ತಮ್ಮ ಸಮಾಧಾನಕೋಸ್ಕರ ಹೇಳಲು ನನ್ನ ಮನಸ್ಸು ಒಪ್ಪುವುದಿಲ್ಲ. ಶ್ರೀ ಬಸವೇಶ್ವರರ ಬಗ್ಗೆ ಹೀಗಿರುವುದಿಲ್ಲ. ಅವರ ಜನ್ಮ ಮತ್ತು ಅಂತ್ಯ ತಿಥಿಗಳೆರಡೂ ಉಪಲಬ್ಧವಿರುತ್ತವೆ. ಅವು ಒಂದಕ್ಕೊಂದು ಮೇಳವಿರುವುದಿಲ್ಲವೆಂಬುದು ನಿಜವು. ಆದರೆ ಐತಿಹಾಸಿಕ ದೃಷ್ಟಿ ಯಿಂದ ವಿವೇಚಿಸಿದಲ್ಲಿ ಅವುಗಳಲ್ಲೊಂದನ್ನು ನಿರ್ಧರಿಸುವುದು ಕಷ್ಟವಾಗಿರುತ್ತದೆ.

ಈ ಸ್ಥಿತಿಯು ಶ್ರೀ ಶಿವ ರಾಮೇಶ್ವರರ ವಿಷಯವಾಗಿ ಇರುವುದಿಲ್ಲ. ಅವರು ಬಸವನ ಸಮಕಾಲೀನರೆಂಬ ಮಾತ್ರ ತಿಳಿಯುತ್ತದೆಯೇ ಹೊರ್ತು ಅವರ ಹುಟ್ಟು ಅಥವಾ ಸಮಾಧಿಯಾದ ಮಿತಿಯು ಉಪಲಬ್ಧವಿಲ್ಲ. ಈ ಸ್ಥಿತಿಯಲ್ಲಿ ಅವರ ಮೂಲಗ್ರಾಮವಾದ ಸೊಲ್ಲಾಪುರದಲ್ಲಿ ಯಾವ ಪದ್ಧತಿಯು ಇದೆಯೋ ಅದನ್ನು ಅನುಸರಿಸುವುದು ಉಚಿತವು. ಆ ಪದ್ಧತಿಯನ್ನು ನೋಡಿದಲ್ಲಿ ಸಂಕ್ರಮಣದ ದಿನ ಉತ್ಸವದಿನವಾಗಿರುವದು ಮತ್ತು ಅವರ ಹಿಂದಿನ ದಿನ ಮುಖ್ಯವಾಗಿರುವುದೆಂದು ತೋರಿಬರುತ್ತದೆ. ವಿಜಾಪುರದಲ್ಲಿಯೂ ಇದೇ ಪದ್ಧತಿಯು ಇದೆ. ಆದ್ದರಿಂದ ತಮ್ಮ ಕಡೆಗೂ ಇದೇ ರೀತಿ ಆಚರಿಸಬೇಕೆಂದು ನಾನು ಸೂಚಿಸುತ್ತೇನೆ. ಇತಿ ತಮ್ಮ

ಫ. ಗು. ಹಳಕಟ್ಟಿ

೬

೧೮–೨–೪೨

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ.ಶ.ಗಳು. ತಮ್ಮ ೧೫ ತಾರೀಖಿನ ಪತ್ರವು ನಿನ್ನೆ ಸಂಜೆಗೆ ಕೈಸೇರಿತು. ಅದರಲ್ಲಿ ಕೆಲವು ಗ್ರಂಥಗಳನ್ನು ಕಳಿಸಿಕೊಡಲು ಸೂಚಿಸಿರುತ್ತೀರಿ. ಅಲ್ಲದೆ ಅವು ೧೯ನೆಯ ತಾರೀಖಿಗೆ ಕೈಸೇರುವಂತೆ ಕಳಿಸಲು ತಿಳಿಸಿರುವಿರಿ. ಆದರೆ ಈದಿನ ರೈಲ್ವೆ ಪಾರ್ಸಲ್ ಮಾಡಿದರೂ ಕೂಡ ಪಾರ್ಸಲ್ ನಾಳಿನ ದಿನ ಇಲ್ಲಿಂದ ರವಾನೆಯಾಗಿ ತಮ್ಮಲ್ಲಿ ೨೧ನೇ ತಾರೀಖಿಗೇ ಬಂದು ಮುಟ್ಟುವದು. ಅಷ್ಟರಲ್ಲಿ ವಿದ್ಯಾರ್ಥಿಗಳು ಹೋಗಿಬಿಡುವರು. ಆದ್ದರಿಂದ ತಮ್ಮಿಂದ ಇನ್ನೊಂದು ಕಾಗದ ಬರುವವರೆಗೆ ಪುಸ್ತಕ ಕಳಿಸುವುದನ್ನು ತಡೆದಿದ್ದೇನೆ. ತಾವು ತಮ್ಮ ಅಭಿಪ್ರಾಯವನ್ನು ತಿಳಿಸಬೇಕು. ಇತಿ ತಮ್ಮ

ಫ. ಗು. ಹಳಕಟ್ಟಿ

೭

೬–೩–೪೩

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ.ಶ. ತಮ್ಮ ೨೨-೨-೧೯೪೩ನೇ ತಾರೀಖಿನ ಪತ್ರ ಮುಟ್ಟಿರುತ್ತದೆ. ತಮ್ಮ ಉತ್ಸುಕತೆಯನ್ನು ನೋಡಿ ಸಂತೋಷವಾಗುತ್ತದೆ. ಆದರೆ ಇದೊಂದು ಸಾಂಸ್ಕೃತಿಕ ಕಾರ್ಯ. ಇದು ಕ್ರಮೇಣ ಸಿದ್ಧಿ ಬರತಕ್ಕಾಗಿದೆ. ಆದರೆ ಶಾಶ್ವತ ಕಾರ್ಯವು. ರಾಜಕೀಯ ಚಳವಳಗಳು ಬೇರೆ ವಿಧವಾಗಿರುತ್ತವೆ. ಅವು ಮನಸ್ಸನ್ನು ತೀವ್ರವೇ ಹಿಡಿಯುತ್ತವೆ. ವಾಙ್ಮಯ ಮತ್ತು ಸಾಮಾಜಿಕ ಕಾರ್ಯಗಳು ಸಿದ್ಧಿಸಲಿಕ್ಕೆ ಕೆಲವು ದಿವಸಗಳು ಹತ್ತುತ್ತವೆ. ಆದ್ದರಿಂದ ತಾವು ಒಂದು ಸಂಘವನ್ನು

ನಿಮ್ಮಲ್ಲಿ ಮೊದಲು ಸ್ಥಾಪಿಸಬೇಕು. ಅವರಲ್ಲಿ ನಿಜವಾಗಿ ಪ್ರೀತಿಯುಳ್ಳ ಜನರನ್ನೇ ಸೇರಿಸಿಕೊಂಡು ಕಾರ್ಯರಂಭ ಮಾಡಬೇಕು. ಕಾಲಕಾಲಕ್ಕೆ ಸಮಾರಂಭಗಳನ್ನು ಸಾರ್ವಜನಿಕ ಉಪನ್ಯಾಸಗಳನ್ನೂ ಸ್ಪರ್ಧೆಗಳನ್ನೂ ಜರಿಗಿಸುತ್ತಿರಬೇಕು. ತಮ್ಮ ಅನುಭವಕ್ಕೆ ಬಂದ ಸಂಗತಿಗಳನ್ನು ನನಗೆ ತಿಳಿಸುತ್ತಿರಬೇಕೆಂದು ವಿನಂತಿ ಇದೆ.

ಇತಿ ತಮ್ಮ

ಫ. ಗು. ಹಳಕಟ್ಟಿ

೮

೨೦-೩-೪೩

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ

ಅನೇಕ ಶರಣಾರ್ಥಿಗಳು. ತಮ್ಮ ಪತ್ರ ಮುಟ್ಟಿತು. ಇದೇ ಮೇರೆಗೆ ತಮ್ಮಲ್ಲಿ ನಡೆಸಿದ ಚಟುವಟಿಕೆಗಳ ವಿಷಯವಾಗಿ ಬರೆಯುತ್ತಿರಬೇಕು. ಶ್ರೀ ಸಿದ್ಧರಾಮೇಶ್ವರರ ಇನ್ನೆರಡು ಗ್ರಂಥಗಳಿವೆ, ಅವುಗಳನ್ನು ಅಚ್ಚು ಹಾಕಿದಲ್ಲಿ ಅವುಗಳ ಪುಟಗಳು ೧೦೦-೧೨೫ ಆಗಬಹುದು. ಇವುಗಳನ್ನು ಈ ಕಾಲದಲ್ಲಿ ಅಚ್ಚು ಹಾಕಿಸುವುದು ಬಹಳ ಖರ್ಚಿನದು. ೧೦೦೦ ಪ್ರತಿಗಳನ್ನು ಅಚ್ಚು ಹಾಕಲು ೭ ೧/೨ ರೀಮು ಹತ್ತುತ್ತಿದ್ದು ಈಗ ಗ್ಲೇಜು ಕಾಗದದ ಬೆಲೆ ೧ ಪೌಂಡಿಗೆ ೩-೮-೦ ಕನಿಷ್ಠ ಇದ್ದು ಒಂದು ರೀಮಿಗೆ ೭೫-೮೦ ರೂಪಾಯಿ ಬೆಲೆ ಆಗುತ್ತಿರುವುದರಿಂದ ಅಜಮಾಸು ೬೦೦ ರೂಪಾಯಿ ಹತ್ತುತ್ತವೆ. ಅಲ್ಲದೆ ಪ್ರಿಂಟಿಂಗ್, ಬಾಯಿಂಡಿಂಗ್ ಇತ್ಯಾದಿ ೧೦೦-೧೨೦ ರೂಪಾಯಿ ಹತ್ತಬಹುದು. ಆದ್ದರಿಂದ ಕೆಲವು ಜನರು ಕೂಡಿ ಇಷ್ಟು ಹಣ ಕೊಟ್ಟರೆ ಕಾರ್ಯ ಕೈ ಕೊಳ್ಳುವದು ಶಕ್ಯವು. ಈ ವಿಷಯವನ್ನು ತಾವು ವಿಚಾರ ಮಾಡಬೇಕು. ಆದರೆ ಚಿಕ್ಕಚಿಕ್ಕ ಉಪಯುಕ್ತ ಪುಸ್ತಕಗಳನ್ನು ಪ್ರಸಿದ್ಧಿಸುವ ಕಾರ್ಯವನ್ನು ಕೈಕೊಂಡಿದ್ದೇನೆ. ಈ ಕಾರ್ಯದಲ್ಲಿ ಸಹಾಯವಾದಲ್ಲಿ ಬಹಳ ಉಪಯೋಗವಾಗುವುದು. ಶಿವಾನುಭವ ಸಂಘಗಳಲ್ಲಿ ಕೊಡತಕ್ಕ ಉಪನ್ಯಾಸಗಳಿಗೆ ಅವು ಬಹಳ ಉಪಯೋಗವಾಗುವುವು.

ಶಿವಾನುಭವ ಪತ್ರಿಕೆಗೆ ಈಗ ಬಹಳ ಅಡಚಣೆ ಇದೆ. ಹೆಚ್ಚಿಗೆ ಚಂದಾದಾರರನ್ನು ಕೂಡಿಸುವುದು ಬಹಳ ಅವಶ್ಯವಾಗಿದೆ. ಆದ್ದರಿಂದ ನಾನು ನಮ್ಮ ಆಫೀಸಿನಿಂದ ರಾ. ರಾ. ವೀರಯ್ಯ ಗುಡಿಗಂಟಿ ಇವರನ್ನು ಪ್ರಚಾರ ಕಾರ್ಯಕ್ಕೆ ಕಳಿಸಿದ್ದೇನೆ. ಅವರು ತಮ್ಮಲ್ಲಿಗೆ ಬರಬಹುದು, ಅವರು ಬಂದ ಕಾಲಕ್ಕೆ ಅವರಿಗೆ ಶಕ್ಯವಿದ್ದಷ್ಟು ಸಹಾಯ ಮಾಡಬೇಕೆಂದು ವಿನಂತಿ ಇದೆ.

ಇತಿ ತಮ್ಮ

ಫ. ಗು. ಹಳಕಟ್ಟಿ

೯

೨೫-೬-೪೩

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ ಅನೇಕ ವಂದನೆಗಳು. ತಮ್ಮಲ್ಲಿ ವೀರಶೈವ ಯುವಕ ಸಂಘವು ಸ್ಥಾಪಿಸಲ್ಪಟ್ಟಿದ್ದು ತಿಳಿದು ಆನಂದ ವಾಯಿತು. ಅದರ ಉದ್ದೇಶವು ವಚನಶಾಸ್ತ್ರ ಪ್ರಸಾರಕಾರ್ಯ ಮತ್ತು ವೀರಶೈವ ಏಕೀಕರಣ ಇವುಗಳೆಂದು ತಿಳಿಯುತ್ತದೆ. ಈ ಉಭಯ ಕಾರ್ಯಗಳೂ ಉದಾತ್ತ ವಾದುವುಗಳು. ನಮ್ಮ ದೇಶದಲ್ಲಿ ಅನೈಕ್ಯ ಭಾವವು ಉಂಟಾಗಿರುವುದರಿಂದಲೇ ಅದಕ್ಕೆ ಅವನತ ಸ್ಥಿತಿಯು ಪ್ರಾಪ್ತವಾಗಿರುತ್ತದೆ. ಆದರೆ ವಚನಶಾಸ್ತ್ರ ತತ್ವ ಗಳನ್ನು ಸಮಾಜದಲ್ಲೆಲ್ಲ ಪ್ರಸಾರಪಡಿಸುವುದರಿಂದ ಈ ಅನೈಕ್ಯಭಾವವು ಶೀಘ್ರವಾಗಿ ತೊಲಗುವುದೆಂದು ನಾನು ಭಾವಿಸಿದ್ದೇನೆ. ಅದರಲ್ಲಿ ವಿಶ್ವಬಂಧುತ್ವದ ವಿಶಾಲ ತತ್ವಗಳು ಅಡಕವಾಗಿವೆ. ಇವುಗಳನ್ನು ಯುವಕರು ಮನಗಂಡು ಪ್ರಸಾರ ಪಡಿಸಲು ಉದ್ಯುಕ್ತರಾದರೆ, ಸಮಾಜದಲ್ಲಿ ಐಕ್ಯತೆಯು ನೆಲೆಗೊಂಡು ಸುಧಾರಣಾಕಾರ್ಯಗಳು ಶೀಘ್ರವಾಗಿ ಜರಗದೆ ಇರಲಾರವು. ವೀರಶೈವ ಯುವಜನ ಸಂಘದ ಕಾರ್ಯಗಳು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುತ್ತಾ ಹೋಗಲೆಂದು ನಾನು ಬಯಸುತ್ತೇನೆ.

ತಮ್ಮವ

ಪಿ. ಜಿ. ಹಳಕಟ್ಟಿ

೧೦

೯-೧೦-೪೩

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ.ಶ. ಗಳು. ತಮ್ಮ ನಾಲ್ಕನೆಯ ತಾರೀಖಿನ ಪತ್ರ ಮುಟ್ಟಿತು. ಶ್ರೀ ಸಿದ್ಧರಾಮೇಶ್ವರ ದೇವರ ವಚನವನ್ನು ಬರೆಯಲಿಕ್ಕೆ ಈ ದಿನ ಒಬ್ಬ ಲೇಖಕ ನನ್ನು ಗೊತ್ತುಪಡಿಸಿದೆ. ಆದಷ್ಟು ಶೀಘ್ರವಾಗಿ ಅದು ಮುಗಿಸಲ್ಪಡುವುದು.

ಶಿವಾನುಭವ ಸಂಘಗಳು ಶೀಘ್ರವಾಗಿ ಆಗಲಾರವು. ಮೊದಲು ಒಂದು ಗ್ರಾಮದಲ್ಲಿ ಶಿವಾನುಭವ ಶಾಸ್ತ್ರಕ್ಕೆ ಅಲ್ಲಿ ರುಚಿಯುಳ್ಳವರು ಮೊದಲು ಉಂಟಾಗ ಬೇಕು. ಇದು ಈ ಗ್ರಂಥಗಳನ್ನು ಪರಿಶೀಲಿಸಿದಾಗಲೇ ಶಕ್ಯವು. ಇದಕ್ಕೆ ಕೆಲಕಾಲ ಹತ್ತುತ್ತದೆ. ಆದರೂ ಮೈಸೂರು ಪ್ರಾಂತದಲ್ಲಿ ಈ ಚಳುವಳ ಮುಂದುವರಿಯು ತ್ತಿರುವದು ಸಮಾಧಾನಕರವಾದುದು.

ಇತಿ ತಮ್ಮ

ಫ. ಗು. ಹಳಕಟ್ಟಿ

೧೧

೩-೧೧-೧೯೪೩

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ಗಳು. ತಮ್ಮ ಕಾರ್ಡುಗಳು ಮುಟ್ಟಿವೆ. ನಾನು ಈ ವಾರ [illegible] ಮತ್ತು [illegible] ಹೋಗಿ ನಿನ್ನಿನ ದಿವಸ ತಿರುಗಿ ವಿಜಾಪುರಕ್ಕೆ

ಬಂದೆನು. ಲೇಖಕನನ್ನು ಬರಮಾಡಿಕೊಂಡು ಕೇಳಲಾಗಿ ಗ್ರಂಥ ಮುಗಿಸಲಿಕ್ಕೆ ಇನ್ನೂ ಒಂಪು ವಾರ ಬೇಕಾಗುತ್ತದೆಂದು ತಿಳಿಸಿದನು. ಹಳೇ ತರದ ಅಕ್ಷರಗಳಿರುವುದರಿಂದ ತೀವ್ರ ಬರೆಯಲು ಅವನಿಗೆ ಆಗುವುದಿಲ್ಲ. ಅದು ತಯಾರ ಆದ ಕೂಡಲೇ ತಮಗೆ ಕಳಿಸುವೆನು.

ಇತಿ ತಮ್ಮ
ಫ. ಗು. ಹಳಕಟ್ಟಿ

೧೨

೧೧-೧೧-೧೯೪೩

ಮ. ರಾ. ರಾ. ಮಲ್ಲಪ್ಪನವರಿಗೆ

ಅನೇಕ ಶ.ಶ. ಗಳು. ತಮ್ಮ ೮-೧೧-೪೩ನೇ ತಾರೀಖಿನ ಕಾರ್ಡು ಮುಟ್ಟಿತು. ಲೇಖಕನು ಬರೆಯುವುದನ್ನು ಮುಗಿಸಿ ನನ್ನ ಕಡೆಗೆ ೨-೩ ದಿವಸಗಳ ಹಿಂದೆ ಗ್ರಂಥ ಕೊಟ್ಟಿದ್ದಾನೆ. ೨೪೧ ಪುಟಗಳಾಗಿವೆ. ಅದರ ಪ್ರತಿಯೊಂದು ಪುಟದಲ್ಲಿ ೮-೧೦ ಓಳಿಗಳಿವೆ. ಬರೆದದ್ದನ್ನು ಅಲ್ಲಲ್ಲಿ ಓದಿನೋಡಲು ಬಹು ಅಶುದ್ಧವಿದೆ. ಇದು ಲೇಖಕನ ತಪ್ಪು ಅಲ್ಲ. ಪುರಾತನ ಗ್ರಂಥಗಳನ್ನು ಪ್ರಕಟಿಸುವಲ್ಲಿ ಮೂಲಗ್ರಂಥ ಅಶುದ್ಧವಿದ್ದಲ್ಲಿ, ಎರಡು ಅಥವಾ ಮೂರು ಕೈ ಬರಹದ ಗ್ರಂಥಗಳನ್ನು ದೊರಕಿಸಿ ಅವುಗಳ ಸಹಾಯದಿಂದ ಪ್ರಿಂಟಿಗೆ ಪ್ರತಿಯನ್ನು ಸಿದ್ಧಪಡಿಸಬೇಕಾಗುತ್ತದೆ. ನನ್ನ ಹತ್ತಿರ ಒಂದೇ ಪ್ರತಿಯು ಇದೆ. ಬೇರೆ ಪ್ರತಿಗಳನ್ನು ಸೊಲ್ಲಾಪುರ, ಕಲಬುರ್ಗಿ ಮೊದಲಾದ ಕಡೆಗೆ ಹುಡುಕಬೇಕಾಗುತ್ತದೆ. ಇದಕ್ಕೆ ಕಾಲವು ಹತ್ತುತ್ತದೆ. ಈ ವಿಷಯವಾಗಿ ತಾವು ವಿಚಾರ ಮಾಡಿ ತಿಳಿಸಬೇಕೆಂದು ವಿನಂತಿ ಇದೆ.

ಇತಿ ತಮ್ಮ
ಫ. ಗು. ಹಳಕಟ್ಟಿ

೧೩

೩೦-೧೧-೧೯೪೩

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ,

ಅನೇಕ ಶ. ಶ. ಗಳು. ತಾವು ಸಿದ್ಧರಾಮೇಶ್ವರನವರ ವಚನ ಅಚ್ಚು ಹಾಕಬಾರದೆಂದು ಗೊತ್ತುಪಡಿಸಿದ್ದು ಯುಕ್ತವಾಯಿತು. ಕನಿಷ್ಠ ಎರಡು ಪ್ರತಿಗಳು ಇರದ ಹೊರ್ತು ಪುರಾತನ ಗ್ರಂಥಗಳನ್ನು ತಪ್ಪುಗಳಿಲ್ಲದೆ ಮುದ್ರಿಸುವುದು ಕಷ್ಟವು. ನಾನು ಅಚ್ಚು ಹಾಕಿದ ಗ್ರಂಥಗಳಲ್ಲಿ ಸಂದಿಗ್ಧ ಶಬ್ದಗಳು ಮತ್ತು ವಾಕ್ಯಗಳು ಅನೇಕ ಇರುವುದನ್ನು ಕಂಡಿರಬಹುದು. ಮೊದಲು ಯಾರೂ ಅವುಗಳನ್ನು ಲಕ್ಷಿಸುತ್ತಿದ್ದಿಲ್ಲ. ಈಚೆಗೆ ಜನಗಳು ವಚನಗಳನ್ನು ವಿಚಾರ ಪೂರ್ವಕವಾಗಿ ಓದುತಲಿದ್ದಾರೆ. ಆದ್ದರಿಂದ ಈ ಗ್ರಂಥ ಅಚ್ಚುಹಾಕುವುದನ್ನು ಕೆಲದಿನ ತಡೆಯಬೇಕು. ನಮ್ಮ ಪ್ರಾಂತದಲ್ಲಿ ಸಿದ್ಧರಾಮೇಶ್ವರರ ದೇವಸ್ಥಾನವು ಸೊಲ್ಲಾಪುರದಲ್ಲಿ ಒಂದೇ ಇದೆ. ಬೇರೆ ಕಡೆಗೆ ಇಲ್ಲ. ಸಿದ್ಧೇಶ್ವರ ದೇವಸ್ಥಾನಗಳೆಂಬುವಿದ್ದು ಅವು ರೇವಣಸಿದ್ಧೇಶ್ವರರವು ಇಲ್ಲವೇ ಕುರುಬರವು ಇವೆ.

ಸಾರಂಗಸ್ವಾಮಿಗಳ ವೃತ್ತಾಂತಗಳನ್ನು ಮೂರು ನಾಲ್ಕು ಮಠಗಳಿಂದ ಸಂಪಾದಿಸಿ ಅವುಗಳಲ್ಲಿಯ ಐತಿಹಾಸಿಕ ವಿಷಯಗಳನ್ನು ಆರಿಸಿ ನಾನು ಲೇಖನರೂಪದಿಂದ ಪ್ರಸಿದ್ಧಿಸಿದ್ದೇನೆ. ಅವರ ಸ್ವತಂತ್ರ ಪುರಾಣವಿಲ್ಲ. ನಾನು ದೊರಕಿಸಿದ ಕೈಬರಹದ ಕಾಗದಗಳನ್ನು ಅವರವರಿಗೆ ತಿರುಗಿಸಿ ಕಳಿಸಿದ್ದೇನೆ. ಅವುಗಳನ್ನು ನಾನು ದೊರಕಿಸಿದ್ದು ಗುಳೇದಗುಡ್ಡ ಮತ್ತು ಕೂಡಲಸಂಗಮ ಇಲ್ಲಿಯ ಸಾರಂಗ ಮಠಗಳ ಸ್ವಾಮಿಗಳಿಂದ.

ತಮ್ಮಲ್ಲಿ ನಡೆದ ವಿಶೇಷ ಚಟುವಟಿಕೆಗಳ ವೃತ್ತಾಂತಗಳನ್ನು ತಿಳಿಸುತ್ತಿರಬೇಕು.

ಇತಿ ತಮ್ಮ
ಫ. ಗು. ಹಳಕಟ್ಟಿ

೧೪

೮–೧೨–೧೯೪೩

ಅನೇಕ ಶ.ಶ. ಗಳು. ತಮ್ಮ ೩ನೇ ತಾರೀಖಿನ ಕಾರ್ಡು ಮುಟ್ಟಿತು. ಸಾರಂಗದೇವನ ವೃತ್ತಾಂತಗಳು ಕೋರಿಕಾಗದದ ಮೇಲೆ ಅಸ್ತವ್ಯಸ್ತವಾಗಿ ಬರೆದುವುಗಳಿದ್ದುವು. ಗುಳೇದಗುಡ್ಡ ಮತ್ತು ಕಪ್ಪಡೀ ಸಂಗಮಗಳಲ್ಲಿ ಸಾರಂಗದೇವರ ಮಠಗಳಿವೆ. ಅವುಗಳ ಅಧಿಕಾರಿಗಳಿಗೆ ನೀವು ಪತ್ರ ಬರೆಯಬೇಕು. ಅವರು ಈಗ ಯಾರು ಇದ್ದಾರೆ ಅವರ ಹೆಸರುಗಳು ನನಗೆ ಗೊತ್ತು ಇಲ್ಲ. ಅವರಲ್ಲೊಬ್ಬರು ಕುಂಭಕೋಣ ಮಠದ ಅಧಿಕಾರಿಗಳಾಗಲು ಬಹಳ ಪ್ರಯತ್ನ ಮಾಡುತ್ತಿದ್ದರು. ಅದು ಅವರಿಗೆ ದೊರೆಯದೆ ಕೋರ್ಟುಗಳಲ್ಲಿ ಕೆಲಸ ನಡೆದು ಶ್ರೀ ಜಗದ್ಗುರು ಚಿತ್ರಕಲ್‌ದುರ್ಗ ಇವರಿಗೆ ಸ್ವಾಧೀನವಾಗಿದೆ. ಆ ಕಾಲದಲ್ಲಿ ಕಪ್ಪಡಿ ಸಂಗಮದ ಮಠದ ಸ್ವಾಮಿಗಳವರು ನನಗೆ ತೋರಿಸಿದ ಕಾಗದ ಪತ್ರಗಳ ಸಾರವನ್ನು ನಾನು ಬೇರೆಯಾಗಿ ತೆಗೆದು ಶಿವಾನುಭವ ಸಂಪುಟ ೬ ಸಂಚಿಕೆ ೨ ಇದರಲ್ಲಿ ೧೯೩೧ರಲ್ಲಿ ಪ್ರಸಿದ್ಧಿಸಿದ್ದೇನೆ. ನಾನು ನೋಡಿದ ವಿಷಯಗಳುಳ್ಳ ಗ್ರಂಥವು ಸರಿಯಾಗಿ ಬರೆದ ಪುರಾಣ ಗ್ರಂಥವಲ್ಲ. ಅದು ಕೇವಲ ಅಸ್ತವ್ಯಸ್ತವಾಗಿ ಕೂಡುಬಿದ್ದಿದ್ದ ಕರಡು ಕಾಗದಗಳು. ಗದ್ಯ-ಪದ್ಯ ಮಿಶ್ರವೆಂಬುದು ನನ್ನ ಸ್ಮರಣೆಯಲ್ಲಿದೆ. ಚಾರಿತ್ರಿಕ ಭಾಗವನ್ನು ಪರಿಶ್ರಮಪೂರ್ವಕವಾಗಿ ಸಂಗ್ರಹಿಸಿ ಬರೆದಿದೆ. ಸಾರಂಗದೇವರು ೧೫ನೇ ಶತಮಾನದವರು. ಮರುಳು ಸಿದ್ಧೇಶ್ವರರು ಸು. ೧೨ನೇ ಶತಮಾನದವರು. ಉಭಯತ್ರರಿಗೆ ಪರಸ್ಪರ ಸಂಬಂಧವಿಲ್ಲ. ನಾನು ಕಂಡ ಸಾರಂಗ ಮಠದವರು ವಿಶೇಷ ವಿದ್ವಾಂಸರಿದ್ದಂತೆ ಕಂಡುಬರುವುದಿಲ್ಲ. ಈಗ ಯಾರು ಇದ್ದಾರೆ ನನಗೆ ತಿಳಿದಿಲ್ಲ. ತಾವು ಅವರಿಗೆ ಪತ್ರ ಬರೆಯಬೇಕು.

ಇತಿ ತಮ್ಮ
ಫ. ಗು. ಹಳಕಟ್ಟಿ

೧೫

೧೧-೧-೪೫

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ಗಳು. ತಮ್ಮ ಪತ್ರ ಕೈಸೇರಿದೆ. ರಬಕವಿಯಲ್ಲಿ ತಮ್ಮನ್ನು ಕಂಡು ಬಹಳ ಆನಂದವಾಯಿತು. ತಾವು ಮಾಡುತ್ತಿರುವ ವಾಙ್ಮಯ ಚಟುವಟಿಕೆಗಳನ್ನು ತಿಳಿದು ಸಂತೋಷವಾಯಿತು. ಆಗಿಂದಾಗ್ಗೆ ಪತ್ರಗಳನ್ನು ಬರೆಯುತ್ತಿರಬೇಕು. ಮರುಳಾರಾಧ್ಯರ ಗ್ರಂಥವು ಪ್ರಕಟವಾದೊಡನೆ ನನಗೆ ತಿಳಿಸಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೧೬

೩೦-೧೧-೪೭

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ

ಅನೇಕ ಶ. ಶ. ಗಳು. ತಮ್ಮ ಪತ್ರ ಮುಟ್ಟಿದೆ. ಸಂತೋಷವಾಯಿತು. ಶಿವಶರಣರ ಚರಿತ್ರೆಗಳನ್ನು ಸಂಶೋಧಿಸುತ್ತ ಕ್ರಮವಾಗಿ ಮುಂದುವರಿಸಬೇಕಾಗಿದೆ. ಈ ಒಂದೆರಡು ತಿಂಗಳು ಕೆಲಸಗಾರರ ತೊಂದರೆಯ ಮೂಲಕ ಇದರಲ್ಲಿ ಲಕ್ಷ್ಯ ಹಾಕಿಲ್ಲ. ಇದಕ್ಕೆ ಶಾಂತತೆಯು ಬೇಕು. ನವೆಂಬರ್-ಡಿಸೆಂಬರ್ ಸಂಯುಕ್ತ ಶಿವಾನುಭವ ಸಂಚಿಕೆಯು ಡಿಸೆಂಬರ್‌ನಲ್ಲಿ ಸಕಾಲದಲ್ಲಿ ಹೊರಡುವುದು. ತಮ್ಮ ಕಡೆಯ ಸಮಾಚಾರವನ್ನು ತಿಳಿಸುತ್ತಿರಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೧೭

೧-೨-೪೮

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ತಮ್ಮ ಪಿ. ಜಿ. ಹಳಕಟ್ಟಿ ಮಾಡುವ ಶ. ಶ. ತಮ್ಮ ಸಭೆಯು ಇದೇ ತಿಂಗಳಿನ ೧೩ನೆಯ ತಾರೀಖಿನ ದಿವಸ ಇದ್ದುದು ತಿಳಿಯಿತು. ನಾನು ಮೊನ್ನಿನ ದಿವಸ ಬಾಗಲಕೋಟೆಗೆ ಹೋಗಿ ತಿರುಗಿ ವಿಜಾಪುರಕ್ಕೆ ಬರುವ ಕಾಲದಲ್ಲಿ ಟ್ರೇನಿನಲ್ಲಿ ಮೇಲಿನಿಂದ ಕೆಳಕ್ಕೆ ಬಿದ್ದು ಪೆಟ್ಟು ಹತ್ತಿ ಎಲುಬಿಗೆ ಧಕ್ಕೆ ತಗುಲಿದೆ. ಈ ಕಾಲನ್ನು ಕಟ್ಟಿ ಇಟ್ಟಿರುವುದರಿಂದ ಒಂದು ಒಂದೂವರೆ ತಿಂಗಳು ಮಲಗಿಕೊಂಡೇ ಇರಬೇಕಾಗಿ ಬಂದಿದೆ. ಇದಕ್ಕೋಸ್ಕರ ನಾನು ತಮ್ಮ ಸಭೆಗೆ ಬರಲು ಆಗದ್ದಕ್ಕೋಸ್ಕರ ವಿಷಾದಿಸುತ್ತೇನೆ. ಕ್ಷಮಿಸಬೇಕು.

ಇತಿ ತಮ್ಮ ವಿಧೇಯ

ಫ. ಗು. ಹಳಕಟ್ಟಿ

೧೮

೨೧-೧-೪೯

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ತಮ್ಮ ೧೭-೧-೪೯ನೇ ತಾರೀಖಿನ ಪತ್ರವು ಮುಟ್ಟಿತು. ಅದಕ್ಕೋಸ್ಕರ ಆಭಾರಿಯಾಗಿದ್ದೇನೆ. ಆದರೆ ತಮ್ಮ ಸಭೆಯು ಎಂದು ಆಗುತ್ತದೆ ಮತ್ತು ಆವ ಸಂದರ್ಭದಲ್ಲಿ ಎಂಬುದನ್ನು ತಿಳಿಸಬೇಕೆಂದು ವಿನಂತಿ ಇದೆ. ತಾವು ಬರೆದ ಗ್ರಂಥಗಳು ಹರಿಹರನ ರಗಳೆಗಳು ಭಾಗ-೧ ಇದು ಉಪಲಬ್ಧವಿಲ್ಲ. ಮೋಳಿಗೆ ಮಾರಯ್ಯನ ವಚನಗಳು ಧಾರವಾಡದಲ್ಲಿ ಅಚ್ಚಾಗುತ್ತಿರುವುದರಿಂದ ಅವನ್ನು ನಾವು ಪ್ರಸಿದ್ಧಿಸಿಲ್ಲ. ವಚನಶಾಸ್ತ್ರಸಾರ ಭಾಗ-೩ ಉತ್ತರಾರ್ಧ ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧವಾಗುತ್ತ ಇದ್ದು ಅದು ಪೂರ್ಣವಾಗಲು ಕೆಲವು ಕಾಲ ಬೇಕು. ಅದರ ಪೂರ್ವಾರ್ಧ ಉಪಲಬ್ಧವಿದೆ. ತಮ್ಮ ಕ್ಷೇಮವನ್ನು ತಿಳಿಸುತ್ತಿರಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

ತಮ್ಮ ಪತ್ರ, ೨೮-೧-೪೯ನೇ ತಾರೀಖಿನ ಪತ್ರ ಈ ನಿನ್ನೆ ಮುಟ್ಟಿತು. ನಾನು ಪ್ರೌಢಶಿಕ್ಷಣ ಕಮಿಟಿಯ ಒಂದು ಕೆಲಸ ತೀರಿಸಿಕೊಂಡು ಬರುವ ಕಾಲದಲ್ಲಿ ಕೆಳಕ್ಕೆ ಬಿದ್ದು ಹವಡ ಹತ್ತಿರ ಎಲುಬು ಮುರಿದದ್ದರಿಂದ ನಡೆದಾಡುವುದು ಅಶಕ್ಯವಾಗಿದೆ. ಗುಣವಾಗಲು ಕೆಲವುಕಾಲ ಬೇಕು. ಆದ್ದರಿಂದ ಬರಲು ಆಗದಕ್ಕೋಸ್ಕರ ವಿಷಾದಿಸುತ್ತೇನೆ. ಕ್ಷಮಿಸಬೇಕು. ತಮ್ಮ ಸಭಾಕಾರ್ಯಗಳು ವಿಜೃಂಭಣೆಯಿಂದ ನೆರವೇರಲೆಂದು ಇಚ್ಛಿಸುತ್ತೇನೆ. ಮಹಾಸ್ವಾಮಿಗಳವರಿಗೆ ನನ್ನ ದೀರ್ಘದಂಡ ನಮಸ್ಕಾರಗಳು.

೧-೨-೪೯

೧೯

೧೪-೪-೧೯೪೯

ಮ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ಗಳು. ತಾವು ಅಸ್ಪೃಶ್ಯೋದ್ಧಾರಕಾರ್ಯ ಎಂಬ ಚಿಕ್ಕ ಪುಸ್ತಕವನ್ನು ವಿಮರ್ಶೆಗೋಸ್ಕರ ಕಳಿಸಿದ್ದು ಅದರ ವಿಮರ್ಶೆಯನ್ನು ಪತ್ರಿಕೆಯಲ್ಲಿ ಮುಂದಿನ ತಿಂಗಳಲ್ಲಿ ಮಾಡುವೆನು. ನಾನು ಕ್ರಮೇಣ ಗುಣ ಹೊಂದುತ್ತಲಿದ್ದೇನೆ. ಇನ್ನೂ ನಡೆಯಲಿಕ್ಕೆ ಬರುವುದಿಲ್ಲ. ತಮ್ಮ ಕಡೆಗೆ ವಿಶೇಷ ಸಂಗತಿಗಳನ್ನು ತಿಳಿಸುತ್ತಿರಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೨೪

೧೯-೬-೪೯

ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ ತಮ್ಮ ಫ. ಗು. ಹಳಕಟ್ಟಿ ಮಾಡುವ ಶ. ಶ. ಗಳು. "ಲಿಂಗವಂತ ಸಮಾಜವು ಕೈಕೊಳ್ಳತಕ್ಕ ವಿಧಾಯಕ ಕಾರ್ಯಕ್ರಮ" ಈ ವಿಷಯದ ಮೇಲೆ ತಾವು ಬರೆದ ಲೇಖನ ಮುಟ್ಟಿದೆ. ಅದು ಅನ್ನದಾನೀಶ್ವರ ವಿರಕ್ತ ಮಠ ಇವರು ಬರೆದ ಲೇಖನವನ್ನು ಉದ್ದೇಶಿಸಿ ಬರೆದದ್ದಾಗಿದೆ. ಅವರ ಮತ್ತು ಅವರ ಮತಗಳ ಪರಿಚಯವು ನನಗೆ ಇದೆ. ಅವರು ಉದಾರ ಮತವಾದಿಗಳೂ ಪಂಗಡ ಭೇದ ಅಳಿಯಬೇಕೆನ್ನುವವರೂ ಇದ್ದಾರೆ. ಅವರ ವಿಚಾರಗಳನ್ನು ನಾನು ಅರಿತವನಾಗಿದ್ದರಿಂದ ನೀವು ಕಳಸಿದ ಲೇಖನವನ್ನು ಪ್ರಸಿದ್ಧಿಸುವುದರಿಂದ ಅವರ ಬಗ್ಗೆ ತಪ್ಪು ತಿಳವಳಕೆಯಾಗುವ ಸಂಭವವಿದೆ. ಆದ್ದರಿಂದ ತಮ್ಮ ಲೇಖನವನ್ನು ಪ್ರಸಿದ್ಧಿಸಿಲ್ಲ.

ಉತ್ತರ ಕರ್ನಾಟಕ ಮತ್ತು ಮೈಸೂರು ಪ್ರಾಂತ ಇವುಗಳ ಆಂತಸ್ಥ ಪರಿಸ್ಥಿತಿಯು ಬಹಳ ಭಿನ್ನಭಿನ್ನವಾಗಿವೆ. ಉತ್ತರ ಕರ್ನಾಟಕಸ್ಥರಿಗೆ ಸಾದರು, ನೊಣಬರು, ಮಲವರು ಈ ಸಮಾಜಗಳ ಪರಿಚಯವಿಲ್ಲ. ಆದ್ದರಿಂದ ಅವರ ಬರಹಗಳಲ್ಲಿ ಈ ಬಗ್ಗೆ ದೋಷಗಳಾಗುವುದುಂಟು. ಇವುಗಳನ್ನು ನಾವು ಅಲಕ್ಷಿಸುವುದು ಲೇಸು.

ಈ ಕಾಲದಲ್ಲಿ ಶಿವಶರಣರ ವಿಚಾರಗಳನ್ನು ಪ್ರಚಾರಗೊಳಿಸುವುದನ್ನೇ ಮುಖ್ಯ ಕಾರ್ಯವಾಗಿ ಇಟ್ಟುಕೊಂಡು ಕಾರ್ಯ ಮಾಡುತ್ತಾ ಹೋಗುವುದು ಅವಶ್ಯವು. ಇದರಿಂದ ನಮ್ಮಲ್ಲಿಯ ಪಂಗಡಭೇದಗಳು ನಷ್ಟವಾಗುವ ಸಂಭವವಿದೆ.

ನಾನು ಈಗ ಪಾಲ್ಕುರಿಕೆ ಸೋಮಾರಾಧ್ಯನ ಚರಿತ್ರೆಯನ್ನು ಸಂಶೋಧಿಸುತ್ತಲಿದ್ದೇನೆ. ಅವರು ಇದ್ದ ಗ್ರಾಮವು ಪಾಲ್ಕುರಿಕೆ. ಈ ಗ್ರಾಮವು ಗೋದಾವರಿ ಜಿಲ್ಲೆ ಅಥವಾ ವೇಗಲಾಯಿಯಲ್ಲಿ ಇದ್ದಂತೆ ತೋರುವುದಿಲ್ಲ. ಇದು ತುಮಕೂರು ಜಿಲ್ಲೆ ಇಲ್ಲವೆ ಅನಂತಪುರ ಜಿಲ್ಲೆಯಲ್ಲಿದೆ ಎಂದು ತಿಳಿಯುತ್ತದೆ. ಅದಕ್ಕೆ 'ಹಾಲುಕುರಿಕೆ' ಎಂಬ ಹೆಸರು ಇದ್ದದು ಗೊತ್ತಾಗುತ್ತದೆ. ಈ ಗ್ರಾಮವು ಈ ಭಾಗಗಳಲ್ಲಿ ಎಲ್ಲಿ ಇದೆ ಅಂದರೆ ಯಾವ ತಾಲ್ಲೂಕು ಮತ್ತು. ಜಿಲ್ಲೆಯಲ್ಲಿ ಇದೆ, ತಾಲ್ಲೂಕು ಸ್ಥಳದಿಂದ ಎಷ್ಟು ದೂರ ಯಾವ ದಿಕ್ಕಿಗೆ ಇದೆ ತಿಳಿಸಬೇಕು. ಅದರಂತೆಯೇ ಅಲ್ಲಿ ಸೋಮೇಶ್ವರ ದೇವಾಲಯವಿದ್ದದನ್ನು ತಿಳಿಸಬೇಕು. ನಕಾಶದಲ್ಲಿ ಈ ಗ್ರಾಮವು ನನಗೆ ಸಿಕ್ಕುವುದಿಲ್ಲ. ಆದ್ದರಿಂದ ತಮಗೆ ಈ ವಿಷಯ ತಿಳಿಸಲು ಬರೆದಿದ್ದೇನೆ. ಈ ಮಾಹಿತಿಯನ್ನು ಬಹು ತೀವ್ರವಾಗಿ ಕಳುಹಿಸಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ




೨೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ತಮ್ಮ ಫಕೀರಪ್ಪ ಹಳಕಟ್ಟಿ ಮಾಡುವ ಶ. ಶ. ಗಳು. ತಮ್ಮ ಪತ್ರವು ಮುಟ್ಟಿದೆ. ತಾವು ಪುಸ್ತಕಗಳಿಗೆ ಆರ್ಡರ ಕೊಟ್ಟಿದ್ದಕ್ಕೆ ಬಹಳ ಆಭಾರಿಯಾಗಿದ್ದೇನೆ. ಆದರೆ ಈಚೆಗೆ ಗ್ರಂಥಗಳು ಮುಗಿದು ಹೋದದ್ದರಿಂದ ಎಲ್ಲವೂ ಸಿಕ್ಕುವುದಿಲ್ಲ. ಆದರೆ ಕ್ರಮೇಣ ಅಚ್ಚು ಹಾಕಿಸುವೆನು. ಆದರೆ ಅಚ್ಚಿನ ಖರ್ಚು ಮೊದಲಿಗಿಂತ ಮೂರು ಪಟ್ಟು ಹೆಚ್ಚಿದೆ. ಆದ್ದರಿಂದ ತೊಂದರೆಯಾಗಹತ್ತಿದೆ.

ಮೈಸೂರಿನ ವಾತಾವರಣವು ಹೊರಗಿನವರಿಗೆ ತಿಳಿಯದ ಹಾಗಾಗಿದೆ. ಅಲ್ಲಿಯ ನಿಜಸ್ಥಿತಿಯನ್ನು ತಿಳಿಸಬೇಕು. ಮಂತ್ರಿಮಂಡಲ ಜನತೆಯ ಪ್ರೀತಿ ವಿಶ್ವಾಸಗಳನ್ನು ಪಡೆದಿದೆಯೋ ಹೇಗೆ, ಆಂತರಿಕ ಜಗಡಗಳು ಹೆಚ್ಚುತ್ತಿವೆಯೋ ಹ್ಯಾಗೆ, ಆಡಳಿತೆಯಲ್ಲಿ ವೀರಶೈವರಿಗೆ ಸ್ಥಾನವಿದೆಯೋ ಹೇಗೆ ಮುಂತಾದವನ್ನು ತಿಳಿಸುವುದು. ದಾವಣಗೆರೆ ತರುಣ ಪರಿಷತ್ತಿನ ನಿಜಸ್ಥಿತಿ ಏನು ಇದನ್ನು ತಿಳಿಸಬೇಕು. ಇತಿ ತಮ್ಮ

ಫ. ಗು. ಹಳಕಟ್ಟಿ

ತ. ವಿ. ನನ್ನ ಕಾಲಿನ ಎಲುಬು ಕೂಡಿದೆ. ಆದರೆ ಸ್ನಾಯುಗಳು ಸೂಕ್ಷ್ಮ ವಾಗಿರುವುದರಿಂದ ನಡೆಯಲಿಕ್ಕೆ ಇನ್ನೂ ಬರುವುದಿಲ್ಲ. ಒಂದು ತಿಂಗಳು ಬೇಕಾದೀತು.

ಇತಿ ಫ. ಗು.

೨೨

೧೨-೧೨-೪೯

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ ಶ. ಶ. ಗಳು. ತಮ್ಮ ಪತ್ರ ಮುಟ್ಟಿದೆ. ಅದರ ಪ್ರಕಾರ ಗ್ರಂಥಗಳು ಕಳಿಸಿಕೊಡಲ್ಪಡುವವು.

ಪಾಲ್ಕುರಿಕೆ ಸೋಮಾರಾಧ್ಯರ ವಿಷಯ ತಾವು ಶಿವಾನುಭವದಲ್ಲಿ ಕಂಡಿರುವಿರಿ. ಪಾಲ್ಕುರಿಕೆ ಎಂಬ ಹೆಸರಿನಿಂದ ತುಮಕೂರು ಜಿಲ್ಲೆಯ ಪೂರ್ವ ಮೇರೆಯಲ್ಲಿ ಬೇರೊಂದು ಗ್ರಾಮವಿದೆಯೋ ಹೇಗೆಂಬುದನ್ನು ಶೋಧಿಸುವುದು.

ಕಲ್ಲೆ ಗ್ರಾಮದಲ್ಲಿ ಸೋಮಾರಾಧ್ಯರ ಸಮಾಧಿ ಇದೆ, ಅದನ್ನು ತಾವು ನೋಡಿದ್ದೇವೆ ಎಂದು ನನಗೆ ಒಬ್ಬರು ಸಮಕ್ಷಮ ಹೇಳಿದ್ದರಿಂದ ಹಾಗೆ ಪತ್ರಿಕೆಯಲ್ಲಿ ಬರೆದಿದೆ.

ಈ ಎರಡೂ ವಿಷಯಗಳ ಬಗ್ಗೆ ಸಂಶೋಧಿಸಿ ಬರೆಯಬೇಕು.

ಕರ್ನಾಟಕ ಏಕೀಕರಣಕ್ಕೆ ಮೈಸೂರಲ್ಲಿ ವಿರೋಧಿಗಳಿದ್ದಾರೆಂಬುದು ಸ್ಪಷ್ಟವಿದೆ. ಆದರೆ ಈಗಿನ ಹೊಸವಾತಾವರಣದಲ್ಲಿ ಈ ವಿರೋಧವು ಇನ್ನೂ ಉಳಿದಿದೆಯೋ ಹೇಗೆಂಬುದನ್ನು ತಿಳಿಸಬೇಕು. ಇತಿ ತಮ್ಮ

ಫ. ಗು. ಹಳಕಟ್ಟಿ

೨೩

೧೦-೧-೫೦

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ತಮ್ಮ ಪತ್ರವು ಮುಟ್ಟಿತು. ಅನೇಕ ವಿಷಯಗಳ ಬಗ್ಗೆ ಸವಿಸ್ತಾರವಾಗಿ ಬರೆದಿದ್ದಕ್ಕೋಸ್ಕರ ಆಭಾರಿಯಾಗಿದ್ದೇನೆ. ನಮ್ಮ ಸಮಾಜದಲ್ಲಿ ಐಕ್ಯಮತ್ಯವಿರದ್ದು ಅದಕ್ಕೆ ಅತ್ಯಂತ ಹಾನಿಕರವು. ಉಚ್ಚ ವಿಚಾರಗಳಿಲ್ಲದ್ದರ ಪರಿಣಾಮವೇ ಇದಾಗಿದೆ. ವೀರಶೈವರಿದ್ದ ಎಲ್ಲಾ ಭಾಗಗಳಲ್ಲಿಯೂ ಇದೇ ರೀತಿಯಾಗಿದೆ. ಇವರಿಂದ ಎಲ್ಲ ಸಂಸ್ಥೆಗಳೂ ಅವರ ಕೈಬಿಡಹತ್ತಿವೆ. ಆದರೆ ನಿಮ್ಮ ಪ್ರಾಂತದಲ್ಲಿ ಜಾತೀಯ ತೊಂದರೆಗಳು ಅತ್ಯಂತ ಉಗ್ರವಿದ್ದ ಹಾಗೆ ಕಂಡುಬರುತ್ತದೆ. ಆದರೂ ಕೆಲವು ದಿವಸಗಳಲ್ಲಿ ಎಲ್ಲವೂ ಸರಿಪಡಬಹುದು. ಪರಿಸ್ಥಿಯು ಎಲ್ಲರನ್ನೂ ಮಾರ್ಗಕ್ಕೆ ಹಚ್ಚುವುದಾಗಿ ತಿಳಿಸಿದ್ದೇನೆ.

ತಾವು ಬರೆದ ಗ್ರಂಥಗಳು ಉಪಲಬ್ಧವಿಲ್ಲ. ಅವು ತೀರಿರುತ್ತವೆ. ಗ್ರಂಥ ಪ್ರಕಟಣೆಗೆ ಬಹಳ ಖರ್ಚು ಹಿಡಿಯುವುದರಿಂದ ಅವುಗಳ ಮುದ್ರಣವನ್ನು ನಿಲ್ಲಿಸಿದ್ದೇನೆ. ೧೫೦-೨೦೦ ಪುಟಗಳ ಗ್ರಂಥಗಳಿಗೆ ನಮ್ಮ ಪ್ರಾಂತದಲ್ಲಿ ೮೦೦-೧೦೦೦ ರೂಪಾಯಿಗಳು ಹತ್ತುತ್ತವೆ. ಇಷ್ಟು ಖರ್ಚು ಮಾಡುವುದು ನನಗೆ ಶಕ್ಯವಿಲ್ಲ.

೧೫-೨೦ ದಿವಸಗಳ ಹಿಂದೆ ಮನೆಯಲ್ಲಿ ಅಕಸ್ಮಾತ್ತಾಗಿ ತಪ್ಪು ಹೆಜ್ಜೆ ಬಿದ್ದು ಯಾವ ಸ್ಥಳದಲ್ಲಿ ನನಗೆ ನೋವಾಗಿತ್ತೋ ಅದಕ್ಕೆ ಅಪಾಯವು ಉಂಟಾಗಿದೆ. ಅದು ಬಳವದ್ದರಿಂದ ನಡೆಯಲಿಕ್ಕೆ ಪುನಃ ಬಾರದಂತಾಗಿದೆ. ಈ ಸ್ಥಿತಿಯಲ್ಲಿ ಪ್ರವಾಸ ಮಾಡುವುದು ನನಗೆ ಅಶಕ್ಯವಾಗಿದೆ. ಆದ್ದರಿಂದ ತಮ್ಮಲ್ಲಿಗೆ ಈ ೧೫-೨೦ ದಿವಸಗಳಲ್ಲಿ ಬರುವುದು ಶಕ್ಯವಿಲ್ಲದ್ದಕ್ಕೋಸ್ಕರ ವಿಷಾದಿಸುತ್ತೇನೆ. ನನಗೆ ಈ ೮-೧೦ ತಿಂಗಳು ಒಂದೇ ಸಮನೆ ಹಾಸಿಕೆ ಹಿಡಿಯುವ ಸ್ಥಿತಿಯು ಉಂಟಾಗಿದೆ. ಆದ್ದರಿಂದ ತಮ್ಮ ಪರಿಷತ್ತಿನ ಚಾಲಕರಿಗೆ ನನಗೆ ಆಮಂತ್ರಣ ಕೊಡದಿರಲು ಸೂಚಿಸಬೇಕೆಂದು ನಾನು ತಮಗೆ ವಿನಂತಿ ಮಾಡಿಕೊಳ್ಳುತ್ತೇನೆ. ನಿರ್ವಾಹವಿಲ್ಲದೆ ನಾನು ಈ ರೀತಿ ಬರೆಯಬೇಕಾಗಿದೆ.

ವಚನ ಸಾಹಿತ್ಯ ಸಮ್ಮೇಳನದ ವಿಷಯ ನನಗೆ ಸವಿಸ್ತಾರ ತಿಳಿದಿಲ್ಲ. ಅದರ ಚಟುವಟಿಕೆಗಳು ಧಾರವಾಡ ಮತ್ತು ಹುಬ್ಬಳ್ಳಿಯಲ್ಲಿ ಇವೆ. ಪರಿಸ್ಥಿತಿಯನ್ನು ನಿರೀಕ್ಷಿಸುವುದು ಅವಶ್ಯವಿದೆ.

ಇತಿ ತಮ್ಮ

ಫ. ಗು. ಹಳಕಟ್ಟಿ

೨೪

೨-೬-೫೦

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶರಣಾರ್ಥಿಗಳು. ಬೆಂಗಳೂರಿನಲ್ಲಿ ತಮ್ಮನ್ನು ಅಕಸ್ಮಾತಾಗಿ ಕಂಡಿದ್ದಕ್ಕೋಸ್ಕರ ಆನಂದವಾಯಿತು. ಆದರೆ ತಮ್ಮನ್ನು ಬೇರೆಯಾಗಿ ಕಂಡಿದ್ದರೆ ಅನೇಕ

ವಿಷಯಗಳನ್ನು ವಿಚಾರ ಮಾಡಲು ಅನುಕೂಲವಾಗುತ್ತಿತ್ತು. ಆದರೆ ತಾವು ಶ್ರೀ ಮಹಾದೇವ ಸ್ವಾಮಿಗಳ ಕಡೆಗೆ ಬಂದಿದ್ದಿರಿ. ಆಗ ಅನೇಕ ವಿಷಯಗಳು ಚರ್ಚೆಗೊಳಾದವು. ಆದರೆ ಅವು ಎಷ್ಟರಮಟ್ಟಿಗೆ ಕಾರ್ಯದಲ್ಲಿ ಬರುವವೆಂಬುದು ನನಗೆ ತಿಳಿಯದು. ಅವುಗಳಗೋಸ್ಕರ ಎಲ್ಲರ ಮನಃಪೂರ್ವಕ ಸಹಕಾರಗಳು ಬೇಕು. ಇದು ಸಾಧ್ಯವೋ ಹೇಗೆಂಬುದು ತಮಗೆ ಹೆಚ್ಚಿಗೆ ಗೊತ್ತು. ಆದರೆ ಈ ವಿಷಯಗಳನ್ನು ಕುರಿತು ತಾವು ಅವಶ್ಯಕ ಜನರ ಕೂಡ ವಿಚಾರಮಾಡಿ ಸಾಧ್ಯವಾದಷ್ಟು ಕಾರ್ಯಮಾಡಬೇಕೆಂದು ನನ್ನ ಸೂಚನೆ ಇದೆ. ಅನೇಕ ವಿಷಯಗಳನ್ನು ಹುಬ್ಬಳ್ಳಿ ಧಾರವಾಡದ ಪ್ರಮುಖರ ಮುಂದೆ ವಿಚಾರಕ್ಕೋಸ್ಕರ ಇಟ್ಟಿರುವೆನು. ಶ್ರೀ ಜವಳಿಯವರ ಕಾರ್ಯಗಳಿಗೆ ಧಾರವಾಡ ಹುಬ್ಬಳ್ಳಿಯಲ್ಲಿ ಸಹಾನುಭೂತಿ ಇಲ್ಲದ್ದು ಕಂಡು ಬಂದಿತು. ತಾವು ತಮ್ಮ ಪತ್ರದಲ್ಲಿ ಮೈಸೂರಿನ ರಾಜಕಾರಣವನ್ನು ಕುರಿತು ಸಂಪೂರ್ಣವಾಗಿ ತಿಳಿಸಿರುವಿರಿ. ಅವು ಸತ್ಯವಾದವುಗಳು. ಶ್ರೀ ಮರುಳುಸಿದ್ಧನ ವಿಷಯ ಚತುರಾಚಾರ್ಯಪುರಾಣ ಮತ್ತು ಇತರ ಗ್ರಂಥಗಳಲ್ಲಿ ಇದ್ದವುಗಳನ್ನು ನಾನು ತಿಳಯಬೇಕಾಗಿದೆ. ನಾನು ಶಿವಶರಣ ಚರಿತ್ರೆಗಳಲ್ಲಿ ಅವುಗಳನ್ನು ಸಮಾವೇಶ ಮಾಡಬೇಕಾಗಿದೆ. ಪಾಲ್ಕುರಿಕೆ ಮತ್ತು ಕಲ್ಲೆ ಈ ವಿಷಯಗಳನ್ನು ಕುರಿತು ಹೆಚ್ಚಿಗೆ ಸಂಶೋಧಿಸಿರಿ. ಪತ್ರ ಬರೆಯುತ್ತಿರಬೇಕು. ಇತಿ ತಮ್ಮ

ಫ. ಗು. ಹಳಕಟ್ಟಿ

೨೫

೬–೧೧–೫೦

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ಗಳು. ತಾವು ಸಿರಿಗೆರೆಯಿಂದ ಬರೆದ ಕಾಗದವು ತಲ್ಪಿದೆ. ನಾನು ೨–೩ ದಿವಸಗಳ ಹಿಂದೆ ಬೆಂಗಳೂರಿನಿಂದ ವಿಜಾಪುರಕ್ಕೆ ಬಂದೆನು. ನಾನು ಇಲ್ಲಿಗೆ ಬಂದ ಬಳಿಕ ತಮ್ಮ ಕಾಗದವನ್ನು ನೋಡಿದೆನು. ಆ ಪತ್ರ ಬರೆದದ್ದಕ್ಕೆ ನಾನು ತಮಗೆ ಕೃತಜ್ಞನಾಗಿದ್ದೇನೆ.

ಅಂಬಿಗರ ಚೌಡಯ್ಯನ ವಚನ ಗ್ರಂಥಕ್ಕೆ ೨೦೦ ಪುಟಗಳಾಗಬಹುದು. ಅದಕ್ಕೆ ಅಜಮಾಸು ೧೦೦೦ ರೂಪಾಯಿಗಳು ಪ್ರಿಂಟಿಗೆ ಹಿಡಿಯುವವು. ಇದು ಒಂದು ಸಾವಿರ ಪ್ರತಿಗಳು ಮಾತ್ರ. ಕಾಗದ ಡ|| ಡೆಮಿ ೧೨ ರೀಮುಗಳು ಹತ್ತುವುವು. ಈಗ ಬೆಲೆ ೧ ಪೌಂಡಿಗೆ ೧೪ ಆಣೆಯಿಂದ ೧ ರೂಪಾಯಿ ಇದ್ದು ೩೨ ರಿಂದ ೩೬ ಪೌಂಡಿನ ಬಿಳಿಯ ಕಾಗದ ಉಪಯೋಗಿಸಿದಲ್ಲಿ ಕಾಗದ ಖರ್ಚು ೪೩೦ ರೂಪಾಯಿಗಳಿಂದ ೪೫೦ ರೂಪಾಯಿಗಳವರೆಗೆ ಹಿಡಿಯಬಹುದು. ಆದರೆ ಮೈಸೂರು ಪ್ರಾಂತದಲ್ಲಿ ಕಾಗದದ ಬೆಲೆ ಇದಕ್ಕೂ ಕಡಿಮೆ ಇರಬಹುದು.

'ದಾಸಂಪ್ರಿಯ ರಾಮನಾಥ' ಈ ಮುದ್ರಿಕೆಯುಳ್ಳ ವಚನಗ್ರಂಥವು ಪ್ರಿಂಟಾದದ್ದನ್ನು ನಾನು ನೋಡಿಲ್ಲ. ನಾನು ಅದಕ್ಕೆ ಮುನ್ನುಡಿ ಬರೆದಿಲ್ಲ. 'ರಾಮನಾಥ' ಈ ಮುದ್ರಿಕೆ ಇದ್ದ ವಚನ ಗ್ರಂಥವನ್ನು ನಾನು ಪ್ರಕಟಿಸಿದ್ದೇನೆ.

ಮೆರೆಮಿಂಡದೇವನ ವಚನ ನನ್ನಲ್ಲಿ ಉಪಲಬ್ಧವಿದೆ. ಸಿದ್ಧರಾಮೇಶ್ವರರ ವಚನಗಳು ಮತ್ತು ಆತನವಾದ ವಚನಗಳನ್ನು ಪ್ರಸಿದ್ಧಿಸಲು ಸಹಾಯ ಮಾಡುವುದಾಗಿ ನನಗೆ ಹಲವರು ತಿಳಿಸಿದ್ದರು. ಅದು ಅವರಿಂದ ಆಗದ್ದಕ್ಕೆ ಅದು ಹಾಗೆಯೇ ಉಳಿದಿದೆ.

ತಾವು ಶಿವಾನುಭವಕ್ಕೆ ಮಾಡಿದ ಸೂಚನೆಗಳು ಉಪಯುಕ್ತವಾಗಿವೆ. ಅವುಗಳನ್ನು ಆದಷ್ಟು ತೀವ್ರ ಪ್ರಚಾರದಲ್ಲಿ ತರುವೆನು.

ನಾನು ಬೆಂಗಳೂರಿಗೆ ಬಂದಾಗ್ಗೆ ಎಲ್ಲರೂ ನನಗೋಸ್ಕರ ಆದರವನ್ನು ತೋರಿಸಿದರು. ನಾನು ಬೆಂಗಳೂರು ಬಿಟ್ಟ ಬಳಿಕ ತಮಗೆ ತೋಚಿಬಂದ ಸಂಗತಿಗಳನ್ನು ತಿಳಿಸಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೨೬

೧೪–೧೧–೫೦

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ಗಳು. ತಮ್ಮ ೧೦–೧೧–೫೦ನೇ ತಾರೀಖಿನ ಪತ್ರವು ಮುಟ್ಟಿತು. ಅದಕ್ಕೋಸ್ಕರ ನಾನು ತಮಗೆ ಬಹಳ ಆಭಾರಿಯಾಗಿದ್ದೇನೆ. ಅದರಲ್ಲಿ ತಾವು ೫೦೦ ರೂಪಾಯಿಗಳಲ್ಲಿ ಆಗಬಹುದಾದ ಗ್ರಂಥವನ್ನು ದೇಣಿಗೆಗಾಗಿ ಸೂಚಿಸಬೇಕೆಂದು ನನಗೆ ಸೂಚಿಸಿರುವಿರಿ. ಅಂಬಿಗರ ಚೌಡಯ್ಯನವರ ವಚನ ಗ್ರಂಥವು ದೊಡ್ಡದು ಇದೆ. ಅದಕ್ಕೆ ಹೆಚ್ಚು ಖರ್ಚು ಹಿಡಿಯುತ್ತದೆ. ೫೦೦ ರೂಪಾಯಿಗಳಲ್ಲಿ ಆಗಬಹುದಾದ ಗ್ರಂಥಗಳು ಎರಡು ಇವೆ; ಅವು : ೧. ಮಡಿವಾಳ ಮಾಚಿದೇವನ ವಚನಗಳು, ೨. ಹಡಪದಪ್ಪಣ್ಣನ ವಚನಗಳು. ಇವೆರಡೂ ಉಚ್ಚ ಪ್ರತಿಯ ವಚನ ಗ್ರಂಥಗಳು. ಈ ಉಭಯತ್ರರು ಪ್ರಸಿದ್ಧ ಶಿವಶರಣರು. ಇವರಲ್ಲಿ ಬೇಕಾದ ಒಬ್ಬ ಶಿವಶರಣರ ವಚನಗಳನ್ನು ಆರಿಸಿಕೊಳ್ಳಬಹುದು. ಮಡಿವಾಳ ಮಾಚಿದೇವನ ವಚನಗಳಿಗೆ ನಾನು ಟೀಕೆಯನ್ನು ಬರೆದಿದ್ದೇನೆ. ಅವನ ವಚನಗಳು ಸುಂದರವಾದವುಗಳು. ಈ ಗ್ರಂಥಕ್ಕೆ ಬೇಡಿಕೆ ಇದೆ. ಇದನ್ನು ತಾವು ಆರಿಸಬೇಕೆಂದು ನನ್ನ ಸೂಚನೆ ಇದೆ. ಹಡದಪ್ಪಣ್ಣನ ವಚನಗ್ರಂಥವಾದರೂ ಸಾಮಾನ್ಯವಾದುದಲ್ಲ. ಆದ್ದರಿಂದ ತಾವು ಬೇಕಾದ ಒಂದು ವಚನಗ್ರಂಥವನ್ನು ಆಯ್ದುಕೊಳ್ಳಬಹುದು. ಅದಕ್ಕೋಸ್ಕರ ಕಾಣಿಕೆ ಕೊಟ್ಟವರ ಹೆಸರಿನಿಂದಲೇ ಆ ಗ್ರಂಥವು ಮುದ್ರಿಸಲ್ಪಡುವುದು. ಒಂದು ವೇಳೆ ಇನ್ನೊಬ್ಬ ದೇಣಿಗೆದಾರರು ದೊರೆತರೆ ಉಳಿದದ್ದನ್ನೂ ಸಹ ಹಾಗೆಯೇ ಪ್ರಸಿದ್ಧಿಸುವೆನು.

ಇತಿ ತಮ್ಮ

**ಫ. ಗು. ಹಳಕಟ್ಟಿ**







೬–೯–೧೯೫೧

ಶ್ರೀ ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ತಮ್ಮ ಹೋದವಾರದ ಪತ್ರವು ಕೈಸೇರಿದೆ. ತಮ್ಮ ಎಲ್ಲ ಪತ್ರಗಳನ್ನು ಕಾದಿಟ್ಟಿದ್ದೇನೆ. ಅವುಗಳಲ್ಲಿ ಬಹಳ ಉಪಯುಕ್ತ ಸೂಚನೆಗಳಿವೆ. ಈಚೆಗೆ ನನ್ನಿಂದ ಉತ್ತರಗಳು ಸರಿಯಾಗಿ ಬರುತ್ತಿಲ್ಲೆಂಬುದು ತಮ್ಮ ಲಕ್ಷಕ್ಕೆ ಬಂದಿರಬಹುದು. ನಾನು ನನ್ನ ಸ್ವತಃದ ತೊಂದರೆಗಳನ್ನು ಯಾರ ಮುಂದೆಯೂ ಹೇಳುವುದಿಲ್ಲ. ಆದರೆ ಹೇಳದಿದ್ದರೆ ನನ್ನ ವಿಷಯವಾಗಿ ತಮ್ಮಂಥವರಿಗೆ ತಪ್ಪು ತಿಳಿವಳಿಕೆಯಾಗಬಹುದು. ತಾವು ತಿಳಿಯುವುದು ಅವಶ್ಯವಿದೆ. ನನ್ನ ಪಾದಕ್ಕೆ ಆಕಸ್ಮಿಕ ಅಪಾಯ ಸಂಭವಿಸಿದ್ದರಿಂದ ೬ ತಿಂಗಳು ಹಾಸಿಕೆಯಲ್ಲಿ ಮಲಗಿರಬೇಕಾಯಿತು. ಮುಂದೆ ಒಂದು ವರ್ಷ ನಡೆಯಲಿಕ್ಕೆ ಚೆನ್ನಾಗಿ ಬಾರದ್ದರಿಂದ ಹೊರಗೆ ಹೋಗಲು ಶಕ್ಯವಾಗಲಿಲ್ಲ. ಇದರಿಂದ ನನ್ನ ಪ್ರೆಸ್ಸಿಗೆ ಬೇಕಾದ ಮೇಲ್ವಿಚಾರಣೆಗೆ ತಡೆಯಾಯಿತು. ನೌಕರರು ಅಪ್ರಮಾಣಿಕರು. ಹೀಗಾಗಲು ನಾನು ಹಾನಿಗೆ ಒಳಗಾಗಬೇಕಾಯಿತು. ನನಗೆ ನಷ್ಟವು ಬಹಳವಾಯಿತು. ಈಚೆಗೆ ಕೆಲಮಟ್ಟಿಗೆ ಸುಧಾರಿಸುತ್ತಲಿದ್ದೇನೆ. ನೌಕರರನ್ನು ಕೆಲಸದಿಂದ ದೂರ ಮಾಡಿದೆನು. ಮುಂದೆ ಹೊಸ ನೌಕರರನ್ನು ನೇಮಿಸಿದೆನು. ಅವರು ಅನನುಭವಿಗರು. ಪ್ರೆಸ್ಸಿನ ಕೆಲಸಗಳು ಕುಂಠಿತವಾದುವು. ಪತ್ರವ್ಯವಹಾರಗಳು ಮುಂತಾದ ಕೆಲಸಗಳು ಸರಿಯಾಗಿ ಸಾಗಲಿಲ್ಲ. ಹೀಗೆ ಅನೇಕ ಅಕ್ರಮಗಳಾಗುತ್ತ ಬಂದುವು. ಈಚೀಚೆಗೆ ಆ ಸ್ಥಿತಿಯು ದೂರವಾಗುತ್ತಲಿದೆ.

ಈ ಎರಡು ತಿಂಗಳಲ್ಲಿ ನನ್ನ ಹೆಂಡತಿಗೆ ರಕ್ತದ ಒತ್ತಡವಿದ್ದದರಿಂದ ಅದು ಅರ್ಧಾಂಗವಾಯುವಾಗಿ ಪರಿಣಮಿಸಿತು. ಮನೆಯಲ್ಲಿ ಕೆಲಸ ಮಾಡುವವರು ಇಲ್ಲ. ಈಗ ಅವಳು ಸುಧಾರಿಸುತ್ತಲಿದ್ದಾಳೆ. ಒತ್ತಡವು ಕಡಿಮೆಯಾಗುತ್ತಲಿದೆ. ಈಗಲೂ ಔಷಧೋಪಚಾರದಲ್ಲಿದ್ದಾಳೆ. ಆದರೆ ಈ ಎರಡು ತಿಂಗಳು ಚಿಂತೆಯಲ್ಲಿ ಇದ್ದೆನು. ಈ ಎಲ್ಲ ಕಾರಣಗಳ ಮೂಲಕ ನನ್ನ ಪತ್ರವ್ಯವಹಾರಗಳಲ್ಲಿ ದಿನಾವಧಿಯಾಗುತ್ತಲಿದೆ. ತಮ್ಮ ಪತ್ರಗಳಿಗೆ ಉತ್ತರ ಕೊಡಲು ನನಗೆ ಆಗಲಿಲ್ಲ. ಇದಕ್ಕೋಸ್ಕರ ತಾವು ನನ್ನನ್ನು ಕ್ಷಮಿಸಬೇಕು. ವಚನಶಾಸ್ತ್ರ ಪ್ರಸಾರಸಂಘವನ್ನು ಏರ್ಪಡಿಸುವುದು ಅತ್ಯವಶ್ಯಕವಾಗಿದೆ. ಆದರೆ ಸಮಾಜದಲ್ಲಿ ಎಲ್ಲೆಲ್ಲಿಯೂ ಕಲಹಗಳಿವೆ. ನಾನು ಈ ಕಲಹಗಳಿಂದ ದೂರಿದ್ದೇನೆ. ನಾನು ಯಾವ ಚುನಾವಣೆ ಅಥವಾ ಅಧಿಕಾರ ಸ್ಥಾನ ಸಂಪಾದನೆ ಇವುಗಳಲ್ಲಿರುವುದಿಲ್ಲ. ಇದರಿಂದ ಕೆಲವು ಅನಾನುಕೂಲತೆಗಳೂ ನನಗೆ ಉಂಟಾಗಿವೆ. ಜನರ ಸಂಬಂಧವು ಎಷ್ಟು ಇರಬೇಕೋ ಅಷ್ಟು ಉಂಟಾಗಿರುವುದಿಲ್ಲ. ನಾನು ಹೊರಗೆ ಉಪನ್ಯಾಸಗಳನ್ನು ಕೊಡಲು ಹೋಗುವುದಿಲ್ಲ. ಹೋದರೆ ಇಲ್ಲಿಯ ನನ್ನ ಪ್ರೆಸ್ಸಿನ ಕೆಲಸಗಳಿಗೆ ಆತಂಕವಾಗುತ್ತದೆ. ಕೆಲಸಗಳು ನಿಂತುಹೋಗಿಬಿಡುತ್ತವೆ. ಹೀಗೆ ಅನೇಕ ತೊಂದರೆಗಳು ಉಂಟಾಗುವುದು ಕಂಡುಬಂದಿದೆ,

ಆದರೆ ವಚನಶಾಸ್ತ್ರದ ಮಹತ್ವವು ಜನರಿಗೆ ಈಗ ತಿಳಿದುಬಂದಿದೆ. ಇದರ ಪ್ರಸಾರ ಮಾಡುವ ಕಾರ್ಯವನ್ನು ನಾವು ಈಗ ಪ್ರಾರಂಭಿಸಲೇ ಬೇಕಾಗಿದೆ. ಇದರ ತಳಹದಿಯನ್ನು ಹಾಕಲು ಇಚ್ಛಿಸಿದ್ದೇನೆ. ಇದನ್ನು ನಾನೊಬ್ಬನೇ ಮಾಡುವುದು ಶಕ್ಯವಾಗಲಾರದು. ಇದಕ್ಕೆ ನಾನು ಎಲ್ಲ ಕಡೆಗೂ ಒಂದೇ ಸಮನೆ ಪ್ರವಾಸ ಮಾಡ ಬೇಕಾಗುವುದು. ಇದು ಆರಂಭದಲ್ಲಿ ಮಾತ್ರ ಶಕ್ಯವು. ಮುಂದೆ ಇದು ಶಕ್ಯವಾಗ ಲಾರದು. ಆದ್ದರಿಂದ ಇದಕ್ಕೋಸ್ಕರ ಒಂದು ಸಂಘದ ಸ್ಥಾಪನೆಯಾಗಲೇ ಬೇಕಾಗು ತ್ತದೆ. ಈ ಸಂಘದವರು ತಾವು ತಿಳಿಸಿದ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕು. ಅವು ಜಯಂತಿಗಳ ಏರ್ಪಾಡುಗಳು, ಉಪನ್ಯಾಸಗಳು, ಗ್ರಂಥಪ್ರಸಾರ ಮುಂತಾ ದುವುಗಳು ಇರುತ್ತವೆ. ಒಂದು ಯೋಗ್ಯ ಸಂಘವನ್ನು ಹೇಗೆ ಸ್ಥಾಪಿಸಬೇಕೆಂಬುದೇ ಈಗ ನಾವು ಮಾಡತಕ್ಕ ಮುಖ್ಯ ಕಾರ್ಯವಾಗಿದೆ.

ನಾನು ಇಷ್ಟರಲ್ಲಿಯೇ ಒಬ್ಬ ಪ್ರಚಾರಕನನ್ನು ನೇಮಿಸಿದ್ದೇನೆ. ಅವನು ವಿಜಾಪುರ ಜಿಲ್ಲೆಯ ಉತ್ತರ ಭಾಗ, ಸೊಲ್ಲಾಪುರ ಪಟ್ಟಣ ಮತ್ತು ಕಲಬುರ್ಗಿಯ ಉತ್ತರ ಭಾಗ ಈ ಕಡೆಗೆ ಹೋಗಿ ಬಂದನು. ನಾನು ಹೇಳಿದಂತೆ ಅವನು ಸಂಘ ಸ್ಥಾಪನೆಯ ವಿಷಯವನ್ನು ಅಲ್ಲಲ್ಲಿ ಜನರಿಗೆ ತಿಳಿಸಿ ಬಂದಿದ್ದಾನೆ. ನನ್ನ ಪರಿಚಯ ವಿದ್ದ ಪ್ರಮುಖ ಜನರಿಗೆ ನಾನು ಪತ್ರಗಳನ್ನು ಈ ವಿಷಯವಾಗಿ ಕೊಟ್ಟಿದ್ದೆನು. ಅವರು ಈ ಕಾರ್ಯದ ಮಹತ್ವವನ್ನು ತಿಳಿದಿರುವರು. ಇದರಿಂದ ಈ ಕಾರ್ಯಕ್ಕೆ ಆತಂಕಗಳು ಉಂಟಾಗಿರುವುದಿಲ್ಲ. ಈಗ ಈ ಕಡೆ ಮಳೆಗಾಲವಿರುತ್ತದೆ. ಮಳೆಯು ನಿಂತ ಬಳಿಕ ಈ ಭಾಗಗಳಲ್ಲಿ ನಾನು ಹೋಗಿಬರುವೆನು. ಆಯಾ ಸ್ಥಳಗಳಿಗೆ ಹೋದ ಬಳಿಕ ಸುತ್ತಲಿನ ಗ್ರಾಮಗಳಲ್ಲಿ ಪ್ರಚಾರಕಾರ್ಯ ಹೇಗೆ ಮಾಡಬೇಕೆಂಬುವರ ಬಗ್ಗೆ ಅಲ್ಲಿಯ ಜನರಿಗೆ ತಿಳಿಸಿ ಬರುವೆನು. ಕೆಲವು ದಿವಸಗಳಾದ ಮೇಲೆ ಪುನಃ ಹೋಗಿಬರುವೆನು. ಹೀಗೆ ಪ್ರಯತ್ನಗಳಾದ ಬಳಿಕ ಒಂದು ಸ್ಥಿರ ಸಂಸ್ಥೆಯನ್ನು ಸ್ಥಾಪಿಸುವುದು ಶಕ್ಯವಾಗಬಹುದು.

ಈ ಭಾಗಗಳಲ್ಲಿ ಸಂಸ್ಥೆಯು ಉತ್ತಮ ರೀತಿಯಿಂದ ನಡೆಯುವಂತೆ ಮಾಡಿ ದ್ದಾದರೆ ಈ ಕಾರ್ಯಗಳು ಮುಂದೆ ಭರದಿಂದ ನಡೆಯಬಹುದೆಂದು ನನಗೆ ತೋರುತ್ತದೆ. ಬೇರೆ ಭಾಗಗಳಲ್ಲಿ ಈ ಕಾರ್ಯವು ತಾನಾಗಿಯೇ ಮುಂದುವರಿಯುತ್ತ ಹೋಗಬಹುದೆಂದು ತೋರುತ್ತದೆ.

ಈ ವಿಷಯವಾಗಿ ನಾನು ಕಾಲಕಾಲಕ್ಕೆ ತಮಗೆ ಬರೆಯುತ್ತ ಹೋಗುವೆನು. ತಾವೂ ಬರೆಯುತ್ತ ಹೋಗಬೇಕು.

ಇತಿ ತಮ್ಮ
ಫ. ಗು. ಹಳಕಟ್ಟಿ

೨೮

೪–೬–೧೯೫೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ ಅನೇಕ ಶರಣಾರ್ಥಿಗಳು.

ತಮ್ಮ ಪತ್ರಗಳೆರಡೂ ಮುಟ್ಟಿವೆ. ಅವುಗಳಲ್ಲಿ ತಾವು ಸವಿಸ್ತಾರವಾಗಿ ಅನೇಕ ವಿಷಯಗಳನ್ನು ತಿಳಿಸಿರುವಿರಿ. ಇದಕ್ಕೋಸ್ಕರ ನಾನು ತಮಗೆ ಋಣಿಯಾಗಿದ್ದೇನೆ. ತಾವು ತಿಳಿಸಿದ ವಿಷಯಗಳನ್ನು ಕುರಿತು ನನ್ನ ಅಭಿಪ್ರಾಯವನ್ನು ನಿವೇದಿಸುವುದಕ್ಕೆ ವೇಳೆಯ ಅಭಾವದ ಮೂಲಕ ತಮ್ಮ ಪತ್ರಗಳಿಗೆ ಉತ್ತರ ಕೊಡಲು ಆಗಲಿಲ್ಲ. ನಾನು ಈ ಮಧ್ಯೆ ನವಿಲುಗುಂದ, ಬನಹಟ್ಟಿ ಮೊದಲಾದ ಕಡೆಗೆ ಹೋಗಬೇಕಾಗಿತ್ತು. ಇದಲ್ಲದೆ ಮನೆಯಲ್ಲಿ ಅಸ್ವಸ್ಥತೆ. ಹೀಗಾಗಿ ತಮ್ಮ ಪತ್ರಗಳಿಗೆ ತೀವ್ರ ಉತ್ತರ ಬರೆಯಲು ಆಗಲಿಲ್ಲ—ಕ್ಷಮಿಸಬೇಕು.

ತಾವು ಹಳೇಬೀಡಿನ ಸಭೆಯು ತೃಪ್ತಿಕರವಾಗಿ ನಡೆದಿರುವುದನ್ನು ತಿಳಿಸಿರುವಿರಿ. ಪತ್ರಿಕೆಗಳಲ್ಲಿಯೂ ಅದರ ವಿವರಗಳನ್ನು ಓದಿರುವೆನು. ಪ್ರಚಾರಕ್ಕೋಸ್ಕರ ಇಂಥ ಚಳುವಳಿಗಳು ಅವಶ್ಯ. ಆದರೆ ಸಮ್ಮೇಳನಗಳಾದ ಬಳಿಕ ಕಾರ್ಯಗಳು ಅಲ್ಲಿಯೇ ನಿಂತುಬಿಡುತ್ತವೆ. ನಾನು ನವಿಲುಗುಂದ ಸಭೆಯಲ್ಲಿ ಈ ವಿಷಯವನ್ನು ಕುರಿತು ಟೀಕಿಸಿದೆನು. ಆಗ ಬಹಳ ಜನ ಮಹನೀಯರು ಬಂದಿದ್ದರು. ಅವರು ಇದೇ ಜೂನ್ ತಿಂಗಳಲ್ಲಿ ಧಾರವಾಡದಲ್ಲಿ ಸಭೆ ಕರೆದು ಇಡೀ ವರ್ಷ ಕಾರ್ಯಗಳನ್ನು ಹೇಗೆ ಮುಂದುವರಿಸಬೇಕೆಂಬುದನ್ನು ಕುರಿತು ಆಲೋಚಿಸುವೆವೆಂದು ಸಭಿಕರಿಗೆ ತಿಳಿಯಪಡಿಸಿದರು. ಅವರು ಆವ ಕಾರ್ಯ ಮಾಡುವರೋ ಇದನ್ನು ನೋಡಬೇಕಾಗಿದೆ. ಆಗ ನವಿಲುಗುಂದ ಸ್ವಾಮಿಗಳೂ ಇನ್ನೂ ಅನೇಕರೂ ಇದ್ದರು. ವಿಜಾಪುರಕ್ಕೆ ಮುಧೋಳದ ಮೃತ್ಯುಂಜಯ ಸ್ವಾಮಿಗಳು ಬಂದಿದ್ದರು. ಅವರು ಚಟುವಟಿಕೆಯವರೆ. ಅವರಿಗೂ ಈ ವಿಷಯ ತಿಳಿಸಿದೆನು.

ಆದರೆ ಒಟ್ಟಾರೆ ಕಾರ್ಯಗಳು ಸರಿಯಾಗಿ ನಡೆಯುವವೆಂಬ ಚಿನ್ಹೆಗಳು ಇಲ್ಲ. ಸಾಂಘಿಕವಾಗಿ ಕಾರ್ಯಗಳು ಸಾಗುವಂತೆ ತೋರುವದಿಲ್ಲ. ನಾನು ವೇಳೆಯನ್ನು ಇಟ್ಟುಕೊಂಡು ಬೇರೆಬೇರೆ ಕಡೆಗೆ ಸಂಚಾರ ಮಾಡುವುದು ಅವಶ್ಯವೆಂದು ತೋರುತ್ತದೆ. ಆದರೆ ಅದಕ್ಕೂ ಪೂರ್ವಸಿದ್ಧತೆ ಅವಶ್ಯವು. ಮಹಾತ್ಮ ಗಾಂಧಿಯವರು ಸಾಬರಮತಿ ಆಶ್ರಮದಲ್ಲಿ ೬೦–೭೦ ಜನ ಸ್ವಯಂಸೇವಕರನ್ನು ತರಬೇತುಮಾಡಿ ಕಾರ್ಯಾರಂಭ ಮಾಡಿದರು. ಹಾಗೆಯೇ ನಾವು ಮಾಡುವುದು ಅವಶ್ಯವಿದೆ. ಕನಿಷ್ಠ ೩೦–೪೦ ಜನ ಸ್ವಯಂಸೇವಕರನ್ನು ನೇಮಿಸುವುದು ಅವಶ್ಯವು. ಅವರಿಗೆ ಪಗಾರನ್ನು ಕೊಟ್ಟು ಯೋಗ್ಯ ಶಿಕ್ಷಣ ಕೊಡಬೇಕು. ಅದೊಂದು ಬೋಧಕವರ್ಗವಾಗಿಯೇ ಪರಿಣಮಿಸಬೇಕು. ಎರಡು ವರ್ಷ ಅವರಿಗೆ ತಕ್ಕ ಶಿಕ್ಷಣ ಕೊಡಬೇಕು. ಇದಕ್ಕೋಸ್ಕರ ೫ ರಿಂದ ೧೦ ಸಾವಿರ ರೂಪಾಯಿಗಳನ್ನು ಶೇಖರಿಸಬೇಕು. ಹೀಗೆ ಶೇಖರಿಸಿ ಒಂದು ಬೋಧಕವರ್ಗ ಅಥವಾ ಪ್ರಚಾರವರ್ಗವನ್ನು ಏರ್ಪಡಿಸಬೇಕು. ಅವರಲ್ಲಿ ಯೋಗ್ಯ

ರಾದವರನ್ನು ಜಿಲ್ಲೆಗೆ ೨-೩ ಜನರಂತೆ ನೇಮಿಸಿ ಬಲವಾದ ಪ್ರಚಾರ ಮಾಡಿದರೆ ಕಾರ್ಯ ಪ್ರಾರಂಭವಾಗುವುದು. ಅವರು ಕಾರ್ಯ ಮಾಡಲಿಕ್ಕೆ ಯೋಗ್ಯ ಕಾರ್ಯಕ್ರಮ ಗೊತ್ತುಪಡಿಸಬೇಕು. ಇದೇ ಪ್ರಕಾರ ಆರ್ಯಸಮಾಜ, ರಾಮಕೃಷ್ಣ ಮಿಶನದವರು ಕಾರ್ಯಮಾಡುತ್ತಿದ್ದಾರೆ. ಈ ವಿಷಯವಾಗಿ ಒಂದು ಪೂರ್ಣ ಯೋಜನೆಯನ್ನು ಮಾಡಿ ಅದರ ಪ್ರಚಾರದ ಸಲುವಾಗಿ ನಾನು ಆಯಾ ಭಾಗಗಳಲ್ಲಿ ಸಂಚರಿಸಬೇಕೆಂದಿದ್ದೇನೆ. ಹಣ ಮತ್ತು ಜನ ಇವುಗಳ ಸಹಾಯವಿಲ್ಲದಿದ್ದರೆ ಕಾರ್ಯ ನಡಿಯಲಾರದು. ಹರ್ಡೇಕರ ಮಂಜಪ್ಪನವರ ಆಲಮಟ್ಟಿ ವಿದ್ಯಾಲಯವಿದೆ. ಅಲ್ಲಿ ಕಟ್ಟಡಗಳೂ ಇವೆ. ಅಲ್ಲಿ ಈ ಬೋಧಕವರ್ಗ ನಡಿಸಬೇಕೆಂಬ ವಿಚಾರ ಬಂದಿದೆ. ಆದರೆ ಈ ವಿಚಾರವು ಪೂರ್ಣತೆಗೆ ಬಂದಿಲ್ಲ. ನನ್ನ ಮಾನಸಿಕ ಮತ್ತು ಕೌಟುಂಬಿಕ ತೊಂದರೆಗಳ ಮೂಲಕ ನನ್ನ ಮನಸ್ಸಿನಲ್ಲಿ ಶಾಂತತೆಯು ಇಲ್ಲ. ಈ ವಿಷಯವಾಗಿ ತೀವ್ರ ನಿರ್ಣಯಮಾಡಿಕೊಂಡು ಕಾರ್ಯಕ್ಕೆ ತೊಡಗಬೇಕೆಂದಿದ್ದೇನೆ. ತಮ್ಮ ಅಭಿಪ್ರಾಯ ತಿಳಿಸಬೇಕು.

(೨) ಶಿವಾನುಭವ ಪತ್ರಿಕೆ ಮತ್ತು ಶಿವಾನುಭವ ಗ್ರಂಥಗಳ ಸಲುವಾಗಿ ಪ್ರಚಾರಮಾಡುವ ಬೋಧಕರು ಮತ್ತು ಪುಸ್ತಕ ಮಾರಾಟಗಾರರಿಗೆ ನಾನು ನೂರಕ್ಕೆ ೨೦ರಂತೆ ಕಮಿಶನ್ನ ಕೊಡುತ್ತಾ ಇದ್ದೇನೆ. ಸ್ವತಂತ್ರವಾಗಿ ಯಾರನ್ನೂ ಪ್ರೆಸ್ಸಿನಿಂದ ನೇಮಿಸಿಕೊಂಡಿಲ್ಲ. ಯೋಗ್ಯರು ದೊರೆತಲ್ಲಿ ಕಾಯಮವಾಗಿ ನಮ್ಮಲ್ಲಿ ನೇಮಿಸಿಕೊಳ್ಳಬಹುದು. ಈ ಪದ್ಧತಿಯಂತೆ ಕಾರ್ಯ ಮಾಡಲಿಕ್ಕೆ ಒಬ್ಬರಿಗೆ ತಿಳಿಸಿತ್ತು. ಅವರು ಒಪ್ಪಿಕೊಂಡಿದ್ದರು. ಆದರೆ ಅವರ ಸಮಾಚಾರ ಏನೂ ತಿಳಿದಿಲ್ಲ. ನಮ್ಮ ಸಮಾಜದಲ್ಲಿ ಕಾರ್ಯಮಾಡುವವರ ಸಂಖ್ಯೆ ಕಡಿಮೆ ಇದ್ದದ್ದರ ಪರಿಣಾಮವು ಹೀಗಾಗುತ್ತದೆ.

(೩) ತಾವು ವಾಲ್ಮೀಕಿ ಸೋಮಾರಾಧ್ಯರ ವಿಷಯವಾಗಿ ಬರೆದಿರುವಿರಿ. ನಾನು ಈ ವಿಷಯವನ್ನು ಕುರಿತು ಹೆಚ್ಚಿಗೆ ಸಂಶೋಧನವನ್ನು ಮಾಡುವೆನು. ತಮ್ಮ ಸೂಚನೆಗಳನ್ನು ನನ್ನ ಲಕ್ಷ್ಯದಲ್ಲಿ ಇಟ್ಟುಕೊಂಡಿರುವೆನು.

(೪) ವಚನಶಾಸ್ತ್ರ ಪ್ರಚಾರದ ವಿಷಯವಾಗಿ ತಾವು ಅನೇಕ ಸಲಹೆಗಳನ್ನು ಕೊಟ್ಟಿರುವಿರಿ. ಅವು ಉಪಯುಕ್ತವಾಗಿವೆ. ಆದರೆ ಕಾರ್ಯಕರ್ತರು ನಮ್ಮೊಡನೆ ಯಾವಾಗಲೂ ಇರುವುದು ಅವಶ್ಯವೆಂದು ತೋರಹತ್ತಿದೆ. ಅವರು ಸಿದ್ಧರಾದರೆ ಮುಂದಿನ ಕಾರ್ಯಗಳು ಮುಂದುವರಿಯುವವು. ಜನತೆಯಲ್ಲಿ ಸಹಾನುಭೂತಿಯು ಇದೆ. ಆದರೆ ಅವರಿಂದ ಸತತ ಕೆಲಸಗಳು ಆಗಲಾರವು. ಆದ್ದರಿಂದ ಬೇರೊಂದು ಸ್ವತಂತ್ರ ವ್ಯವಸ್ಥೆಯು ಅವಶ್ಯವೆನಿಸುತ್ತದೆ. ಈ ವಿಷಯವನ್ನು ನಾನು ವಿಚಾರ ಮಾಡುತ್ತಿದ್ದೇನೆ.

ಆರಂಭದಲ್ಲಿ ಈಗ ಸಮಾಜದಲ್ಲಿ ಮುಂದುವರಿದವರು ಇಂಥ ಪ್ರಯತ್ನವನ್ನು ವಿರೋಧಿಸುವರು. ಅದು ಅವರ ಸ್ವಾರ್ಥದ ಮೂಲಕವೇ ಇರುತ್ತದೆ. ಆದರೆ ಅದನ್ನು ಕಡೆಗಣಿಸಿ ನಾವು ಮುಂದುವರಿಯಬೇಕಾಗಿದೆ.

(೫) ಶಿವಶರಣರ ಚರಿತ್ರೆಗಳು ಭಾಗ-೩ ಇದು ಪೂರ್ತಿಯಾದಂತಾಯಿತು. ಇದೇ ಜೂನ್ ತಿಂಗಳಿನ ಸಂಚಿಕೆಯಲ್ಲಿ ಅದನ್ನು ಮುಗಿಸುವೆನು. ಅದರ ಕಡೆಯ ಭಾಗದಲ್ಲಿ 'ಜಂಗಮರು' ಇವರ ವಿಷಯವಾಗಿ ಐತಿಹಾಸಿಕ ದೃಷ್ಟಿಯಿಂದ ಬರೆಯುತ್ತಾ ಇದ್ದೇನೆ. ಮೇ ತಿಂಗಳಿನ ಸಂಚಿಕೆಯು ತಮಗೆ ಮುಟ್ಟಿರಬಹುದು. ಅದರಲ್ಲಿ ಅನೇಕ ಹೊಸ ವಿಷಯಗಳಿದ್ದು ಅವುಗಳನ್ನು ತಾವು ಲಕ್ಷಿಸಬೇಕೆಂದು ವಿನಂತಿ ಇದೆ.

ಮುಂದೆ ನಾಲ್ಕನೇ ಭಾಗ ಪ್ರಾರಂಭಿಸಿಸುವೆನು. ಅದರ ಆರಂಭದ ಭಾಗದಲ್ಲಿ ರೇವಣಸಿದ್ಧ, ಮರುಳುಸಿದ್ಧ, ಏಕೋರಾಮರ ಚರಿತ್ರೆಗಳನ್ನು ಕೊಡುವೆನು.

(೬) ಮೇ ತಿಂಗಳಿನ ಸಂಚಿಕೆಯಲ್ಲಿ ಬಸವೇಶ್ವರನ ವಿಷಯವಾಗಿ ಹೊಸ ವಿಷಯಗಳು ಬಂದಿರುವುದು ತಮ್ಮ ಲಕ್ಷ್ಯಕ್ಕೆ ಬಂದಿರಬಹುದು. ಅವುಗಳ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೨೯

೨೭–೭–೧೯೫೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ.ಶ. ತಮ್ಮ ಪತ್ರಗಳು ಮುಟ್ಟಿವೆ. ತಾವು ಶಿವಶರಣರ ವಾಙ್ಮಯ ಪ್ರಸಾರಕ್ಕೋಸ್ಕರ ವಹಿಸಿರುವ ಪೂಜ್ಯ ಬುದ್ಧಿ ಮತ್ತು ಆದರ ಇವು ಅವರ್ಣನೀಯವಾಗಿರುತ್ತವೆ. ತಮ್ಮ ಸೂಚನೆಗಳೆಲ್ಲವೂ ಅಮೂಲ್ಯವಾಗಿವೆ. ಅವುಗಳನ್ನು ಅಲಕ್ಷಿಸಿಲ್ಲ. ಅವುಗಳ ಆಧಾರದ ಮೇಲಿಂದ ಕೆಲವು ಸಾಮಾನ್ಯ ನಿಯಮಗಳನ್ನು ಮಾಡಿ ಅವುಗಳನ್ನು ಅಚ್ಚಿಗೆ ಕೊಟ್ಟಿದ್ದೇನೆ. ಅವುಗಳನ್ನು ಸಮಾಜದಲ್ಲಿಯ ಕೆಲವು ಪ್ರಮುಖರ ಕಡೆಗೆ ಅಭಿಪ್ರಾಯಕ್ಕೋಸ್ಕರ ಕಳಿಸಲಿದ್ದೇನೆ. ಆಗಸ್ಟ ಶಿವಾನುಭವ ಪತ್ರಿಕೆಯಲ್ಲಿಯೂ ಪ್ರಕಟಿಸಿ ಅಭಿಪ್ರಾಯಗಳನ್ನು ಕೋರುವೆನು. ಒಂದು ತಿಂಗಳು ಅವಧಿಯನ್ನಿಡುವೆನು. ಅಭಿಪ್ರಾಯಗಳು ಬಂದ ಮೇಲೆ ಘಟನೆಯನ್ನು ಗೊತ್ತುಪಡಿಸಿ ತಾವು ತಿಳಿಸಿದಂತೆ ಪ್ರಚಾರ ಕಾರ್ಯವನ್ನು ಕೈಕೊಳ್ಳಲಿರುವೆನು.

ನಾನು ಮೊದಲು ವಿಜಾಪುರ, ಸೊಲ್ಲಾಪುರ ಮತ್ತು ಕಲಬುರ್ಗಿ ಜಿಲ್ಲೆಗಳನ್ನು ತೆಗೆದುಕೊಳ್ಳುವೆನು. ಇವು ನನಗೆ ಪರಿಚಿತ ಜಿಲ್ಲೆಗಳು. ಇವುಗಳಲ್ಲಿಯೇ ಅಲ್ಲಿಯ ಮಹನೀಯರ ಕೂಡ ಸಂಪರ್ಕವನ್ನು ಈ ವಿಷಯವಾಗಿ ಬೆಳೆಸಿರುವೆನು. ಆಮೇಲೆ ಕ್ರಮೇಣ ಬೇರೆ ಜಿಲ್ಲೆಗಳನ್ನು ಮುಖ್ಯವಾಗಿ ಯಾವ ಜಿಲ್ಲೆಗಳಲ್ಲಿ ಜನರು ಆಸೆಯನ್ನು ತೋರಿಸುವರೋ ಅವುಗಳನ್ನು ತೆಗೆದುಕೊಳ್ಳುವೆನು.

ನಾನು ಎರಡು ಘಟನೆಗಳನ್ನು ಮಾಡಿದ್ದೇನೆ. ಒಂದು 'ವಚನ ವಾಙ್ಮಯ ಪ್ರಚಾರ ಸಮಿತಿ', ಇನ್ನೊಂದು 'ಶಿವಾನುಭವ ಸಂಘ'. ಶಿವಾನುಭವ ಸಂಘದಲ್ಲಿಯ ಸಭಾಸದರು ಸಮಾಜ ಉದ್ಧಾರದ ವಿಶಿಷ್ಟ ಕಾರ್ಯಗಳನ್ನು ಕೈಕೊಂಡಿರುವವರು

ಇರಬೇಕು. ಪ್ರಚಾರ ಸಮಿತಿಯಲ್ಲಿ ವಚನ ವಾಙ್ಮಯದಲ್ಲಿ ಸಹಾನುಭೂತಿ ಇದ್ದವರು ಯಾರೇ ಇರಲಿ ಅವರು ಸಮಾವೇಶವಾಗುವರು.

ಶಿವಾನುಭವವು ತಮಗೆ ಪ್ರತಿ ತಿಂಗಳು ಬರುವಂತೆ ತೋರುವುದಿಲ್ಲ. ತಮಗೆ ಅದು ಇನ್ನುಮೇಲೆ ಉಚಿತವಾಗಿ ಕಳಿಸಿಕೊಡಲ್ಪಡುವುದು. ಕೆಲವು ಸಂಚಿಕೆಗಳಲ್ಲಿ ಬಸವೇಶ್ವರರ ಕೊನೆ ಕಾಲವಲ್ಲಿ ವೀರಶೈವ ಧರ್ಮಕ್ಕೋಸ್ಕರ ಒದಗಿದ ದಾರುಣವಾದ ಕಾಳಗಗಳ ವಿವರಣೆಗಳವೆ. ಆ ಸಂಚಿಕೆಗಳೆಲ್ಲವನ್ನೂ... ಪೋಸ್ಟ್ ಮಾಡಿ ತಮಗೆ ಕಳಿಸುವೆನು. ತಾವು ಬೇರೆ ಪತ್ರಿಕೆಯನ್ನು ಬೇಡಿದ್ದೀರಿ. ಅದು ಇವರೊಳಗೆ ಇದೆ.

ತಾವು 'ಶಿವ' ಈ ವಿಷಯವಾಗಿ ಬರೆದಿದ್ದೀರಿ. ಅದರ ಉಪಯೋಗವನ್ನು ತಿಳಿಸಿದ್ದೀರಿ. ಆದರೆ ಅದನ್ನು ಎಲ್ಲಿ ಯಾವ ರೀತಿ ಉಪಯೋಗಿಸುವದು ಅಷ್ಟು ಸರಿಯಾಗಿ ನನಗೆ ತಿಳುವಳಿಕೆಯಾಗಲಿಲ್ಲ. ಅದೊಂದು 'ಮೋಟೋ' ಅಂದರೆ ಗುರುತು ಎಂದು ತಿಳಿದು ಅದರ ಉಪಯೋಗವಾಗಬೇಕೆಂದು ತಾವು ಅಭಿಪ್ರಾಯಪಟ್ಟಂತೆ ತೋರುವದು. ಈ ವಿಷಯ ಹೆಚ್ಚಿಗೆ ಬರೆಯಬೇಕು. ಇತಿ ತಮ್ಮ

ಫ. ಗು. ಹಳಕಟ್ಟಿ

೩೦

೧೮–೯–೫೧

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ, ತಮ್ಮ ಫ. ಗು. ಹಳಕಟ್ಟಿ ಮಾಡುವ ಶ. ಶ. ಗಳು. ತಾವು ೧೨–೯–೫೧ನೇ ತಾರೀಖಿನ ದಿವಸ ನನ್ನ ವಿಷಯವಾಗಿ ಅತ್ಯಂತ ಸಹಾನುಭೂತಿ ಪೂರ್ವಕವಾಗಿ ಬರೆದಿದ್ದಕ್ಕೆ ನಾನು ತಮಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಜಗತ್ತಿನಲ್ಲಿ ಮನುಷ್ಯನಿಗೆ ಅನೇಕ ವಿಧ ಕಷ್ಟನಷ್ಟಗಳು ಉಂಟಾಗುತ್ತವೆ. ಅವುಗಳನ್ನು ಅರ್ಪಣಾಭಾವದಿಂದ ಅವನು ನಡಿಸಲೇಬೇಕು. ನಾವು ಇವನ್ನು, ಮೇಲೆ ನಮ್ಮ ವಿಚಾರಗಳನ್ನು ವ್ಯವಹಾರಣೆಗೆ ತರಲು ಕೂಡಲೇ ಪ್ರಯತ್ನಿಸುವುದು ಅವಶ್ಯ. ಇವಕ್ಕೋಸ್ಕರ ನಾನು ತಮ್ಮ ಸಲಹೆ ಸೂಚನೆಗಳನ್ನು ಆಗಿಂದಾಗ್ಗೆ ಕೋರುವೆನು. ಅವುಗಳನ್ನು ಆಗಿಂದಾಗ್ಗೆ ನನಗೆ ತಿಳಿಸುತ್ತಿರಬೇಕೆಂದು ನನ್ನ ವಿನಂತಿ ಇದೆ.

ಮೈಸೂರು ಪ್ರಾಂತ್ಯದಲ್ಲಿ ಶಿವಾನುಭವ ಅಥವಾ ವಚನಶಾಸ್ತ್ರ ಪ್ರಚಾರಕ್ಕೋಸ್ಕರ ಅಲ್ಲಲ್ಲಿ ಯೋಗ್ಯ ಕೇಂದ್ರಗಳನ್ನು ಏರ್ಪಡಿಸುವುದು ಅವಶ್ಯವಿರುತ್ತದೆ. ಪ್ರತಿಯೊಂದು ಕೇಂದ್ರದಲ್ಲಿ ಶಿವಶರಣರ ತತ್ವಗಳನ್ನು ಆದರಿಸುವಂಥ ಒಬ್ಬೊಬ್ಬರಾದರೂ ದೊಡ್ಡ ಮನುಷ್ಯರಿರಬೇಕು. ಅಂದರೆ ಅವರ ವಿದ್ಯೆಯಿಂದಾಗಲಿ, ಇಲ್ಲವೆ ಅವರ ಸಮಾಜ ಸುಧಾರಣಾ ಪ್ರಯತ್ನಗಳಗೋಸ್ಕರವಾಗಲಿ, ಇನ್ನಿತರ ಕಾರಣಗಳಗೋಸ್ಕರವಾಗಲಿ ವರ್ಚಸ್ಸುಳ್ಳವರಿರಬೇಕು. ಈ ಪ್ರಕಾರ ಅಲ್ಲಲ್ಲಿ ವಚನಶಾಸ್ತ್ರ ಪ್ರಚಾರ ಕೇಂದ್ರಗಳನ್ನು ಗೊತ್ತುಪಡಿಸುವದು ಅವಶ್ಯವಿದೆ. ಆರಂಭದಲ್ಲಿ ಇಂಥ

ಕೇಂದ್ರಗಳು ಹೆಚ್ಚಿಗೆ ತಿಕ್ಕಲಿಕ್ಕಿಲ್ಲ. ಆದರೂ ಇತ್ತೀಚೆಗೆ ವಚನಶಾಸ್ತ್ರ ಪ್ರೇಮಿಗಳ ಸಂಖ್ಯೆಯು ಹೆಚ್ಚುತ್ತಲಿದೆ. ಇಂಥವರಲ್ಲಿ ಯೋಗ್ಯರಾದವರನ್ನು ಆರಿಸಿಕೊಂಡು ಕಾರ್ಯಗಳನ್ನು ಮುಂದುವರಿಸಬೇಕಾಗಿದೆ. ಆದ್ದರಿಂದ ನಿಮ್ಮಲ್ಲಿಯ ೮-೯ ಜಿಲ್ಲೆಗಳಲ್ಲಿ ಯಾವ ಗ್ರಾಮಗಳು ಅನುಕೂಲ ಪರಿಸ್ಥಿತಿಯುಳ್ಳವೆಂಬುದನ್ನು ತಿಳಿದುಕೊಂಡು ಅವುಗಳ ಪಟ್ಟಿಯೊಂದನ್ನು ಸಿದ್ಧಪಡಿಸಿ ನನ್ನ ಕಡೆಗೆ ಕಳಿಸಿಕೊಡಬೇಕು. ಅವರಲ್ಲಿ ಅಲ್ಲಿಯೇ ವಚನಶಾಸ್ತ್ರ ಪ್ರೇಮಿಗಳ ಒಬ್ಬಿಬ್ಬರ ಹೆಸರುಗಳನ್ನಾದರೂ ಕಾಣಿಸಬೇಕು. ಇಂಥ ಒಂದು ಪಟ್ಟಿಯು ಮುಂದಿನ ಪ್ರಚಾರ ಕಾರ್ಯಕ್ಕೆ ಬಹು ಅನುಕೂಲವಾಗುವದು. ಇದನ್ನು ತಾವು ಸಂಶೋಧನ ಮಾಡಿ ನನಗೆ ತಿಳಿಸಬೇಕೆಂದು ನನ್ನ ವಿನಂತಿ ಇದೆ.

ತಾವು ಆಗಿಂದಾಗ್ಗೆ ಅನೇಕ ಮಹತ್ವದ ವಿಷಯಗಳನ್ನು ಸೂಚಿಸುತ್ತಾ ಬಂದಿರುವಿರಿ. ನಿಮ್ಮ ಪತ್ರಗಳನ್ನು ನಾನು ಕಾಯ್ದಿಟ್ಟಿದ್ದು ಅವುಗಳ ಉಪಯೋಗವನ್ನು ನಾನು ಅವಶ್ಯ ಮಾಡಿಕೊಳ್ಳುವೆನು. ನಾನು ಮೈಸೂರು ಪ್ರಾಂತದಲ್ಲಿ ಪ್ರವಾಸ ಮಾಡಿಲ್ಲ. ಅಲ್ಲಿಯ ಪರಿಸ್ಥಿತಿಯು ನನಗೆ ಚೆನ್ನಾಗಿ ಗೊತ್ತಿರುವುದಿಲ್ಲ. ಆದ್ದರಿಂದ ತಾವು ಈ ವಿಷಯವಾಗಿ ಆಗಿಂದಾಗ್ಗೆ ತಿಳಿಸುತ್ತಿರಬೇಕೆಂದು ನನ್ನ ವಿನಂತಿ ಇದೆ.

ತಾವು ಮೇಲೆ ಬರೆದ ವಿಷಯವನ್ನು ಸಂಶೋಧಿಸಿ ನನಗೆ ತಿಳಿಸಬೇಕೆಂದು ನನ್ನ ವಿನಂತಿ ಇದೆ.

ಇತಿ ತಮ್ಮ
ಫ. ಗು. ಹಳಕಟ್ಟಿ

೩೧

೮-೨-೫೨

ಶ್ರೀ ಎಸ್. ಆರ್. ಮಲ್ಲಪ್ಪನವರಿಗೆ,

ಮಹನೀಯರೇ, ತಮ್ಮ ಪತ್ರ ಮುಟ್ಟಿದೆ. ನಾನು ಈ ವಾರ ಧಾರವಾಡಕ್ಕೆ ಹೋಗಿದ್ದೆನು. ಮೊನ್ನೆ ತಿರುಗಿ ಬಂದೆನು. ತಮಗೆ ತಿಳಿಸತಕ್ಕ ವಿಷಯಗಳು ಅನೇಕ ಇರುತ್ತವೆ. ಸವಿಸ್ತಾರವಾಗಿ ಒಂದೆರಡು ದಿವಸಗಳಲ್ಲಿ ಪತ್ರ ಬರೆಯುವೆನು. ಕೆಲಸಗಳ ಮೂಲಕ ಉತ್ತರ ಬರೆದಿರುವುದಿಲ್ಲ. ಕ್ಷಮಿಸಬೇಕು.

ಇತಿ ತಮ್ಮ
ಫ. ಗು. ಹಳಕಟ್ಟಿ

೩೨

೨೬-೨-೫೩

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ, ಅನೇಕ ಶ.ಶ. ಗಳು. ತಮಗೆ ಪತ್ರ ಬರೆಯದೆ ಬಹಳ ದಿವಸಗಳಾದವು. ತಮ್ಮ ಪತ್ರಗಳನ್ನು ಕಾದಿಟ್ಟಿದ್ದೇನೆ. ನಾನು ಸ್ವಲ್ಪ ದಿವಸಗಳಲ್ಲಿ ಸವಿಸ್ತಾರ ಪತ್ರ ಹಾಕುವೆನು. ಅನೇಕ ವಿಷಯಗಳು ವಿಚಾರ ಮಾಡತಕ್ಕಂಥವು ಇವೆ. ಪತ್ರ ಹಾಕದ್ದಕ್ಕೆ ಕ್ಷಮಿಸಿರಿ.

ಇತಿ ತಮ್ಮ
ಫ. ಗು. ಹಳಕಟ್ಟಿ





೩೩

೧೨–೩–೫೨

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ಗಳು. ತಮ್ಮ ಕಾರ್ಡು ಮತ್ತು ಪತ್ರ ಬಂದು ಮುಟ್ಟಿವೆ. ತಮ್ಮ ಪತ್ರದ ಪ್ರಕಾರ ಗ್ರಂಥಗಳನ್ನು ನಮ್ಮ ಕಾರಕೂನನು ತಮ್ಮ ಕಡೆಗೆ ಕಳಿಸಿದ್ದಾನೆ. ಅವು ಬೇಗನೆ ಮುಟ್ಟುವವು. ಪ್ರತಿಗಳು ಮಾರದೆ ಉಳಿದರೆ ನಾನು ಅವುಗಳನ್ನು ವಾಪಸ್ಸು ತೆಗೆದುಕೊಳ್ಳುವೆನು. ಕಲ್ಯಾಣದ ವಿಷಯ ಇನ್ನೂ ನಿರ್ಧಾರವಾಗಿಲ್ಲ. ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ಅಲ್ಲಿಗೆ ಹೋಗಲು ಇಷ್ಟ ಪಡುತ್ತಾರೆಂದು ತಿಳಿಯುತ್ತದೆ.

ನನ್ನ ಆತ್ಮಚರಿತ್ರೆಯ ವಿಷಯವಾಗಿ ಸಂಗತಿಗಳನ್ನು ಸಂಗ್ರಹಿಸ ಹತ್ತಿದ್ದೇನೆ. ಮುಂದಿನ ಪತ್ರದಲ್ಲಿ ವಿಸ್ತಾರವಾಗಿ ಬರೆಯುವೆನು.

ಇತಿ ತಮ್ಮ

ಫ. ಗು. ಹಳಕಟ್ಟಿ

೩೪

೭–೪–೫೨

ಶ್ರೀ ಎಸ್. ಆರ್. ಮಲ್ಲಪ್ಪನವರಿಗೆ,

ಅನೇಕ ಶ. ಶ. ಗಳು. ತಮ್ಮ ಕಾರ್ಡು ಮುಟ್ಟಿದೆ. ಕಲ್ಯಾಣದಲ್ಲಿ ಒಂದು ಧಾರ್ಮಿಕ ಕೇಂದ್ರ ಸ್ಥಾಪಿಸುವ ಬಗ್ಗೆ ವಿಚಾರ ನಡೆದಿದೆ. ಶ್ರೀ ಬಾಬಾ ಸಾಹೇಬ ವಾರದ ಇವರು ಬೇಗನೆ ಇಲ್ಲಿಗೆ ಬರುವವರಿದ್ದಾರೆ. ಈ ವಿಷಯವಾಗಿ ತಾವು ಕೊಟ್ಟ ಸಲಹೆಗಳು ಯೋಗ್ಯವಾಗಿವೆ. ನಾನು ಸ್ಥಳಾಂತರ ಮಾಡುವ ಯೋಚನೆ ಇಟ್ಟುಕೊಂಡಿಲ್ಲ. ಸೊಲ್ಲಾಪುರ, ಕಲಬುರ್ಗಿಯವರು ಇಲ್ಲಿಗೆ ಬರುವುದರಿಂದ ಸಿರಿಗೆರೆಗೆ ಬರುವುದಕ್ಕೆ ಅನುಕೂಲವಾಗುವುದಿಲ್ಲ. ದಯಮಾಡಿ ಕ್ಷಮಿಸಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೩೫

೨೦–೫–೧೯೫೨

ಶ್ರೀಯುತ ಎಸ್. ಆರ್. ಮಲ್ಲಪ್ಪನವರಿಗೆ. ತಮ್ಮ ಫ. ಗು. ಹಳಕಟ್ಟಿ ಮಾಡುವ ಅನೇಕ ಶ. ಶ. ಗಳು. ತಮ್ಮ ಪತ್ರಗಳು ಬಂದಿವೆ. ಆದರೆ, ಹೋದ ೧೫-೨೦ ದಿವಸಗಳಲ್ಲಿ ನಾನು ವಿಜಾಪುರದಲ್ಲಿ ಇರಲಿಲ್ಲ. ನಾನು ಬಸವಜಯಂತಿಗೆ ಕಲ್ಯಾಣದಲ್ಲಿದ್ದು ಅಲ್ಲಿಂದ ತಿರುಗಿ ಬಂದ ಬಳಿಕ ಸ[illegible] ಎಂಬ ಗ್ರಾಮದಲ್ಲಿ ನಡೆದ ಉತ್ಸವಕ್ಕೆ ಬಂದಿದ್ದೆನು. ಆದ್ದರಿಂದ ತಮ್ಮ ಮಹತ್ವದ ಪತ್ರಗಳಿಗೆ ಉತ್ತರ ಕೊಡಲು ಆಗಲಿಲ್ಲ. ಕ್ಷಮಿಸಬೇಕು.

ಇನ್ನು ಮೇಲೆ ನಾನು ನನ್ನ ಮೊದಲಿನ ಕಾರ್ಯಕ್ರಮಗಳಲ್ಲಿ ಬದಲಾವಣೆ ಮಾಡಬೇಕೆಂದಿದ್ದೇನೆ. ಈವರೆಗೆ ನಾನು ಪ್ರಚಾರ ಕಾರ್ಯದಲ್ಲಿ ತೊಡಗಿರಲಿಲ್ಲ. ಈ ಕಾರ್ಯವನ್ನು ಕೈಕೊಳ್ಳಬೇಕೆಂದಿದ್ದೇನೆ. ಇದು ಇನ್ನುಮೇಲೆ ಬಹು ಅವಶ್ಯವಾದುದು. ತಾವು ನಿಮ್ಮಲ್ಲಿ ಮುಂದೆ ನಡೆಯಲಿರುವ ಸಮ್ಮೇಳನಕ್ಕೆ ನಿಮಂತ್ರಣ ಕೊಟ್ಟಿರುವಿರಿ. ಆಗ ನಾನು ನಿಮ್ಮಲ್ಲಿ ನಿಶ್ಚಯವಾಗಿ ಬರುವೆನು. ನಾನು ಅಲ್ಲಿಗೆ ಬಂದ ಬಳಿಕ ಸಮಾಜದಲ್ಲಿ ಯಾವ ಬಗೆಯ ಸಂಘಟನೆ ಮಾಡಬೇಕೆಂಬುದನ್ನು ಗೊತ್ತುಪಡಿಸುವದೇ ಮುಖ್ಯಕಾರ್ಯವನ್ನಾಗಿ ಇಟ್ಟುಕೊಳ್ಳುವದು. ಈ ಕಾಲದಲ್ಲಿ ಇದು ಅವಶ್ಯವೆಂದು ತೋರುತ್ತದೆ. ನಾನು ಹೋದಲ್ಲೆಲ್ಲ ಇದೇ ವಿಷಯವನ್ನು ಚರ್ಚಿಸಬೇಕೆಂದಿದ್ದೇನೆ.

ನಾನು ಕಲ್ಯಾಣಕ್ಕೆ ಹೋದ ಕಾಲದಲ್ಲಿ ಅಲ್ಲಿ ಒಂದು ಶಿವಾನುಭವ ಆಶ್ರಮವನ್ನು ಸ್ಥಾಪಿಸಬೇಕೆಂದು ಗೊತ್ತಾಗಿರುತ್ತದೆ. ಅಲ್ಲಿಯವರೆಗೆ ೩೦-೪೦ ಸಹಸ್ರ ರೂಪಾಯಿಗಳನ್ನು ಶೇಖರಿಸಲು ಸೂಚನೆ ಕೊಟ್ಟಿದ್ದೇನೆ. ಅದಕ್ಕೆ ಅವರು ಒಪ್ಪಿರುವರು. ಆಶ್ರಮದ ಸ್ಥಾಪನೆಯು ಅವರ ಈ ಪ್ರಯತ್ನದ ಮೇಲೆ ಅವಲಂಬಿಸಿರುತ್ತದೆ. ಆ ಭಾಗದಲ್ಲಿ ವೀರಶೈವರಲ್ಲಿ ಅಂತಸ್ಥ ಕಲಹಗಳು ಬಹಳ ಕಡಿಮೆ ಇವೆ. ಬಸವೇಶ್ವರನ ವಿಷಯವಾಗಿ ಬಹು ಭಕ್ತಿಭಾವವುಳ್ಳವರು ಇದ್ದಾರೆ. ಅಲ್ಲಿ ಪ್ರಯತ್ನ ಮಾಡಿದಲ್ಲಿ ಹಣ ಕೂಡುವದೆಂದು ತೋರುತ್ತದೆ.

ನನಗೆ ಈಚೆಗೆ ಅನೇಕ ತರದ ಮಾನಸಿಕ ಶಾರೀರಿಕ ಕ್ಲೇಶಗಳು ಉಂಟಾದ್ದರಿಂದ ನನ್ನಿಂದ ಹೆಚ್ಚಿನ ಕಾರ್ಯಗಳಾಗಲಿಲ್ಲ. ಈಚೆಗೆ ಅವು ಸರಿಪಡುವುದರಲ್ಲಿ ಇವೆ. ನನ್ನ ಪ್ರೆಸ್ಸಿನ ಕಾರ್ಯಗಳಲ್ಲಿ ಸಹ ಮನಸ್ಸು ಇರಲಿಲ್ಲ.

ಶಿವಾನುಭವ ತಿಳಿಸುವಲ್ಲಿ ಆದ ಅಕ್ರಮಗಳನ್ನು ತೀವ್ರ ದೂರಮಾಡುವೆನು. ಹೊಸ ಚಂದಾದಾರರ ಲೀಸ್ಟು ತಯಾರು ಮಾಡಬೇಕಾಗಿದೆ. ಅದರಲ್ಲಿ ಈಗ ತೊಡಗಿರುವೆನು. ಆಮೇಲೆ ಸಂಚಿಕೆ ಕಳಿಸುವಲ್ಲಿ ತಪ್ಪಾಗಲಾರದು.

ತಮ್ಮಲ್ಲಿ ರಾಜಕೀಯ ಹೊಸ ವಾತಾವರಣದ ವಿಷಯವಾಗಿ ನನಗೆ ಬರೆಯಬೇಕು. ಹೊಸ ಮಂತ್ರಿ ಮಂಡಳ ಹೇಗೆ ಇದೆ ತಿಳಿಸಬೇಕು.

ತಮ್ಮ ಪತ್ರಗಳಿಗೆ ಉತ್ತರ ಬರೆಯಲು ಆಗದಿದ್ದಕ್ಕೆ ಕ್ಷಮಿಸಬೇಕು. ತಾವು ಬೇರೆ ಗ್ರಂಥಗಳನ್ನು ಕಳಿಸಲು ಬರೆದಿರುವಿರಿ. ಕಳಿಸುವೆನು.

ತಾವು ಬೇಲೂರು ಸಾಹಿತ್ಯ ಪರಿಷತ್ತಿಗೆ ಹೋಗಿರಬಹುದು. ಅದರ ವಿಷಯವಾಗಿ ತಮ್ಮ ಅಭಿಪ್ರಾಯವೇನೆಂಬುದನ್ನು ತಿಳಿಸಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೩೬

೧೪-೩-೫೩

ಶ್ರೀ ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ. ಶ. ತಮ್ಮ ಪತ್ರ ಬಂದಿದೆ. ತಾವು ಉಲ್ಲೇಖಿಸಿರುವ ಹರಳಯ್ಯ, ಮಧುವಯ್ಯಗಳ ವಿಷಯ ಶಿವಾನುಭವ ಪತ್ರಿಕೆಯ ೭ನೇ ಸಂಚಿಕೆ (೧೯೫೨) ಯಲ್ಲಿ ಬಂದಿದೆ. ಅವರಲ್ಲಿ ಅವರ ಚರಿತ್ರೆಗಳು ಇವೆ. ಸ್ವತಂತ್ರ ಬೇರೆ ವಿಷಯ ಕಾಣಲಿಲ್ಲ. ಈ ಸಂಚಿಕೆ ತಮ್ಮಲ್ಲಿಲ್ಲದ್ದಾದರೆ ತಿಳಿಸಬೇಕು. ಕಳಿಸಿಕೊಡುವೆನು.

ಕಲ್ಯಾಣ ಶಿವಾನುಭವಾಶ್ರಮವು ಸ್ಥಾಪಿಸಲ್ಪಡುವ ಚಿನ್ಹೆಗಳು ಇವೆ. ಅಲ್ಲಿಯವರು ನಾನು ಬರಬೇಕೆಂದು ಇಚ್ಛಿಸುತ್ತಾರೆ. ನಾನು ಅವರಿಗೆ ವಚನ ಕೊಟ್ಟಿಲ್ಲ. ಅದಕ್ಕೆ ಸದ್ಯಕ್ಕೆ ಯಾವ ಉತ್ಸಾಹವಿಲ್ಲ. ನಾನು ಹೋದರೆ ನನ್ನ ಪ್ರೆಸ್ಸಿಗೆ ಹಾನಿ ಇದೆ. ನಾನು ಬಂದರೆ ಎಲ್ಲವೂ ಬೆಳೆಯುವವೆಂದು ಅವರ ಅಭಿಪ್ರಾಯವಿದೆ.

ಇತಿ ತಮ್ಮ
ಫ. ಗು. ಹಳಕಟ್ಟಿ

೩೭

೧೯-೧-೫೪

ಶ್ರೀ ಸಿದ್ದಮ್ಮ ಇವರಿಗೆ ತಮ್ಮ ಫ. ಗು. ಹಳಕಟ್ಟಿ ಮಾಡುವ ಶ.ಶ. ತಮ್ಮ ೧೧-೧-೫೪ನೇ ತಾರೀಖಿನ ಪತ್ರವು ಮುಟ್ಟಿತು. ಅದನ್ನು ನೋಡಿ ಮನಸ್ಸಿಗೆ ಅತ್ಯಾನಂದವಾಯಿತು. ತಾವು ನನಗೆ ಅನೇಕ ಪತ್ರಗಳನ್ನು ಬರೆದಿರುವಿರಿ. ಆದರೆ ನನ್ನ ಮನಸ್ಸು ಅನೇಕ ಕಾರಣಗಳ ಮೂಲಕ ವ್ಯಗ್ರವಿದ್ದದರಿಂದ ಉತ್ತರ ಬರೆಯುವಷ್ಟು ಸ್ವಸ್ಥವಾಗಿರಲಿಲ್ಲ. ಉತ್ತರ ಬರೆಯದ್ದಕ್ಕೆ ತಾವು ನನ್ನ ಮೇಲೆ ಕ್ರುದ್ಧರಾಗಿರಬಹುದೆಂದು ಎನಿಸಿತ್ತು. ಆದರೆ ತಮ್ಮ ೧೧ನೇ ತಾರೀಖಿನ ಪತ್ರವು ನನಗೆ ಸಮಾಧಾನವನ್ನು ಕೊಟ್ಟಿತು. ತಮ್ಮ ಪತ್ರಗಳನ್ನೆಲ್ಲ ನಾನು ಕಾದಿಟ್ಟಿದ್ದೇನೆ. ಅವುಗಳ ವಿಷಯಗಳ ಬಗ್ಗೆ ನಾನು ತಮಗೆ ಬೇಗನೆ ಪತ್ರ ...ಕುವೆನು. ತಮ್ಮ ಪತ್ರದಲ್ಲಿ ಕೆಲ ಗ್ರಂಥಗಳ ಆರ್ಡರ ಇದೆ. ಅವುಗಳಲ್ಲಿ ೩೦ ಪುಸ್ತಕಗಳನ್ನು ಕಳಿಸಿದ್ದಾರೆ. ವಿ. ಪಿ. ಚಾರ್ಜ ಸಹಿತ ೪೫-೧೩-೦ ಆಗುತ್ತದೆ. ಅದರಲ್ಲಿ ತಪ್ಪುಗಳಾಗಿದ್ದರೆ ನನಗೆ ತಿಳಿಸಬೇಕು. ಅವುಗಳನ್ನು ...ಪ್ಲಿಕ್ಕೆ ಆಫೀಸಿನವರಿಗೆ ತಿಳಿಸುವೆನು. ನನಗೆ ಯೋಗ್ಯ ಕಾರಕೂನರು ದೊರೆತಿಲ್ಲ. ತೊಂದರೆಯಾಗುತ್ತದೆ. ಮೊದಲಿನಂತೆ ಪತ್ರಗಳನ್ನು ಹಾಕುತ್ತಿರಬೇಕು.

ಇತಿ ತಮ್ಮ
ಫ. ಗು. ಹಳಕಟ್ಟಿ

೩೮

೧೮-೩-೫೫

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ ಶ.ಶ. ತಮ್ಮ ಪತ್ರ ಕೈಸೇರಿತು. ಬಸವೇಶ್ವರನ ಚರಿತ್ರೆಯನ್ನು ಅಮರಗಣಾಧೀಶ್ವರರ ಗ್ರಂಥದಲ್ಲಿ ನಾನು ಬುದ್ಧಿಪುರಸ್ಸರವಾಗಿ ಬರೆದಿಲ್ಲ. ಬಸವರಾಜನೆಂದು ಗಣಾಧೀಶ್ವರರ ಪಟ್ಟಿಯಲ್ಲಿ ಮಾತ್ರ ಸೇರಿಸಿದ್ದೇನೆ. ಅವನ ಪ್ರಚಲಿತ ಚರಿತ್ರೆಯಲ್ಲಿ ನಾನು ಒಪ್ಪದಂಥ ವಿಷಯಗಳು ಅನೇಕವಿರುವುದರಿಂದ ನಾನು ಅದನ್ನು ಬರೆದಿಲ್ಲ. ನಾನು ತೀವ್ರವಾಗಿ ಶಿವಾನುಭವದಲ್ಲಿ ಅದನ್ನು ಕೊಡುತ್ತ ಹೋಗುವೆನು, ಬೇಕಾದವರು ಅದರಲ್ಲಿ ಈ ಕುರಿತು ಟೀಕೆ ಮಾಡಬಹುದು. ಈಗ ಬರೆದ ಗ್ರಂಥವು ಕೆಲವೊಂದು ಸಂಸ್ಥೆಯ ಪರವಾಗಿ ಬರೆದಿದೆ. ಆದ್ದರಿಂದ ಬಸವನ ಚರಿತ್ರೆಯನ್ನು ಅದರಲ್ಲಿ ಸೇರಿಸಿಲ್ಲ. ಅನೇಕ ಸಿನೇಮಾದವರು, ಇತರರು ಅವನ ಚರಿತ್ರೆ ಬರೆಯಲು ತಿಳಿಸಿದರೂ ನಾನು ಬರೆದಿಲ್ಲ.

ಇತಿ ತಮ್ಮ
ಫ. ಗು. ಹಳಕಟ್ಟಿ

೩೯

೫-೧೨-೫೫

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ತಮ್ಮ ಫ. ಗು. ಹಳಕಟ್ಟಿ ಇವರು ಮಾಡುವ ಶ.ಶ. ತಮ್ಮ ೩೦-೧೧-೫೫ನೇ ತಾರೀಖಿನ ಪತ್ರ ಮುಟ್ಟಿದೆ. ತಾವು ತಿಳಿಸಿದ ವಿಷಯಗಳಗೋಸ್ಕರ ಆಭಾರಿಯಾಗಿದ್ದೇನೆ.

ಶಿವಾನುಭವ ಪತ್ರಿಕೆಯ ಮೇಲಿನ ಚಿತ್ರವನ್ನು ಹಾಕುವದರಲ್ಲಿ ನಮ್ಮ ಉದ್ದೇಶವಾವದೂ ಇಲ್ಲ. ಅಲ್ಲಿ ಬರಿ ಸ್ಥಳವು ಉಳಿಯುವದೆಂಬುದನ್ನು ನೋಡಿ ನನ್ನ ಮ್ಯಾನೇಜರರು ಒಂದು ಚಿಕ್ಕ ಚಿತ್ರವನ್ನು ಹಾಕಿದರಷ್ಟೆ ಸರಿ. ಮುಂದಿನ ಸಂಚಿಕೆಯಲ್ಲಿ ಅದನ್ನು ತೆಗೆದುಹಾಕಲು ತಿಳಿಸಿದ್ದೇನೆ.

ನನ್ನ ಆರೋಗ್ಯವು ಮೊದಲಿನಂತೆ ಇರುವುದಿಲ್ಲ. ಬಹಳ ಜಾಗರೂಕವಾಗಿರುವದು ಅಶಕ್ಯವಾಗಿದೆ.

ಶಿವಾನುಭವದಲ್ಲಿ ನಾನು ಆರಂಭದಿಂದಲೂ ಇತಿಹಾಸ, ಚರಿತ್ರೆ, ವಾಙ್ಮಯ ಈ ದೃಷ್ಟಿಯಿಂದ ಬರೆದ ಲೇಖನಗಳಿಗೆ ಇಂಬುಗೊಡುತ್ತಿದ್ದೆನು. ಇತರರೂ ಇವುಗಳಿಗೆ ಮುಖ್ಯಸ್ಥಾನ ಕೊಡುತ್ತ ಬಂದರು. ಆದರೆ ಈಚೆಗೆ ಇಂಥ ವಿಷಯಗಳನ್ನು ಸಂಶೋಧಿಸಿ ಲೇಖನಗಳನ್ನು ಬರೆಯುವ ಜನರು ವಿರಳವಾಗ ಹತ್ತಿರುವರು. ಮಧ್ಯದಲ್ಲಿ 'ಶಿವಾನುಭವ ಶಬ್ದಕೋಶ' ಇಂಥ ತಾತ್ವಿಕ ವಿಷಯಗಳಿಗೆ ಮುಖ್ಯಸ್ಥಾನ ಕೊಡಹತ್ತಿದೆನು. ಬೇರೆ ಮಹನೀಯರೂ ಇವುಗಳಿಗೆ ಮುಖ್ಯಸ್ಥಾನವನ್ನು

ಕೊಡಹತ್ತಿದರು. ಆದರೆ ಜನಸಾಮಾನ್ಯರಿಗೆ ಅವು ರುಚಿಸುವುದಿಲ್ಲ. ಆದರೆ ಅವು ಮಹತ್ವದ ವಿಷಯಗಳು ಇದ್ದು ಇನ್ನೂ ಹೆಚ್ಚಿನ ಭಾಗ ಸಂಶೋಧನೆಯಾಗಬೇಕಾಗಿದೆ. ಈ ವಿಷಯಗಳ ಬಗ್ಗೆ ಹೆಚ್ಚಾಗಿ ಗ್ರಂಥಗಳಾಗಬೇಕಾಗಿದೆ. ಆದರೆ ಹಾಗೆ ವಿವೇಚಿಸು ವವರ ಸಂಖ್ಯೆ ಅತ್ಯಲ್ಪವಾಗಿದೆ.

ಇನ್ನು ತಾವು ಸೂಚಿಸಿದ ಗ್ರಂಥಗಳ ಬಗ್ಗೆ ಹೇಗೆ ಬರೆಯಬೇಕೆಂಬುದನ್ನು ಯೋಚಿಸಿ ನನಗೆ ತಿಳಿಸಬೇಕು.

(೧) ಸಾರಂಗದೇವ: ಈತನು ಮಹಾಪುರುಷ ಕ್ರಾಂತಿಕಾರನಿದ್ದಾನೆ. ಅವನ ಚರಿತ್ರೆಯನ್ನು ಸಂಶೋಧಿಸಿ ಮುದ್ರಣಗೊಳಿಸಿದೆನು; ಬಹಳ ದಿವಸಗಳ ಹಿಂದೆ. ಅದನ್ನು ನಾನು ತೆಗೆದು ಈಗ ಚೆನ್ನಾಗಿ ಓದಿನೋಡಲಾಗಿ ಅವನ ವಿಷಯ ವಾಗಿ ಪ್ರಚಾರ ಮಾಡುವ ಅವಶ್ಯವಿದೆ. ಅವನು ಶ್ರೀಶೈಲ ಪ್ರಾಂತದಿಂದ ಹಿಡಿದು ಮೈಸೂರು ಪ್ರಾಂತ, ಉತ್ತರ ಕರ್ನಾಟಕದಲ್ಲಿ ಜಾಗ್ರತಿಯನ್ನು ಮಾಡಿದ್ದಾನೆ. ಅದು ೧೨೫ ಪುಟಗಳುಳ್ಳ ಚಿಕ್ಕ ಪುಸ್ತಕವಾಗುವುದು.

(೨) ಚಿಕ್ಕಣ್ಣ: ಈತನ ಚರಿತ್ರೆ ಉದ್ಬೋಧಕವು. ಅದು ೭-೮ ಪುಟ ಗಳುಳ್ಳ ಚರಿತ್ರೆ ಇದೆ. ಅವನ ೨೦ ವಚನಗಳಿವೆ. ಅವನ ಮುದ್ರಿಕೆಯು 'ಉಳಿಯುಮೇಶ್ವರಾ' ಎಂದಿದೆ. ಒಟ್ಟು ೨೦ ಪುಟಗಳುಳ್ಳದ್ದಾಗುವುದು. ವಚನಗಳು ಸ್ವಾರಸ್ಯ ಉಳ್ಳವು ಇವೆ.

(೩) ಮಾದಾರ ಚೆನ್ನಯ್ಯ: ಇವನ ವಚನಗಳನ್ನು ನೋಡಲಾಗಿ ಒಂದೊಂದು ವಚನಕ್ಕೆ ೨-೩ ವಚನಗಳು ಬೇರೆಬೇರೆಯಾಗಿ ಇರುತ್ತವೆ. ಆದರೆ ಅವೆಲ್ಲವುಗಳಲ್ಲಿ ೧೦-೧೨ ವಚನಗಳು ಮಾತ್ರ ಸಿಕ್ಕಬಹುದು. ಅವು ಮಹತ್ವದ ವಚನಗಳು. ೨೦ ಪುಟದ ಚಿಕ್ಕ ಪುಸ್ತಕವಾಗುವುದು. ಹರಿಹರನು ಅವನ ರಗಳೆಯನ್ನು ಬರೆದಿದ್ದಾನೆ. ಸುಂದರವಾದ ರಗಳೆಯು. ಅದು ೧೩ ಪುಟದ್ದಾಗುವದು. ಹೀಗೆ ಈ ಗ್ರಂಥವು ೩೩ ಪುಟದ್ದಾಗುವದು. ರಗಳೆಯನ್ನು ಅರ್ಥಸಹಿತ ಬರೆದಲ್ಲಿ ಪುನಃ ೧೦-೧೫ ಪುಟ ಗಳಾಗುವವು. ಹೀಗೆ ಇದು ೩೩ ಪುಟವುಳ್ಳುವಾಗುವದು.

ಹೀಗೆ ಪರಿಸ್ಥಿತಿ ಇರುವುದರಿಂದ ತಾವು ಎಲ್ಲವನ್ನೂ ವಿಚಾರಮಾಡಿ ತಿಳಿಸಬೇಕು. ಇದೇ ತಿಂಗಳಿನ ಅಂತ್ಯದಲ್ಲಿ ಇವೆಲ್ಲವೂ ಸಿದ್ಧವಾಗಬೇಕೆನ್ನುವಿರಿ. ಆದರೆ ಪತ್ರ ವ್ಯವಹಾರದಲ್ಲಿ ದಿವಸಗಳು ಹೋಗುತ್ತವೆ. ನಾನೂ ಅವುಗಳ ಅರ್ಥವನ್ನು ಸಿದ್ಧ ಪಡಿಸಬೇಕಾಗುತ್ತದೆ. ಆದ್ದರಿಂದ ಈ ಅವಧಿಯಲ್ಲಿ ಈ ಗ್ರಂಥಗಳು ತಯಾರ ಆಗು ವಂತೆ ತೋರುವುದಿಲ್ಲ. ಕಾಗದಕ್ಕೆ ಆರ್ಡರ ಕೊಡಬೇಕಾಗುವದು. ದಿವಸಗಳು ಇದಕ್ಕೆ ಹಿಡಿಯುವವು. ತಾವು ಒಂದೊಂದೇ ಬೇರೆಬೇರೆ ಗ್ರಂಥ ಮಾಡಬೇಕೋ, ಎಲ್ಲವನ್ನೂ ಕೂಡಿಸಿ ಮಾಡಬೇಕೋ ತಿಳಿಸಬೇಕು. ತಮ್ಮಿಂದ ಉತ್ತರ ಬಂದಮೇಲೆ ಈ ಎಲ್ಲ ವಿಷಯಗಳಲ್ಲಿ ಯೋಚಿಸುವೆನು.

ನಾನು ಅನಸ್ವಸ್ಥತೆಯಿಂದ ಈ ಪತ್ರವನ್ನು ಬರೆದಿದ್ದೇನೆ. ತಾವು ಪತ್ರ ಹಾಕುವಾಗ ಈ ಪತ್ರದ ನಕಲನ್ನು ನನ್ನ ಸಲುವಾಗಿ ಬರೆದು ಅದರೊಡನೆ ಕಳಿಸಬೇಕೆಂದು ವಿನಂತಿ ಇದೆ. ಅವು ನನ್ನ ಸ್ಮರಣೆಯಲ್ಲಿ ಉಳಿಯಲಿಕ್ಕಿಲ್ಲ. ಇತಿ ತಮ್ಮ

ಫ. ಗು. ಹಳಕಟ್ಟಿ

ತಾ. ಕ. ಕರ್ನಾಟಕ ಏಕೀಕರಣ ವಿಷಯವು ಪೂರ್ತಿಯನ್ನು ಹೊಂದೀತು. ಮೈಸೂರು ದೇಶದಲ್ಲಿ ಈ ಕಾರ್ಯದಲ್ಲಿ ತುಂಬಾ ವಿರೋಧವು. ಇದು ನಮಗೆ ಆಶ್ಚರ್ಯವನ್ನುಂಟುಮಾಡುತ್ತಿದೆ. ನಮಗೆ ವಿರೋಧದ ಕಾರಣವು ಗೊತ್ತಾಗುವುದಿಲ್ಲ. ತಿಳಿಸಬೇಕು. ನಾವು ಮಹಾರಾಷ್ಟ್ರ ಅಥವಾ ಆಂಧ್ರದಲ್ಲಿ ಉಳಿದಿದ್ದರೆ ಪ್ರಗತಿಯೇ ನಿಂತುಹೋಗುತ್ತಿತ್ತು.

೪೦

೬–೧೨–೫೫

ಶ್ರೀ ಎಸ್. ಆರ್. ಮಲ್ಲಪ್ಪನವರಿಗೆ

ಶ. ಶ. ನಾನು ನಿನ್ನೆ ಹಾಕಿದ ಪತ್ರವು ಇಷ್ಟರಲ್ಲಿಯೇ ನಿಮಗೆ ಮುಟ್ಟಿರಬಹುದು. ಮೂರು ಗ್ರಂಥಗಳ ವಿಷಯವಾಗಿ ಹೆಚ್ಚಿಗೆ ವಿಚಾರ ಮಾಡಲಾಗಿ ನನಗೆ ತೋರಿದ ಸಂಗತಿಗಳನ್ನು ಇಲ್ಲಿ ಬರೆದಿದ್ದೇನೆ.

(೧) ಸದರೀ ಮೂರು ಗ್ರಂಥಗಳನ್ನು ಬೇರೆ ಬೇರೆಯಾಗಿ ಮುದ್ರಿಸುವುದು ವಿಹಿತವೆಂದು ತೋರುತ್ತದೆ. ಅವುಗಳಲ್ಲಿ ಪರಸ್ಪರ ಸಂಬಂಧವೇನೂ ಇರುವುದಿಲ್ಲ.

(೨) ಇವು ಚಿಕ್ಕಗ್ರಂಥಗಳಾಗಿದ್ದರಿಂದ ಅಲ್ಪ ಬೆಲೆಯಲ್ಲಿ ಅವುಗಳ ಮಾರಾಟ ಮಾಡಲು ಶಕ್ಯವಾಗುತ್ತದೆ.

(೩) ತಾವು ಆರಿಸಿದ ಗ್ರಂಥಗಳು ಚೆನ್ನಾಗಿರುತ್ತವೆ.

(೪) ಕಾಗದ ಮತ್ತು ಕವರಿನ ಕಾಗದ ಹೆಚ್ಚಿನ ತರದವು ಇರತಕ್ಕದ್ದು, ಸಾಯಜಲ್ಲಿ ಕ್ರೌನ್ ಇರಬಹುದು—ಈ ವಿಷಯಗಳನ್ನು ಕುರಿತು ವಿಚಾರಮಾಡಿ ತಿಳಿಸಬೇಕು. ಇತಿ ತಮ್ಮ

ಫ. ಗು. ಹಳಕಟ್ಟಿ

ತಾ. ಕ. ಹಣದ ವ್ಯವಸ್ಥೆ ಆದರೆ ತೀವ್ರ ಮುಗಿಸುವೆನು.

೪೧

೪–೧–೫೬

ಶ್ರೀಯುತ ಎಸ್. ಆರ್. ಮಲ್ಲಪ್ಪನವರಿಗೆ. ಮಹನೀಯರೇ, ಇನ್ನು ಮೇಲೆ ತೀವ್ರವಾಗಿ ಏಕೀಕರಣವು ಸಾಧ್ಯವಾಗುವ ಚಿಹ್ನೆಗಳು ತೋರುತ್ತಲಿವೆ. ಇದರೊಡನೆ ವೀರಶೈವರೆಲ್ಲರೂ ಸುಸಂಘಟಿತರಾಗುವ ಅವಶ್ಯಕತೆ ಬಹಳ ಇದೆ. ಮುಖ್ಯವಾಗಿ ವಿಶಾಲಭಾವನೆಯುಳ್ಳವರು (ಅಂದರೆ ಶಿವಶರಣರ ತತ್ವಗಳನ್ನು ಒಪ್ಪಿಕೊಳ್ಳುವವರು ಸುಸಂಘಟಿತರಾಗಬೇಕು. ನಿಮ್ಮ ಪ್ರಾಂತದವರೊಬ್ಬರು 'ವೀರಶೈವವು ಎತ್ತ ಸಾಗಿದೆ'

ಎಂಬ ಹೆಸರಿನ ಚಿಕ್ಕ ಹೊತ್ತಿಗೆಯನ್ನು ನನ್ನ ಕಡೆಗೆ ಕಳಿಸಿದ್ದರು. ಅದರೊಳಗಿನ ವಿವರಣೆಗಳು ನಿಜವಿದ್ದರೆ ಅವು ಉದಾರಮತವಾದಿಗಳನ್ನು ಎಚ್ಚರಪಡಿಸತಕ್ಕದ್ದು. ತಾವು ಕೆಲವು ಚಿಕ್ಕ ಪುಸ್ತಕಗಳನ್ನು ಹೊರಡಿಸುವ ಬಗ್ಗೆ ಕೆಲವು ಸೂಚನೆಗಳನ್ನು ಮಾಡಿದ್ದೀರಿ. ಅವು ಮಹತ್ವದವು. ತಮ್ಮ ಆಲೋಚನೆಗಳ ಹೆಚ್ಚಿನ ವಿವರಣೆಗಳನ್ನು ನನಗೆ ತಿಳಿಸಬೇಕು. ಶ್ರೀ ದುರ್ಗದವರು ಮತ್ತು ಸರ್ಪಭೂಷಣ ಮಠದವರು ಶಿವಾನುಭವ ಸಮ್ಮೇಲನ ಕರೆಯುವ ವಿಷಯವಾಗಿ ಪ್ರಕಟಿಸಿದ್ದರು. ಅದರ ವಿವರಗಳನ್ನು ತಿಳಿಸಬೇಕು. ನಾನು ಸದರಿಯವರಿಗೆ ಪ್ರಭುದೇವರ ವಚನ, ನಿರಂಜನ ವಂಶರತ್ನಾಕರ, ‘ಶೂನ್ಯಸಂಪಾದನೆ’ ಪ್ರಕಟಿಸುವಲ್ಲಿ ನನಗೆ ಸಹಾಯಮಾಡಲು ತಿಳಿಸಿದ್ದೆ. ಅವರಿಂದ ಆವ ಪತ್ರವಿಲ್ಲ. ಇತಿ ತಮ್ಮ

ಫ. ಗು. ಹಳಕಟ್ಟಿ

ತಾವುಗಳು ಶ್ರೀ ಜಗದ್ಗುರುಗಳು ತರಳಬಾಳು ಇವರಿಗೆ ಬರೆಯುವೆನೆಂದು ತಿಳಿಸಿದ್ದಿರಿ. ಆ ವಿವರ ತಿಳಿಸಬೇಕು.

೪೨

೨೪-೨-೩೬

ಶ್ರೀ ಶರಣ ಎಸ್. ಆರ್. ಮಲ್ಲಪ್ಪನವರಿಗೆ ತಮ್ಮ ಫ. ಗು. ಹಳಕಟ್ಟಿ ಮಾಡುವ ಅನೇಕ ಶ. ಶ. ತಾವು ೩೦ನೇ ತಾರೀಖಿನ ದಿವಸ ಸಿರಿಗೆರೆಯಿಂದ ಬರೆದ ಪತ್ರವು ಮುಟ್ಟಿತು. ಅದರಲ್ಲಿ ಶ್ರೀ ಜಗದ್ಗುರುಗಳು ದಯಪಾಲಿಸಿದ ಉದಾರ ದೇಣಿಗೆಯನ್ನು ಕುರಿತು ಬರೆದಿರುವಿರಿ. ಅದಕ್ಕೋಸ್ಕರ ನಾನು ಮಹಾಸ್ವಾಮಿಗಳವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಪುಸ್ತಕ ಪ್ರಿಂಟಿನ ಕಾರ್ಯವನ್ನು ಕೂಡಲೆ ಕೈಕೊಳ್ಳುವೆನು. ತಾವು ಮರುಳುಸಿದ್ಧರ ಚರಿತ್ರೆಯನ್ನು ಬರೆಯಿಸಿರುವರೆಂದು ತಿಳಿಸಿರುವಿರಿ. ಅದು ನನಗೆ ಬಹಳ ಸಹಾಯವಾಗುವುದು, ಅದನ್ನು ಶೀಘ್ರ ಕಳಿಸಬೇಕು. ತಾವು ಕಳಿಸಲಿರುವ ಸಹಾಯಧನದಿಂದ ಒಂದು ವೀರಶೈವ ಸಂಶೋಧನಾಲಯವನ್ನು ಸ್ಥಾಪಿಸುವೆನು. ಈ ಕಾರ್ಯವನ್ನು ಮುಂದುವರಿಸಲಿಕ್ಕೆ ಈ ಹಣವು ಸಹಾಯವಾಗುವುದು. ಹಣವನ್ನು ಕಳಿಸಿದ ಕೂಡಲೆ ನನಗೆ ಪತ್ರ ಹಾಕಿದಲ್ಲಿ ನಾನು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸುವೆನು. ಈ ಕಾರ್ಯದಲ್ಲಿ ತಾವು ಮಾಡಿದ ಸಹಾಯಕ್ಕೋಸ್ಕರ ನಾನು ಕೃತಜ್ಞನಾಗಿದ್ದೇನೆ. ಇತಿ ತಮ್ಮ

ಫ. ಗು. ಹಳಕಟ್ಟಿ

೪೩

೨-೩-೩೬

ಶ್ರೀಯುತ ಶರಣರಾದ ಎಸ್. ಆರ್. ಮಲ್ಲಪ್ಪನವರಿಗೆ

ತಾವು ಸಿರಿಗೆರೆಯಿಂದ ಬರೆದ ಪತ್ರ ಮುಟ್ಟಿರುತ್ತದೆ. ಅದಕ್ಕೋಸ್ಕರ ನಾನು ತಮಗೆ ಬಹಳ ಆಭಾರಿಯಾಗಿದ್ದೇನೆ. ನಾನು ಈಗ ಮೊದಲು ವಿವರಿಸಿದಂತೆ ಗ್ರಂಥ

ರಚನೆಯಲ್ಲಿ ತೊಡಗಿರುವೆನು. ಈ ತಿಂಗಳು ಹೊರಡುವ ಪತ್ರಿಕೆಯಲ್ಲಿ ದಾಸಿಮಯ್ಯನ ವಚನಗಳನ್ನು ಪ್ರಾರಂಭಿಸುವೆನು. ಅವನು ಅಹಿಂಸೆಯ ಪುರಸ್ಕರ್ತನು. ಇವರ ವಿಚಾರಗಳನ್ನು ಹೇಳುವ ಇನ್ನೂ ಅನೇಕ ಶಿವಶರಣರ ಉಕ್ತಿಗಳನ್ನು ವಿವರಿಸುವೆನು.

ಮುಂದಿನ ತಿಂಗಳು ಸಾರಂಗದೇವನ ಚರಿತ್ರೆಯನ್ನು ಪ್ರಾರಂಭಿಸಬೇಕೆಂದಿದ್ದೇನೆ. ಇದರಲ್ಲಿ ತಮ್ಮ ಸಲಹೆಗಳು ಬಹಳ ಅವಶ್ಯವಾದವುಗಳು. ಈ ಚರಿತ್ರೆಯನ್ನು ನಾನೇ ಬರೆದು ಕಳಿಸಿದರೆ ಬಹಳ ಅನುಕೂಲವಾಗುವುದು. ಅದನ್ನು ಶ್ರೀ ತರಳುಬಾಳು ಜಗದ್ಗುರುಗಳವರಿಗೆ ತೋರಿಸಿ ನನ್ನ ಕಡೆಗೆ ಕಳಿಸಬೇಕೆಂದು ನನ್ನ ಸೂಚನೆ ಇದೆ.

ನನಗೆ ಸಮರ್ಪಣ ಮಾಡುವ ನಿಧಿಯ ವಿಷಯ ಮೊದಲು ನನಗೇನೂ ಗೊತ್ತಿರಲಿಲ್ಲ. ಶ್ರೀ ಮೃತ್ಯುಂಜಯ ಸ್ವಾಮಿಗಳು ಮತ್ತು ಅಪ್ರತ್ಯಕ್ಷವಾಗಿ ಈಗ ಇಲ್ಲಿರುವ ಮಲ್ಲಿಕಾರ್ಜುನ ಸ್ವಾಮಿಗಳು (ಇವರು ಗದಗಿನವರು) ಪ್ರಾರಂಭಿಸಿದವರು. ನಾನು ಮೊನ್ನಿನ ದಿವಸ ಇವರ ಸೆಕ್ರೆಟರಿಗಳನ್ನ (ಶ್ರೀ ಚಿತ್ತರಗಿ) ಇಲ್ಲಿಗೆ ಬರಮಾಡಿಕೊಂಡಿದ್ದೆನು. ಈ ವಿಷಯವನ್ನು ಕುರಿತು ವಿಚಾರ ಮಾಡಿದೆವು. ನಾನು ಶಿವಶರಣರ ತತ್ವಗಳ ಸಂಶೋಧನದ ಸಲುವಾಗಿಯೇ ನಿಧಿ ಉಪಯೋಗ ಮಾಡುವೆನೆಂದು ತಿಳಿಸಿದೆನು. ಸಂಶೋಧನದ ಅನೇಕ ಸ್ಥಿತಿಯಲ್ಲಿರುವ ನನ್ನ ಬರಹಗಳ ವಿಷಯವನ್ನು ಅವರಿಗೆ ನಿವೇದನ ಮಾಡಬೇಕಾಯಿತು. ಸೆಕ್ರೆಟರಿಗಳಾದ ಶ್ರೀ ಚಿತ್ತರಗಿ ಇವರು ಈ ಕಾರ್ಯಕ್ಕೋಸ್ಕರ ತಾವು ಸತತವಾಗಿ ದುಡಿಯುವ ತಮ್ಮ ಸಂಕೇತವನ್ನು ತಿಳಿಸಿದರು. ಅದರಂತೆಯೇ ತೆಗ್ಗಿಹಳ್ಳಿಯ ಸ್ವಾಮಿಗಳೂ ಪ್ರಯತ್ನಿಸುವರು. ಹೀಗೆ ಒಂದೇ ಸಮನೆ ಪ್ರಯತ್ನಿಸುವವರು ಇಲ್ಲದೆ ಇಂಥ ಕಾರ್ಯಗಳು ಆಗಲಾರವು. ಶ್ರೀ ಚಿತ್ತರಗಿಯವರು ತಮ್ಮ ಪ್ರಯತ್ನಗಳ ವಿಷಯವಾಗಿ ಆಗಿಂದಾಗ್ಗೆ ಪ್ರಕಟಿಸುತ್ತ ಹೋಗುವರು. ನಿಧಿಯು ಕೂಡಿದಲ್ಲಿ ಶಿವಾನುಭವ ಪತ್ರಿಕೆಯ ದ್ವಾರಾ ಮಾತ್ರವಲ್ಲದೆ ಸ್ವತಂತ್ರ ಗ್ರಂಥಗಳನ್ನು ಮುದ್ರಿಸುವೆನು.

ಶ್ರೀ ಜಗದ್ಗುರು ತರಳುಬಾಳು ಮಹಾಸ್ವಾಮಿಗಳವರಿಗೆ ಈ ಎಲ್ಲ ವಿಷಯ ತಿಳಿಸಬೇಕು. ನಾನೂ ಅವರಿಗೆ ಬೇಗನೆ ಪತ್ರ ಹಾಕುವೆನು. ತಮ್ಮ ಕಡೆಯ ವರ್ತಮಾನವನ್ನು ತಿಳಿಸುತ್ತಿರಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೪೪

೧೦-೩-೫೬

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ. ಅನೇಕ ನಮಸ್ಕಾರಗಳು. ನಾನು ಜಗದ್ಗುರುಗಳಿಗೆ ಸಿರಿಗೆರೆಗೆ ಪತ್ರ ಹಾಕಿದ್ದೆನು. ಅದು ಸಮೋಪಚಾರದ ಪತ್ರವಾಗಿದ್ದಿತು. ಅವರಿಂದ ಯಾವ ಉತ್ತರವೂ ಬರಲಿಲ್ಲ. ಗ್ರಂಥರಚನೆಯ ಕಾರ್ಯದ ಸಲುವಾಗಿ ತಾವು ಪತ್ರ ಹಾಕಿರುವಿರಿ. ಅದರ ಸಮಾಚಾರವನ್ನು ತಿಳಿಸಬೇಕು.

ಮರುಳುಸಿದ್ಧರ ಚರಿತ್ರೆಯನ್ನೂ ಕೂಡ ಬರೆದು ಕಳಸಿರಿ. ಅವರ ವಿಷಯವಾಗಿ ತಮಗೆ ಹೆಚ್ಚಿಗೆ ಗೊತ್ತಿದ್ದ ಹಾಗೆ ತೋರುತ್ತದೆ. ತಾವು "ಶಿವ" ಈ ಚಿನ್ಹ ಕ್ಕೋಸ್ಕರ ಸತತವಾಗಿ ಪ್ರಯತ್ನಿಸುತ್ತಿರುವಿರಿ. ತಮ್ಮ ಪ್ರಯತ್ನ ನೋಡಿ ಆನಂದ ವಾಗುತ್ತದೆ.

ಇತಿ ತಮ್ಮ

ಫ. ಗು. ಹಳಕಟ್ಟಿ

ತಮ್ಮ ಊರವರಾದ ಶ್ರೀ ಕೆ. ಹೆಚ್. ವಿರೂಪಾಕ್ಷಶಾಸ್ತ್ರಿಗಳು ನನ್ನ ಬ್ಲಾಕು ವಿಜಾಪುರಕ್ಕೆ ಅವರು ಬಂದಾಗ ಒಯ್ದಿದ್ದಾರೆ. ಅದನ್ನು ನನಗೆ ತಿರುಗಿ ಕಳಿಸಿಕೊಟ್ಟಿರು ವುದಿಲ್ಲ. ಕಳಿಸಲು ತಿಳಿಸಬೇಕೆಂದು ನನ್ನ ವಿನಂತಿ ಇದೆ. ಅವರಿಗೆ ಪತ್ರ ಬರೆದಿದ್ದೇನೆ.

೪೫

೨೮–೪–೫೬

ಮ. ರಾ. ರಾ. ಶ್ರೀ ಸಿರುಮ ಇವರಿಗೆ.

ತಮ್ಮ ಫ. ಗು. ಹಳಕಟ್ಟಿ ಮಾಡುವ ಶ. ಶ. ಆಗಸ್ಟ ತಿಂಗಳ ಶಿವಾನುಭವ ಪತ್ರಿಕೆಯು ತಮಗೆ ಮುಟ್ಟಿರಬಹುದು. ಮುಂದಿನ ತಿಂಗಳ ಪತ್ರಿಕೆಯನ್ನು ೪-೫ ದಿವಸಗಳಲ್ಲಿ ಪ್ರಾರಂಭಿಸಬೇಕಾಗಿದೆ. ಆದ್ದರಿಂದ ನಿಮ್ಮ ಮಿತ್ರರು ಬರೆಯುತ್ತಿರುವ ಬಸವಣ್ಣನ ಲೇಖನಗಳಲ್ಲಿ ಒಂದನ್ನು ಮುಂದಿನ ತಿಂಗಳಲ್ಲಿ ಈ ಪತ್ರ ಮುಟ್ಟಿದ ಕೂಡಲೆ ನನಗೆ ಕಳಿಸಲಿಕ್ಕೆ ಅವರಿಗೆ ತಿಳಿಸಬೇಕೆಂದು ವಿನಂತಿ ಇದೆ. ನಿಮ್ಮ ಮಿತ್ರರ ಪೂರ್ಣ ಹೆಸರು ಪತ್ತೆ ತಿಳಿಸಬೇಕೆಂದು ನನ್ನ ವಿನಂತಿ ಇದೆ.

ಮೈಸೂರಿನ ರಾಜಕೀಯ ಚಟುವಟಿಕೆಗಳು ನಮಗೆ ಏನೂ ತಿಳಿಯದಾಗಿದೆ. ಈ ವಿಷಯ ಶಕ್ಯವಾದಷ್ಟುಮಟ್ಟಿಗೆ ತಿಳಿಸಬೇಕೆಂದು ನನ್ನ ವಿನಂತಿ ಇದೆ. ಮುಖ್ಯ ವಿಷಯಗಳನ್ನು ತಿಳಿಸಬೇಕೆಂದು ವಿನಂತಿ. ನಿಮ್ಮ ಪ್ರಾಂತದಲ್ಲಿ ಶಿವಶರಣರ ವಿಚಾರ ಗಳಿಗೆ ಮಹತ್ವವಿಲ್ಲೆಂದು ತೋರುತ್ತದೆ. ಈ ವಿಷಯದ ಬಗ್ಗೆ ಯಾವ ಚಳುವಳಿಯೂ ಕಾಣುವುದಿಲ್ಲ. ನಿಜಸ್ಥಿತಿಯನ್ನು ತಿಳಿಸಬೇಕು.

ಇತಿ ತಮ್ಮ

ಫ. ಗು. ಹಳಕಟ್ಟಿ

೪೬

೮–೫–೫೬

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ

ಶ. ಶ. ಈಚೆಗೆ ತಮ್ಮಿಂದ ಪತ್ರಗಳಿಲ್ಲ. ಪತ್ರ ಬರೆಯುತ್ತಿರಬೇಕು. ತಮ್ಮ ಸೂಚನೆಗಳನ್ನು ತಿಳಿಸುತ್ತಿರಬೇಕು. ಈ ತಿಂಗಳು ಪ್ರೆಸ್ಸಿನ ಇತರ ಕೆಲಸಗಳ ಮೂಲಕ ಗ್ರಂಥಗಳನ್ನು ಸ್ವತಂತ್ರವಾಗಿ ಮುದ್ರಣಗೊಳಿಸಲು ಸಾಧ್ಯವಿಲ್ಲ. ಮುಂದೆ ಚಿಕ್ಕಯ್ಯನ ಚರಿತ್ರೆ ಮತ್ತು ವಚನ ಮತ್ತು ಮಾದಾರ ಚೆನ್ನಯ್ಯನ ವಚನ ಮತ್ತು ಚರಿತ್ರೆ ಪ್ರಸಿದ್ಧಿಸುವೆನು. ತಮ್ಮ ಸೂಚನೆಗಳನ್ನು ಕಳಿಸಬೇಕು. ಶ್ರೀ ಜಗದ್ಗುರು

ಗಳಿಂದ ಪತ್ರ ಬಂದಿತ್ತು ಮತ್ತು ಅವರು ನಿಧಿಯ ಬಗ್ಗೆ ಬರೆದಿದ್ದಾರೆ. ತಾವೂ ಬರೆದಿದ್ದೀರಿ. ಈ ವಿಷಯವಾಗಿ ತಾವು ನನಗೆ ತಿಳಿಸಬೇಕು. ಹಣ ಕಳಿಸಿವಲ್ಲಿ ಇತರರಿಗೂ ಅದು ಮಾರ್ಗದರ್ಶಿಯಾಗುವುದು. ವಾಙ್ಮಯಸಂಶೋಧನೆ ಮತ್ತು ವಾಙ್ಮಯಪ್ರಕಟನೆ ಇವುಗಳ ಸಲುವಾಗಿ ನಾನು ಅದನ್ನು ಉಪಯೋಗಿಸುತ್ತೇನೆ.

ತಮ್ಮಿಂದ ಪತ್ರವನ್ನು ನಿರೀಕ್ಷಿಸುತ್ತಿದ್ದೇನೆ. ಇತಿ

ಫ. ಗು. ಹಳಕಟ್ಟಿ

೪೭

೧೬–೬–೫೬

ಶ್ರೀ ಸಿರುಮ ಇವರಿಗೆ—

ಮಹನೀಯರೇ, ಶ್ರೀ ಬಸವೇಶ್ವರರ ವಿಷಯವಾಗಿ ತಾವು ಪ್ರಯತ್ನಿಸುತ್ತಿರುವುದು ಬಹು ಸ್ತುತ್ಯವಾಗಿದೆ. ನಿಮ್ಮಿಂದ ಬಂದ ಲೇಖನಗಳಿಗೆ ಶಿವಾನುಭವದಲ್ಲಿ ಸ್ಥಾನವು ಅವಶ್ಯವಾಗಿ ಕೊಡಲ್ಪಡುವುದು. ಈಚೆಗೆ ಇಲ್ಲಿಯ ಪ್ರೆಸ್ಸುಗಳಲ್ಲಿ ಪ್ರೋಟರ್ ಲೀಸ್ಟ್‌ನಲ್ಲಿ ತೊಡಗಿದೆ. ಈ ಕೆಲಸ ಒಂದು ವಾರದಲ್ಲಿ ಮುಗಿಯುವುದು. ಆದ್ದರಿಂದ ಪತ್ರಿಕೆ ಕಳಿಸುವಲ್ಲಿ ತಡವಾಗಿದೆ. ನಾನು ಬಸವೇಶ್ವರರ ಚರಿತ್ರೆಯನ್ನು ಬರೆಯುತ್ತಿದ್ದೇನೆ. ಐತಿಹಾಸಿಕ ದೃಷ್ಟಿಯಿಂದ ಬರೆಯಬೇಕಾಗಿದೆ. ತಾವು ಮೂರು ಗ್ರಂಥಗಳನ್ನು ನಾನು ಪ್ರಸಿದ್ಧಿಸಬೇಕೆಂದು ಸೂಚಿಸಿದ್ದೀರಿ. ಈಗ ಒಂದು ಮಾತ್ರ ಪ್ರಸಿದ್ಧವಾಗಿದೆ. ಉಳಿದ ಎರಡು ಗ್ರಂಥಗಳನ್ನು ಶಿವಾನುಭವ ಪತ್ರಿಕೆಯಲ್ಲಿಯೇ ಪ್ರಸಿದ್ಧಿಸುವೆನು.

ಇತಿ ತಮ್ಮ

ಫ. ಗು. ಹಳಕಟ್ಟಿ

೪೮

೧೩–೧೦–೫೬

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಶ.ಶ. ತಮ್ಮಿಂದ ಪತ್ರಗಳು ಬಾರದೆ ಬಹಳ ದಿವಸಗಳಾದವು. ಪತ್ರ ಬರೆಯುತ್ತಿರಬೇಕು. ಈಗ ಕರ್ನಾಟಕ ಏಕೀಕರಣವಾಗಿರುತ್ತದೆ. ಆದರೆ ಇದರಿಂದ ಈಗ ಮೈಸೂರು ಪ್ರಾಂತದಲ್ಲಿ ನಾನಾ ತರಹದ ಪರಿಣಾಮಗಳಾದಂತೆ ತೋರುತ್ತದೆ. ಅವುಗಳನ್ನು ಊಹಿಸಲು ನಮಗೆ ಇಲ್ಲಿ ಬರುವುದಿಲ್ಲ. ವೀರಶೈವ, ಬ್ರಾಹ್ಮಣ, ಒಕ್ಕಲಿಗರು ಇವರಲ್ಲಿ ಉಂಟಾಗಿರುವ ಪರಿಣಾಮಗಳು ವೀರಶೈವರ ಉಪಪಂಗಡಗಳ ಮಧ್ಯದಲ್ಲಿ ಆಗಿರುವ ಭೇದಾಭೇದಗಳು ಇವುಗಳನ್ನು ತಿಳಿಸಬೇಕು. ಉತ್ತರ ಭಾಗದಲ್ಲಿ ಎಲ್ಲವೂ ತಟಸ್ಥವಿದೆ. ವಿಶೇಷ ಯಾವ ಚಳವಳಿಯೂ ಇರುವುದಿಲ್ಲ.

ಇತಿ ತಮ್ಮ

ಫ. ಗು. ಹಳಕಟ್ಟಿ

೪೯

೧೭–೧–೫೭

ಮ. ರಾ. ರಾ. ಎಸ್. ಆರ್. ಮಲ್ಲಪ್ಪನವರಿಗೆ

ಅನೇಕ ಶ.ಶ. ತಮ್ಮ ಪತ್ರ ಮುಟ್ಟಿರುತ್ತದೆ. ಶ್ರೀ ಜಗದ್ಗುರುಗಳ ಪತ್ರವೂ ಬಂದಿದೆ. ನಾನು ಅವರಿಗೆ ಅವರು ತಿಳಿಸಿದಂತೆ ೧೪ನೇ ತಾರೀಖಿಗೆ ದಾವಣಗೆರೆಯಲ್ಲಿರುವೆನೆಂದು ತಿಳಿಸಿರುವೆನು. ತಾವು ಸಹ ಆ ಕಾಲಕ್ಕೆ ಅಲ್ಲಿ ಇರುವುದಾಗಿ ತಿಳಿಸಿರುವಿರಿ. ಆನಂದವಾಯಿತು. ಈ ಸಂದರ್ಭದಲ್ಲಿ ಶಿವಶರಣತತ್ತ್ವ ಪ್ರಚಾರ ಕಾರ್ಯವನ್ನು ವ್ಯವಸ್ಥಿತ ರೀತಿಯಿಂದ ಜರುಗಿಸುವಂತೆ ಅವಶ್ಯಕ ಏರ್ಪಾಡು ಮಾಡುವುದು ಬಹಳ ಅವಶ್ಯವಿದೆ. ಇದಕ್ಕೋಸ್ಕರ ಹೆಚ್ಚಾಗಿ ಉತ್ಸಾಹಿ ತರುಣರು ಒಂದೆಡೆಗೆ ಸೇರಿ ವಿಚಾರ ಮಾಡುವುದು ಅವಶ್ಯಕ. ವೀರಶೈವರು ಹೆಚ್ಚಾಗಿ ಇರುವಂಥ ಗ್ರಾಮಗಳನ್ನು ಅಂದರೆ ಮುಖ್ಯವಾಗಿ ಶಿವಮೊಗ್ಗ, ತುಮಕೂರು, ಚಿತ್ರಕಲ್‌ದುರ್ಗ ಮುಂತಾದ ಕಡೆಗೆ ವ್ಯವಸ್ಥಿತ ಏರ್ಪಾಡು ಆಗುವುದು ಅವಶ್ಯವು. ತಮ್ಮ ಪ್ರಾಂತದ ಪರಿಸ್ಥಿತಿಯು ನನಗೆ ಚೆನ್ನಾಗಿ ಗೊತ್ತಿಲ್ಲ. ಅಲ್ಲಿರುವ ವಿದ್ವಾಂಸರೂ ಕಾರ್ಯಕರ್ತರೂ ಒತ್ತಟ್ಟಿಗೆ ಸೇರುವದು ಅವಶ್ಯಕ. ಈ ರೀತಿ ದಾವಣಗೆರೆಯಲ್ಲಿ ನಡೆಯುವದೆಂದು ನಾನು ಹಾರೈಸಿದ್ದೇನೆ.

ಇತಿ ತಮ್ಮ

ಫ. ಗು. ಹಳಕಟ್ಟಿ

೫೦

೨೫–೯–೫೭

ಶ್ರೀಯುತ ಎಸ್. ಆರ್. ಮಲ್ಲಪ್ಪನವರಿಗೆ—

ತಮ್ಮ ಫ. ಗು. ಹಳಕಟ್ಟಿ ಮಾಡುವ ಅನೇಕ ನಮಸ್ಕಾರಗಳು. ನಾವು ಉಭಯತರು ದಾವಣಗೆರೆಯಲ್ಲಿ ಕೂಡಿದ್ದೆವು. ಆಗ ನಿಮ್ಮ ಕೂಡ ವಿಚಾರ ವಿನಿಮಯ ಮಾಡತಕ್ಕ ವಿಷಯಗಳು ಅನೇಕವಿದ್ದುವು. ಆದರೆ ನಾನಿದ್ದ ಸ್ಥಳದಿಂದ ದೂರ ಇದ್ದದರಿಂದ ಇದಕ್ಕೆ ಅನುಕೂಲ ಸಂಧಿಗಳು ದೊರೆಯಲಿಲ್ಲ. ಶ್ರೀ ಮಹಾಸ್ವಾಮಿಗಳವರನ್ನು ಕಾಣಲಿಕ್ಕೆ ಅನೇಕ ಸಲ ಹೋಗಿದ್ದೆನು. ಆದರೆ ಅವರ ನೆರೆಯಲ್ಲಿ ಯಾವಾಗಲೂ ಜನಸಂದಣಿಯು ಹೆಚ್ಚಾಗಿ ಇದ್ದದರಿಂದ ಹೆಚ್ಚಿಗೆ ಮಾತನಾಡಲು ಶಕ್ಯವಾಗಲಿಲ್ಲ. ಆದರೂ ಪತ್ರ ಮುಖಾಂತರ ತಮ್ಮ ಕಡೆಗೆ ನಡೆದಿರುವ ವಿಷಯಗಳನ್ನು ತಿಳಿಸುತ್ತಿರಬೇಕು. ನಾನು ದಾವಣಗೆರೆಯಲ್ಲಿದ್ದಾಗ್ಗೆ ಪಕ್ಷಭೇದಗಳು ತೀವ್ರವಾಗಿ ಇದ್ದುದು ತಿಳಿಯಿತು. ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದಿಂದ ನಮ್ಮಲ್ಲಿಯೂ ಹಾಗೆಯೇ ಇದೆ. ಶಿವಶರಣರ ವಾಙ್ಮಯವನ್ನು ನಾನು ಪ್ರಕಟಿಸಿದ್ದಕ್ಕೆ ಕೆಲವರು ಬಹು ಅಸಂತುಷ್ಟರಾಗಿದ್ದಾರೆ. ನಾನು ಹಂಸಭಾವಿ ಸಭೆಗೆ ಹೋಗಿದ್ದೆನು. ಆಗ ಅಲ್ಲಮಪ್ರಭು, ಸಿದ್ಧರಾಮೇಶ್ವರ ಮೊದಲಾದವರ ವಚನಗಳನ್ನು ನಾನು ಪ್ರಕಟಿಸಿದ್ದಲ್ಲಿ ತಾವು ಸಹಾಯ ಮಾಡುವೆನೆಂದು ಅಲ್ಲಿ ನೆರೆದ ಸ್ವಾಮಿಗಳು ವಚನಕೊಟ್ಟಿದ್ದರು.

ಆದರೆ ಅದನ್ನು ಪೂರೈಸಲು ಅವರಿಗೆ ಆಗಲಿಲ್ಲ. ಇರಲಿ. ಈಗ ನಾನು ಮರುಳು ಸಿದ್ಧೇಶ್ವರರ ಚರಿತ್ರೆಯನ್ನು ಬರೆಯುವುದರಲ್ಲಿ ತೊಡಗಿದ್ದು ಅವರ ಸ್ಥಾನಗಳ ಸವಿಸ್ತಾರ ವರ್ಣನೆಗಳನ್ನು ಶ್ರೀ ಜೇರಿಗೆ ಇವರು, ಈ ಹಿಂದೆ ಜಗದ್ಗುರು ತರಳುಬಾಳು, ಪ್ರಕಟಿಸಿದ್ದರು. ಅದು ನನಗೆ ಈಗ ಬೇಕಾಗಿದ್ದು, ನನಗೆ ಹುಡುಕಿ ಕಳಿಸ ಬೇಕೆಂದು ನನ್ನ ವಿನಂತಿ ಇದೆ.

ಇತಿ ತಮ್ಮ
ಫ. ಗು. ಹಳಕಟ್ಟಿ

೫೧

೨೪–೧೧–೫೭

ಮ. ರಾ. ರಾ. ಎಸ್. ಆರ್. ಮಲ್ಲಪ್ಪ ಇವರಿಗೆ

ಅನೇಕ ಶ. ಶ. ಗಳು. ತಾವು ಜೈಲಿಂದ ಬರೆದ ಎರಡು ಪತ್ರಗಳು ಮುಟ್ಟಿರುತ್ತವೆ. ಶ್ರೀ ಶಿವಯೋಗಿ ಸಿದ್ಧರಾಮದೇವರ ಜಯಂತಿ ಉತ್ಸವವನ್ನು ತಾವು ಜೈಲಿನಿಂದ ತಿರುಗಿ ಬಂದ ಬಳಿಕ ಜರುಗಿಸಬಹುದು. ಆವರೆಗೆ ಇದು ಶಕ್ಯ ತೋರುವುದಿಲ್ಲ.

ನಾನು ತಮಗೆ ಹೊಸ ಪದ್ಧತಿಯ ಮೇರೆಗೆ ಸಿದ್ಧಗೊಳಿಸಲ್ಪಟ್ಟ ಶ್ರೀ ಬಸವೇಶ್ವರರ ವಚನಗಳು ಮತ್ತು ಶಿವಾನುಭವ ಪತ್ರಿಕೆಯ ಸಂಚಿಕೆಗಳು ಇವುಗಳನ್ನು ಕಳಿಸಬೇಕೆಂದು ಇಚ್ಛಿಸಿದ್ದೇನೆ. ಅವುಗಳಲ್ಲಿ ರಾಜಕೀಯ ವಿಷಯಗಳೇನೂ ಇರುವುದಿಲ್ಲ. ಜೇಲಿನ ನಿಯಮಗಳಂತೆ ಅವುಗಳನ್ನು ತಮಗೆ ಕಳಿಸಲು ಆತಂಕವಿದೆಯೋ ಹೇಗೆಂಬುದನ್ನು ತಿಳಿಸಬೇಕು.

ಇತಿ ತಮ್ಮ
ಫ. ಗು. ಹಳಕಟ್ಟಿ

## ಹಳಕಟ್ಟಿ—ತೀ.ನಂ.ಶ್ರೀ.ಯವರ ಪತ್ರವ್ಯವಹಾರ

15-1-41

My dear Mr. Shrikanthayya,

I received your letter dated 13-1-41 and thank you for your congratulations.

As for the 'Ragales of Harihara', I shall be able to spare the copy after 1st February as I have to prepare the manuscript for my magazine between 15th and 31st January. I begin printing after 1st February. After the middle of February, you will have to send back the manuscript to me. But you may have it again after the middle of February. I shall be obliged to know if this will be convenient to you. I have got only two manuscripts.

The one I am sending is a more correctone than the other. You are more fortunate than myself, as you have several codices.

After I met you at Dharwar before the pendal, another gentleman from Davanagere, whose surname I rememiber as "Mallabadi" met me and inquired me of my manuscripts saying that he has completely written the Nembenna's Ragale and that he is going to publish it. It is waste of energy if the same attempt is made by several gentlemen. I think, it is better if you both can adjust the matter between yourselves.

Yours sincerely,
P. G. Halakatti

[ಇದು 'ಲೆಟರ್‌ಪೆಡ್' ಹಾಳೆಯಲ್ಲಿ ಬರೆದಿರುವ ಪತ್ರ. ಎರಡನೆಯ ವಾಕ್ಯದ ಕೊನೆಯ ಶಬ್ದ codices (codex = ಹಸ್ತಪ್ರತಿ, ಎಂಬುದರ ಬಹುವಚನ) ಗಮನಿಸ ತಕ್ಕುದು. ಗ್ರಂಥಸಂಪಾದನಶಾಸ್ತ್ರದಲ್ಲಿ ಬಳಸುವ ಒಂದು ಪಾರಿಭಾಷಿಕ ಶಬ್ದ ಇದು. ಈ ಶಾಸ್ತ್ರವನ್ನು ಕುರಿತಂತೆ ಕನ್ನಡದಲ್ಲಿ ಯಾವ ಗ್ರಂಥ ಇಲ್ಲವೆ ಲೇಖನ ಹೊರಬಿದ್ದಿರಲಿಲ್ಲ. ಇಂಗ್ಲಿಷಿನಲ್ಲಿ ಪ್ರಕಟವಾಗಿದ್ದ ಗ್ರಂಥಗಳ ಮೂಲಕ ಈ ಶಾಸ್ತ್ರದ ಪರಿಚಯವನ್ನು ಹಳಕಟ್ಟಿ ಹೊಂದಿದ್ದರು ಎಂದು ಊಹಿಸಲು ಅವಕಾಶವಿದೆ. —ಸಂ.]

(ಕೆಳಗಿನದು ಕಾರ್ಡಿನಲ್ಲಿ ಬರೆದಿರುವ ಪತ್ರ)

14-2-1941

My dear Mr. Srikanthayya,

You might be expecting a letter from me about the Ragale manuscript that I have. But I am sorry, I have to disappoint you. Tomorrow my magazine will be out which contains the Ragale of Jommaya. But further on, I have to get copied another Ragale for the next issue. But I am busy till the mibdle of the next month. During the first fortnight of the next month, I have to arrange for printing matriculation papers etc. from today. I shall be busy as an examiner in certain examinations and I have to go out. After the matric examination is over, I shall need the manuscript again for the May issue. I can spare the book only in May only under the above circumstances.

Yours sincerly,
P. G. Halakatti

[ಹಿಂದಿನ ಎರಡು ಪತ್ರಗಳು 'ನಂಬಿಯಣ್ಣನ ರಗಳೆ'ಯನ್ನು ಸಂಪಾದಿಸುವ ಸಂದರ್ಭದಲ್ಲಿ ತೀ. ನಂ. ಶ್ರೀ. ಯವರು ಬರೆದಿದ್ದ ಪತ್ರಗಳಿಗೆ ಹಳಕಟ್ಟಿಯವರ ಉತ್ತರಗಳು. ತೀ. ನಂ. ಶ್ರೀ. ಯವರ ಪುತ್ರ ಶ್ರೀ ಟಿ. ಎಸ್. ನಾಗಭೂಷಣ ಅವರು ಪ್ರತಿಷ್ಠಾನಕ್ಕೆ ಕೊಡಮಾಡಿದ 'ನಂಬಿಯಣ್ಣನ ರಗಳೆ'ಯ ಹಸ್ತಪ್ರತಿಗಳ— ತೀ ನಂ. ಶ್ರೀ. ಯವರು ಮುದ್ರಣಕ್ಕೆ ಸಿದ್ಧಮಾಡಿದವು — ಮತ್ತು ಆ ಸಂದರ್ಭದ ಕಾಗದಪತ್ರಗಳ ಕಟ್ಟಿನಿಂದ ತೆಗೆದವು.—ಸಂ.]

# ಹಳಕಟ್ಟಿಯವರ ಹೊನ್ನುಡಿ

## ಶಿಲಾಶಾಸನಗಳ ಮಹತ್ವ

ಪುರಾಣಗಳಲ್ಲಿ ಅಂಧವಿಶ್ವಾಸವುಳ್ಳವರಿಗೆ ಶಿಲಾಶಾಸನದಲ್ಲಿಯ ವಿಚಾರಗಳು ಏನೂ ಮಹತ್ವಪವಾದವುಗಳಲ್ಲವೆಂದು ತೋರಬಹುದು. ಆದರೆ ಈಗಿನ ಕಾಲಕ್ಕೆ ಐತಿಹಾಸಿಕ ದೃಷ್ಟಿಯಿಂದ ಕರ್ನಾಟಕದಲ್ಲಿ ಆಗಿ ಹೋಗಿರುವ ಮಹಾಪುರುಷರ ಚರಿತ್ರೆಗಳನ್ನು ಶೋಧಿಸಿ ಯಥಾರ್ಥ ವಿಷಯಗಳನ್ನು ನಿರೂಪಿಸುವದು ಅವಶ್ಯವಾಗಿರುತ್ತದೆ.

[ಶ್ರೀ ಬಸವಣ್ಣನವರ ಬಗ್ಗೆ ಹೊಸದಾಗಿ ಸಿಕ್ಕ (ಅರ್ಜುನವಾಡ) ಶಿಲಾಲೇಖ : ಶಿವಾನುಭವ (ತ್ರೈಮಾಸಿಕ) : ವರ್ಷ ೩, ಸಂಚಿಕೆ ೯- ಮಾರ್ಚ ೧೯೨೮, ಪು. ೧೦೩]

* * *

## ಸುಶಿಕ್ಷಿತರ ಕರ್ತವ್ಯ

ನಮ್ಮಲ್ಲಿಯ ಇಂಗ್ಲಿಷ ಸುಶಿಕ್ಷಿತರು ಕನ್ನಡ ಮತ್ತು ಸಂಸ್ಕೃತ ಗ್ರಂಥಗಳನ್ನೋದಿ ಅವುಗಳಲ್ಲಿಯ ತತ್ವಗಳನ್ನು ಪರಿಶೀಲಿಸುವುದಕ್ಕೆ ಬಹುತರ ಮನಸ್ಸು ಮಾಡುವದಿಲ್ಲ.

[ಶ್ರೀ ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಅವರು ಇಂಗ್ಲಿಷಿನಲ್ಲಿ ಬರೆದ "ಶಿವಾಗಮಗಳಲ್ಲಿಯ ವೀರಶೈವ ತತ್ವಜ್ಞಾನ" ಎಂಬ ಗ್ರಂಥದ ವಿಮರ್ಶೆ : ಶಿವಾನುಭವ-ವರ್ಷ ೩, ಸಂಚಿಕೆ ೯, ಪು. ೧೧೪].

* * *

## ಗ್ರಂಥಸಂಶೋಧನೆಯಲ್ಲಿ ಪ್ರಯತ್ನ-ತಾಳ್ಮೆ

ಜನರಲ್ಲಿ ನಿಜವಾದ ಧರ್ಮಜಾಗ್ರತಿ ಮತ್ತು ವಾಙ್ಮಯಪ್ರೇಮ ಉಂಟಾದ ಬಳಿಕ ಈ ಕಾರ್ಯವನ್ನು (ಗ್ರಂಥ ಸಂಶೋಧನೆ) ಒತ್ತರದಿಂದ ಸಾಗಿಸುವ ಪರಿಸ್ಥಿತಿಯು ಬರಬಹುದು. ಆ ವರೆಗೆ ನಾವು ನಮ್ಮ ಈಗಿನ ಪ್ರಯತ್ನವನ್ನು ಹಾಗೆಯೇ ತಾಳ್ಮೆಯಿಂದ ನಡಿಸುವದು ಅವಶ್ಯವಾಗಿದೆ.

[ವೀರಶೈವ ಧರ್ಮ ಪ್ರಸಾರಕ ಸಂಘ, ವಿಜಾಪುರ : ಶಿವಾನುಭವ ಸಂ. ೩, ಸಂಚಿಕೆ ೧೧, ಸಪ್ಟೆಂಬರ-೧೯೨೮]

ಕೃಪೆ : 'ಹೇಮಕೂಟ'

# ವೀರಶೈವ ಸಮಾಜವು

ಡಾ|| ಫ. ಗು. ಹಳಕಟ್ಟಿ

[ಬಸವೇಶ್ವರರ ಬಗೆಗೆ ಕೆಲವು ಅವಹೇಳನಕಾರಕ ಪ್ರಚಾರ ನಡೆದಾಗ, ಉತ್ತರ ಕರ್ನಾಟಕದ ವೀರಶೈವ ಮುಖಂಡರು ಸಂಬಂಧಿಸಿದ ಸ್ವಾಮಿಗಳವರಿಗೆ ಒಂದು ಬಹಿರಂಗ ಪತ್ರವನ್ನು ದಿ ೧೬-೫-೧೯೩೪ ರಂದು ಬರೆದು, ಅದರ ಒಕ್ಕಣೆಯನ್ನು ಕರ್ನಾಟಕದ ಹಾಗೂ ಮಹಾರಾಷ್ಟ್ರದ ಪತ್ರಿಕೆಗಳಲ್ಲಿ ಪ್ರಕಟಿಸಿದ್ದರು ಈ ಪತ್ರದ ಒಂದು ನಕಲು ಡಾ|| ಫ. ಗು. ಹಳಕಟ್ಟಿಯವರು ಆಗ ಸಂಪಾದಿಸಿ ಪ್ರಕಟಿಸುತ್ತಿದ್ದ 'ನವಕರ್ನಾಟಕ' ವಾರಪತ್ರಿಕೆಯ ದಿ. ೭-೬-೧೯೩೪ರ ಸಂಚಿಕೆಯಲ್ಲಿ ಪ್ರಕಟವಾಗಿದ್ದು, ಅದೇ ಸಂಚಿಕೆಯಲ್ಲಿ ಶ್ರೀ ಹಳಕಟ್ಟಿಯವರು ಬರೆದ ಸಂಪಾದಕೀಯ ಇದು—ಸಂಗ್ರಾಹಕ: ದು. ನಿಂ. ಬೆಳಗಲಿ.]

ವೀರಶೈವ ಧರ್ಮವು ಹಿಂದುಸ್ತಾನದಲ್ಲಿಯ ಉದಾರ ಧರ್ಮಗಳಲ್ಲಿ ಒಂದಾಗಿದೆಯೆಂದು ಎಣಿಸಲ್ಪಟ್ಟಿರುವುದು. ಇದು ಯೋಗ್ಯವೇ ಇರುತ್ತದೆ. ಸಮಾನಭಾವವು ಅದರ ವಿಶಿಷ್ಟತೆ ಎಂದು ಅದು ಪ್ರಶಂಸಿಸಲ್ಪಟ್ಟಿರುತ್ತದೆ. ಸ್ತ್ರೀಪುರುಷಭೇದ, ಜಾತಿಭೇದ, ವರ್ಣಭೇದ ಇಂಥ ಕೃತ್ರಿಮ ಭೇದಭಾವಗಳನ್ನು ಅದು ಕಿತ್ತೊಗೆದು ಸಮಾಜದಲ್ಲಿ ಎಲ್ಲರೂ ಸಮಾನರೆಂಬ ಭಾವವನ್ನು ಬಲಿಪಡಿಸಿದೆ. ಈ ಬಗೆಯ ಮಹತ್ವದ ಸಮಾಜ ಸುಧಾರಣಾ ಕಾರ್ಯದಲ್ಲಿ ಬಸವೇಶ್ವರ ಮತ್ತು ಅವನ ಕಾಲಕ್ಕಿನ ವಚನಕಾರರು ಇವರೇ ಅಗ್ರಭಾಗವನ್ನು ವಹಿಸಿಕೊಂಡು ಈ ತತ್ವವನ್ನು ಪ್ರಸಾರಗೊಳಿಸಿರುವರು. ಅದರಿಂದ ಅಸ್ಪೃಶ್ಯ ಮೊದಲುಗೊಂಡು. ಅನೇಕ ಜಾತಿಯವರು ಅದರ ಅನುಯಾಯಿಗಳಾಗಿದ್ದಾರೆ. ಈ ಕಾರ್ಯದ ಮಹತ್ವವನ್ನು ಗ್ರಂಥಕಾರರು, ಸಮಾಜದ ಪ್ರಮುಖರು ಹೊಗಳುತ್ತ ಬಂದಿರುತ್ತಾರೆ. ಆದರೆ ಮತವಿಚಾರಗಳು ಎಷ್ಟು ಉದಾತ್ತವಿದ್ದರೂ ಕೃತ್ರಿಮ ಬಲವನ್ನು ಹೆಚ್ಚಿಸಿಕೊಂಡು ಅಜ್ಞ ಜನರನ್ನು ವಂಚಿಸುತ್ತ ಹೊಟ್ಟೆಹೊರೆದುಕೊಳ್ಳುವ ವರ್ಗವು ಎಲ್ಲ ಸಮಾಜಗಳಲ್ಲಿ ಕಂಡು ಬರುವುದುಂಟು. ಈ ಬಗೆಯ ವರ್ಗಗಳಲ್ಲಿ ಎಣಿಸಬಹುದಾದ ಒಂದು ವಿಶಿಷ್ಟ ವರ್ಗವು ವೀರಶೈವ ಸಮಾಜದಲ್ಲಿಯೂ ಇರುತ್ತದೆ. ಇದರ ಕೋಲಾಹಲವು ಆಗಿಂದಾಗ್ಗೆ ಕೇಳಬರುವುದುಂಟು. ಆದರೆ ಅದರ ಚಟುವಟಿಕೆಗಳನ್ನು ಯಾರೂ ಲಕ್ಷ್ಯಿಸಿದುದ ಕಾರಣವಿದ್ದಿಲ್ಲ. ಆದರೆ ಸಮಾಜದಲ್ಲಿಯ ಜವಾಬುದಾರಿ ಜನರು ಅದರಲ್ಲಿ ವಿಶೇಷವಾಗಿ ಮುಖ್ಯ ಪೀಠಾಧ್ಯಕ್ಷರು ಇಂಥ ಪ್ರವೃತ್ತಿಗೆ ಮನಗೊಡುವವರಾದರೆ ಮತ್ತು ಆಕುಂಚಿತ ವಿಚಾರಗಳನ್ನು ತಾಳಿ ಸಮಾಜ ಸುಧಾರಣೆಯ ನೆವದಿಂದ ಅವುಗಳನ್ನು ಪಸರಿಸುವುದಾದರೆ ಇದಕ್ಕೆ ತಡೆಯೊಡ್ಡುವುದು ಸಮಾಜದಲ್ಲಿಯ

ಪ್ರತಿಯೊಬ್ಬ ಹಿತಚಿಂತಕನ ಕರ್ತವ್ಯವಾಗಿರುತ್ತದೆ. ಈ ತರದ ಪ್ರವೃತ್ತಿಯು ವೀರಶೈವ ಸಮಾಜದಲ್ಲಿಯ ಕೆಲ ಪ್ರಮುಖ ಪೀಠಗಳಲ್ಲಿ ತಲೆದೋರಿದೆ ಎಂಬ ಶಂಕೆಯು ಈಗ ಉತ್ಪನ್ನವಾದ್ದರಿಂದ ಇದರ ನಿವಾರಣೆಯನ್ನು ಮಾಡುವ ಉದ್ದಿಶ್ಯವಾಗಿ ಸಮಾಜದ ಬಹುಜನ ಪ್ರಮುಖರು ಈಗ ಮುಂದುವರಿದು ಈ ಸಂಚಿಕೆಯ ಬೇರೊಂದೆಡೆಗೆ ಕೊಟ್ಟ ಪ್ರಕಟನೆಯಲ್ಲಿ ಕಾಣಿಸಿದಂತೆ ಒಂದು ಲೇಖವನ್ನು ಪೀಠಾಧ್ಯಕ್ಷರಿಗೆ ಕಳಿಸಿದಲ್ಲಿ ಅದು ಯೋಗ್ಯವೆಂತಲೇ ನಾವು ಹೇಳಬೇಕಾಗುತ್ತದೆ. ಮತ್ತು ಅದಕ್ಕೆ ಸರಿಯಾದ ಉತ್ತರವನ್ನು ಕೊಡುವದಾದರೂ ಪೀಠಾಧ್ಯಕ್ಷರ ಮುಖ್ಯ ಕರ್ತವ್ಯವಾಗಿರುತ್ತದೆ. ಆದ್ದರಿಂದ ಈ ಉತ್ತರವನ್ನು ಸಮಾಜದವರು ಸ್ವಾಭಾವಿಕವಾಗಿ ಅವರಿಂದ ನಿರೀಕ್ಷಣೆ ಮಾಡುತ್ತಲಿರುವರು.

ಆದರೆ ವೀರಶೈವ ಸಮಾಜದಲ್ಲಿಯ ಉದಾರ ಮತವಾದಿಗಳು ಮುಂದುವರಿಯುವ ಕಾಲವು ಇದಾಗಿದೆ. ಅವರು ತಟಸ್ಥರಾದಲ್ಲಿ ಅವನತಿಯು ನಿಶ್ಚಯವೇ ಸರಿ. ಆದರೆ ಸದ್ಯದ ಸ್ಥಿತಿಯಲ್ಲಿ ವೀರಶೈವ ಮತದ ಉದಾರ ತತ್ವಗಳಾವುವು, ಅವುಗಳ ಸ್ವರೂಪವೇನು ಎಂಬುದನ್ನು ಪ್ರಚಾರಪಡಿಸುವ ಏರ್ಪಾಡನ್ನು ಸಮಾಜದ ಪ್ರಮುಖರು ಭರದಿಂದ ಎಲ್ಲ ಕಡೆಗೆ ಸಾಗಿಸುವುದು ಅತ್ಯಂತ ಅವಶ್ಯವಿದೆ. ಈ ಕಾರ್ಯವನ್ನು ವೀರಶೈವ ಸಮಾಜದವರು ಅದರಲ್ಲಿ ವಿಶೇಷವಾಗಿ ವಿದ್ಯಾವಂತರು ಈ ವರೆಗೆ ಏನೂ ಮಾಡದ್ದರಿಂದ, ಇಷ್ಟೇ ಅಲ್ಲ, ಈ ವಿದ್ಯಾವಂತರು ತಮ್ಮ ಸಮಾಜದ ಸಂಸ್ಕೃತಿಯನ್ನು ಸಂಪೂರ್ಣವಾಗಿ ದುರ್ಲಕ್ಷಿಸಿದ್ದರಿಂದ ನಾನಾ ತರದ ಆಕುಂಚಿತ ವಿಚಾರಗಳು ಮತ್ತು ಪ್ರವೃತ್ತಿಗಳು ಸಮಾಜದಲ್ಲಿ ಉಂಟಾಗಲು ಕಾರಣವಾಗಿದೆ. ಈ ಕಾಲಕ್ಕೆ ಶಿವಶರಣರ ವಾಙ್ಮಯವು ಶಿವಾನುಭವ ಪತ್ರಿಕೆಯ ಮೂಲಕ ಹೊರಟಿದ್ದು ಸಮಾಜದ ಸುದೈವವೇ ಸರಿ. ಅದನ್ನು ಪರಿಶೀಲಿಸುವ ಜವಾಬುದಾರಿಯು ವೀರಶೈವ ಸಮಾಜದ ಸುಶಿಕ್ಷಿತರ ಮೇಲೆ ಬಹಳವಾಗಿ ಇರುತ್ತದೆ. ಅವರು ಈ ಕಾಲಕ್ಕೆ ಪರಸ್ಪರರನ್ನು ಹಳಿಯುತ್ತ ಸಮಾಧಾನಪಟ್ಟುಕೊಂಡು ಇದ್ದದ್ದಾದರೆ ಸಮಾಜದ ಪ್ರಗತಿಯು ಎಂದಿಗೂ ಜರುಗದು. ಆದ್ದರಿಂದ ಈ ಕಾಲದಲ್ಲಿ ಎಲ್ಲ ಕಡೆಗೂ ಶಿವಾನುಭವ ಗ್ರಂಥಗಳನ್ನು ಓದುವ, ಚರ್ಚಿಸುವ, ವಿಮರ್ಶಿಸುವ ಕೂಟಗಳು ಸ್ಥಾಪಿತವಾಗಿ, ಬಸವೇಶ್ವರ ಮೊದಲಾದ ಶಿವಶರಣರ ವಾಙ್ಮಯವು ಪ್ರಸಾರವಾಗಬೇಕು. ಮತ್ತು ಇಂಥ ವಿಧಾಯಕ ಕಾರ್ಯಗಳ ಕಡೆಗೆ ವೀರಶೈವ ಸಮಾಜವು ತೀವ್ರವೇ ಹೊರಳಬೇಕು. ಅಂದರೆ ಮಾತ್ರ ಅದರ ನಿಜವಾದ ಪ್ರಕಾಶವು ಹೊರಬೀಳುವುದು.

# ಹಳಕಟ್ಟಿಯವರ ಹೊನ್ನುಡಿ

## ಬಸವೇಶ್ವರನಕಿಂತಲೂ ಮೊದಲಿನ ವೀರಶೈವ ಧರ್ಮ

ಅನೇಕರು, ಮುಖ್ಯವಾಗಿ ವೀರಶೈವೇತರರು ಬಸವೇಶ್ವರನಕಿಂತಲೂ ಮೊದಲು ವೀರಶೈವ ಧರ್ಮವೇ ಅಸ್ತಿತ್ವದಲ್ಲಿದ್ದಿಲ್ಲವೆಂದು ಅಭಿಪ್ರಾಯ ಪಡುವುದುಂಟು. ಈಚೀಚೆಗೆ ವೀರಶೈವರಲ್ಲಿಯೂ ಕೂಡ ಕೆಲವರು ಇದೇ ಅಭಿಪ್ರಾಯವನ್ನೇ ಸಮರ್ಥಿಸುವದು ತೋರಿಬರುತ್ತಿದೆ. ಆದರೆ ಈ ತರದ ವಿಧಾನಗಳಲ್ಲಿ ಸತ್ಯತೆಯು ಇಲ್ಲೆಂಬುದು ಈಗ ಹೆಚ್ಚು ಹೆಚ್ಚು ದೃಢಪಡುತ್ತಾ ನಡೆದಿದೆ. ಬೇರೆ ಕೆಲವರು ಮುಖ್ಯವಾಗಿ ವೀರಶೈವರಲ್ಲಿಯ ಪುರಾಣ ಮತವಾದಿಗಳು ವೀರಶೈವ ಧರ್ಮವು ಬಹು ಪುರಾತನ ಕಾಲದಿಂದಲೂ ಅಚ್ಚಳಿಯದೆ ಈಗಿದ್ದ ಹಾಗೆಯೇ ಯಾವಾಗಲೂ ಇತ್ತೆಂದು ಅಭಿಪ್ರಾಯಪಡುವದು ತೋರಿಬರುತ್ತದೆ. ಆದರೆ ಇವರ ಈ ತರದ ವಿಧಾನವೂ ಸಮರ್ಥನೀಯವಲ್ಲವೆಂದು ನಮಗೆ ತೋರುತ್ತದೆ. ಯಾಕೆಂದರೆ ಹಿಂದೂಧರ್ಮದ ಸ್ವರೂಪದಲ್ಲಿ ಕಾಲ ಕಾಲಕ್ಕೆ ಬದಲಾವಣೆಗಳಾಗುತ್ತ ಬಂದವೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಅದು ವೇದಕಾಲದಲ್ಲಿದ್ದಂತೆ ಉಪನಿಷತ್ತಿನ ಕಾಲದಲ್ಲಿರಲಿಲ್ಲ. ಉಪನಿಷತ್ತಿನ ಕಾಲದಲ್ಲಿದ್ದಂತೆ ಪೌರಾಣಿಕ ಕಾಲದಲ್ಲಿ ಇರಲಿಲ್ಲ.

[ಶಿವಾನುಭವ, ಡಿಶೆಂಬರ ೧೯೪೦, ಸಂಪುಟ ೧೫, ಸಂಚಿಕೆ ೩]

* * *

“ವಚನ ಶಾಸ್ತ್ರಸಾರ”ದ ಶ್ರೀ ಹಳಕಟ್ಟಿಯವರು, ಬಳ್ಳಾರಿಯ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಶ್ರೀ ಹಳಕಟ್ಟಿಯವರು, ಕನ್ನಡ ಸಾಹಿತ್ಯೋದ್ಯಾನವನದಲ್ಲಿ ತೋರಿಸುತ್ತಿರುವ ಕೃಷಿಯ ಸಾಹಸವು ಎಲ್ಲರಿಗೂ ಬೆರಗನ್ನುಂಟುಮಾಡುವದರಲ್ಲಿ ಸಂದೇಹವೇನುಂಟು? ವೀರಶೈವ ಸಾಹಿತ್ಯ ಸಾಗರಗರ್ಭದೊಳಗಿರುವ ರತ್ನಗಳನ್ನು ಹೊರಗೆಡಹುವ ಆಶೆಯಿಂದ ಶ್ರೀ ಹಳಕಟ್ಟಿ ಅವರು “ಶಿವಾನುಭವ”ವೆಂಬ ಹೆಸರಿನ ತ್ರೈಮಾಸಿಕವೊಂದನ್ನು ಹೊರಡಿಸಿ ಆಗಲೇ ೨ ಸಂಚಿಕೆಗಳನ್ನು ಪ್ರಕಟಿಸಿರುವರು. ಈ ಎರಡು ಸಂಚಿಕೆಗಳಲ್ಲಿ “ಬಸವೇಶ್ವರರ ವಚನ”ಗಳನ್ನು ಸಂಪೂರ್ಣವಾಗಿ ಮುದ್ರಿಸಲಿರುವರು. ಅಲ್ಲದೆ ಪುರಾತನ ಪದ್ಯಗ್ರಂಥಗಳನ್ನು ಜೀವಕಳೆಯಿಂದ ತುಂಬಿದ ಗದ್ಯದಲ್ಲೇ ಪ್ರಕಟಿಸುವದಕ್ಕೂ ಇವರು ಉದ್ಯಮಿಸಿರುವರು. ಇವರ ಆಶಯಗಳೆಲ್ಲವೂ ಫಲಿಸಲೆಂದೂ ಕನ್ನಡ ಸಾಹಿತ್ಯ ಸಾಮ್ರಾಜ್ಯವು ಎಲ್ಲೆಗಳನ್ನು ಮೀರಿ ಬೆಳೆಯಲೆಂದೂ ನಾವು ಈಶ್ವರನನ್ನು ಕುರಿತು ಪ್ರಾರ್ಥಿಸುತ್ತೇವೆ. ಇದೆಲ್ಲ ಕನ್ನಡಿಗರ ಒಳ್ಳೆಯ ಬದುಕಿನ ಬಾಳ್ವೆಯಲ್ಲವೆ?

—ತಿ. ತಾ. ಶರ್ಮ

[ಶಿವಾನುಭವ : ಸಂಪುಟ-೧, ಅಗಷ್ಟ-೧೯೨೬, ಸಂಚಿಕೆ-೩]

ಕೃಪೆ: ‘ಹೇಮಕೂಟ’

# ಹಸ್ತಪ್ರತಿಗಳ ಸಂಗ್ರಹಕಾಲದ ನನ್ನ ಅನುಭವ

**—ವಿದ್ವಾನ್ ಕೆ. ವೆಂಕಟರಾಯಾಚಾರ್ಯ**

ಆವೊಂದು ಕೃತಿಯನ್ನು ಮುಖೋದ್ಗೀತವಾಗಿಯೆ ಹೇಳಿದರೆ ಹೆಚ್ಚು ಫಲವಿದೆ. ಆ ನೇರೆಗೆ ಅದನ್ನು ಗುರುಮುಖದಿಂದಲೆ ಕಲಿಯಬೇಕೆಂಬುದು ಸಾಜ ! ಆದರೆ ಕಾಲ-ದೇಶ-ಜನಗಳ ಅಂತರದಿಂದಾಗಿ ಅದರಲ್ಲಿ ಸ್ಯಾಲಿತ್ಯಾದಿಗಳಾಗದಂತೆ ಕೃತಿಯನ್ನು ಬರೆದಿಡುವಂತಾಗಿದೆ. ಇದರಿಂದ ಅದರ ಚಿರತ್ವ ಹಾಗೂ ಪ್ರಸಾರಣೆಗೆಡೆಯಾಗಿದೆ. ಸಾವಿರ ವರ್ಷದ ಹಿಂದೆ ಪೊನ್ನನ ಶಾಂತಿಪುರಾಣದ ಒಂದು ಸಾವಿರ ಹಸ್ತಪ್ರತಿಗಳನ್ನು 'ದಾನಚಿಂತಾಮಣಿ ಅತ್ತಿಮಬ್ಬೆ' ಮಾಡಿಸಿದ್ದು ಇಲ್ಲಿ ಗಮನೀಯ !

ಕೃತಿರಚನ ಕಾಲದಲ್ಲಿ ಕವಿಯಾಗಲಿ, ತದನುವರ್ತಿಗಳಾಗಲಿ, ಅದನ್ನು ಬರೆದಿಟ್ಟು, ಪರಿಷ್ಕರಿಸುವಾಗ ಕೆಲವು ವಿಚಾರವನ್ನು ಕೂಡಿಸುತ್ತಾರೆಂದು ತಿಳಿದಿದೆ. (ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮುಮಂ – ಎಂಬ ಪಂಪನ ಮಾತು ನೋಡಿ.) ಕೃತಿಗಳ ಬರಹಕ್ಕೆ ಹಲವು ಸಾಧನಗಳನ್ನು ಬಳಸುತ್ತಾರೆ : ಭೂರ್ಜಪತ್ರ, ತಾಳಿಗರಿ ಮತ್ತು ಕಾಗದಗಳು ಕಾಲಾಂತರದಲ್ಲಿ ಮೈಗೊಂಡಿವೆ. (ಇತ್ತೀಚೆಗೆ ಇದಕ್ಕಾಗಿ ಛಾಯಾಚಿತ್ರಾದಿಗಳು ಅಳವಡಿಸಿವೆ.) ಹಸ್ತಪ್ರತಿಕಾರನು-ಸಂಪ್ರತಿಕಾರನು 'ಯಥಾವಲ್ಲಿಖ್ಯತೇ ಮಯಾ' ಎಂದಿದ್ದರೂ, ಕೆಲವೆಡೆ ಚಾಣಾಕ್ಷತೆಯಿಂದ ಸರಿಗೊಳಿಸುವ ಸಾಹಸಕ್ಕೆಳಸುವನು. ಅದರಿಂದ ಪ್ರಕ್ಷಿಪ್ತ-ಪಾಠಾಂತರಗಳಾಗುತ್ತವೆ. ಆ ಕಾರಣ ಒಂದು ಪುಸ್ತಕವ ಮುದ್ರಣಾದಿ ವಿಚಾರಕ್ಕೆ ಹಲವು ಹಸ್ತಪ್ರತಿಗಳು ಬೇಕು. ಈ ಸಂಗ್ರಹ ಕಾರ್ಯದ ನನ್ನ ಅನುಭವಗಳಲ್ಲಿ ಕೆಲವು ಇಲ್ಲಿ ಬರೆದಿವೆ. ಹಸ್ತಪ್ರತಿಗಳನ್ನು ಜಾಗ್ರತೆಯಿರಿಸುವ ವಿಚಾರ ತುಸ ತಪ್ಪಿದರೂ, ಆ ಪ್ರತಿ ಹಾಳಾಗುತ್ತದೆ. ಕೆಲವರು ಮನೆಯಿಂದ ಹೊರಗಡೆ ಹಸ್ತಪ್ರತಿ ಕೊಡುವುದಿಲ್ಲ. ಕೆಲವರು ಪ್ರತಿ ಮಾಡಲು ಒದಗಿಸುವುದಿಲ್ಲ. ಅದರಿಂದ, ಹಸ್ತಪ್ರತಿಗೆ ಹಲವೆಡೆ ವ್ಯವಹರಿಸುವ ಪ್ರಯಾಸ ಹೇಳತೀರದು ! ಹಸ್ತಪ್ರತಿಸಂಗ್ರಹವೊಂದು ಸಾಹಸಪೂರ್ಣಕಾರ್ಯವಾಗುತ್ತದೆ.

**ಆದಿತ್ಯಪುರಾಣ :** ೧೯೪೮ರಲ್ಲಿ ನೆರೆಗ್ರಾಮದ ಪಣಂಬೂರ ಶ್ರೀ ವೆಂಕಟರಮಣ ಹೊಳ್ಳರಲ್ಲಿ ಕನ್ನಡ ಆದಿತ್ಯಪುರಾಣದ ತಾಳೆಗರಿ ಪ್ರತಿ ಸಿಕ್ಕಿತ್ತು. ಇದರ ೧೮ ಸಂಧಿಗಳ ಸಂಗ್ರಹ ಬೆಂಗಳೂರ ಶರಣ ಸಾಹಿತ್ಯದಲ್ಲಿ ಮೊದಲು ಪ್ರಕಟವಾಗಿತ್ತು. ಅನಂತರ ಶ್ರೀ ಸೇಡಿಯಾಪು ಕೃಷ್ಣಭಟ್ಟರಲ್ಲಿ, ಶ್ರೀ ಟಿ. ಕೇಶವಭಟ್ಟರಲ್ಲಿ, ಶ್ರೀ ಬಿ. ಎಲ್. ಎಸ್. ಭಟ್ಟರಲ್ಲಿ, ಶ್ರೀ ಪಿ. ಕೃಷ್ಣರಾಯರಲ್ಲಿ (೨ ತಾಳಿ ೩ ಕಾಗದಗಳ)

ಪ್ರತಿಗಳು ಸಿಕ್ಕಿದಾಗಲೇ ಒಂದು ತೆರದ ಸಾದಾಪ್ರತಿಗೆ ಸಾಧ್ಯವಾಯಿತು. (೧೯೬೭ರಲ್ಲಿ ೧೫ ಸಂಧಿಗಳ ೧ನೇ ವಿಭಾಗ ಪ್ರಕಟವಾಗಿದೆ.) ಆಗಲೂ ಕೆಲವೆಡೆಯ ನ್ಯೂನಾತಿರೇಕಗಳ ಪರಿಶೀಲನೆಗೆ, ಬೆಂಗಳೂರ ವಿಶ್ವವಿದ್ಯಾಲಯದ ಹಸ್ತಪ್ರತಿಗೆ ಗೋವಿಂದದಾಸ ಕಾಲೇಜಿನ ಮೂಲಕ ವ್ಯವಹರಿಸಿ ತರಿಸಿದೆನು (ಸಂಶೋಧಕರಿಗೆ, ಪುಸ್ತಕ ಮುದ್ರಕರಿಗೆ, ವಿಶ್ವವಿದ್ಯಾಲಯಗಳು, ಸಾಹಿತ್ಯ ಪರಿಷತ್ತು, ಸರಕಾರದ ಗ್ರಂಥಭಂಡಾರಗಳು ಖಾಸಗಿಯಾಗಿ ಪುಸ್ತಕಗಳನ್ನು ಕಳುಹುವುದಿಲ್ಲೆಂಬುದು ಬಲು ವಿಚಿತ್ರವಾಗಿದೆ.) ಅಂತೆ, ಪುಸ್ತಕ ಶ್ರೀ ಅಮೃತ ಸೋಮೇಶ್ವರರ ಮೂಲಕ ಒಂದು ಪ್ರತಿ (ಅಪೂರ್ಣ), ಉಪ್ಪುಂದದ ಶ್ರೀ ಕೃಷ್ಣ ಕಾರಂತರಲ್ಲಿ ಒಂದು ತಾಳೆಗರಿ ಪ್ರತಿ ಸಿಕ್ಕಿದ್ದು, ಇವರ ೩ನೇ ವಿಭಾಗ (೧೬-೪೮ ಸಂಧಿ. ಪೂರ್ಣ ಗ್ರಂಥ) ಅಚ್ಚಾಗಲು ನೆರವಾಗಿದೆ. (೧೯೭೬ರಲ್ಲಿ ಪ್ರಕಟನೆಯಾಗಿದೆ.) ಇವರ ಕವಿಯ ಬಗೆಗೆ 'ಕವಿಚರಿತೆ'ಯಲ್ಲಿ 'ರಾಮಚಂದ್ರ ಗುರು ಶಿಷ್ಯ'ನೆಂದು ಮಾತ್ರ ಹೇಳಿದೆ. ಆದರೆ, ಅಲ್ಲಿರುವ 'ಶೃಂಗಪುರ ಗುರುವರ'ನೆಂಬುದು ಗಮನಿಸಿದರೆ, ಈತ ೧೫ನೆಯ ಶತಕದವನೆಂದು ಸಿದ್ಧ. ಅಂತೆ, ನನಗೆ ಸಿಕ್ಕ ಕೆಲವು ಪ್ರತಿಯಲ್ಲಿ ಕೊನೆಗೆ 'ಕವಿರಾಜ ಕಂಠೀರವ'ನು ಇದನ್ನು ಬರೆದನೆನ್ನುವುದೂ ಗಮನಾರ್ಹ. ಹಲವು ಹಸ್ತಪ್ರತಿಗಳ ಸಂಗ್ರಹ ಪರೀಕ್ಷೆಗಳು ಏಕೆಂದು ಇಲ್ಲಿ ವೇದ್ಯ.

**ಉತ್ತರರಾಮ ಕಥೆ:** ೧೯೬೦ರಲ್ಲಿ ನೆರೆಯ ಹೊಸಬೆಟ್ಟಿನ ಶ್ರೀ ಹತ್ವಾರಿ ನಾರಾಯಣರಾಯರ ಮೂಲಕ ಇದರೊಂದು ತಾಳೆಗರಿ ಪ್ರತಿ ಸಿಕ್ಕಿತ್ತು. ಇದು ಜೀರ್ಣವಾದುದರಿಂದ, ಶ್ರೀ ಗೋವಿಂದ ಪೈಯವರಲ್ಲಿದ್ದ ಹಸ್ತಪ್ರತಿ ಪಡೆಯಲು ಇದನ್ನು ಹಿಡಿದುಕೊಂಡೇ ಹೋದೆನು. 'ಊಟಕ್ಕಿಲ್ಲದ ಉಪ್ಪು' ಏಕೆಂದು ಉದ್ಧಾರ ಮಾಡಿ, ಕ್ಲೃಪ್ತ ಸಮಯಕ್ಕೆ ಮರಳಿಸುವಂತೆ ಕೈಕಾಗದ ಬರೆದಿತ್ತು, ಅದರ ಮೂಲಕ ಶುದ್ಧ ಪ್ರತಿ ತಯಾರಿಸಿದೆನು. ನೆರೆಯ ಪಾವಂಜೆ ಶ್ರೀ ದ್ವಿವೇದಿ ಸೀತಾರಾಮ ಶಾಸ್ತ್ರಿಗಳೂ ಒಂದು ತಾಳೆಗರಿ ಪ್ರತಿ ಕೊಟ್ಟರು. (ಈ ಗ್ರಂಥ ಅಚ್ಚಾದ ವೇಳೆ ಈ ಪ್ರತಿ ಒಳಗೊಳಗೆ ಹುಟ್ಟಿದ ಹುಳದಿಂದ ಜೀರ್ಣವಾಯಿತು! ಅಚ್ಚಾಗುವವರೆಗೆ ಇದು ಬಾಳಿತಲ್ಲ! ಎಂದು ತಾಳ್ಮೆಯಿಂದ ಉತ್ತರಿಸಿದ್ದರು. ಹಾಗಿಲ್ಲದಿದ್ದರೆ, ಅವರು ಕೇಳಿದಷ್ಟು ದಂಡ ತೆರಬೇಕಿತ್ತು!). (೧೯೬೧ರಲ್ಲಿ ೨೨ ಸಂಧಿಗಳ ಪೂರ್ವ ವಿಭಾಗವೂ, ೧೯೬೩ರಲ್ಲಿ ಮತ್ತೆ ೨೨ ಸಂಧಿಗಳ ಉತ್ತರ ವಿಭಾಗವೂ ಮುದ್ರಿತವಾಗಿದೆ). ಇದರೊಂದು ಕಾಗದಪ್ರತಿ ಶ್ರೀ ಸುರತ್ಕಲ್ಲು ನಾರಾಯಣ ಶೆಣೈಯವರು ಸಂಪ್ರತಿಸಿದ್ದು, ಉಡುಪಿಯ ಶ್ರೀ ಕೃಷ್ಣ ಮುದ್ರಣಾಲಯದವರಿಂದ ದೊರಕಿದೆ. ೧ನೇ ಮತ್ತು ೪ನೇ ಹಸ್ತಪ್ರತಿಗಳಲ್ಲಿ ಕೊನೆಗೆರಡು ಸಂಧಿಗಳು (ರಾಮ ನಿರ್ಯಾಣ) ಹೆಚ್ಚಿಗಿವೆ; ಇವು ತಿರುಮಲೆ ವೈದ್ಯನ ಕೃತಿಯಿಂದ ಸಂಪ್ರತಿಕಾರರು ಕೂಡಿಸಿದರೆಂದು ವ್ಯಕ್ತವಾಯಿತು. ಈ ಕವಿ ಸೀತಾರಾಮರ ಪುನರ್ಮಿಲನದೊಂದಿಗೆ ಮಂಗಲಾಂತ್ಯವಾಗಿ ಕಾವ್ಯವನ್ನು ಬರೆದನು! ಈ ೪ ಹಸ್ತಪ್ರತಿಗಳಲ್ಲಿ ಒಂದೆಡೆಯ ಅರ್ಥ ವ್ಯತ್ಯಯವೇ ಇಲ್ಲ. ಇತ್ತೀಚೆಗೆ ದೊರೆತ ಪಣಂಬೂರ ಶ್ರೀ ಆನಂದರಾಯರಲ್ಲಿದ್ದ

ತಾಳೆಗರಿಯಲ್ಲಿ ಆ ಅರ್ಧ ಪದ್ಯವಿದೆ! (ಈ ಮನೆಯವರು ಪಣಂಬೂರಿನ ಬಂದರಕ್ಕಾಗಿ ಮನೆ ಬಿಟ್ಟು ಹೋಗುವಾಗ, ತಾಳಗರಿಗಳನ್ನು ಮನೆ ಗೋಡೆಯ ಕಂದಕದಲ್ಲಿ ಮುಚ್ಚಿದ್ದ ಸುದ್ದಿ ಗೆಳೆಯ ಶ್ರೀ ಟಿ. ವೆಂಕಟರಾಯರಿಂದ ತಿಳಿದು, ಕೂಡಲೆ ಧಾವಿಸಿ ತಂದುದರಿಂದ ಈ ಗ್ರಂಥದ ಪ್ರಪೂರ್ಣತೆಯೇನೆಂದು ತಿಳಿಯಿತು.) ನಾರಾಯಣ ಕವಿಯ 'ಉತ್ತರ ರಾಮಕತೆ'ಗೆ ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ಧನಸಹಾಯ ಸಿಕ್ಕಿದೆ. ಅದಕ್ಕಾಗಿ ಕಳುಹಿದ ೩ ಸಾವಿರ ಪದ್ಯದ ನನ್ನ ಹಸ್ತಪ್ರತಿಯು (ಕಾಗದ ಕಟ್ಟು) ಒಂದು ವರ್ಷದಲ್ಲೂ ಮರಳಿಲ್ಲ. ಆದೊಮ್ಮೆ ಬೆಂಗಳೂರಿನ ಕಾರ್ಯಾಲಯಕ್ಕೆ ಸಾಗಿ, ಮೇಲಧಿಕಾರಿಗಳನ್ನು ಅಂಗಲಾಚಿ ಬೇಡಿದೆನು. ಆಗ ಸಿಬ್ಬಂದಿಯವನು ಗೋಣಿಯಚೀಲದಿಂದ ನನ್ನ ಕೈಬರಹದ ಕಾಗದಪ್ರತಿಯನ್ನು ತೆಗೆದುಕೊಟ್ಟನು. ಮತ್ತೆ ಕೆಲವು ಸಮಯಕ್ಕೆ ಆ ಗೋಣಿಯಚೀಲ ಭದ್ರಾವತಿಯ ಕಾಗದ ಕಾರ್ಖಾನೆಗೆ ಸಾಗುತ್ತಿತ್ತೇನೋ?) ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ, ಧಾರವಾಡದ ವಿಶ್ವವಿದ್ಯಾಲಯದಲ್ಲಿ ಇದರ ಹಸ್ತಪ್ರತಿಗಳಿದ್ದರೂ, ಒಂದು ವಿಭಾಗ ಮುದ್ರಣವಾದ ವಿಶ್ವಾಸದಿಂದಾದರೂ ನನಗೆ ಅವು ಪರಿಶೀಲಿಸಲು ಒದಗಿಲ್ಲ! ಕನ್ನಡ ಸಾಹಿತ್ಯ ಪರಿಷತ್ತು ಇದನ್ನು ಪ್ರಕಟಿಸಲು ನನಗೆ ನೆರವಾಗಬೇಕೆಂದು ಕೇಳಿದಾಗ, 'ನಿಮಗೆ ಇದರ ಶುದ್ಧಪ್ರತಿಗೆ ಸಾಧ್ಯವೇ? ಇದನ್ನು ಪರಿಷತ್ತಿಗೆ ಮುಫತ್ತಾಗಿ ಕೊಡುವಿರಾ?' ಎಂಬ ಪತ್ರವೂ ಬಂದಿತ್ತು. ಆದರೆ, ಹಲವಾರು ಮಹನೀಯರ ಸಹಕಾರದಿಂದ ಇದೀಗ ಪೂರ್ಣವಾಗಿ ಅಚ್ಚಾಗಿದೆ!

**ಕಾಶೀಖಂಡ–ಶಂಕರಸಂಹಿತೆ** ಇವುಗಳ ತಾಳಿಗರಿ ಪ್ರತಿಗಳು ಉಪ್ಪುಂದದ ಶ್ರೀಮತಿ ಹಕ್ಲುಮನೆ ಮಂಜಮ್ಮನವರಲ್ಲಿದೆಯೆಂದು ಅದನ್ನು ಪಡೆಯಲು ಹೋದೆನು. ಅವರಿಗೆ ನನ್ನ ಪರಿಚಯವಿಲ್ಲದಾಗ, ಅದಾಗಲೇ ಅಚ್ಚಾದ ಪುಸ್ತಕಗಳನ್ನು ಕಾಣಿಕೆಯಾಗಿ ಕೊಟ್ಟದ್ದರಿಂದ ಆ ಹಸ್ತಪ್ರತಿಗಳು ದೊರಕಿವೆ. ಶ್ರೀ ಉಚ್ಚಿಲ ರಾಮಚಂದ್ರರು 'ಶಂಕರಸಂಹಿತೆ'ಯನ್ನು ಈಗ ಮುದ್ರಿಸುವಲ್ಲಿ ಈ ಹಸ್ತಪ್ರತಿ ನೆರವಾಗಿದೆ.

**ಶುಕಸಪ್ತತಿಯ ಹಸ್ತಪ್ರತಿ** ದೊರೆತಾಗ, ಅದರ ಇನ್ನೊಂದು ಪ್ರತಿ ಶಿವಮೊಗ್ಗದ ಡಾ. ಸರ್ಜಾ ಚಂದ್ರಶೇಖರಯ್ಯನವರಲ್ಲಿದ್ದುದನ್ನು ತರಲು ಅಲ್ಲಿಗೆ ಧಾವಿಸಿದೆ. ಶ್ರೀಯುತರು ಕವಿಯ (ಶರಜಾ ನಾಗಪ್ಪಯ್ಯನ) ಕುಟುಂಬದವರಾದ್ದರಿಂದ, ವಿಶ್ವಾಸದಿಂದ ಅದನ್ನು ನನಗಿತ್ತರು. ಇತರ ಹಲವು ಪ್ರತಿ ತರಿಸಿ ಅರೆವಾಸಿ ಮುದ್ರಿಸಿದ್ದೇನೆ. ಈಗ ನಿವೃತ್ತಾಧ್ಯಾಪಕನಾದ್ದರಿಂದ ಮುಂದಿನ ಭಾಗದ ಮುದ್ರಣವಾಗಲಿಲ್ಲ! 'ಸ್ಮೃತಿಸಾರ'ವೆಂಬ ಧರ್ಮಶಾಸ್ತ್ರದ ೨ ಪ್ರತಿ ದೊರೆತು, ೧ ಪ್ರತಿ ಪಾಂಡಿಚೇರಿಯಲ್ಲಿರುವ ಶ್ರೀ ಎಸ್. ಆರ್. ಉಡುಪರಿಗೆ ಎರವಲಾಗಿ ಕೊಟ್ಟಿರುವೆನು. ಈಗಲೂ ಆ ಹಸ್ತಪ್ರತಿ ಮರಳಿಲ್ಲ!

**ಶೂರಪದ್ಮವಧೆ** (ಯಕ್ಷಗಾನ) : ಇವರ ಕವಿ ನನ್ನೂರ ಮಯ್ಯವಟಿ ವೆಂಕಟರಮಣಯ್ಯ. ಇವರು ಮಾಯಿಪ್ಪಾಡಿಯಲ್ಲಿ ಅರಸರಲ್ಲಿದ್ದುದರಿಂದ ಇವರ ಕೈಪ್ರತಿ (ಕಾಗದ ಪ್ರತಿ, ೧೯೨೭ರಲ್ಲಿ ಲಿಖಿತ) ಶ್ರೀ ಪಿ. ವೆಂಕಟರಾಜ ಪುಣಿಂಚತ್ತಾಯರಿಂದ ಪಡೆಯಲು ನಾಲ್ಕಾರು ವರ್ಷದ ಪ್ರಯತ್ನವಾಗಿತ್ತು.

**ಕನ್ನಡ ಜೈಮಿನಿ ಭಾರತ :** ಹಸ್ತಪ್ರತಿ ಕುಂದಾಪುರದ ಶ್ರೀ ಕೆ. ಎಸ್. ಮಧ್ಯಸ್ಥರಲ್ಲಿ ದೊರೆಯಿತು. ಕವಿಯ ಬಿರುದಿನ ಬಗೆಗೆ ಚರ್ಚೆಯೆದ್ದಾಗ ಈ ಪ್ರಾಚೀನ ಪ್ರತಿಯು ನಿಷ್ಕರ್ಷೆಗೆ ಸಾಧನವಾಗಿದೆ.

**ಅಮರಕೋಶಕ್ಕೆ ವಿಠಲನ ವ್ಯಾಖ್ಯೆ :** ಇದನ್ನು ಹಸ್ತಪ್ರತಿಯಾಗಿ ನೆರೆಯ ಶ್ರೀ ಚಿತ್ರಾಪುರ ಮಠದಲ್ಲಿ ಒಮ್ಮೆ ನೋಡಿದೆ, ಮತ್ತೊಮ್ಮೆ ವಿಚಾರಿಸುವಾಗ, ಅಲ್ಲಿಲ್ಲ! ನಿರುಪಯುಕ್ತ ಜೀರ್ಣಪುಸ್ತಕಗಳೊಂದಿಗೆ ಅದು ಅಲ್ಲಿಂದ ಮಾಯವಾಗಿತ್ತೆಂದು ತಿಳಿಯಿತು !

**ತೊರವೆ ರಾಮಾಯಣ :** ಇದರ ತಾಳೆಗರಿ ಪ್ರತಿಗಳು ಇಲ್ಲಿ ಹಲವರಲ್ಲಿವೆ. ಆದರೆ, ನನಗೆ ಸಿಕ್ಕಿದ ಒಂದು ಪ್ರತಿಯಲ್ಲಿ ಮಾತ್ರ ಕವಿಯು **ವರ್ಣಕ—ವಸ್ತುಕ** ಕಾವ್ಯದ್ವಯಗಳನ್ನು — ಕುಮಾರವ್ಯಾಸನಂತೆ - ಬರೆದನೆಂದು ತಿಳಿದಿದೆ (ಡಾ|| ಎಚ್. ಸೀತಾರಾಮಾಚಾರ್ಯರ 'ಕುಮಾರ ವಾಲ್ಮೀಕಿ', ಮೈ. ವಿ. ವಿದ್ಯಾಲಯ ಪ್ರಕಟನೆ ನೋಡಿ). ಇಂತಹ ಹಸ್ತಪ್ರತಿಗಳ ಸಂಗ್ರಹ ಕಷ್ಟ; ಅದರ ಲಾಭ ಬಹಳ ಇಷ್ಟ !

[ಹಸ್ತಪ್ರತಿಗಳ ಸಂಗ್ರಹಕಾರ್ಯ ಇನ್ನೊಂದು ಕ್ರಮವಾದುದು : (೧) ತಾನು ಸಂಪಾದನ ಮಾಡುತ್ತಿರುವ ನಿರ್ದಿಷ್ಟ ಕೃತಿಯ ಪರಿಷ್ಕರಣಕಾರ್ಯದಲ್ಲಿ ಪಾಠಾಂತರ ಪರಿಶೀಲನೆಗೆ ಅಗತ್ಯವಾದ ಪ್ರತ್ಯಂತರಗಳನ್ನು ಗ್ರಂಥಸಂಪಾದಕನು ಸಂಗ್ರಹಿಸುವ ಕಾರ್ಯ; ದೊರಕಿಸಿಕೊಂಡ ಹಸ್ತಪ್ರತಿಗಳನ್ನು ಸಂಪಾದಕ ಅವುಗಳ ಮಾಲಿಕರಿಗೆ ಹಿಂದಿರುಗಿಸುತ್ತಾನೆ. ಈ ದಿಸೆಯಲ್ಲಿ ತಮ್ಮ ಅನುಭವವನ್ನು ಶ್ರೀಯುತರು ತಮ್ಮ ಲೇಖನದಲ್ಲಿ ನಿವೇದಿಸಿಕೊಂಡಿರುವರು (೨) ಹಸ್ತಪ್ರತಿಗಳನ್ನು ಸಂರಕ್ಷಿಸುವ, ಪ್ರಕಟಿಸುವ, ಪರಿಷ್ಕರಿಸಿ ಪ್ರಕಾಶನಗೊಳಿಸಬೇಕೆನ್ನುವವರಿಗೆ ಎರವಲು ನೀಡುವ ಉದ್ದೇಶಗಳನ್ನು ಹೊಂದಿದ್ದು ವ್ಯಾಪಕವಾದ ರೀತಿಯಲ್ಲಿ—ದಾನವಾಗಿ ಪಡೆದೋ ಯಥೋಚಿತ ಮೌಲ್ಯ ನೀಡಿ ಕೊಂಡುಕೊಂಡೋ ಸಂಸ್ಥೆಗಳು ನಡಸುವ ಸಂಗ್ರಹಕಾರ್ಯ. ಸಂಸ್ಥೆಗಳು ಖಾಸಗಿಯವರಿಗೆ ಹಸ್ತಪ್ರತಿಗಳನ್ನು ಎರವಲು ನೀಡುವಲ್ಲಿ ಕೆಲವು ಕಟ್ಟುಪಾಡುಗಳನ್ನು ವಿಧಿಸಲೇಬೇಕಾಗುತ್ತದೆ. ಏಕೈಕ ಹಸ್ತಪ್ರತಿಯನ್ನು, ತಾಳೆಗರಿ ಹಸ್ತಪ್ರತಿಗಳನ್ನು ಸಾಮಾನ್ಯವಾಗಿ ಎರವಲು ನೀಡಲಾಗದು ಹಸ್ತಪ್ರತಿಯನ್ನು ನಕಲು ಮಾಡಿಸಿ ಒದಗಿಸುವುದು, ಮೈಕ್ರೋಫಿಲ್ಮ್ ಪ್ರತಿಯನ್ನು ಒದಗಿಸುವುದು, ಸ್ಥಳದಲ್ಲೇ ಪರಿಶೀಲಿಸಲು ಅವಕಾಶ ಕಲ್ಪಿಸುವುದು, ಮುಂತಾದ ರೀತಿಯಲ್ಲಿ—ಸಂಸ್ಥೆಗಳು ಎರವಲು ನೀಡಲು ಅಡ್ಡಿಯಿಲ್ಲ. ಮೈಸೂರು ವಿಶ್ವವಿದ್ಯಾನಿಲಯ ಉದಾರವಾದ ನೀತಿಯನ್ನು ಅನುಸರಿಸುತ್ತಿದೆ ಎಂದು ನನ್ನ ತಿಳಿವಳಿಕೆ, ಅನುಭವ —ಎಂ ವಿ. ಸೀ.]

18635

# ನನ್ನ ಹುಚ್ಚು ಹವ್ಯಾಸ

ಪ್ರೊ|| ಗೌ. ಮ. ಉಮಾಪತಿ ಶಾಸ್ತ್ರಿ

ನಾನು ೧೯೩೨ರಲ್ಲಿ ೭-೮ ವರ್ಷದ ಎಳೆಯನಿದ್ದಾಗಲೇ ವಿಜಾಪುರ ಜಿಲ್ಲೆಯ ಬದಾಮಿ ಹತ್ತಿರದ ಧಾರ್ಮಿಕ ಸಂಸ್ಥೆ ಶಿವಯೋಗ ಮಂದಿರದಲ್ಲಿ ಪ್ರವೇಶ ಪಡೆದೆ. ನನ್ನ ಗುರುಗಳಾದ ಸಖರಾಯ ಪಟ್ಟಣದ ಶಿಲಾಮಠದ ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು ಅಜ್ಜಂಪುರದ ಹತ್ತಿರ ಗಿರಿಯಾಪುರದಲ್ಲಿ ಶ್ರೀಗುರು ಕುಮಾರಾಶ್ರಮವನ್ನು ಸ್ಥಾಪಿಸಿದರು. ನನ್ನ ತಂದೆಯವರು ಗುರುಗಳಿಗೆ ನನ್ನನ್ನು ಅರ್ಪಿಸಿದಾಗ ಆಶ್ರಮದಲ್ಲಿದ್ದ ಗ್ರಂಥಭಂಡಾರವನ್ನು ತೋರಿಸಿ—"ನೀನೂ ಹೀಗೆ ಪುಸ್ತಕಗಳನ್ನು ಸಂಗ್ರಹಿಸಿ ಅವನ್ನು ಓದಿ ಪಂಡಿತನಾಗಬೇಕು." ಎಂದು ಹೇಳುತ್ತಿದ್ದರು. ನಾನು ಪುಸ್ತಕದ ಹುಳುವಾಗುವುದಕ್ಕೆ ನನ್ನ ತಂದೆ ಗೌರಾಪುರದ ಮಲ್ಲಯ್ಯನವರ ಪ್ರೇರಣೆಯೇ ಕಾರಣವಾಯಿತು.

ಶಿವಯೋಗ ಮಂದಿರದ ಸಂಸ್ಥಾಪಕರಾದ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳು ನಾಡಿನ ಮೂಲೆ-ಮೂಲೆಯ ಮಠ-ಮಾನ್ಯಗಳಿಂದ ಓಲೆಗರಿ-ಕೋರಿಕಾಗದ ಹಸ್ತಪ್ರತಿಗಳನ್ನು ಸಂಸ್ಥೆಯ ಗ್ರಂಥಭಂಡಾರದಲ್ಲಿ ಇಡಿಸಿದ್ದರು. ಅದಕ್ಕೆ 'ವಿಜಯ ಮಹಾಂತೇಶ ಗ್ರಂಥಾಲಯ' ಎಂದು ನಾಮಕರಣ ಮಾಡಿದ್ದರು. ಡಾ|| ಫ. ಗು. ಹಳಕಟ್ಟಿ ಅವರಿಗೆ ಅಲ್ಲಿಯ ಹಸ್ತಪ್ರತಿಗಳನ್ನು ದಯಪಾಲಿಸಿ ವಚನ ಶಾಸ್ತ್ರದ ಗ್ರಂಥಗಳನ್ನು ಪರಿಶುದ್ಧವಾಗಿ ಪ್ರಕಟಿಸಲು ಪ್ರೋತ್ಸಾಹ ನೀಡಿದ್ದರು.

ನಾನಿನ್ನೂ ಕನ್ನಡ ಕಲಿಯುತ್ತಿದ್ದೆ. ಮಂದಿರದ ಪುಸ್ತಕ ಭಂಡಾರದಲ್ಲಿಯ ದೊಡ್ಡ ದೊಡ್ಡ ಕಪಾಟುಗಳಲ್ಲಿ ಟಿನ್ನಿನ ಉದ್ದನ ಪೆಟ್ಟಿಗೆಗಳಲ್ಲಿ ಇಟ್ಟ ಓಲೆಗರಿ ಹೊತ್ತಿಗೆಗಳನ್ನು ಮುಟ್ಟಿ ನೋಡುವ ಕೌತುಕ. ವಿಜಯನಗರ ಸಾಮ್ರಾಜ್ಯದ ಆರನೆಯ ಶತಮಾನದ ಉತ್ಸವದಲ್ಲಿ ಭಾಗವಹಿಸಿ ಬಿ.ಎಂ.ಶ್ರೀ., ವಿ.ಸೀ. ಮೊದಲಾದ ವಿದ್ವಾಂಸರು ಶಿವಯೋಗಮಂದಿರಕ್ಕೆ ಆಗಮಿಸಿದ್ದರು. ನವಿಲುಗುಂದ ಗವಿಮಠದ ಶ್ರೀ ಬಸವಲಿಂಗ ದೇಶಿಕರ ಅಪ್ಪಣೆಯಂತೆ ನಾವೆಲ್ಲ ವಟುಗಳು-ಸಾಧಕರು ಬಿ.ಎಂ.ಶ್ರೀ. ಅವರಿಗೆ ಆಕಾಶಮಲ್ಲಿಗೆಯ ಹೂವಿನ ಹಾರ ಹಾಕಿ ಸ್ವಾಗತಗೀತೆ ಹಾಡಿದ್ದೆವು. ಬಿ. ಎಂ. ಶ್ರೀಕಂಠಯ್ಯನವರು ತಮ್ಮ ಭಾಷಣದಲ್ಲಿ ಟಿನ್ನಿನ ಪೆಟ್ಟಿಗೆಗಳಲ್ಲಿಯ ಅಮೂಲ್ಯ ಸಂಪತ್ತಿನ ಬಗೆಗೆ ಬಹುವಾಗಿ ಹೊಗಳಿದ್ದರು. ಅಂದಿನಿಂದ ಅವನ್ನು ತೆರೆದು ನೋಡುವ ಕೌತುಕ ಮತ್ತಿಷ್ಟು ಹೆಚ್ಚಿತು. ಆದರೆ ಕಾರ್ಯದರ್ಶಿ ಅವನ್ನು ನನಗೆ

ಮುಟ್ಟಲೂ ಕೊಡಲಿಲ್ಲ. ಅಂದೇ ನಾನು ಮನದಲ್ಲಿ—"ದೊಡ್ಡವನಾದ ಮೇಲೆ ಅವನ್ನು ಓದಿಯೇ ತೀರುತ್ತೇನೆ" ಎಂದು ಛಲದಿಂದ ಸಂಕಲ್ಪಿಸಿದೆ. ಆ ಸಂಕಲ್ಪ ಈಡೇರಲು ಹನ್ನೆರಡು ವರ್ಷ ಬೇಕಾಯಿತು.

ಶಿವಯೋಗ ಮಂದಿರದಲ್ಲಿ ಕನ್ನಡ ಪ್ರಾಥಮಿಕ ಶಿಕ್ಷಣ ಅರ್ಧ ಮುಗಿಸಿ, ಅಮರ ಕೋಶ-ಪಂಚಕಾವ್ಯಗಳ ಸಂಸ್ಕೃತ ವ್ಯಾಸಂಗ ಪ್ರಾರಂಭಿಸಿದ್ದೆ. ಅಷ್ಟರಲ್ಲಿ ಅನಿರೀಕ್ಷಿತ ವಾಗಿ ಮಲೆನಾಡ ಪ್ರಸಿದ್ಧ ವಿರಕ್ತ ಮಠಸ್ಥರೊಂದರ ಮರಿಯಾಗಿ ೧೯೩೭ರಲ್ಲಿ ಕಾಶಿಗೆ ಹೋದೆ. ಅಲ್ಲಿಯ ವಿಕ್ಟೋರಿಯ ಮಹಾರಾಣಿ ಸ್ಮಾರಕ ಸಂಸ್ಕೃತ ಮಹಾ ವಿದ್ಯಾಲಯ(ಕ್ವೀನ್ಸ್ ಕಾಲೇಜ)ದಲ್ಲಿ ಪ್ರವೇಶ ಪಡೆದೆ. ನನ್ನ ವಿದ್ಯಾಗುರು ಪಂಡಿತ ಶಿವದತ್ತ ಮಿಶ್ರರು ನನಗೆ ಐದು ರೂಪಾಯಿಗಳ ಮಾಸಿಕ ಛಾತ್ರವೃತ್ತಿಯನ್ನು ಕೊಡಿಸಿದ್ದರು. ಅದನ್ನು ಪಡೆಯಲು ಕಾಲೇಜಿನ ಗ್ರಂಥಾಲಯವಾದ ಸರಸ್ವತೀ ಭವನಕ್ಕೆ ಪ್ರತಿ ತಿಂಗಳು ಹೋಗುತ್ತಿದ್ದೆ. ವೃತ್ತಿಯ ಹಣ ಪಡೆಯಲು ಕೆಲವು ಸಲ ಆಫೀಸಿನ ಮುಂದೆ ಕುಳಿತು ಕಾರಕೂನರ ಮರ್ಜಿ ಕಾಯಬೇಕಾಗುತ್ತಿತ್ತು. ಹೊತ್ತು ಕಳೆಯಲು 'ಮುಕ್ತಾವಳಿ'ಯ ಕಂಠಪಾಠ ಮಾಡುತ್ತಿದ್ದೆ. ಬೇಸರವೆನಿಸಿದಾಗ ಸರಸ್ವತೀ ಭಂಡಾರದ ಸುತ್ತಲಿ ಗುಲಾಬಿ ಬಗೀಚದಲ್ಲಿ ಸುತ್ತಾಡುತ್ತಿದ್ದೆ. ಒಂದು ದಿನ ಚಪರಾಸಿಯ ಕೃಪೆಯಿಂದ ಸರಸ್ವತೀ ಭಂಡಾರದ ಒಳಗೆ ಪ್ರವೇಶ ಪಡೆದು ಅಲ್ಲಿಯ ಸುಂದರ ಗಾಜಿನ ಕಪಾಟುಗಳಲ್ಲಿಯ ಹಳದಿ ದಪ್ಪನ ಕಾಗದದ ಹಸ್ತಪ್ರತಿಗಳನ್ನು ಕಂಡು ವಿಸ್ಮಯಗೊಂಡೆ.

ಆಗಾಗ ಬೇಸಿಗೆಯ ರಜೆಯಲ್ಲಿ ಕಾಶಿಯಿಂದ ತಾಯಿನಾಡಿಗೆ ಬಂದು ಮಠದಲ್ಲಿ ಒಂದು ತಿಂಗಳು ಇದ್ದು ವಿಶ್ರಾಂತಿ ಪಡೆಯುವ ಪರಿಪಾಟ. ಮಠದ ಆವರಣದಲ್ಲಿ ಕಸಿ ಮಾವಿನ ಮರಗಳಿದ್ದವು. ಅವುಗಳ ಕೆಂಪ್ರಮುಡಿದ ಕಾಯಿಗಳನ್ನು ಇಳಿಸಿ ಹಣ್ಣು ಮಾಡುವುದೇ ಒಂದು ಮೋಜು. ಅವನ್ನು ಒತ್ತೆ ಹಾಕುವುದೆಲ್ಲಿ-ಎಂದು ಯೋಚನೆಯಾದಾಗ ಗುರುಗಳು ಅಟ್ಟದ ಮೇಲಿರುವ ಕಪಾಟುಗಳಲ್ಲಿ ಬತ್ತದ ಹುಲ್ಲಿ ನಲ್ಲಿಡಲು ಹೇಳಿದರು. ಅಟ್ಟವೇರಿ ಸುಮಾರು ವರ್ಷಗಳಿಂದ ದೂಳಿ ಹಿಡಿದ ಕಪಾಟು ಗಳನ್ನು ತೆರೆದೆ. ಅವುಗಳಲ್ಲಿ ಕಾಶಿಯ ಸರಸ್ವತೀ ಭವನದಲ್ಲಿಯಂತಹ ಹಳದಿ ಹೊತ್ತಿಗೆ(ಪೀಲೀ ಪೋಥಿ)ಗಳು ತುಂಬಿದ್ದವು. ಹಿಂದಿನ ಗುರುಗಳು ಕಾಶಿಯಲ್ಲಿ ಕಲಿತು ಪಂಡಿತರಾಗಿದ್ದರೆಂದು ಅವುಗಳನ್ನು ಕಂಡು ಊಹಿಸಿದೆ. ಕಾಶಿಗೆ ಹೋಗು ವಷ್ಟರಲ್ಲಿ ರಸಪುರಿ ಹಣ್ಣುಗಳನ್ನು ಸವಿಯುವ ತವಕದಲ್ಲಿ ಆ ಹೊತ್ತಿಗೆಗಳನ್ನು ಬೇರೊಂದು ಪೆಟ್ಟಿಗೆಯಲ್ಲಿ ತುಂಬಿ ಕಪಾಟುಗಳಲ್ಲಿ ಮಾವಿನಕಾಯಿ ಒತ್ತೆ ಹಾಕಿದ್ದೆ. ಮರುವರ್ಷ ಬರುವಷ್ಟರಲ್ಲಿ ಆ ಪೆಟ್ಟಿಗೆಯಲ್ಲಿ ಇಲಿಗಳು ಮನೆ ಮಾಡಿ ಕೆಲವು ಹಸ್ತ ಪ್ರತಿಗಳನ್ನು ಕಡಿದುಹಾಕಿದ್ದವು. ಅವುಗಳ ಉಚ್ಚೆಯ ದುರ್ವಾಸನೆ, ಕರಿ ಹಿಕ್ಕಿಗಳ ರಾಶಿಯ ಕಂಡು ನನಗೆ ಅಸಹ್ಯವೆನಿಸಿತು. ನಾನು ಹೋದಮೇಲೆ ಯಾರೂ ಅವುಗಳ ಕಡೆ ಗಮನ ನೀಡಿರಲಿಲ್ಲ. ಹಣ್ಣಿನ ಆಶೆಗಾಗಿ ಅವುಗಳನ್ನು ನಾಶ ಮಾಡಿದ ಹೊಣೆ

ನನ್ನದಾಗಿತ್ತು. ಅಂದು ನನಗಾದ ದುಃಖ-ಪಶ್ಚಾತ್ತಾಪ ಹೇಳತೀರದು. ಇಡಿಯ ದಿನವೆಲ್ಲ ಅವನ್ನು ಸ್ವಚ್ಛಗೊಳಿಸುವಲ್ಲಿ ಕಳೆದೆ. ಅವನ್ನು ಹೊಂದಿಸಿ, ಹೊಸಬಟ್ಟೆಯಲ್ಲಿ ಸುತ್ತಿ, ಕಟ್ಟಿ ಮತ್ತೆ ಕಪಾಟುಗಳಲ್ಲಿ ಇಟ್ಟಾಗಲೇ ನನಗೆ ಸಮಾಧಾನವೆನಿಸಿತು.

೧೯೪೯ರಲ್ಲಿ ಕಾಶಿಯಿಂದ ದೇಶಕ್ಕೆ ಬಂದೆ. ನವ್ಯ ನ್ಯಾಯಾಚಾರ್ಯ ಪರೀಕ್ಷೆವರೆಗೂ ಸಂಸ್ಕೃತ ವ್ಯಾಸಂಗ ಮಾಡಿದ್ದೆ; ಕಾಶಿ ಹಿಂದು ವಿಶ್ವವಿದ್ಯಾಲಯದ ಬಿ.ಎ. ಆಗಿದ್ದೆ. ಗುರುಗಳ ಆದೇಶದಂತೆ ಶಿವಯೋಗಮಂದಿರದಲ್ಲಿ ಸಂಸ್ಕೃತ ಅಧ್ಯಾಪಕನಾದೆ. 'ಸುಕುಮಾರ' ಎಂಬ ಕನ್ನಡ ಮಾಸಪತ್ರಿಕೆಯನ್ನು ಸಂಪಾದಿಸಿ ಪ್ರಕಟಿಸಿದೆ. ವಿಜಯ ಮಹಾಂತೇಶ ಗ್ರಂಥಾಲಯದಲ್ಲಿಯೇ ನನ್ನ ವಾಸ್ತವ್ಯ. ಹಗಲು-ರಾತ್ರಿ ಗ್ರಂಥಗಳ ರಾಶಿಯ ಸಂಪರ್ಕ. ಹಸ್ತಪ್ರತಿಗಳ ಕಪಾಟುಗಳನ್ನು ನಾನೀಗ ನಿರ್ಭಯವಾಗಿ ತೆರೆಯುತ್ತಿದ್ದೆ. ಓಲೆಗರಿಗಳ ಕಟ್ಟುಬಿಚ್ಚಿ ಓದಲು ಪ್ರಯತ್ನಿಸಿದೆ. ಅಕ್ಷರಗಳೇ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಅವನ್ನು ಓದಬೇಕೆಂಬ ಹಂಬಲ ಹೇಳತೀರದು.

ಪ್ರತಿವರ್ಷ ಶಿವರಾತ್ರಿಯ ಕಾಲಕ್ಕೆ ಶಿವಯೋಗಮಂದಿರದಲ್ಲಿ ರಥೋತ್ಸವ ನಡೆಯುತ್ತದೆ. ಆಗ ಒಮ್ಮೆ ಅಲ್ಲಿಯ ಕಾರ್ಯಕ್ರಮದಲ್ಲಿ ಭಾಗವಹಿಸಲು 'ಸದ್ಧರ್ಮದೀಪಿಕೆ'ಯ ಸಂಪಾದಕರೂ ಹಿರಿಯ ಸಂಶೋಧಕರೂ ಆಗಿದ್ದ ಶ್ರೀ ಚನ್ನಮಲ್ಲಪ್ಪನವರು ಬಂದಿದ್ದರು. ಗ್ರಂಥಾಲಯದ ಸದ್ದು-ಗದ್ದಲವಿಲ್ಲದ ಒಂದು ಮೂಲೆಯಲ್ಲಿ ಓದು-ಬರೆಯುವುದು ಅವರ ಅಭ್ಯಾಸ. ನಾನು ಅವರ ಹತ್ತಿರ ಹೋಗಿ – "ಮೇಷ್ಟ್ರೆ, ಓಲೆಗರಿ ಹೊತ್ತಿಗೆಗಳನ್ನು ಓದಬೇಕೆಂಬ ಆಶೆ ನನಗಿದೆ. ಅವುಗಳ ಬರವಣಿಗೆ ನನಗೆ ತಿಳಿಯದು, ಹೇಳಿಕೊಡಿ", ಎಂದು ಕೇಳಿದೆ- ನಮ್ಮ ಮಠಕ್ಕೂ ಅವರು ಆಗಾಗ ಬಂದು ಓಲೆಗರಿ ಕಟ್ಟುಗಳನ್ನು ಬಿಚ್ಚಿ ಸ್ನಾನ-ಪೂಜೆಯ ಪರಿವೆಯಿಲ್ಲದೆ ಇರುತ್ತಿದ್ದರು. ನನ್ನ ಆಸಕ್ತಿ ನೋಡಿ ಅವರಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ಅವರು ಹೇಳಿದಂತೆ ಕಪಾಟಿನಿಂದ ಒಂದು ಕಟ್ಟು ತಂದೆ; ಸಾವಧಾನವಾಗಿ ಬಿಚ್ಚಿದೆ; ಬಿಳಿಯ ತೆಳ್ಳನ ಒದ್ದೆ ಬಟ್ಟೆಯಿಂದ ಓಲೆಗರಿಯನ್ನು ಮೆಲ್ಲಗೆ ತೀಡಿದೆ. ಕರಿಯ ಅಕ್ಷರಗಳು ನಿಚ್ಚಳವಾಗಿ ಮೂಡಿ ಬಂದವು. ಅವನ್ನು ಓದುವ ರೀತಿಯನ್ನು ಹೇಳಿಕೊಟ್ಟರು. ಹೀಗೆ ಶಿರಿಯಾಳಕೊಪ್ಪದ ಶ್ರೀ ಚನ್ನಮಲ್ಲಪ್ಪ ಮೇಷ್ಟ್ರು ನನಗೆ ಹೊತ್ತಿಗೆಗಳನ್ನು ಓದಲು ಕಲಿಸಿದ ಮೊದಲ ಗುರುಗಳು. ಅವರು ಅಂದೇ "ರೇಣುಕಾಗಸ್ತ್ಯ ಸಂವಾದ" ಎಂಬ ಕಿರುಕೃತಿಯನ್ನು ನನ್ನಿಂದಲೇ ಓದಿಸಿ ಬರೆಯಿಸಿ ಅದನ್ನು 'ಸುಕುಮಾರ'ದಲ್ಲಿ ಪ್ರಕಟಿಸುವಂತೆ ಮಾಡಿದರು. ಅವರಿಗೆ ಪರಮಪೂಜ್ಯ ಗುರುವರ್ಯ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳು ಹಸ್ತಪ್ರತಿಗಳನ್ನು ಓದಲು ಕಲಿಸಿದ್ದರಂತೆ.

ಆಮೇಲೆ ನಾನು ಓಲೆಗರಿ-ಕೋರೆ ಕಾಗದ ಹಸ್ತಪ್ರತಿಗಳನ್ನು ಸಂಗ್ರಹಿಸುವ ಕಾರ್ಯ ಕೈಕೊಂಡೆ, ಹೋದಲ್ಲೆಲ್ಲ ಮೊದಲು ಮಠಗಳಲ್ಲಿ ಹಸ್ತಪ್ರತಿಗಳ ಕಟ್ಟು

ಗಳನ್ನು ಹುಡುಕುತ್ತಿದ್ದೆ. ಅವುಗಳನ್ನು ಹೊರತೆಗೆದು ದೂಳಿ ಹೊಡೆದು, ಹೊಸ ಬಟ್ಟೆ ಸುತ್ತಿ, ಕಟ್ಟಿ ಮೂಟೆ ಮಾಡಿಕೊಂಡು ಮಂದಿರಕ್ಕೆ ತರುತ್ತಿದ್ದೆ. ಸಾವಿರಾರು ಹಸ್ತಪ್ರತಿಗಳನ್ನು ಹೀಗೆ ಸಂಗ್ರಹಿಸಿದೆ. ಅವುಗಳನ್ನು ಮಠಾಧೀಶರು ಕೊಡಲು ಒಪ್ಪದಿರುವಾಗ ಅವುಗಳ ರಕ್ಷಣೆಯ ಬಗೆಗೆ ಅವರಿಗೆ ತಿಳವಳಿಕೆ ಕೊಟ್ಟು ಅವುಗಳನ್ನು ಸುರಕ್ಷಿತವಾಗಿ ಇಟ್ಟು ಬರುತ್ತಿದ್ದೆ. ನಾನು ಸಂಗ್ರಹಿಸಿದ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು ಅನಧ್ಯಯನದ ದಿನಗಳಲ್ಲಿ ಸಿದ್ಧಪಡಿಸಿ ಅದನ್ನು 'ಸುಕುಮಾರ' ದಲ್ಲಿ ಪ್ರಕಟಿಸುತ್ತಿದ್ದೆ. ಪ್ರತಿ ಹಸ್ತಪ್ರತಿಯ ಮೇಲುಹೊದಿಕೆಯಲ್ಲಿ ಗ್ರಂಥಪರಿಚಯದ ಚೀಟಿಯನ್ನು ಅಂಟಿಸಿ ವಿಷಯವಾರು ಅವನ್ನು ವ್ಯವಸ್ಥಿತವಾಗಿಡುವಲ್ಲಿ ನನಗಾದ ಆನಂದ ಲಿಂಗಪೂಜೆ ಮಾಡಿದುದಕ್ಕಿಂತಲೂ ಹೆಚ್ಚಿನದೆನಿಸಿತು.

ನಾನು ಗುರುಗಳ ಅನುಮತಿ ಪಡೆದು ಚತುರ್ಭುಜನಾದ ಮೇಲೆ ೧೯೫೫ರಲ್ಲಿ ಬಾಗಲಕೋಟೆಗೆ ಬಂದೆ. ಡಾ|| ಶಿ. ಚೆ. ನಂದಿಮಠ ಅವರ ಕೃಪೆಯಿಂದ ಅಲ್ಲಿಯ ಬಸವೇಶ್ವರ ಕಾಲೇಜಿನಲ್ಲಿ ಹಿಂದಿ ಉಪನ್ಯಾಸಕನಾದೆ. ಡಾ|| ನಂದಿಮಠ ಅವರು ಪ್ರತಿವರ್ಷ ಶಿವಯೋಗಮಂದಿರದ ಶಿವರಾತ್ರಿ ಉತ್ಸವಕ್ಕೆ ಬರುತ್ತಿದ್ದರು. ಆಗ ಅವರು ನನ್ನ ಸಾಹಿತ್ಯಿಕ ಚಟುವಟಿಕೆಗಳನ್ನು ಕಂಡು ಸಂತೋಷಪಟ್ಟಿದ್ದರು. ಇಲ್ಲಿಗೆ ಬಂದ ಮೇಲೂ ನನ್ನ ಹಸ್ತಪ್ರತಿ-ಸಂಗ್ರಹ ಹವ್ಯಾಸ ನಿಲ್ಲಲಿಲ್ಲ.

ಬಾಗಲಕೋಟೆಯಲ್ಲಿ ಅನೇಕ ವೀರಶೈವ ಮಠಗಳಿವೆ. ಅವುಗಳಲ್ಲಿ ಟೀಕಿನ ಮಠ ಬಹಳ ಪ್ರಸಿದ್ಧವಾಗಿದೆ. ಈ ಮಠದ ಹಿಂದಿನ ಸ್ವಾಮಿಗಳು ವಚನಗಳಿಗೆ ಟೀಕೆ ಬರೆಯುತ್ತಿದ್ದರು. ಮಠದ ಹೆಸರು ಅನ್ವರ್ಥಕವಾಗಿತ್ತು. ಆದರೆ ಈಗ ಮಠದ ಮುಂದೆ ಎರಡು ತೆಂಗಿನ ಮರಗಳು ಬೆಳೆದಿರುವುದರಿಂದ ಮೊದಲಿನ ಒಳ್ಳೆಯ ಹೆಸರು ಅಳಿದು ತೆಂಗಿನಮಠವೆಂದೇ ಜನ-ಜನಿತವಾಗಿದೆ. ಅಲ್ಲಿ ಒಳ್ಳೆಯ ಹಸ್ತಪ್ರತಿಗಳ ಸಂಗ್ರಹವಿರುವುದಾಗಿ ಜನರಿಂದ ಕೇಳಿ ತಿಳಿದಿದ್ದೆ. ಒಂದು ದಿನ ಮಠಕ್ಕೆ ಹೋಗಿ ಸ್ವಾಮಿಗಳ ದರ್ಶನ ಪಡೆದು ಹಸ್ತಪ್ರತಿಗಳ ಬಗೆಗೆ ಪ್ರಸ್ತಾಪಿಸಿದೆ. ಅವರು ಇಂದು-ನಾಳೆ ಎಂದು ನೆವ ಹೇಳಿ ಹಸ್ತಪ್ರತಿಗಳನ್ನು ತೋರಿಸುವ ಲಕ್ಷಣ ಕಾಣಲಿಲ್ಲ. ಸ್ವಾಮಿಗಳು ಶೂನ್ಯಸಂಪಾದನೆಯ ಪ್ರವಚನ ಚೆನ್ನಾಗಿ ಮಾಡುತ್ತಿದ್ದರು. ಅದನ್ನು ಕೇಳುವ ನೆವದಿಂದ ಶ್ರಾವಣಮಾಸದಲ್ಲಿ ಮಠಕ್ಕೆ ಹೋಗುತ್ತಿದ್ದೆ. ಮಠದ ಅಂಗಳದಲ್ಲಿ ಸಾಗವಾನಿಯ ದೊಡ್ಡ ಕಪಾಟು ಬೆರಣಿ-ಸೌದೆಗಳನ್ನು ಹೊತ್ತು ನಿಂತಿತ್ತು. ಅದರಲ್ಲಿ ಹಸ್ತಪ್ರತಿಗಳು ತುಂಬಿದ ಕಾಲವೊಂದಿತ್ತು ಎಂದು ಊಹಿಸಿದೆ. ಅಂದು ವಿಪರೀತ ಮಳೆ ಬಿದ್ದಿತ್ತು. ಮಠದ ತುಂಬೆಲ್ಲ ನೀರು ಸೋರಿ ನಿಲ್ಲಲೂ ತಾವವಿಲ್ಲವಾಗಿತ್ತು. ನನಗೆ ಹೊತ್ತಿಗೆಗಳ ಚಿಂತೆ. ಅವೆಲ್ಲ ತೊಯ್ದು ಎಲ್ಲಿ ಹಾಳಾಗಿವೆಯೋ ಎಂಬ ಕಳವಳ. ಶ್ರೀಗಳವರಲ್ಲಿ ದೈನ್ಯದಿಂದ ಬಿನ್ನವಿಸಿದೆ. ಅವರು ದೊಡ್ಡ ಮನಸ್ಸು ಮಾಡಿ ಶಿವಪೂಜೆ ಮನೆಯಲ್ಲಿದ್ದ ದೇವದಾರು ಪೆಟ್ಟಿಗೆಯೊಂದನ್ನು ತೆರೆದರು. ಅದರ ತುಂಬ ಹಸ್ತಪ್ರತಿಗಳಿದ್ದವು. ಅದನ್ನು ಕಂಡು ನನಗೆ ಅಮೂಲ್ಯ ನಿಧಿಯೋ

ನೋರೆತಷ್ಟು ಸಂತೋಷವೆನಿಸಿತು. ಆದರೆ ಅವನ್ನು ಹೊರಕ್ಕೆ ತೆಗೆದಾಗ ನಿರಾಶೆಯಾಯಿತು. ಕೋರೆಕಾಗದ ಹೊತ್ತಿಗೆಗಳೆಲ್ಲ ನೀರಲ್ಲಿ ನೆನೆದು ಮುದ್ದೆಯಾಗಿದ್ದವು. ಪೆಟ್ಟಿಗೆಯಲ್ಲಿ ಇಲಿಗಳೂ ವಾಸವಾಗಿದ್ದವು; ಸ್ವಾಮಿಗಳ ರೇಷ್ಮೆ ಮಡಿ, ಕಂಬಳಿಯನ್ನು ಚಿಂದಿ ಮಾಡಿದ್ದವು. ಆಗ ಅವರು ಆ ಎಲ್ಲ ಹಸ್ತಪ್ರತಿಗಳ ರಾಶಿಯನ್ನು ಒಯ್ಯಲು ಹೇಳಿದರು. ಬಹಳಷ್ಟು ಟೀಕಿನ ವಚನಸಂಪತ್ತು ನಷ್ಟವಾಗಿತ್ತು. ಓಲೆಗರಿ ಪ್ರತಿಗಳು ಮಾತ್ರ ಒದ್ದೆಯಾಗಿದ್ದರೂ ಹಾಳಾಗಿರಲಿಲ್ಲ. ನಾನು ಅವನ್ನೆಲ್ಲ ಹೊತ್ತು ಮನೆಗೆ ತಂದೆ. ಅನನ್ನು ಬಿಚ್ಚಿ, ಒಂದೊಂದೇ ಓಲೆಗರಿಯನ್ನು ಒಣಬಟ್ಟೆಯಿಂದ ಹಗುರವಾಗಿ ಒರೆಸಿ, ಗಾಳಿಯಲ್ಲಿ ಒಣಗಿಸಿ ಮತ್ತೆ ಅವನ್ನು ಕಟ್ಟಿ ಜತನವಾಗಿರಿಸಿದೆ. ನನ್ನ ಪರಿಶ್ರಮ ಕಂಡು ಡಾ|| ನಂದಿಮಠ ಸಂತಸಪಟ್ಟಿದ್ದರು. ನನ್ನ ಶ್ರಮ ಸಾರ್ಥಕವಾಗಿತ್ತು. ಭಾನುವಾರದ ಬಿಡುವಿನ ಕಾಲದಲ್ಲಿ ಡಾ. ನಂದಿಮಠ ಅವರು ಅವನ್ನು ಕಾಲೇಜಿಗೆ ತರಿಸಿಕೊಂಡು, ಅವುಗಳಲ್ಲಿಯ ಹೊಸ ವಿಷಯಗಳ ಬಗೆಗೆ ಟಿಪ್ಪಣಿ ಬರೆಯಿಸುತ್ತಿದ್ದರು. ಪ್ರತಿ ಲಿಪಿಕಾಲವನ್ನು ಶಕೆಗಳಿಲ್ಲದೆಯೇ ತಿಥಿ–ವಾರ–ನಕ್ಷತ್ರಗಳ ಸುಳುವಿಡಿದು ಸ್ವಾಮಿ ಕಣ್ಣು ಪಿಳ್ಳೈ ಅವರ ಪಂಚಾಂಗದ ಆಧಾರದ ಮೇಲೆ ಕಂಡುಹಿಡಿಯುವ ರೀತಿಯನ್ನು ತಿಳಿಸಿಕೊಟ್ಟರು. ಹೀಗೆ ನಾನು ಅವರಿಂದ ಸಂಶೋಧನೆಯ ಪಾಠ ಕಲಿತೆ.

ಬಾಗಲಕೋಟೆಯಲ್ಲಿ ಸ್ವಂತ ಮನೆಯೊಂದನ್ನು ಡಾ|| ನಂದಿಮಠ ಅವರೇ ಸ್ಥಾಪಿಸಿದ ಸಹಕಾರಿ ಗೃಹನಿರ್ಮಾಣ ಸಂಘದ ಸದಸ್ಯನಾಗಿ ಪಡೆದಿದ್ದೆ. ಅದಕ್ಕೆ 'ಶಾರದಾ ಭವನ' ಎಂದು ನಾಮಕರಣ ಮಾಡಿದೆ. ಅಲ್ಲಿ ಅಚ್ಚಾದ ಗ್ರಂಥಗಳನ್ನು ಓರಣವಾಗಿಟ್ಟೆ. ಅವನ್ನು ಓದಿ ಬರೆಯುವ ಹವ್ಯಾಸ ಬೆಳೆಸಿಕೊಂಡೆ. ಅದರ ಜೊತೆಗೆ ಪ್ರಾಚೀನ ಹಸ್ತಪ್ರತಿಗಳನ್ನೂ ಮಠಮಾನ್ಯಗಳಿಂದ ತಂದು ಸಂಗ್ರಹಿಸುವ ಹುಚ್ಚನ್ನು ಹೆಚ್ಚಿಸಿಕೊಂಡೆ.

ನನ್ನ ಗ್ರಂಥಭಂಡಾರದಲ್ಲಿ ಸುಮಾರು ಹತ್ತು ಸಾವಿರ ಅಚ್ಚಾದ ಸಂಸ್ಕೃತ, ಕನ್ನಡ, ಇಂಗ್ಲಿಷ, ಹಿಂದಿ ಗ್ರಂಥಗಳಿವೆ. ಅವುಗಳಲ್ಲಿ ಕೆಲವು ನೂರಾರು ವರ್ಷ ಹಳೆಯವು. ಬೆಂಗಳೂರಿಗೆ ಹೋದಾಗ ಮೆಜೆಸ್ಟಿಕ್ ಚಿತ್ರಮಂದಿರದ ಮುಂದೆ ಹಳೆ ಪುಸ್ತಕಗಳ ರಾಶಿಯ ಅಲಭ್ಯ ಪುಸ್ತಕಗಳನ್ನು ಗಂಟೆಗಟ್ಟಲೆ ಬಿಸಿಲಲ್ಲಿ ನಿಂತು ಹುಡುಕಿ ತೆಗೆಯುವುದು ನನಗೆ ರೂಢಿಯಾಗಿದೆ. ಅಲ್ಲಿ ಅಲ್ಪಬೆಲೆಯಲ್ಲಿ ಉತ್ತಮ ಪುಸ್ತಕಗಳು ಈಗಲೂ ಸಿಗುತ್ತವೆ. ಪ್ರತಿಸಲವೂ ಅಲ್ಲಿಂದ ಒಂದು ಹೊರೆ ಪುಸ್ತಕ ತರುವುದು ನನಗೆ ಅಭ್ಯಾಸವಾಗಿಹೋಗಿದೆ. ನನ್ನ 'ಶಾರದಾಭವನ'ದಲ್ಲಿ ಪ್ರಾಚೀನ ಹಸ್ತಪ್ರತಿಗಳೇ ಎರಡು ಸಾವಿರಕ್ಕೂ ಮಿಗಿಲಾಗಿವೆ. ಹಸ್ತಪ್ರತಿಗಳನ್ನು ವ್ಯವಸ್ಥಿತವಾಗಿ ಇಡುವಲ್ಲಿ ನನ್ನ ಮಕ್ಕಳು ಮತ್ತು ಶ್ರೀಮತಿ ಸಹಕರಿಸುತ್ತಿರುವುದು ನನ್ನ ಭಾಗ್ಯವೆಂದೇ ಬಗೆದಿರುವೆನು.

ಕೆಲವು ಮಠಗಳಲ್ಲಿ ಹಸ್ತಪ್ರತಿಗಳನ್ನು ನಿರ್ಲಕ್ಷ್ಯವಾಗಿಟ್ಟ ಪರಿಣಾಮವಾಗಿ ಅವುಗಳ ಗರಿಗಳು ಅಸ್ತವ್ಯಸ್ತ ಹಾಗು ತ್ರುಟಿತವಾದುದೇ ಹೆಚ್ಚು. ಅವನ್ನು ಕಸವೆಂದು ತಿಪ್ಪೆಗೆ ಚೆಲ್ಲಿದ–ನೀರೊಲೆಗೆ ಸ್ವಾಹಾ ಮಾಡಿದ ಮಹನೀಯರೂ ಉಂಟು. ನಾನು ಮುರಿದ ಓಲೆಗಳ ಚೂರನ್ನೂ ಬಿಡದೆ ತಂದು, ಅವನ್ನು ಅಕ್ಷರಗಳಿಗೆ–ಓಲೆಗರಿ ಅಳತೆಗೆ ವಿಷಯಕ್ಕೆ ಅನುಗುಣವಾಗಿ ಹೊಂದಿಸಿ, ತ್ರುಟಿತ ಗರಿಗಳನ್ನು ದಾರದಿಂದ ಹೊಲಿದು ಪೋಣಿಸಿ ಜತನವಾಗಿಟ್ಟಿರುವೆನು. ಪ್ರತಿ ಭಾನುವಾರ ಹಸ್ತಪ್ರತಿಗಳ ಮೇಲಿನ ಧೂಳಿ ಹೊಡೆದು, ಜಿರಲೆಗಳು ಕಡಿಯದಂತೆ ರಕ್ಷಿಸುವುದು ನನ್ನ ಕಾಯಕವಾಗಿದೆ. ಇಲಿಗಳ ಕಾಟ ತಪ್ಪಿಸಲು ಬೆಕ್ಕನ್ನೂ ಸಾಕಿರುವೆ. ಗ್ರಂಥಗಳನ್ನು ಸಾಗವಾನಿಯ ಗಾಜಿನ ಕಪಾಟುಗಳಲ್ಲಿ ಇಡಲು ಲಾಟರಿ ಲಕ್ಷ್ಮಿಯಾದರು ಒಲಿಯಬಾರದೇ ಎಂದು ಪರಿತಪಿಸುತ್ತಿರುವೆ.

ನನ್ನ ಸಂಗ್ರಹದ ಹಸ್ತಪ್ರತಿಗಳಿಂದ ಅನೇಕ ಸಂಶೋಧಕರು ಸಹಾಯ ಪಡೆಯುತ್ತಿರುವರು. ಡಾ|| ಆರ್. ಸಿ. ಹಿರೇಮಠ ಅವರು ಕೆರೆಯ ಪದ್ಮರಸನ ಚರಿತ್ರ ಕಾವ್ಯವನ್ನು, ಡಾ|| ಎಂ. ಎಸ್. ಸುಂಕಾಪುರ ಅವರು ಶಾಂತವೀರ ದೇಶಿಕನ 'ರಾಜೇಂದ್ರ ವಿಜಯ' ಕಾವ್ಯವನ್ನು, ಡಾ|| ಬಿ. ಬಿ. ಹೆಂಡಿ ಅವರು ಕೆರೆಯ ಪದ್ಮರಸಕೃತ 'ದೀಕ್ಷಾಬೋಧೆ'ಯನ್ನು, ಶ್ರೀ ಎಂ. ವಿ. ಸೀತಾರಾಮಯ್ಯ ಅವರು ಜಾಯಗೊಂಡನ ಕೃತಿಗಳನ್ನು ಸಂಪಾದಿಸುವಲ್ಲಿ ನನ್ನ ಓಲೆಗರಿ ಹಸ್ತಪ್ರತಿಗಳು ಅವರಿಗೆ ಬಹಳ ಸಹಾಯಕವಾಗಿವೆ. ಅವರೆಲ್ಲ ಅದನ್ನು ಪ್ರಾಂಜಲವಾಗಿ ಸ್ಮರಿಸಿರುವರು.

ಈ ಹಸ್ತಪ್ರತಿಗಳನ್ನು ಸಂಗ್ರಹಿಸುವಲ್ಲಿ ನನಗಾದ ಪರಿಶ್ರಮ, ಕೆಲವೊಮ್ಮೆ ಮಾನಸಿಕ ವ್ಯಥೆ ಹೇಳತೀರದು. ಒಂದು ಸಲ ಒಬ್ಬ ಕನ್ನಡ ಶಿಕ್ಷಕ ನನಗೆ ಮೈಸೂರ ಅರಮನೆ ಗ್ರಂಥಮಾಲೆಯ ಕೆಲವು ಸಂಸ್ಕೃತ ಪುರಾಣ ಗ್ರಂಥಗಳನ್ನು, ಕೆಲವು ಹಸ್ತಪ್ರತಿಗಳನ್ನೂ ತಂದುಕೊಟ್ಟ. ಅವನ್ನು ನಾನು ಬೆಲೆಗೆ ಕೊಂಡುಕೊಂಡೆ. ಅವನು ನಮ್ಮ ಮನೆಯಲ್ಲಿಯೇ ಉಂಡು, ಪ್ರವಾಸದ ಖರ್ಚಿಗೆಂದು ಮೇಲೆ ಹಣ ಪಡೆದು ಹೋಗುತ್ತಿದ್ದ. ನಾನು ಅವನಿಗೆ ೪೦ ರೂಪಾಯಿ ಮಾತ್ರ ಬಾಕಿ ಕೊಡಬೇಕಾಗಿತ್ತು. ಆ ಪುಸ್ತಕಗಳಮೇಲೆ ಅವನ ಹೆಸರಿನ ರಬ್ಬರ್ ಸಿಕ್ಕಾ ಹಾಕಿತ್ತು. ಅದಕ್ಕಾಗಿ ಅವನ್ನು ನಾನು ಕೊಂಡ ಬಗ್ಗೆ ಲಿಖಿತದಲ್ಲಿ ಬರೆದು ಕೊಡಲು ಹೇಳಿದೆ. ಅವನು ಇನ್ನೆರಡು ದಿನಗಳಲ್ಲಿ ಬರುವೆನೆಂದು ಹೇಳಿ ಹೋದವನು ನನ್ನ ಮೇಲೆ ಕೇಸು ಹಾಕಿದ. ನೂರಾರು ರೂಪಾಯಿ ನನ್ನಿಂದ ಬರಬೇಕಾಗಿದೆಯೆಂದು ತಕರಾರು ಮಾಡಿದ್ದ. ಕೋರ್ಟಿನಿಂದ ನನಗೆ ಸಮನ್ಸ ಬಂದಿತು. ನ್ಯಾಯಾಧೀಶರ ಮುಂದೆ ನಿಜ ಸಂಗತಿ ಹೇಳಿದೆ. ೪೦ ರೂಪಾಯಿಗಳನ್ನು ಸರಕಾರಿ ಖಜಾನೆಗೆ ಕಟ್ಟಿದೆ. ಹೀಗೆ ಕೆಲವೊಂದು ಸಲ ಮಠಾಧಿಪತಿಗಳೂ ಹಣದಾಸೆಯಿಂದ ನನ್ನನ್ನು ಸತಾಯಿಸಿದ್ದುಂಟು.

ಕೆಲವು ನಿರಕ್ಷರಿಗಳು ಮನೆಗಳಲ್ಲಿ ಹೊತ್ತಿಗೆಗಳನ್ನು ದೇವರ ಜಗುಲಿಯ ಮೇಲಿಟ್ಟು, ನೀರು-ಪತ್ರಿ ಹಾಕಿ ಅವನ್ನು ಹಾಳುಮಾಡುತ್ತಿರುವರು. ಅಂಥವರ

ಮನವೊಲಿಸಿ ಕೇಳಿದಷ್ಟು ನಾನು ಅಮೂಲ್ಯ ಗ್ರಂಥರತ್ನಗಳನ್ನು ಮೌಢ್ಯದ ಸೆರೆಯಿಂದ ಬಿಡಿಸಿ ತಂದಿರುವೆನು. ಪೊತ್ತಿಗೆಗಳಲ್ಲಿ ಬಂಗಾರ ಮಾಡುವ ವಿಧಾನ ಇದೆ; ಗುಪ್ತ ನಿಧಿಯ ಸಂಕೇತವಿದೆ, ಎಂದು ತಿಳಿದು ಜನರು ಅವನ್ನು ಕೊಡುತ್ತಿರಲಿಲ್ಲ. ಆಗ ನಾನು ಅವುಗಳ ಕಟ್ಟು ಬಿಚ್ಚಿ, ಒದ್ದೆಯಿಂದ ಅಕ್ಷರವನ್ನು ಸ್ವಚ್ಛಗೊಳಿಸಿ, ಭೂತಗನ್ನಡಿ ಹಿಡಿದು ಓದುವಂತೆ ಹೇಳುತ್ತಿದ್ದೆ. ಅವು ಬರಿ ವಚನಗಳೆಂದು ಮನವರಿಕೆಯಾದಾಗ ಅವರು ಅವನ್ನು ನನಗೆ ಕೊಡುತ್ತಿದ್ದರು. ಕೆಲವು ವಿಚಾರವಂತರು– "ನಮ್ಮಲ್ಲಿದ್ದ ಪೊತ್ತಿಗೆಗಳು ಹಾಳಾಗುತ್ತವೆ. ಅವನ್ನು ಒಯ್ದು ಸಂಶೋಧನೆ ಮಾಡಿರಿ, ನಮ್ಮ ಹೆಸರು ಕಾಣಿಸಿರಿ" ಎಂದು ಸೌಜನ್ಯದಿಂದ ಹೇಳಿ ಕೊಟ್ಟವರೂ ಉಂಟು. ಅವರ ಉಪಕೃತಿಯನ್ನು ನಾನೆಂದಿಗೂ ಮರೆಯಲಾರೆ.

ಗ್ರಂಥರೂಪದಲ್ಲಿ ಅಚ್ಚಾದ ಮೇಲೆ ಹಸ್ತಪ್ರತಿಗಳು ನಿರುಪಯೋಗಿ ಎಂಬ ತಪ್ಪು ಕಲ್ಪನೆ ಕೆಲವು ಮಠಾಧೀಶರಲ್ಲಿದೆ. ಇಂದು ಅಚ್ಚಾದ ಮಿಲ್ಲಿನ ತೆಳುವಾದ ಕಾಗದದ ಪುಸ್ತಕಗಳ ಆಯುಸ್ಸು ಬಹಳವಾದರೆ ಐವತ್ತು ವರ್ಷ ಅಷ್ಟೆ. ಆದರೆ ಓಲೆಗರಿ-ಕೋರೆಕಾಗದ ಪ್ರತಿಗಳನ್ನು ನಾವು ನೀರು, ಬೆಂಕಿ, ಶಿಥಿಲ ಬಂಧನ, ಇಲಿ, ಹುಳು ಮತ್ತು ಮೂರ್ಖರ ಕೈಯಿಂದ ರಕ್ಷಿಸಿದರೆ ಅವುಗಳ ವಯಸ್ಸು ಸಾವಿರ ವರ್ಷ.

ಪ್ರಾಚೀನ ಕಾವ್ಯ-ವಚನ ಗ್ರಂಥಗಳನ್ನು ಸಂಶೋಧಿಸುವಾಗ ಪಾಠಾಂತರ ಮತ್ತು ಪ್ರಕ್ಷಿಪ್ತ ಅಂಶಗಳನ್ನು ಗುರುತಿಸಲು ಹಸ್ತಪ್ರತಿಗಳ ನೆರವು ಅನಿವಾರ್ಯ. ನಿಜಗುಣ ಶಿವಯೋಗಿಗಳು ಬರೆದ ಕನ್ನಡದ ಮೊದಲ ವಿಶ್ವಕೋಶ 'ವಿವೇಕ ಚಿಂತಾಮಣಿ'ಯ ಅಚ್ಚಾದ ಪ್ರತಿಯಲ್ಲಿ ಪಂ. ಸುಬ್ರಹ್ಮಣ್ಯಶಾಸ್ತ್ರಿಗಳು ನೂರಾರು ಪುಟಗಳ ಪ್ರಕ್ಷಿಪ್ತ ಭಾಗ ಸೇರಿಸಿದ್ದರು. ಓಲೆಗರಿ ಕಟ್ಟುಗಳ ಸಹಾಯದಿಂದ ನಾನು ಅವನ್ನು ಗುರುತಿಸಿ ವಿಸ್ತೃತ ಪ್ರಸ್ತಾವನೆಯೊಂದಿಗೆ ಪ್ರಕಟಿಸಿದೆ. ಅದನ್ನು ವಿದ್ವಾಂಸರು ಮೆಚ್ಚಿದರು; ಸರಕಾರವೂ ಬಹುಮಾನಿಸಿತು. 'ಪಾರಮಾರ್ಥ ಪ್ರಕಾಶಿಕೆ'ಯನ್ನೂ ಹಸ್ತಪ್ರತಿಗಳ ಆಧಾರದಿಂದ ಪರಿಶುದ್ಧವಾಗಿ ಸಂಪಾದಿಸಿದ ತೃಪ್ತಿ ನನಗಿದೆ.

ಕೆಲವು ಹಸ್ತಪ್ರತಿಗಳ ಕೊನೆಯಲ್ಲಿ ಲಿಪಿಕಾರ ಸ್ವಪರಿಚಯದೊಂದಿಗೆ ಗ್ರಂಥವನ್ನು ಬರೆಯಿಸಿದ ದಾನಿಯ ಪ್ರಶಸ್ತಿಯನ್ನೂ, ಬರೆದ ತಿಥಿಯನ್ನೂ ನಿರ್ಣಯಿಸಲು ಸಹಾಯವಾಗುತ್ತದೆ. ಎಷ್ಟೋ ಮಠಗಳ ಗುರುಪರಂಪರೆಯನ್ನೂ ಅವುಗಳ ಮೂಲಕ ಗುರುತಿಸಬಹುದಾಗಿದೆ. ನನ್ನ ಹಲವಾರು ವಿದ್ಯಾರ್ಥಿಗಳು ಸಂಗ್ರಹಿಸಿ ಕೊಟ್ಟಿರುವರು.

ಹಿಂದಿನ ಕಾಲದಲ್ಲಿ ಓಲೆಗರಿಗಳ ಮೇಲೆ ಬರೆಯಲು ಸಾಧನವಾದ ಕಂಠ (ಚಿಂಕ. ಸಂ.) ಎಂಬ ಉಕ್ಕಿನ ವಿವಿಧ ಆಕಾರದ ಲೇಖನಿಗಳನ್ನು, ಅವುಗಳನ್ನಿಡುವ ಕೊಳವೆಗಳನ್ನೂ ಸಂಗ್ರಹಿಸಿರುವೆ. ಕಂಪಾಸಿನಿಂದ ತೆಗೆದ ವಿವಿಧ ಆಕಾರದ ಚಿತ್ರಗಳಿರುವ ನೂರಾರು ಓಲೆಗರಿಗಳನ್ನು ಪ್ರೀತಿಯಿಂದ ಸಂಗ್ರಹಿಸಿರುವೆ. ಬಗೆಬಗೆಯ ಕಡತದ ಕಟ್ಟುಗಳನ್ನೂ ಕಾಯ್ದಿಟ್ಟಿರುವೆ.

ಹಸ್ತಪ್ರತಿಗಳು ಕರ್ನಾಟಕ ಚಿತ್ರಕಲೆಯ ಅಪೂರ್ವ ಅವಶೇಷವೆನಿಸಿವೆ. ವಿಶೇಷವಾಗಿ ಕೋರೆಕಾಗದದ ಮರದ ಮೇಲುಹೊದಿಕೆಗಳಲ್ಲಿ ಬರೆದ ಬಣ್ಣ-ಬಣ್ಣದ ಕಲಾತ್ಮಕ ಚಿತ್ರಗಳು ಕರ್ನಾಟಕ ಚಿತ್ರಕಲೆಯ ವಿಕಾಸದ ಐತಿಹಾಸಿಕ ಅಧ್ಯಯನಕ್ಕೆ ಅಪೂರ್ವ ಸಾಮಗ್ರಿಯೆನಿಸಿವೆ. ಅಂತಹ ನೂರಾರು ಬಣ್ಣದ ಹಲಗೆಗಳ ಸಂಗ್ರಹ ನನ್ನ ಗ್ರಂಥಭಂಡಾರದ ಅಮೂಲ್ಯ ನಿಧಿಯೆನಿಸಿದೆ. ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಶ್ರೀ ನಂಜುಂಡಸ್ವಾಮಿ ಅವರು ಶ್ರೀ ಕೇಸರಸಿಂಗ ಅವರನ್ನು ಬಾಗಲಕೋಟೆಗೆ ಕರೆದುಕೊಂಡು ಬಂದು ನನ್ನ ಸಂಗ್ರಹದ ಹಲವಾರು ಚಿತ್ರದ ಹಲಗೆಗಳ ಕ್ಯಾಮರಾ ಪ್ರತಿಕೃತಿಗಳನ್ನು ಮಾಡಿಕೊಂಡಿರುವುದೊಂದು ವಿಶೇಷ. ಅವು ಗ್ರಂಥರೂಪದಲ್ಲಿ ಅಚ್ಚಾಗಿರುವುದನ್ನು ಕೇಳಿರುವೆ.

ಈ ಹಸ್ತಪ್ರತಿಗಳ ಮೇಲೆ ನನಗೆ ಮಕ್ಕಳಿಗಿಂತಲೂ ಹೆಚ್ಚಿನ ವ್ಯಾಮೋಹ. ಅವನ್ನು ಸಂಗ್ರಹಿಸುವ ಈ ಹುಚ್ಚು ಹವ್ಯಾಸ ನನ್ನ ಮನಸಕ್ಕೆ ಸಂತೃಪ್ತಿ ತಂದಿದೆ; ಸಾಕು. ಅದಕ್ಕಿಂತಲೂ ಹೆಚ್ಚಿನದು ಇನ್ನೇನು ಬೇಕು?



# ಹಸ್ತಪ್ರತಿಗಳ ಸಂಗ್ರಹಕಾರ್ಯದಲ್ಲಿ ನನ್ನ ಅನುಭವ

—ಪ್ರೊ|| ಬಿ. ಬಿ. ಮಹೀಶವಾಡಿ

ನಾನು ಹಸ್ತಪ್ರತಿಗಳ ಸಂಗ್ರಹಕಾರ್ಯ ಕೈಕೊಂಡುದು ತೀರ ಆಕಸ್ಮಿಕ. ನನಗೆ ಸಂಶೋಧನೆಯಲ್ಲಿ ಆಸಕ್ತಿಯುಂಟಾದುದು ಅಧ್ಯಾಪಕ ವೃತ್ತಿಯಲ್ಲಿ ಅಭಿರುಚಿ ಬೆಳೆಯುತ್ತಿರುವ ಸಮಯದಲ್ಲಿ. ವಿದ್ವಾಂಸರಲ್ಲಿಯ ಭಿನ್ನಾಭಿಪ್ರಾಯಗಳನ್ನು ಕುತೂಹಲದಿಂದ ಪರಿಶೀಲಿಸಲು ತೊಡಗಿದಾಗ ಮೂಲ ಹಸ್ತಪ್ರತಿಗಳನ್ನು ನೋಡಬೇಕೆಂಬ ತವಕ ಉಂಟಾಯಿತು. ಹಸ್ತಪ್ರತಿ ಸುಲಭವಾಗಿ ದೊರೆಯುತ್ತಿರಲಿಲ್ಲ. ದೊರೆತರೂ ಓದಲು ಬರುತ್ತಿರಲಿಲ್ಲ. ಆದರೆ, ಸತ್ಯಸಂಗತಿಯನ್ನು ಹೊರಗೆಡಹಿ ವಿವಾದಗಳನ್ನು ಹೋಗಲಾಡಿಸಬೇಕು, ಎಂಬ ತೀವ್ರ ಜಿಜ್ಞಾಸೆ ಮನಸ್ಸಿನಲ್ಲಿ ಮಂಥನ ನಡೆಸಿತು. ಹೀಗಾಗಿ ಸತ್ಯದ ಬೆನ್ನುಹತ್ತಿ ಸಂಶೋಧನೆಯ ಕೈಗೆ ಸಿಕ್ಕೆ.

ನಾನು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವಾಗ ನನಗೆ ತಿಳಿಯದಂತೆಯೆ ಪದ್ಯರಚನೆಯ ಚಟ ನನ್ನನ್ನು ಆವರಿಸಿತ್ತು. ಮಿರ್ಜಿ ಅಣ್ಣಾರಾಯರು, ಟಿ. ಕೆ. ಪಾಟೀಲರು ನನ್ನ ಪದ್ಯರಚನೆಯ ಶಕ್ತಿಯ ಬಗೆಗೆ ಬಹಳ ಕುತೂಹಲ ತೋರಿಸಿದ್ದರು. ಡಾ|| ರಂ. ಶ್ರೀ ಮುಗಳಿ ಅವರ ಪರಿಚಯ ಮಾಡಿಸಿದ್ದರು. ಅವರ ಮಾರ್ಗದರ್ಶನದಿಂದ ನನ್ನ ಪದ್ಯರಚನಾ ವಿಧಾನದಲ್ಲಿ ಮತ್ತು ವಿದ್ಯಾಭ್ಯಾಸದ ರೀತಿಯಲ್ಲಿ ಹೊಸ ಶಕ್ತಿಯೇ ನನ್ನಲ್ಲಿ ಆವಿರ್ಭವಿಸಿತು. ಕನ್ನಡ ಎಂ.ಎ. ಮಾಡಿ ರಾಜಾರಾಮ ಕಾಲೇಜಿನಲ್ಲಿ ಅಧ್ಯಾಪಕನಾಗಿ ಸೇರಿಕೊಂಡೆ. ಡಾ|| ಎ. ಎನ್. ಉಪಾಧ್ಯೆಯವರ ನಿಕಟ ಸಂಪರ್ಕ ಉಂಟಾಯಿತು. ಎಂ.ಎ.ಯಲ್ಲಿ ಎರಡು ಪೇಪರು ಅರ್ಧಮಾಗಧಿ ಓದುವಾಗಲೆ ಉಪಾಧ್ಯೆಯವರ ಸಂಪರ್ಕ ಬಂದಿತ್ತು. ಅಧ್ಯಾಪಕನಾದಮೇಲೆ ಅವರ ಕಾಲೇಜಿನಲ್ಲಿಯೆ ಸಹೋದ್ಯೋಗಿಯಾಗಿ ಕೆಲಸ ಮಾಡುವ ಸುಯೋಗ ಪ್ರಾಪ್ತವಾಯಿತು. ಹಸ್ತಪ್ರತಿಗಳನ್ನು ಕಣ್ಣುಬಿಟ್ಟು ಕುತೂಹಲದಿಂದ ನೋಡಲು ತೊಡಗಿದ್ದು ಅವರ ಮನೆಯಲ್ಲಿಯೇ.

'ಪ್ರಶ್ನೋತ್ತರ ರತ್ನಮಾಲಿಕೆ' ನನ್ನ ಕೈಗೆ ಸಿಕ್ಕುದು ಬಹಳ ವಿಚಿತ್ರ. ಮಿರ್ಜಿ ಅಣ್ಣಾರಾಯರು ನಮ್ಮೂರಿಗೆ ಬಂದಿದ್ದರು. ಆಗ ಒಬ್ಬ ಸಾಮಾನ್ಯ ಮುಸಲ್ಮಾನ ಗೃಹಸ್ಥನು ತಮ್ಮ ಮನೆಯಲ್ಲಿ ಇದ್ದ ಒಂದು ಹಸ್ತಪ್ರತಿಯನ್ನು ಅವರ ಕೈಗೆ ಕೊಟ್ಟು 'ಇದರಲ್ಲಿ ಏನಿದೆ ಹೇಳಿರಿ' ಎಂದನು. ಅವರು ಊರಿಗೆ ಒಯ್ದು ಸಂಶೋಧನೆ ಮಾಡಿ ತಿಳಿಸುವೆನೆಂದರು. ಅನೇಕ ದಿನಗಳು ಕಳೆದವು. ಹಲವಾರು ಸಾರೆ ಆ ಗೃಹಸ್ಥನು

ನನ್ನ ಬಳಿಗೆ ಬಂದು 'ಆಣ್ಣಾಚಾರ್ಯರಿಂದ ಪತ್ರ ಬಂದಿದೆಯೇನು' ಎಂದು ವಿಚಾರಿಸಿದನು. ಕೊನೆಗೆ, 'ನನ್ನ ಹಸ್ತಪ್ರತಿಯನ್ನು ನನಗೆ ಕೊಡಿಸಿರಿ' ಎಂದ ಬೆನ್ನು ಹತ್ತಿದನು. ನಾನು ಮಿರ್ಜಿಯವರಿಗೆ ಬರೆದು ಅದನ್ನು ತರಿಸಿಕೊಂಡೆನು. ಮಿರ್ಜಿಯವರ ಪತ್ರವೂ ಅದರ ಜೊತೆಗೇ ಇತ್ತು. 'ಹಸ್ತಪ್ರತಿಯಲ್ಲಿ ಅಂಥ ಮಹತ್ವದ ವಿಷಯವೇನೂ ಇಲ್ಲ. ಬಸದಿಯ ಪಂಡಿತರು ತಮಗೆ ಬೇಕಾಗುವ ಮಂತ್ರಗಳನ್ನು ಬರೆದು ಸಂಗ್ರಹಿಸಿ ಇಟ್ಟುಕೊಂಡಿದ್ದಾರೆ, ಅಷ್ಟೆ' ಎಂದು ಬರೆದಿದ್ದರು. ಅದನ್ನೇ ಆ ಗೃಹಸ್ಥನಿಗೆ ತೋರಿಸಿದೆನು. 'ಹಾಗಾದರೆ, ಅದು ನನಗೇನೂ ಬೇಡ. ನಿಮ್ಮ ಬಳಿಯಲ್ಲಿಯೇ ಇಟ್ಟುಕೊಳ್ಳಿರಿ' ಎಂದನು. ಅದೇ ನನ್ನ ಹಸ್ತಪ್ರತಿಸಂಗ್ರಹದ ಪ್ರಥಮ ಗ್ರಂಥ (೧೯೫೨).

ಸುಬಲಸಾಗರ ಮುನಿಗಳು ನನಗೆ 'ಸಿದ್ಧಸಾಗರ ಚರಿತ್ರೆ'ಯನ್ನು ಬರೆಯಲು ಆಜ್ಞಾಪಿಸಿದರು. ಮರಾಠಿಯಲ್ಲಿ ದ್ವಾರಪಾಲ ಕವಿ ಸಿದ್ಧಸಾಗರ ಚರಿತ್ರೆಯನ್ನು ಬರೆದಿದ್ದಾನೆಂದು ಕೇಳಿದ್ದೆನು. ಆದರೆ, ನೋಡಿರಲಿಲ್ಲ, ಓದಿರಲಿಲ್ಲ. ಬೆಳಗಾವಿಯ ಮಹಾವೀರ ಪ್ರೆಸ್ಸಿನಲ್ಲಿ ಅದನ್ನು ಹುಡುಕಿ ತೆಗೆದೆನು. ಅದು ಮರಾಠಿ ಕಾವ್ಯ. 'ಓವಿ' ಛಂದಸ್ಸಿನಲ್ಲಿ ಬರೆಯಲ್ಪಟ್ಟಿತ್ತು. ಅದನ್ನು ಓದಿ ಕನ್ನಡದಲ್ಲಿ ಕೃತಿ ರಚಿಸಿದಾಗ ಸುಬಲಸಾಗರರು ಅದನ್ನು ಅಚ್ಚುಮಾಡಿಸಿದರು. ಆ ಸಂದರ್ಭದಲ್ಲಿ ನಮ್ಮೂರಿನ ಒಬ್ಬರು ಹಿರಿಯರು ತಮ್ಮ ಮನೆಯಲ್ಲಿಯ ಒಂದು ಹಳೆಯ ಗ್ರಂಥವನ್ನು ತಂದು ಕೊಟ್ಟರು. ಅದರ ಪ್ರಾರಂಭದ ಹಾಗೂ ಕೊನೆಯ ಪಾನುಗಳು ಹರಿದಿದ್ದವು. ಅದನ್ನು ಪರಿಶೀಲಿಸಿ ಪ್ರಕಟಿಸಬೇಕೆಂದು ಸ್ವಾಮಿಗಳು ನನಗೆ ಹೇಳಿದರು. ಆ ಕಾರ್ಯ ಕೈಕೊಂಡು ಪರಿಶ್ರಮ ಮಾಡಲು ತೊಡಗಿದಾಗ 'ಜ್ಞಾನಭಾಸ್ಕರ ಚರಿತ್ರೆ', 'ಸುವಿಚಾರ ಚರಿತ್ರೆ'ಗಳು ಹಸ್ತಪ್ರತಿ ಸ್ವರೂಪದಲ್ಲಿ ನನಗೆ ನೋಡಲು ದೊರೆತವು. ಅಲ್ಲಿಂದಲೆ ನನ್ನ ಗ್ರಂಥಸಂಪಾದನಾಕಾರ್ಯ ಪ್ರಾರಂಭವಾಯಿತು (೧೯೬೯) ಎಂದು ಹೇಳಬಹುದು.

ನಾನು ಕ. ವಿ. ವಿ. ಯಲ್ಲಿ ಪ್ರಾಧ್ಯಾಪಕನಾಗಿ ಬಂದಮೇಲೆ (೧೯೭೨) 'ಅನಂತನಾಥ ಪುರಾಣ', 'ಸಮ್ಯಕ್ತ್ವಕೌಮುದಿ,' 'ನೇಮಿಜಿನೇಶ ಸಂಗತಿ'ಗಳನ್ನು ಸಂಪಾದನೆ ಮಾಡಿ ಪ್ರಕಟಿಸುವ ಕಾರ್ಯದಲ್ಲಿ ನಿರತನಾದೆನು. ಆ ಪ್ರಸಂಗದಲ್ಲಿ ನಿಜವಾಗಿಯೂ ನನಗೆ ಕೋರಿಕಾಗದದ ಮತ್ತು ತಾಡಪತ್ರಿಯ ಹಸ್ತಪ್ರತಿಗಳನ್ನು ಓದುವ ಅಭ್ಯಾಸವಾಯಿತು. ಅನೇಕ ಹಸ್ತಪ್ರತಿಗಳನ್ನು ಕರ್ನಾಟಕ ವಿಶ್ವವಿದ್ಯಾಲಯದ ಸಂಗ್ರಹದಲ್ಲಿ ನೋಡುವ ಅನುಕೂಲತೆ ದೊರೆಯಿತು. ಹಲವಾರು ಹಸ್ತಪ್ರತಿಗಳನ್ನು ಮುಂದಿಟ್ಟುಕೊಂಡು ಪಾಠಾಂತರಗಳನ್ನು ಗುರುತಿಸುವ ಕೆಲಸದಲ್ಲಿ ಪರಿಣತಿಯುಂಟಾಯಿತು. ಬೇರೆ ಬೇರೆ ಹಸ್ತಪ್ರತಿಗಳನ್ನು ಅಧ್ಯಯನ ಮಾಡುವ, ನೋಡುವ, ಹುಡುಕುವ, ಸಂಗ್ರಹಿಸುವ ಕೆಲಸ ತೀವ್ರ ಸ್ವರೂಪದಲ್ಲಿ ನಡೆಯಿತು. ತತ್ಪರಿಣಾಮವಾಗಿ ಈಗ ನನ್ನ ಬಳಿಯಲ್ಲಿಯೇ ಅನೇಕ ವ್ಯಕ್ತಿಗಳಿಂದ, ಸಂಸ್ಥೆಗಳಿಂದ,

ಹಸ್ತಪ್ರತಿಗಳು ಸಂಗ್ರಹಗೊಂಡಿವೆ. ಅವುಗಳಲ್ಲಿ ಕೆಲವು ಅಚ್ಚಾಗಿಲ್ಲ. ಕೆಲವು ಅಚ್ಚಿಗೆ ಸಿದ್ಧವಾಗಿವೆ.

ಕೆಲವು ಮಹತ್ವದ ಅನುಭವಗಳನ್ನು ವಿದ್ವಾಂಸರ ಅವಗಾಹನೆಗಾಗಿ ಇಲ್ಲಿ ಸಂಗ್ರಹಿಸಿ ಕೊಡುತ್ತಿದ್ದೇನೆ.

### ೧ ಪ್ರಶ್ನೋತ್ತರ ರತ್ನಮಾಲಿಕೆ :

೧೯೫೮ರಲ್ಲಿಯೇ 'ಪ್ರಶ್ನೋತ್ತರ ರತ್ನಮಾಲಿಕೆ'ಯ ಹಸ್ತಪ್ರತಿ ನನ್ನ ಕೈಗೆ ಬಂದಿದ್ದರೂ ಬಹಳ ದಿವಸಗಳವರೆಗೆ ಅದನ್ನು ಓದಲು ನನಗೆ ಸಾಧ್ಯವಾಗಿರಲೇ ಇಲ್ಲ. ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಇದ್ದಾಗ (೧೯೬೦–೧೯೬೮) 'ಜ್ಞಾನಭಾಸ್ಕರ ಚರಿತೆ'ಯ ಸಂಪಾದನ ಕಾರ್ಯ ನಡೆದಿತ್ತು. ಆಗ 'ಜ್ಞಾನಭಾಸ್ಕರ ಚರಿತೆ'ಯನ್ನೂ 'ಸುವಿಚಾರ ಚರಿತೆ'ಯನ್ನೂ ಹಸ್ತಪ್ರತಿಯಲ್ಲಿ ಓದಿ ಬಹಳ ಕಷ್ಟಪಟ್ಟು ಅರ್ಥಮಾಡಿಕೊಂಡೆನು. ೧೯೬೯ರಲ್ಲಿ 'ಜ್ಞಾನಭಾಸ್ಕರ ಚರಿತೆ' ಅಚ್ಚಾಯಿತು. ಆ ಸಂದರ್ಭದಲ್ಲಿ 'ಪ್ರಶ್ನೋತ್ತರ ರತ್ನಮಾಲಿಕೆ'ಯ ಮೇಲೆಯೂ ಹಲವು ಸಾರೆ ಕಣ್ಣಾಡಿಸಿದ್ದೆನು. ಅದು ಸಂಸ್ಕೃತ ಕೃತಿಯಾದ್ದರಿಂದ ಆಗ ನನಗೆ ಅದನ್ನು ಅರ್ಥ ಮಾಡಿಕೊಳ್ಳಲು ಆಗಲಿಲ್ಲ. ಆದರೆ ಅದನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ ಮಾತ್ರ ದಿನಗಳೆದಂತೆ ಹೆಚ್ಚಾಗುತ್ತಲೆ ನಡೆದಿತ್ತು. ಬೆಳಗಾವಿ ಲಿಂಗರಾಜ ಕಾಲೇಜಿನಲ್ಲಿ, ಗದಗ ಜೆ. ಟಿ. ಕಾಲೇಜಿನಲ್ಲಿ ಬಿ.ಎ. ವಿದ್ಯಾರ್ಥಿಗಳಿಗೆ ಸಾಹಿತ್ಯ ಚರಿತ್ರೆಯನ್ನು ಕಲಿಸುವ ಪ್ರಸಂಗ ನನ್ನಪಾಲಿಗೇ ಬಂದಿತ್ತು. ನೃಪತುಂಗನ ವಿಷಯ ಬಂದಾಗಲೆಲ್ಲ 'ಪ್ರಶ್ನೋತ್ತರ ರತ್ನಮಾಲಿಕೆ' ನನ್ನ ಮನಸ್ಸನ್ನು ಕಿಂಡುತ್ತಲೇ ಇತ್ತು. ಕ. ವಿ. ವಿ. ಗೆ ಬಂದಮೇಲೆ ಸಹ ಸಾಹಿತ್ಯ ಚರಿತ್ರೆಯನ್ನು ಎಂ. ಎ. ವಿದ್ಯಾರ್ಥಿಗಳಿಗೆ ಪಾಠ ಹೇಳುವ ಕೆಲಸ ನನಗೆ ಲಭ್ಯವಾದ್ದರಿಂದ ಹೆಚ್ಚಿನ ಅಧ್ಯಯನಕ್ಕೆ ತೊಡಗಬೇಕಾಯಿತು. ಗೋವಿಂದ ಪೈ ಅವರಿಂದ ಹಿಡಿದು ಡಾ|| ಕಲಬುರ್ಗಿಯವರವರೆಗೂ ವಿದ್ವಾಂಸರಲ್ಲಿ 'ಕವಿರಾಜಮಾರ್ಗದ' ಕರ್ತೃ ಮತ್ತು 'ಪ್ರಶ್ನೋತ್ತರ ರತ್ನಮಾಲಿಕೆ'ಯ ಕರ್ತೃ ಯಾರು ಎಂಬುದು ಭಾರೀ ವಾದ-ವಿವಾದದ ವಿಷಯವೇ ಆಗಿತ್ತು. ನೃಪತುಂಗನು ಇವೆರಡೂ ಕೃತಿಗಳ ಕರ್ತೃವಲ್ಲ ಎಂದೇ ವಿದ್ವಾಂಸರೆಲ್ಲರು ನಿರ್ಧರಿಸಿದಂತಿತ್ತು. ಪಾಠಕ ಮತ್ತು ಗೋವಿಂದಪೈ ಅವರನ್ನುಳಿದು ಯಾವ ವಿದ್ವಾಂಸರೂ 'ಪ್ರಶ್ನೋತ್ತರ ರತ್ನಮಾಲಿಕೆ'ಯನ್ನು ಕಂಡಿರಲಿಲ್ಲ. ಉಳಿದವರು ಸುಮ್ಮನೆ ಒಣವಾದವನ್ನು ಬೆಳೆಸಿದ್ದರು. ಯಾರಿಗೂ ಲಭ್ಯವಾಗಿರದ 'ಪ್ರಶ್ನೋತ್ತರ ರತ್ನಮಾಲಿಕೆ'ಯ ಮೂಲ ಹಸ್ತಪ್ರತಿ ನನ್ನ ಬಳಿಯಲ್ಲಿಯೇ ಇರುವಾಗ ನಾನೇಕೆ ಅದನ್ನು ಅಧ್ಯಯನಮಾಡಿ ಸತ್ಯಸಂಗತಿಯನ್ನು ಹೊರಗೆಡಹದೆ ಸುಮ್ಮನಿರಬೇಕು? ಎಂದು ನನ್ನ ಅಂತರಂಗದಲ್ಲಿ ಕೋಲಾಹಲ ನಡೆಯಿತು. ತತ್ಪರಿಣಾಮವಾಗಿ ಸಂಶೋಧನೆ ತೀವ್ರವಾಗಿ ನಡೆದು ೧೯೭೭ರಲ್ಲಿ ಪ್ರಸ್ತುತ ಕೃತಿ ನನ್ನಿಂದ ಪ್ರಕಟವಾಯಿತು. ಹಳಗನ್ನಡ ವ್ಯಾಖ್ಯಾನ, ಹೊಸಗನ್ನಡ ಗದ್ಯಾನುವಾದ, ಪದ್ಯಾನುವಾದ

ಮತ್ತು ಇಲ್ಲಿಯವರೆಗೆ ನಡೆದು ಬಂದ ವಾದವಿವಾದಗಳ ಪರಿಶೀಲನೆಯಿಂದ ಒಡಗೂಡಿದ ದೀರ್ಘಪ್ರಸ್ತಾವನೆಯೊಂದಿಗೆ ಗ್ರಂಥ ಅಚ್ಚಾದಾಗ ಅನೇಕರಿಗೆ ಆಶ್ಚರ್ಯ !

'ಪ್ರಶ್ನೋತ್ತರ ರತ್ನಮಾಲಿಕಾ' (೧೯೭೭) ಗ್ರಂಥ-ಪ್ರಕಟನೆಯಿಂದ ಅದು ನೃಪತುಂಗನ ಕೃತಿಯೆಂದೂ, ಅದು ಜೈನಧರ್ಮದ ತತ್ವಗಳಿಗೆ ಸಂಬಂಧಿಸಿದ ಗ್ರಂಥವೆಂದೂ, ಅದನ್ನು ಬರೆದ ನೃಪತುಂಗ ಜೈನನೆಂದೂ ನಿರಾಯಾಸವಾಗಿ ಸಿದ್ಧವಾಗುವುದು.

**೨. ಜ್ಞಾನಭಾಸ್ಕರ ಚರಿತೆ ಮತ್ತು ಸುವಿಚಾರ ಚರಿತೆ :**

'ಜ್ಞಾನಭಾಸ್ಕರ ಚರಿತೆ'ಯನ್ನು (೧೯೬೯ರಲ್ಲಿ) ಸಂಪಾದಿಸಿ ಪ್ರಕಟಿಸಿದ್ದೇನೆ. 'ಸುವಿಚಾರ ಚರಿತೆ'ಯನ್ನು ಸಂಪಾದಿಸಿ ಇದೀಗ ಕ.ವಿ.ವಿ.ಯಿಂದ ಪ್ರಕಟಿಸುತ್ತಿದ್ದೇನೆ (೧೯೮೦). ಇವುಗಳನ್ನು ಬರೆದ ನೇಮಣ್ಣ, ನೇಮಿಪ್ರತಿ ಒಬ್ಬನೇ ಎಂಬುದನ್ನೂ ಆಗಲೆ ಸ್ಥಾಪಿಸಿದ್ದೇನೆ. (ಕ.ವಿ.ವಿ. ಜರ್ನಲ್ ಮತ್ತು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ). ಡಾ|| ಎ.ಎನ್. ಉಪಾಧ್ಯೆಯವರ ಹಸ್ತಪ್ರತಿ, ನನ್ನ ಸ್ವಂತ ಸಂಗ್ರಹದ ಹಸ್ತಪ್ರತಿ ಮತ್ತು ಕ.ವಿ.ವಿ. ಸಂಗ್ರಹದ ಹಸ್ತಪ್ರತಿಗಳನ್ನು ಆಧಾರವಾಗಿ ಇಟ್ಟುಕೊಂಡಿದ್ದೇನೆ. ಸುವಿಚಾರಚರಿತೆ ೧೨ ಸಂಧಿಗಳ ಕಾವ್ಯ (ಮೈ.ವಿ.ವಿ. ತಿಳಿದಂತೆ ೧೦ ಸಂಧಿಯ ಕಾವ್ಯವಲ್ಲ).

**೩. ಚಿಕ್ಕಮಲ್ಲಣ ಕವಿಯ ಸಮ್ಯಕ್ತ್ವಕೌಮುದಿ :**

ಮೂರನೆಯ ಮಂಗರಸನ 'ಸಮ್ಯಕ್ತ್ವಕೌಮುದಿ' ಗ್ರಂಥವನ್ನು ಪರಿಷ್ಕರಿಸಿ ಕ. ವಿ. ವಿ.ದಿಂದ ಸಂಪಾದಿಸಿ ಪ್ರಕಟಿಸುವ ಸಂದರ್ಭದಲ್ಲಿ ಚಿಕ್ಕಮಲ್ಲಣ ಕವಿಯ ಸಮ್ಯಕ್ತ್ವಕೌಮುದಿ ಗ್ರಂಥ ನನ್ನಿಂದ ಶೋಧವಾಯಿತು. ಕವಿಚರಿತ್ರೆಕಾರರಿಗೂ ವಿದ್ವಾಂಸರಿಗೂ ತಿಳಿಯದ ಈ ಕವಿ ಹಾಗೂ ಕೃತಿಯ ಬಗೆಗೆ ಪ್ರಬುದ್ಧ ಕರ್ಣಾಟಕ, ಕರ್ನಾಟಕ ಭಾರತಿ ಮತ್ತು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಲೇಖನಗಳನ್ನು ಬರೆದು ಪ್ರಕಟಿಸಿದ್ದೇನೆ. ಮತ್ತು ಪ್ರಸ್ತುತ ಕೃತಿಯನ್ನು ಪ್ರಕಟನೆಗೆ ಎತ್ತಿಕೊಳ್ಳಲಾಗಿದೆ. ಇಷ್ಟೆಲ್ಲ ಆದಮೇಲೆ, ಈಗ ವೀರಶೈವ ಅಪ್ರಕಟಿತ ಕೃತಿಗಳಲ್ಲಿ ಕಾಣಿಸಿದ 'ತರ್ಕಕೌಮುದಿ' (ಅಪೂರ್ಣ) ಯನ್ನು ಬರೆದ ಚಿಕ್ಕಮಲ್ಲಣ ಈತನೇ ಎಂಬ ಅಂಶವನ್ನೂ ತಿಳಿಸಿದ್ದೇನೆ. 'ಸಮ್ಯಕ್ತ್ವಕೌಮುದಿ' ಎಂಬ ಹೆಸರೇ ತಪ್ಪಾಗಿ 'ತರ್ಕಕೌಮುದಿ' ಎಂದು ನಮೂದಾಗಿದೆ. ಕವಿ ಜೈನ. ಕೃತಿಯಲ್ಲಿ ಬರುವ ವಿಷಯ ಜೈನ ಶ್ರಾವಕ ಧರ್ಮವನ್ನು ಕುರಿತದ್ದು. ಈ ಕೃತಿಯ ಸಂಪೂರ್ಣ ಹಸ್ತಪ್ರತಿ ನನ್ನಬಳಿಯಲ್ಲಿ ಸುರಕ್ಷಿತವಾಗಿದೆ.

**೪. ಷೋಡಶಭಾವನಾ ಚರಿತ್ರೆ :**

ಷೋಡಶಭಾವನಾ ಚರಿತ್ರೆಯ ಹಸ್ತಪ್ರತಿಯನ್ನು ಬಹಳ ಪರಿಶ್ರಮದಿಂದ ಸಂಗ್ರಹಿಸಿ, ಕನ್ನಡದಲ್ಲಿ ಪ್ರಪ್ರಥಮ ಬಾರಿಗೆ ಸಂಪಾದಿಸಿ, ಇದೀಗ ಪುಸ್ತಕವನ್ನು

ಪ್ರಕಟಿಸುತ್ತಿದ್ದೇನೆ. ಈ ಗ್ರಂಥದ ಅಸ್ತಿತ್ವವನ್ನು ಮೊದಲ ಸಲ ಲೇಖನಗಳ ಮುಖಾಂತರ ಆಗಲೆ ಕನ್ನಡ ನುಡಿ, ಕರ್ನಾಟಕ ಭಾರತಿಗಳಲ್ಲಿ ಪ್ರಕಟಿಸಲಾಗಿದೆ. 'ಕವಿ ಶಾಂತಿಕೀರ್ತಿಯ ಮೇಲೆ ಹೊಸಬೆಳಕು' ಎಂಬ ಲೇಖನ ನನ್ನ 'ಜೈನವಾಙ್ಮಯ ಪರಿಶೋಧನೆ' ಎಂಬ ಗ್ರಂಥದಲ್ಲಿ ಬಂದಿದೆ (೧೯೭೭). ಅದರಲ್ಲಿ 'ಷೋಡಶಭಾವನಾ ಚರಿತ್ರೆ'ಯಲ್ಲದೆ ಇನ್ನೂ ಹಲವಾರು ಕೃತಿಗಳ ಉಲ್ಲೇಖ ವಿವರವಾಗಿ ಕೊಟ್ಟಿದೆ. 'ಷೋಡಶಭಾವನಾ ಚರಿತೆ' ಗ್ರಂಥದ ಪ್ರಸ್ತಾವನೆಯಲ್ಲಿ ಶಾಂತಿಕೀರ್ತಿಯ ಸಮಗ್ರ ಕೃತಿಗಳ ಪರಿಶೀಲನೆ ಇದೆ.

ಇನ್ನೂ ಹತ್ತಾರು ಹಸ್ತಪ್ರತಿಗಳು ನನ್ನಲ್ಲಿವೆ. ಅವು ಇನ್ನೂ ಅಪ್ರಕಟಿತ. ಅವುಗಳ ಹೆಸರುಗಳನ್ನೂ, ವಿವರವನ್ನೂ ಬೇರೆಡೆಯಲ್ಲಿ ಲೇಖನಗಳ ಮುಖಾಂತರ ಕೊಡಲಿರುವೆನು.

ಅಪ್ರಕಟಿತ ಹೊಸ ಹಸ್ತಪ್ರತಿಗಳ ಸಂಶೋಧನೆಯಿಂದ ಹೊಸ ಲೋಕವೇ ತೆರೆದು ತೋರಿ ಮನಸ್ಸಿಗೆ ಅಮಿತ ಆನಂದವಾಗುತ್ತಿದೆ. ಹಸ್ತಪ್ರತಿಗಳ ಸಂಗ್ರಹಣೆ, ಸಂರಕ್ಷಣೆ ನನಗೆ ಅಮೌಲ್ಯವೆನಿಸಿದೆ. ಏಕೆಂದರೆ, ಸಂದಿಗ್ಧ ವಿಷಯಗಳು ಸ್ಪಷ್ಟವಾಗುತ್ತವೆ. ವಾದವಿವಾದಗಳು ತೊಲಗುತ್ತವೆ. ಸುಳ್ಳು ಹೇಳಿಕೆಗಳು ಕರಗುತ್ತವೆ. ಹೊಸ ಸೃಷ್ಟಿಯೇ ನಮ್ಮ ಅಧ್ಯಯನಕ್ಕೆ ಅಳವಡುತ್ತದೆ. ಹಸ್ತಪ್ರತಿ ಸಂಗ್ರಹ ಕಾರ್ಯ, ವ್ಯಯಕ್ತಿಕವಾಗಿ, ಸಾಂಘಿಕವಾಗಿ ನಡೆದಷ್ಟೂ ಒಳ್ಳೆಯದೆ. ಅದು ನಮ್ಮ ಸಾಂಸ್ಕೃತಿಕ ಸಂಪತ್ತು. ಅದು ನಾಡಿನ ಜ್ಞಾನ ನಿಧಿ. ನವನಾಗರಿಕತೆಯ ಹೆಮ್ಮರದ ಬೇರು ಅದರಲ್ಲಿವೆ.

———

## ಕನ್ನಡ ನಾಡಿನಲ್ಲಿ ಹಸ್ತಪ್ರತಿಗಳ ಸಂಗ್ರಹ

೧೯ನೆಯ ಶತಮಾನದ ಆರಂಭ ಕಾಲದಿಂದಲೂ ಕನ್ನಡನಾಡಿನ ಹಲವು ಸಂಸ್ಥೆಗಳು, ಹಲವಾರು ವ್ಯಕ್ತಿಗಳು ಸಾಹಿತ್ಯಪ್ರಚಾರ, ಧರ್ಮಪ್ರಸಾರ ಮಾಡುವ ಉದ್ದೇಶದಿಂದ ಕೈಬರಹಗಳನ್ನು ಸಂಗ್ರಹಿಸುತ್ತಲೂ ಗ್ರಂಥಪ್ರಕಟನೆ ಮಾಡುತ್ತಲೂ ಬಂದಿರುವರು. ಮಂಗಳೂರು, ಬಳ್ಳಾರಿ, ಧಾರವಾಡಗಳಲ್ಲಿದ್ದ ಕ್ರಿಶ್ಚಿಯನ್ ಮಿಷನರಿಗಳು 'ಬಸವ ಪುರಾಣ', 'ಗದುಗಿನ ಭಾರತ', 'ಚನ್ನಬಸವ ಪುರಾಣ', 'ಜೈಮಿನಿ ಭಾರತ', 'ಶಬ್ದಮಣಿ ದರ್ಪಣ' ಮುಂತಾದ ಕೃತಿಗಳನ್ನು ಹಲವು ಹಸ್ತಪ್ರತಿಗಳ ಆಧಾರದಿಂದ ಪರಿಷ್ಕರಿಸಿ ಪ್ರಕಟಿಸಿದರು. ಅವರು ಬಳಸಿಕೊಂಡಿದ್ದ ಹಸ್ತಪ್ರಗತಿಳು ಈಗ ಎಲ್ಲಿವೆಯೋ ತಿಳಿಯದು. ಮೈಸೂರಿನ ಯಜಮಾನ್ ವೀರಸಂಗಪ್ಪನವರು, ಪಿ. ಆರ್. ಕರಿಬಸವಶಾಸ್ತ್ರಿಗಳು, ಎಸ್. ಆರ್. ಕರಿಬಸವಶಾಸ್ತ್ರಿಗಳು, ಬಸವಾರಾಧ್ಯರು, 'ಕಾವ್ಯಮಂಜರಿ' ('ಕಾವ್ಯ ಕಲಾನಿಧಿ')ಯ ಎಂ. ಎ. ರಾಮಾನುಜಯ್ಯಂಗಾರ್ಯರು ಮತ್ತು ಎಸ್. ಜಿ ನರಸಿಂಹಾಚಾರ್ಯರು ಹಸ್ತಪ್ರತಿಗಳನ್ನು ಸಂಗ್ರಹಿಸುತ್ತಲೂ ಒಳ್ಳೊಳ್ಳೆಯ ಗ್ರಂಥಗಳನ್ನು ಅಚ್ಚುಹಾಕಿಸಿದ್ದುಂಟು. ಇವರಲ್ಲಿದ್ದ ಹಸ್ತಪ್ರತಿಸಂಗ್ರಹದ ಬಹುಭಾಗ ಮೈಸೂರು ಪ್ರಾಚ್ಯ ಪುಸ್ತಕಭಂಡಾರಕ್ಕೆ ಸೇರಿರಬೇಕು.

—ಎಚ್. ದೇವೀರಪ್ಪ

('ಕನ್ನಡ ಹಸ್ತಪ್ರತಿಗಳ ಇತಿಹಾಸ', ಬೆಂಗಳೂರು, ಪು, ೧೧೫)

# ಹಸ್ತಪ್ರತಿಗಳ ಸಂಗ್ರಹಕಾರ್ಯದಲ್ಲಿ ನನ್ನ ಅನುಭವ

— ಜಿ. ಅಶ್ವತ್ಥನಾರಾಯಣ

ಪ್ರಾಚೀನ ಕಾವ್ಯ, ಸಾಹಿತ್ಯ, ಶಾಸ್ತ್ರಗ್ರಂಥಗಳ ಪ್ರಕಟನೆ, ಪಾಠಪರಿಷ್ಕರಣ, ಕವಿಯ ಪಾಠವಂತೆ ಮೂಲಕೃತಿಯ ಸ್ವರೂಪನಿರ್ಧಾರ ಇತ್ಯಾದಿಗಳಿಗೆ ಮೂಲ ಆಧಾರ–ಆಕರವೆಂದರೆ ತಾಳೆಯೋಲೆಗಳು. ಅವುಗಳ ಸಂಗ್ರಹಕಾರ್ಯ, ಸಂರಕ್ಷಣೆ, ಸುವ್ಯವಸ್ಥಿತ ಜೋಡಣೆ, ಮತ್ತು ಅವುಗಳ ವಿವರಣಾತ್ಮಕ ಸೂಚಿಗಳನ್ನು ಸಿದ್ಧಪಡಿಸುವುದು—ಈ ಕಾರ್ಯ ಸಮರ್ಪಕವಾಗಿ ನಡೆದಷ್ಟೂ ಗ್ರಂಥಸಂಪಾದನ ಕಾರ್ಯವೂ ಸಮರ್ಪಕವಾಗಿ ಸಾಗುವುದು. ಗ್ರಂಥಸಂಪಾದನೆಯ ಅಡಿಪಾಯದ ಕೆಲಸ ಎಂದರೆ ತಾಳೆಗರಿ ಗ್ರಂಥಗಳ ಸಂಗ್ರಹ. ಈ ಸಂಗ್ರಹಕಾರ್ಯವು ಇಂದು ಜಾನಪದಸಾಹಿತ್ಯ ಮತ್ತು ಜಾನಪದ ವಸ್ತುಗಳ ಸಂಗ್ರಹದಷ್ಟೇ ಮಹತ್ವದ ಮತ್ತು ಪುಣ್ಯದ ಹಾಗೂ ಅಗತ್ಯ ಕಾರ್ಯವಾಗಿದೆ. ಒಂದು ತಾಳೆಗರಿಯ ಗ್ರಂಥ ನಾಶವಾದರೆ ಒಬ್ಬ ಲೇಖಕ ಸಾರಸ್ವತ ಲೋಕಕ್ಕೆ ಇಲ್ಲವಾದಂತೆ; ನಮ್ಮ ಹೃದಯದೇಗುಲವನ್ನು ಬೆಳಗುವ ಬೆಳಕಿನ ಕುಡಿಗಳಲ್ಲಿ ಒಂದು ನಂದಿಹೋದಂತೆ. ಹಿಟ್ಟಿನ ಗಿರಣಿಗಳು ಬಂದಂತೆಲ್ಲಾ ರಾಗಿಕಲ್ಲಿನ ಹಾಡುಗಳು ಮಾಯವಾಗುತ್ತಿರುವಂತೆ, ಅಚ್ಚಿನ ಪುಸ್ತಕಗಳು ಬಂದಂತೆಲ್ಲಾ—ನಗರದ ಗಾಳಿ ಬೀಸಿದಂತೆಲ್ಲಾ—ತಾಳೆಗರಿ ಗ್ರಂಥಗಳು ಒಲೆಗಳ ಪಾಲಾಗುತ್ತಿವೆ; ಗೆದ್ದಲಿಗೆ ಆಹಾರವಾಗುತ್ತಿವೆ; ಕಸದ ತೊಟ್ಟಿ ಸೇರುತ್ತಿವೆ. ದೇವರಮನೆಗಳಲ್ಲೇ ಯಮಲೋಕ ಸೇರುತ್ತಿವೆ; ಇದ್ದ ಕಡೆಯೇ ನಾನಾ ರೀತಿಗಳಲ್ಲಿ ದುರಂತಾವಸ್ಥೆಗೆ ಒಳಗಾಗುತ್ತಿವೆ. ತಾಳೆಗರಿ ಗ್ರಂಥಸಂಗ್ರಹಗಳಿದ್ದ ಪಂಡಿತರ ಮನೆಗಳಲ್ಲಿ ನವೀನ ಕ್ರಾಂತಿಯುಗದ ಯುವಕರ ಕೈಯಲ್ಲಿ ಅವು ದಿಕ್ಕಾಪಾಲಾಗುತ್ತಿವೆ. ಅರಣ್ಯನಾಶ ಆಗುತ್ತಿದೆ, ಅದನ್ನು ತಡೆಗಟ್ಟಬೇಕು; ವೃಕ್ಷ ಸಂಪತ್ತನ್ನು ಉಳಿಸಬೇಕು; ಭೂಸವೆತ ತಡೆಯಬೇಕು—ಎನ್ನುವ ಸರ್ಕಾರ ಇಂದು ನಶಿಸುತ್ತಿರುವ ಜ್ಞಾನಾರಣ್ಯಗಳಾದ ತಾಳೆಗರಿ ಸಂಗ್ರಹಗಳನ್ನು ಉಳಿಸಬೇಕಾಗಿದೆ; ಜ್ಞಾನದ ಸವೆತವನ್ನು ತಡೆಗಟ್ಟಬೇಕಾಗಿದೆ. ಈ ಕೆಲಸಕ್ಕೆ ಸರ್ಕಾರ ಈ ಕಾರ್ಯದಲ್ಲಿ ನಿರತರಾದ ವ್ಯಕ್ತಿಗಳಿಗೆ–ಸಂಸ್ಥೆಗಳಿಗೆ ಉದಾರ ಪ್ರೋತ್ಸಾಹ ನೀಡಿ ಅಧಿಕಾಸಕ್ತಿ ವಹಿಸಬೇಕಾಗಿದೆ.

ತಾಳೆಗರಿ ಗ್ರಂಥಗಳ ಸಂಗ್ರಹದ ಮಹತ್ವವನ್ನು ನಾನು ಅರಿತದ್ದು ದಿವಂಗತ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಒಮ್ಮೆ ಅವರ ಮನೆಯಲ್ಲಿ ತಮ್ಮ ತಾಳೆಗರಿ ಗ್ರಂಥಗಳ

ಸಂಗ್ರಹವನ್ನು ತೋರಿ ಅವರ ಮಹತ್ವವನ್ನು ಹೇಳಿದಾಗ. 'ಕೆಲಸಕ್ಕೆ ಬಾರದ ಪುರಾಧಿಪತಿಗಳಿರುವ ಜಾಗಗಳಿಂದ, ಬುದ್ಧಿಯಿಲ್ಲದ ಜನಗಳ ಮನೆಗಳಿಂದ ಅವುಗಳ ಮಹತ್ವ ತಿಳಿದ ನಾನು ಕೆಲವು ಒಳ್ಳೆಯ ಗ್ರಂಥಗಳನ್ನು ಕನ್ನಡಕ್ಕೆ ನೀಡಿದೆ' ಎಂದರು. ಅನಂತರ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ವಚನವಾಙ್ಮಯ ವಿಭಾಗದ ಸಂಗ್ರಹ–ಕಾರ್ಯ ಕಂಡಾಗ. ಫ. ಗು. ಹಳಕಟ್ಟಿಯವರ ಸಂಗ್ರಹ ಅಲ್ಲಿಗೆ ತಂದಾಗ ಮತ್ತು ಡಾ|| ಬಿ.ಎಸ್. ಕುಲಕರ್ಣಿ ಹಾಗೂ ಮೇವುಂಡಿ ಮಲ್ಲಾರಿ ಅವರ ಗ್ರಂಥಸಂಪಾದನಾ ಕಾರ್ಯ ವೀಕ್ಷಿಸಿದಾಗ ಅವುಗಳ ಮಹತ್ವ ಅರಿವಾಗಿ ಸಾಧ್ಯವಾದಷ್ಟು ಗ್ರಂಥಗಳನ್ನು ಸಂಗ್ರಹಿಸುವ ನಿರ್ಧಾರಮಾಡಿದೆ. ಅನಂತರ ಕನ್ನಡ ಅಧ್ಯಾಪಕನಾಗಿ ಪಾಠ ಹೇಳುವಾಗ ಪ್ರತಿ ವರುಷವೂ ತರಗತಿಗಳಲ್ಲಿ ಅವಕಾಶ ಸಿಕ್ಕಾಗಲೆಲ್ಲಾ ವಿದ್ಯಾರ್ಥಿಗಳಿಗೆ ತಾಳೆಗರಿ ಗ್ರಂಥಗಳ ಮಹತ್ವವನ್ನು ವಿವರಿಸುತ್ತಾ, "ಯಾರಾದರೂ ತಮ್ಮ ಮನೆಗಳಲ್ಲಿ ಗ್ರಂಥಗಳನ್ನು ಹೊಂದಿದ್ದರೆ, ಯಾವ ಗ್ರಾಮದ ಮನೆತನಗಳಲ್ಲಿ ತಾಳಗರಿ ಗ್ರಂಥ ಸಂಗ್ರಹವಿದ್ದರೆ, ಆ ಜನ ಆ ಮನೆತನ ತಲೆಮಾರುಗಳಿಂದ ವಿದ್ಯಾವಂತರ ಮನೆತನ, ಊರಿಗೆ ಮಾರ್ಗದರ್ಶನ ನೀಡುತ್ತಿದ್ದ ಬುದ್ಧಿಜೀವಿಗಳ ವರ್ಗದ ಜನ ಅವರು, ನೀವು ಅಂಥ ಮನೆತನದವರು ಎಂದು ಹೆಮ್ಮೆ ಪಡಬಹುದು. ಇದು ನಿಜವಾಗಿ ಉಳಿದ ಅನೇಕರಿಗೆ ಇಲ್ಲದ ಭಾಗ್ಯ...." ಇತ್ಯಾದಿ ಹೇಳುತ್ತಾ ನಿಮ್ಮಲ್ಲಿ ಯಾರ ಮನೆಗಳಲ್ಲಿ ತಾಳೆಗರಿ ಗ್ರಂಥಗಳಿವೆ? ಅಥವಾ ಯಾರ ಮನೆಗಳಲ್ಲಿ ಕಂಡಿದ್ದೀರಿ ? ಎಂದು ವಿಚಾರಿಸುತ್ತಿದ್ದೆ. ಇದೆ ಎಂದು ತಿಳಿಸಿದ ವಿದ್ಯಾರ್ಥಿಯ ಮನೆಗೆ ಮರುಚಣವೇ ದಾಳಿಯಿಟ್ಟು ಅದನ್ನು ಪರಿಶೀಲಿಸಿ ಸಂಗ್ರಹಕ್ಕೆ ಯತ್ನಿಸುತ್ತಿದ್ದೆ. ಹೀಗೆ ನಡೆಸಿದ ಹತ್ತಾರು ಪ್ರಯತ್ನಗಳ ಫಲವಾಗಿ ಸಾಕಷ್ಟು ತಾಳೆಗರಿ ಗ್ರಂಥಗಳನ್ನು ಸಂಗ್ರಹಿಸಿದೆ. ಅವುಗಳಲ್ಲಿ ಕೆಲವನ್ನು ಬಿ.ಎಂ.ಶ್ರೀ ಸಂಶೋಧನ ಕೇಂದ್ರಕ್ಕೆ ನೀಡಿದೆ. ಆರು ಕಟ್ಟು ತಾಳೆಗರಿ ಗ್ರಂಥಗಳ ಸಂಪಾದನೆಯ ಹಿನ್ನೆಲೆಯನ್ನು ಇಲ್ಲಿ ಪ್ರಸ್ತಾಪಿಸುತ್ತಿರುವೆ.

ಇತ್ತೀಚೆಗೆ ಸುಮಾರು ೪೦–೫೦ ವರುಷಗಳ ಹಿಂದೆಯೂ ಲೆಕ್ಕಗಳನ್ನು ತಾಳೆಗರಿಗಳಲ್ಲಿ ಬರೆದಿಡುತ್ತಿದ್ದ ಸಂಗತಿಗೆ ನಿದರ್ಶನವೆಂದರೆ ನನಗೆ ಸಿಕ್ಕಿದ ಎರಡು ಮನೆಲೆಕ್ಕಗಳಿರುವ ತಾಳೆಗರಿಗ್ರಂಥಗಳು.

ಸುಮಾರು ಹತ್ತುವರುಷಗಳ ಹಿಂದೆ ಬೆಂಗಳೂರಿನಲ್ಲಿ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಪಾಠ ಮಾಡುತ್ತಿದ್ದಾಗ ಯಥಾಪ್ರಕಾರ ನನ್ನ ಪದ್ಧತಿಯಂತೆ ಸಾಂದರ್ಭಿಕವಾಗಿ ತಾಳೆಗರಿ ಗ್ರಂಥಗಳ ಮಹತ್ವ ಹೇಳುತ್ತಾ 'ಯಾರಲ್ಲಿ ಇದೆ? ಯಾರ ಮನೆಯಲ್ಲಿ ಕಂಡಿದ್ದೀರಾ ?' ಎಂದು ಪ್ರಶ್ನಿಸಿದೆ. ಆಗ ಒಬ್ಬ ವಿದ್ಯಾರ್ಥಿ "ನಮ್ಮ ಪಕ್ಕದ ಮನೆಯಲ್ಲಿದೆ ಸಾರ್, ಅವರು ಇಂದು ಮನೆ ಖಾಲಿ ಮಾಡುತ್ತಾರೆ", ಎಂದನು. ಕೂಡಲೇ ಆ ಪೀರಿಯಡ್ ಮುಗಿಸಿ ಅವನೊಂದಿಗೆ ಆ ಮನೆಗೆ ಧಾವಿಸಿದೆನು. ಆ ವೇಳೆಗೆ ಆ ಮನೆಯವರು ಮನೆ ಖಾಲಿಮಾಡಿ ಲಾರಿಯಲ್ಲಿ ಸಾಮಾನು ಭರ್ತಿಮಾಡಿಕೊಂಡು ಆಗತಾನೆ ಹೋಗಿಬಿಟ್ಟಿದ್ದರು ,ಬೇರೆ ಊರಿಗೆ. ಮನೆ ಪೂರ್ತಿ ಖಾಲಿ

ಆಗಿತ್ತು. ಎಂಥ ಕೆಲಸವಾಯಿತು! ಎಂದು ಚಿಂತಿಸುತ್ತಾ ಅಲ್ಲೇ ನಿಂತಿದ್ದಾಗ ಆ ಮನೆಯಿಂದ ಒಬ್ಬ ಹೆಂಗಸು ಮನೇ ಕಸ ಗುಡಿಸಿ ಒಂದು ಗೋಣಿಚೀಲದಲ್ಲಿ ತುರುಕಿ ಕೊಂಡು ಕಸದ ತೊಟ್ಟಿಗೆ ಎಸೆಯಲು ಹೊರಬಂದಳು. (ಆ ಮನೆಗೆ ಕೂಡಲೆ ಸೇರುವವರು ಬಾಡಿಗೆಗೆ ಬರುವವರು ಇದ್ದರಂತೆ.) ಆ ಗೋಣಿಚೀಲದಿಂದ ಒಂದೆರಡು ತಾಳೆಗರಿಗಳು ಕೆಳಗೆ ಉದುರಿದ್ದು ಕಣ್ಣಿಗೆ ಬಿತ್ತು. ಕೂಡಲೇ ಆ ಹೆಂಗಸಿನ ಹಿಂದೆ ಹೋಗಿ 'ಚೀಲವನ್ನು ಸ್ವಲ್ಪ ನೋಡುತ್ತೇನೆ' ಎಂದಾಗ, ಕನ್ನಡ ತಿಳಿಯದ ಆ ತಮಿಳು ಹೆಂಗಸು ಅದನ್ನೆಲ್ಲಾ ಅಲ್ಲೇ ಇದ್ದ ಕಚಡಾದ ರಾಶಿ ತಿಪ್ಪೆ ಬಿದ್ದಿದ್ದ ಕಾರ್ಪೋರೇಷನ್ ತೊಟ್ಟಿಗೆ ಸುರಿದು ನಡೆದಳು. ನಾನು ಒಂದು ನಿಮಿಷ ಚಿಂತಿಸಿ, ಆಕಡೆ-ಈಕಡೆ ನೋಡಿ, ಯಾರು ನೋಡಿದರೂ ಸರಿ ಎಂದುಕೊಂಡು ಅಲ್ಲಿ ಹರಡಿದ್ದ ಹೇಸಿಗೆ ಇತ್ಯಾದಿ ಲೆಕ್ಕಿಸದೆ, ಎಂಜಲೆಲೆಗಳನ್ನು ತುಳಿದುಕೊಂಡು, ತೊಟ್ಟಿ ಬಳಿ ಇದ್ದ ಕಜ್ಜಿನಾಯಿಗಳನ್ನು ದೂರ ಓಡಿಸಿ, ತೊಟ್ಟಿ ಬಳಿ ಎಂಜಲೆಲೆಗಳಲ್ಲಿ ಅನ್ನ ಹುಡುಕುವ ಭಿಕ್ಷುಕ ಹುಡುಗರಂತೆ ಆ ತೊಟ್ಟಿಯಲ್ಲಿ ಇಳಿದು ಕಸ ವಿಂಗಡಿಸಿದಾಗ ಮೇಲೆ ತಿಳಿಸಿದ ಎರಡು ಮನೆ ಲೆಕ್ಕಗಳನ್ನು ಬರೆದಿಟ್ಟ ಕೆಲವು ಖಾಲಿ ಗರಿಗಳಿರುವ ತಾಳೆಗರಿಗ್ರಂಥಗಳು ಸಿಕ್ಕವು. ಆ ಗ್ರಂಥಗಳಲ್ಲಿರುವ ಲೆಕ್ಕಗಳ ಬಗ್ಗೆ ಪೂರ್ಣ ಪರಿಶೀಲನೆ ಆಗಬೇಕಾಗಿದೆ.

ಈಚೆಗೆ ಇನ್ನೊಮ್ಮೆ ಪ್ರಾಸಂಗಿಕವಾಗಿ. ಮಾತನಾಡುತ್ತ ಹಾಸನದಲ್ಲಿ ಪ್ರಸಿದ್ಧ "ಗಮಕಿಗಳಾದ ಶ್ರೀ ಗೋಪಾಲಕೃಷ್ಣ ಅವರನ್ನು ಸಾಕಷ್ಟು ಕಡೆಗಳಲ್ಲಿ ಕಾವ್ಯವಾಚನಗಳಿಗೆ ಹೋಗುವ ನೀವು ಸ್ವಲ್ಪ ಈ ವಿಚಾರದಲ್ಲಿ ಗಮನ ಇರಲಿ" ಎಂದೆ. ಆಗ ಅವರು ನನ್ನ ಮಾತುಗಳಿಂದ ಪ್ರಭಾವಿತರಾಗಿ "ನಮ್ಮನೆಯಲ್ಲೇ ಒಂದೆರಡು ಅಟ್ಟದಲ್ಲಿ ಇದ್ದಂತಿದೆ" ಎಂದು ಹೇಳಿ ಹುಡುಕಿಟ್ಟು ಮನೆಗೆ ಕರೆದುಕೊಂಡು ಹೋಗಿ ತೋರಿಸಿದರು. ಆಗ ಬಿ. ಎಂ. ಶ್ರೀ ಸಂಶೋಧನಾ ಕೇಂದ್ರದಿಂದ ತಾಳೆಗರಿಗಳ ಪ್ರದರ್ಶನ ಕಾರ್ಯಕ್ರಮವಿರುವುದು ಅದರ ಕಾರ್ಯದರ್ಶಿ ಶ್ರೀ ಗಣೇಶ್ ಅವರಿಂದ ತಿಳಿದಿತ್ತು. ಅವರಿಗೆ ಪ್ರದರ್ಶನಕ್ಕೆ ನನ್ನ ಬಳಿ ಇರುವ ತಾಳೆಗರಿ ಗ್ರಂಥಗಳನ್ನು ಕೊಡುವುದಾಗಿ ತಿಳಿಸಿದ್ದೆ. ಲಿಪಿವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ಮಹತ್ವದ್ದಾಗಿ ಕಂಡ ಗೋಪಾಲಕೃಷ್ಣರ ಬಳಿಯಲ್ಲಿದ್ದ ತಾಳೆಗರಿ ಗ್ರಂಥಗಳನ್ನು ನಾನು. "ಅನೇಕರ ಗಮನಕ್ಕೆ ಬಂದು ಯಾರಿಗಾದರೂ ಉಪಯೋಗವಾಗುತ್ತದೆ ಕೊಡಿ, ನಿಮಗೆ ಬೇಕಾದರೆ ಆಮೇಲೆ ಹಿಂದಿರುಗಿಸುತ್ತೇನೆ" ಎಂದು ಹೇಳಿ ಅದನ್ನು ಪರಿಶೀಲಿಸಿದೆ. ಅದರಲ್ಲಿ ಜೈಮಿನಿ ಭಾರತ, ವಾಲ್ಮೀಕಿ ರಾಮಾಯಣದ ಸುಂದರಕಾಂಡ ಹಾಗೂ ನಾಗರಿಲಿಪಿಯ ಕೆಲವು ಗರಿಗಳದ್ದವು. "ಇವೆಲ್ಲ ಪ್ರಕಟಿತ ಗ್ರಂಥಗಳು, ಇವು ನನ್ನಲ್ಲಿ ಇದ್ದರೆ ಲಿಪಿಯ ಅಭ್ಯಾಸಕ್ಕೆ ಸಹಾಯಕ, ನನಗೆ ಕೊಡಿ" ಎಂದೆ. ಆತ್ಮೀಯರಾದ ಅವರು "ನಮ್ಮಲ್ಲಿ ಇದ್ದರೆ ಅವುಗಳ ನಾಶ ಖಂಡಿತ. ನೀವಾದರೆ ಯಾವ ರೀತಿಯಲ್ಲಾದರೂ ಪ್ರಯೋಜನ ಪಡೆಯುತ್ತೀರಿ" ಎಂದು ಹೇಳಿ ಕೊಟ್ಟರು. ಅಂಥ ಉದಾರಿಗಳ ಸಂಖ್ಯೆ ನಮ್ಮಲ್ಲಿ ಬೆಳೆಯಬೇಕಾಗಿದೆ.

ಕುಮಾರವ್ಯಾಸ ಭಾರತದ ಭೀಷ್ಮಪರ್ವ, ಸಭಾಪರ್ವ, ಉದ್ಯೋಗಪರ್ವ ಇರುವ ತಾಳೆಗರಿ ಗ್ರಂಥಗಳ ಕಟ್ಟು ಸಂಪಾದಿಸಿದ ರೀತಿ ಇನ್ನೊಂದು ಬಗೆಯದು. ನಮ್ಮ ನೆರೆಯವರ ಮನೆಯಲ್ಲಿ ಅದು ಇದ್ದುದನ್ನು ಕಂಡೆ. ಅದನ್ನು ಪಡೆಯಲು ಅವರನ್ನು ಬಹುವಿಧಗಳಲ್ಲಿ ಪುಸಲಾಯಿಸಿದೆ. ಅವರು ಕೊಡಲು ಒಪ್ಪಿದರೂ ಆ ಮನೆಯಲ್ಲಿದ್ದ ಅಜ್ಜಿಯೊಂದು 'ತಾತನಾಸ್ತಿ' ಎಂದು 'ತಾತ-ನಾಸ್ತಿ' ಆದರೂ ಕೊಡಲು ಒಪ್ಪಲಿಲ್ಲ. ಕೊನೆಗೆ ಅದನ್ನು ನೋಡುತ್ತೇನೆ ಎಂದು ಹೇಳಿ ನೋಡಿ ಪರಿಶೀಲಿಸಿದಾಗ ಅದು ಕುಮಾರವ್ಯಾಸ ಭಾರತ ಎಂದು ತಿಳಿಯಿತು. ಆಗ ಅಚ್ಚಿನ ಪುಸ್ತಕ ತಂದು ಓದಿಹೇಳಿ, "ಅದೇ ಪದ್ಯಗಳು ಇನ್ನೂ ಚೆನ್ನಾಗಿ ಪೂರ್ತಿಯಾಗಿ ಈ ಪುಸ್ತಕದಲ್ಲಿದೆ. ಈ ಪುಸ್ತಕಾನ ಯಾರು ಬೇಕಾದರೂ ಓದಿ ಹೇಳುತ್ತಾರೆ. ಈ ತಾಳೆಗರೀನ ಯಾರು ಓದ್ತಾರೆ ಅಜ್ಜಿ? ಅಪೂರ್ಣಗ್ರಂಥ ಓದಬಾರದು. ತಪ್ಪಾಗಿ ಓದಬಾರದು. ಓದಿದರೆ ಪಾಪ ಬರುತ್ತದೆ ಎಂದು ಶಾಸ್ತ್ರದಲ್ಲಿ (?) ಹೇಳಿದೆ" ಎಂದೆಲ್ಲಾ ಹೇಳಿ ಒಲಿಸಿ ಅದನ್ನು ಗಿಟ್ಟಿಸಿಕೊಂಡೆ.

ವಾಣೀವಿಲಾಸ ಭಾರತ (ಭೀಷ್ಮಪರ್ವ), ಕೃಷ್ಣರಾಜ ಭಾರತ (ಗದ್ಯ) ಮತ್ತು ಸಂಖ್ಯಾರತ್ನಕೋಶ ಮತ್ತು ಗ್ರಹಣ ದರ್ಪಣ ಕಲ್ಲಚ್ಚಿನ ಪ್ರತಿಗಳು, ಸಹೋದ್ಯೋಗಿ ಆಗಿದ್ದ ಅರಸು ಮನೆತನದ ಸೋದರಿಯೊಬ್ಬರು ಕೊಟ್ಟದ್ದು. ಹೀಗೆ ಹಲವಾರು ವಿಧದಲ್ಲಿ ತಾಳೆಗರಿ ಸಂಗ್ರಹಕಾರ್ಯ ಇನ್ನೂ ಸಾಗುತ್ತಲೇ ಇದೆ. ಇಷ್ಟಾದರೂ, ಕನ್ನಡ ಸಾಹಿತ್ಯದ ಅಪೂರ್ವ ಹಸ್ತಪ್ರತಿ ದೊರಕಿದ ಅದೃಷ್ಟ ಇನ್ನೂ ಕೂಡಿಬಂದಿಲ್ಲ. ಅದಕ್ಕಾಗಿ ಕಾಯುತ್ತಿದ್ದೇನೆ.

---

## ಕನ್ನಡ ನಾಡಿನಲ್ಲಿ ಹಸ್ತಪ್ರತಿಗಳ ಸಂಗ್ರಹ

"ಧಾರವಾಡದ ಲಿಂಗಾಯತ ಅಭಿವೃದ್ಧಿ ಸಂಸ್ಥೆಯವರು ಸುಮಾರು ೨೦೦೦ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು, 'ಬಸವಣ್ಣನವರ ಷಟ್ಸ್ಥಲ ವಚನಗಳು', 'ಪ್ರಭುಲಿಂಗಲೀಲೆ', 'ಚನ್ನಬಸವ ಪುರಾಣ', 'ರಕ್ಷಾಶತಕ', 'ಪಂಪಾಶತಕ'ಗಳನ್ನು ಪ್ರಕಟಿಸಿದ್ದಾರೆ. ಬಿಜಾಪುರದ ಫ. ಗು. ಹಳಕಟ್ಟಿಯವರು ವಚನವಾಙ್ಮಯ ಸಂಶೋಧನೆ ಪ್ರಕಟನೆಗಾಗಿ ಉತ್ತರ ಕರ್ನಾಟಕದ ನೂರಾರು ಹಳ್ಳಿಗಳಲ್ಲಿ ಸಂಚರಿಸಿ ಸುಮಾರು ಒಂದು ಸಾವಿರ ಹಸ್ತಪ್ರತಿಗಳನ್ನು ಕೂಡಿಸಿದ್ದರು. ವೀರಶೈವ ಸಾಹಿತ್ಯದ ಬಹುಭಾಗ ಬೆಳಕು ಕಂಡದ್ದು ಅವರಿಂದಲೇ. ಅವರ ಸಂಗ್ರಹವು ಕರ್ನಾಟಕ ವಿಶ್ವವಿದ್ಯಾಲಯವನ್ನು ಸೇರಿರುವುದು ಸಮಾಧಾನಕರವಾದ ವಿಷಯ. ಸಿರಿಯಾಳಕೊಪ್ಪದ ಶ್ರೀ ಮಲ್ಲಿಕಾರ್ಜುನ ಅವರೂ ಫ. ಗು. ಹಳಕಟ್ಟಿಯವರಂತೆ ಕನ್ನಡ ನಾಡಿನ ಹಲವು ಭಾಗಗಳಲ್ಲಿ ಪ್ರವಾಸ ಕೈಗೊಂಡು ಸಾವಿರಾರು ಹಸ್ತಪ್ರತಿಗಳನ್ನು ಸಂಪಾದಿಸಿದ್ದರು. ಐವತ್ತಕ್ಕಿಂತ ಹೆಚ್ಚು ಸಣ್ಣ ದೊಡ್ಡ ಕೃತಿಗಳನ್ನು ಅಚ್ಚುಹಾಕಿಸಿ ಪ್ರಕಟ ಮಾಡಿದರು. ಇವರ ನಿಧನಾನಂತರ ಅವರಲ್ಲಿದ್ದ ಹಸ್ತಪ್ರತಿಗಳು ಎತ್ತ ಹೋದವೋ ತಿಳಿಯದಾಗಿದೆ".

—ಎಚ್. ದೇವಿರಪ್ಪ

('ಕನ್ನಡ ಹಸ್ತಪ್ರತಿಗಳ ಇತಿಹಾಸ', ಪು ೧೦೫-೧೦೬)

# ಗ್ರಂಥಸಂಪಾದಕನಾಗಿ ನನ್ನ ಅನುಭವ

**—ಡಾ|| ಬಿ. ಎಸ್. ಕುಲಕರ್ಣಿ**

ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಅರಿತುಕೊಳ್ಳಬೇಕಾದ ಪ್ರಮುಖ ಸಾಧನಗಳಲ್ಲಿ ಸಾಹಿತ್ಯವೂ ಒಂದಾಗಿದೆ. ಸುಮಾರು ಸಾವಿರದ ಐದುನೂರು ವರುಷಗಳಿಂದಲೂ ಕನ್ನಡ ಸಾಹಿತ್ಯ ಅಸ್ತಿತ್ವದಲ್ಲಿದ್ದುದು ಸರ್ವವಿದಿತ. ಸಾಹಿತ್ಯ ಸಮಾಜದ ಕೈಗನ್ನಡಿ. ಪಾಂಡಿತ್ಯ, ಪ್ರತಿಭೆ, ಲೋಕಾನುಭವಗಳನ್ನು ಪಡೆದ ನಮ್ಮ ಕವಿಗಳು ಕಾಲಾತೀತವಾಗಿ ನಿಲ್ಲುವಂತಹ ಶ್ರೇಷ್ಠಮಟ್ಟದ ಗ್ರಂಥಗಳನ್ನು ಬರೆದಿದ್ದಾರೆ. ಆದರೂ ಕವಿ ತನ್ನ ಕಾಲ, ಪರಿಸರವನ್ನು ಎಂದಿಗೂ ಮರೆಯಲಾರನು. ಕಾರಣ ನಮ್ಮ ಪೂರ್ವಜರ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಜೀವನವನ್ನರಿಯಲು, ನಮ್ಮ ಪ್ರಾಚೀನ ಕವಿಗಳ ಕೃತಿಗಳ ಅಭ್ಯಾಸ ಬಹು ಉಪಯುಕ್ತ ಸಾಧನವಾಗಿದೆ.

ಈಗಿನಂತೆ ಕಾಗದ ಹಾಗೂ ಮುದ್ರಣದ ಸೌಕರ್ಯವಿಲ್ಲದ ಆ ಕಾಲದಲ್ಲಿ, ನಮ್ಮ ಕವಿಗಳು ತಮ್ಮ ಕೃತಿಗಳನ್ನು ತಾಳೇಗರಿಗಳ ಮೇಲೆ ಉಕ್ಕಿನ ಕಂಠದಿಂದ ಕೊರೆದು ಬರೆದಿಡುತ್ತಿದ್ದರು. ಆದರೆ ತಾಳೇಗರಿಗಳೂ ಸಹ ಸಾವಿರಾರು ವರುಷಗಳ ವರೆಗೆ ತಾಳುವುದಿಲ್ಲ. ಅವು ಜೀರ್ಣವಾಗಿ ಮುರಿದು ಹೋಗುತ್ತವೆ. ಇಟ್ಟಲ್ಲೇ ಪುಡಿಯಾಗಿ ಹೋಗುತ್ತವೆ. ಕಾರಣ ನಮ್ಮ ಕವಿಗಳ ಕೃತಿಗಳನ್ನು ಕಾಲಕಾಲಕ್ಕೆ ಲಿಪಿಮಾಡಿಕೊಂಡು ಬರುವುದು ಅನಿವಾರ್ಯವಾಗಿತ್ತು. ಹಾಗೆ ಲಿಪಿಮಾಡಿಕೊಂಡು ಬಂದ ನಮ್ಮ ಕವಿಗಳ ಕೃತಿಗಳು ಮಠಗಳಲ್ಲಿ, ಪಾಂಡಿತ್ಯಪರಂಪರೆಯುಳ್ಳ ಮನೆತನಗಳಲ್ಲಿ ದೊರೆಯುತ್ತವೆ. ಆದರೆ ಈ ಕೃತಿಗಳು ಎಲ್ಲರಿಗೂ ಓದಲಿಕ್ಕೆ ಬರುವುದಿಲ್ಲ. ಅವುಗಳ ಲಿಪಿ ಹಾಗೂ ಭಾಷೆ ಮುಂತಾದವುಗಳನ್ನು ಬಲ್ಲ ಪಂಡಿತರು ನಮ್ಮ ಪ್ರಾಚೀನ ಕವಿಗಳ ಹಳೆಯ ಹಸ್ತಪ್ರತಿಗಳನ್ನು ಸಂಗ್ರಹಿಸುವ ಹಾಗೂ ಅವುಗಳನ್ನು ಪರಿಷ್ಕರಿಸಿ, ವಿಮರ್ಶಿಸಿ ಅವುಗಳ ಮಹತ್ವವನ್ನು ಇಂದಿನ ಪೀಳಗೆಗೆ ಪರಿಚಯ ಮಾಡಿಕೊಡುವ ಕಾರ್ಯವನ್ನು ಕೈಕೊಂಡರು. ಹೀಗೆ ಹಳೆಯ ಕೃತಿಗಳನ್ನು ಅಭ್ಯಸಿಸಿ, ವಿಮರ್ಶಿಸಿ ಪ್ರಕಟಪಡಿಸುವುದನ್ನೇ "ಗ್ರಂಥ ಸಂಪಾದನೆ" ಎಂದು ಕರೆಯಲಾಗುತ್ತಿದೆ. ನಮ್ಮ ಪ್ರಾಚೀನ ಕವಿಗಳ, ಶರಣರ, ದಾಸರ ಅನೇಕ ಗ್ರಂಥಗಳನ್ನು ಸಂಪಾದಿಸಿ, ಅವುಗಳಲ್ಲಡಗಿದ ನಮ್ಮ ನಾಡಿನ ಸಂಸ್ಕೃತಿಯನ್ನು ಬೆಳಕಿಗೆ ತಂದ ಶ್ರೇಯಸ್ಸಿಗೆ ನಮ್ಮ ನಾಡಿನ ಅನೇಕ ಹಿರಿಯ ವಿದ್ವಾಂಸರು ಪಾತ್ರರಾಗಿದ್ದಾರೆ. ಅಂತಹ ಮಹನೀಯರಲ್ಲಿ ಬಸವಾದಿ ಶಿವಶರಣರ ವಚನವಾಙ್ಮಯವನ್ನು ಮೊದಲಬಾರಿಗೆ, ತಮ್ಮ ತನು, ಮನ,

ಘನವನ್ನು ಸಮರ್ಪಿಸಿ. ಬೆಳಕಿಗೆ ತಂದ ಕೀರ್ತಿ "ವಚನ ಪಿತಾಮಹ" ಎಂದು ಹೆಸರಾದ ಶ್ರೀ ಫ. ಗು. ಹಳಕಟ್ಟಿ ಅವರದಾಗಿದೆ.

ಈ ಗ್ರಂಥಸಂಪಾದನಾಕಾರ್ಯ ಸಾಗಿಬಂದು ಬಹಳ ವರ್ಷಗಳ ನಂತರ ಜನ್ಮತಳೆದ ನಾನೂ ನನ್ನ ಶುಭಕರ್ಮದ ಫಲವಾಗಿ ಎಂದೇ ಹೇಳಬೇಕು – ನನ್ನ ಜೀವನೋಪಾಯಕ್ಕಾಗಿ ದೇವರು ತೋರಿಸಿದ ಕಾಯಕದಲ್ಲಿ ನಾಲ್ಕಾರು ಪ್ರಾಚೀನ ಗ್ರಂಥಗಳನ್ನು ಸಂಪಾದಿಸುವ ಭಾಗ್ಯವನ್ನು ಪಡೆಯುವಂತಾಗಿದೆ. ಈ ನನ್ನ ಅಳಲು ಸೇವೆಯ ಅನುಭವ ಅಲ್ಪವಿದ್ದರೂ, ಅದನ್ನೇ ಬರೆಯಲು ಆಜ್ಞಾಪಿಸಿದ ಹಿರಿಯರ ಆಶೆಯಂತೆ "ಗ್ರಂಥಸಂಪಾದಕನಾಗಿ ನನ್ನ ಅನುಭವ"ವನ್ನು ಸ್ವಲ್ಪದರಲ್ಲೇ ವಿವರಿಸಲು ಪ್ರಯತ್ನಿಸಿದ್ದೇನೆ.

ಎಲ್ಲಕ್ಕೂ ಮೊದಲು ನಾನೊಂದು ಮಾತು ಹೇಳಲೇಬೇಕು. ನಾನು ಇನ್ನೂ ವಿದ್ಯಾರ್ಥಿ ಇದ್ದಾಗಲೇ, ಒಮ್ಮೆ ಬೆಳಗಾವಿಗೆ ಹೋಗಿದ್ದೆನು. ಆಗ ಪೂಜ್ಯಗುರುಗಳಾದ ದಿವಂಗತ ಪ್ರಾಧ್ಯಾಪಕ ಕೆ. ಜಿ. ಕುಂದಣಗಾರ ಅವರು ಪಂಪ ಮಹಾಕವಿಯ ಆದಿಪುರಾಣವನ್ನು ಸಂಪಾದಿಸುತ್ತಿದ್ದರು ದಿವಂಗತ ಶ್ರೀ ದಿವಾಣ ಬಹಾದ್ದೂರ ಚೌಗುಲೆ ಅವರೊಂದಿಗೆ! ನಾನು ಅವರ ಹತ್ತಿರ ಹೋದಾಗ ಎರಡು ಮೂರು ತಾಳೇಗರಿ ಪ್ರತಿಗಳನ್ನು ಒಬ್ಬರೆ ನೋಡುತ್ತ ಪಾಠಾಂತರಗಳನ್ನು ಗುರುತಿಸುತ್ತಿದ್ದರು. ಆಗ ಅವರೆದುರು ಕೂತ ನಾನು ಒಂದು ಪ್ರತಿ ಕೈಗೆತ್ತಿಕೊಂಡೆನು. ಆಗ ಗುರುಗಳು "ನೀವು ಇದನ್ನು ಓದಬಲ್ಲಿರಾ?" ಎಂದರು. ತಾಳೇಗರಿ ಗ್ರಂಥ ಕೈಯಲ್ಲಿ ಹಿಡಿದುದೇ ಮೊದಲಬಾರಿ ಆದರೂ, ಆ ಪ್ರತಿಯಲ್ಲಿ ಲಿಪಿ ಶುದ್ಧ, ಸುಂದರ ಇದ್ದುದರಿಂದ ಹಾಗೂ ಕನ್ನಡ, ಅರ್ಧಮಾಗಧಿ, ಸಂಸ್ಕೃತ ಭಾಷೆಗಳ ಪರಿಚಯ ಇದ್ದ ವಿದ್ಯಾರ್ಥಿಯಾಗಿದ್ದರಿಂದ ನಾನು "ಪ್ರಯತ್ನಿಸುತ್ತೇನೆ" ಎಂದೆನು. ಗುರುಗಳು ಓದುತ್ತ ಸಾಗಿದರು. ನಾನು ನಾಲ್ಕಾರು ಪದ್ಯಗಳನ್ನು ನೋಡುತ್ತ ಸಾಗಿ, ನನ್ನ ಪ್ರತಿಯಲ್ಲಿ ಬಂದ ಬದಲಾವಣೆಗಳನ್ನು ಸೂಚಿಸಲು ಪ್ರಯತ್ನಿಸಿದೆನು. ನಾನು ಹೇಳಿದ್ದು ಸರಿಯೋ ತಪ್ಪೋ ಎಂದು ನನ್ನ ಪ್ರತಿ ನೋಡಿ ಖಚಿತಪಡಿಸಿಕೊಂಡ ಗುರುಗಳು ಸಂತೋಷವನ್ನು ಸೂಚಿಸಿದರು. ಓದು ಮುಂದುವರಿಯಿತು. ನಂತರ ಆದಿಪುರಾಣದ ಐದು ಆಶ್ವಾಸಗಳ ಅಚ್ಚು ಪ್ರತಿಯನ್ನು ಬರೆದೂ ಕೊಟ್ಟೆನು. ಈ ಸದವಕಾಶ ಮಾಡಿಕೊಟ್ಟ ನನ್ನ ಗುರುಗಳಿಗೆ ನನ್ನ ವಂದನೆಗಳು ಸಲ್ಲಬೇಕು. ಇದು ಹೆಮ್ಮೆಪಡುವ ಮಾತೇನಲ್ಲ. ಆದರೆ ಯಾವ ಶುಭ ಘಳಿಗೆಯಲ್ಲಿ ಆ ಪವಿತ್ರ ಗ್ರಂಥವನ್ನು ಹಿಡಿದಿದ್ದೆನೋ ನನಗೆ ಗೊತ್ತಿಲ್ಲ. ಆದರೆ ಮುಂದೆ ನನ್ನ ಜೀವನೋಪಾಯಕ್ಕೆ ದೇವರು ನನ್ನನ್ನು ಕನ್ನಡ ಸಂಶೋಧನ ಸಂಸ್ಥೆಯಲ್ಲಿ 'ಕನ್ನಡ ಸಾಹಿತ್ಯ ಹಾಗೂ ಭಾಷೆಯ ರೀಡರ' ಎಂದು ಸೇವೆ ಮಾಡುವ ಅವಕಾಶವನ್ನು ಕಲ್ಪಿಸಿಕೊಟ್ಟನು. ಕನ್ನಡ 'ರೀಡರ' ಆಗಿ ಸಂಸ್ಥೆಯಲ್ಲಿಯ ಹಸ್ತಪ್ರತಿಗಳ ಗ್ರಂಥಭಂಡಾರವನ್ನು ನೋಡುವವರ ಜೊತೆಗೆ, ಹಸ್ತಪ್ರತಿಗಳನ್ನು ಕಲೆಹಾಕುವ

ಹಾಗೂ ಅಪ್ರಕಟಿತ ಮಹತ್ವದ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸುವ ಕಾರ್ಯ ವನ್ನೂ ನಾನು ಮಾಡಬೇಕಾಯಿತು.

ಯಾವುದಾದರೂ ಅಪ್ರಕಟಿತ ಗ್ರಂಥವನ್ನು ಸಂಪಾದಿಸಬೇಕೆಂದು ವಿಚಾರಿಸಿದ ನಾನು, ಕವಿ ಬ್ರಹ್ಮಶಿವನ 'ಸಮಯ ಪರೀಕ್ಷೆ'ಯನ್ನು ಆಯ್ದುಕೊಂಡೆನು. ಆಗ ಸಂಸ್ಥೆಯಲ್ಲಿದ್ದುದು, ಬೇರೆ ಕಡೆಯಿಂದ ನಕಲು ಮಾಡಿ ತರಿಯಿಸಿದ ಅಶುದ್ಧ ಪ್ರತಿ. ಅದನ್ನೇ ತೆಗೆದುಕೊಂಡು ಓದಲಾರಂಭಿಸಿದೆನು. ಆದರೆ ಪ್ರತಿ ಬಹಳ ಅಶುದ್ಧವಿತ್ತು. ಮುಂದಿನ ಕೆಲಸ, ಈ ಗ್ರಂಥದ ಪ್ರತಿಗಳು ಇನ್ನೆಲ್ಲಿ ದೊರೆಯುತ್ತವೆ ಎಂಬುದನ್ನು ತಿಳಿದುಕೊಳ್ಳುವದಾಗಿತ್ತು. ಅಲ್ಲಿ-ಇಲ್ಲಿ ವಿಚಾರಿಸಿ, 'ಸಮಯ ಪರೀಕ್ಷೆ' ಗ್ರಂಥದ ಮೂರು ತಾಳಗರಿ ಪ್ರತಿಗಳು ಇದ್ದ ವಿಷಯ ಸಂಗ್ರಹಿಸಿದೆನು. ಒಂದು ಪ್ರತಿ ಒಂದು ಮಠದಲ್ಲಿತ್ತು. ಇನ್ನೆರಡು ಪ್ರತಿಗಳು (ಅವು ಬೇರೆ ಮಠದ ಪ್ರತಿಗಳು) ಒಬ್ಬ ಸಜ್ಜನರ ಕಡೆಗೆ ಇದ್ದುವು. ಅವುಗಳನ್ನು ಪಡೆಯಲು ಪ್ರಯಾಣ ಬೆಳೆಯಿಸಿದೆನು. ಮಠದಲ್ಲಿ ಶ್ರೀ ಸ್ವಾಮಿಗಳಿಗೆ "ನಮೋಸ್ತು" ಮಾಡಿ, ನನ್ನ ವಿನಂತಿಯನ್ನು ಬಿನ್ನವಿಸಿ ಕೊಂಡಾಗ, "ಹಳೆಯ ಹಸ್ತ ಲಿಖಿತ ಪ್ರತಿಗಳನ್ನು ಸರಿಯಾಗಿ ಇಟ್ಟಿಲ್ಲವೆಂದೂ, ಅವು ಒಂದು ದೊಡ್ಡ ಸಂದೂಕ(ಕಟ್ಟಿಗೆ ಪೆಟ್ಟಿಗೆ)ದಲ್ಲಿ ಒಟ್ಟಾರೆ ಇಡಲ್ಪಟ್ಟವೆಯೆಂದೂ, ಬೇಕಾದರೆ ಹುಡುಕಿಕೊಳ್ಳಬಹುದೆಂದೂ. ಆ ಪೆಟ್ಟಿಗೆಯ ಬೀಗದ ಕೈ ಮಠದ "ಕಾರುಬಾರಿ"ಯ (Manager) ಕಡೆಗೆ ಇದೆಯೆಂದೂ" ಹೇಳಿದರು. ಸರಿ ನಾನು 'ಕಾರುಬಾರಿ'ಯ ಬೆನ್ನುಹತ್ತಿದೆ. ಅವರು 'ನೋಡುವಾ, ಈಗ ಸಮಯವಿಲ್ಲ', ಎನ್ನುತ್ತ ಕಾಲಹರಣ ಮಾಡುತ್ತ ಹೊರಟರು. ಜಗತ್ತಿನ ವ್ಯವಹಾರವನ್ನು ಅರಿಯದ ನಾನು ಗೊಂದಲದಲ್ಲಿ ಬಿದ್ದು ಪೆಚ್ಚುಮೋರೆ ಹಾಕಿಕೊಂಡು ಕುಳಿತಿದ್ದನ್ನು ಕಂಡ ನನ್ನ ಬೀಗ (ಭಾವಮೈದುನ) ನನ್ನನ್ನು ನೋಡಿ ನಕ್ಕು, ನನ್ನ ಕೆಲಸವನ್ನು ತಾನು ಸಾಧಿಸಿ ಕೊಡುವುದಾಗಿ ಹೇಳಿ, ಮುಂದೆ ಸ್ವಲ್ಪ ಸಮಯದಲ್ಲೇ ಪೆಟ್ಟಿಗೆಯ ಬೀಗದಕೈ ಯನ್ನು ನನ್ನ ಕೈಯಲ್ಲಿ ಕೊಟ್ಟನು. ನಾನು ಮಾಳಿಗೆಯ ಮೇಲಿದ್ದ ಪೆಟ್ಟಿಗೆಯ ಹತ್ತಿರ ಹೋದಾಗ, ಅದರ ಮೇಲೆ ದೊಡ್ಡ ದೊಡ್ಡ ಬೆಲ್ಲದ ಪೆಂಟಿಗಳೂ ಕುಂಬಳ ಕಾಯಿಗಳೂ ಇದ್ದವು. ಅವುಗಳನ್ನೆಲ್ಲಾ ಕೆಳಗಿಳಿಸಿ, ಪೆಟ್ಟಿಗೆಯಲ್ಲಿ ಇಳಿದ ನಾನು ಒಂದೊಂದೇ ಕಟ್ಟನ್ನು ನೋಡುತ್ತಾ, ಕೊನೆಗೊಮ್ಮೆ "ಸಮಯ ಪರೀಕ್ಷೆ" ಗ್ರಂಥ ವನ್ನು ದೊರಕಿಸುವ ಪರೀಕ್ಷೆಯಲ್ಲಿ ಪಾಸಾಗಿ ಪೆಟ್ಟಿಗೆಯಿಂದ ಹೊರಬಂದೆನು. ಬಂದಾಗ ನನ್ನ ಕಣ್ಣು ಕೆಂಪಾಗಿ, ಕಣ್ಣಲ್ಲಿ ನೀರು ಬಂದಿತ್ತು. ಈ ಕಣ್ಣೀರು ಬಂದದ್ದು ಸಂತೋಷದಿಂದಲ್ಲ–ಆ ಪೆಟ್ಟಿಗೆಯ ಕೆಳಭಾಗದಲ್ಲೇ ಯಾತ್ರಿಕರಿಗಾಗಿ ಅಡಿಗೆ ಮಾಡುತ್ತಿದ್ದರು. ಅಲ್ಲಿಂದ ಬಂದ ಹೊಗೆಯಿಂದ ನನಗೆ ಈ ಪರಿಸ್ಥಿತಿ ಪ್ರಾಪ್ತ ವಾಗಿತ್ತು. ಪೆಟ್ಟಿಗೆ ಹಾಗೂ ಅವುಗಳಲ್ಲಿರುವ ಪ್ರಾಚೀನ ಗ್ರಂಥಗಳು ಎಷ್ಟು ಗೋಳನ್ನು ಅನುಭವಿಸುತ್ತಿದ್ದವೆಂಬುದನ್ನು ಓದುಗರ ಊಹೆಗೇ ಬಿಡುತ್ತೇನೆ. ನಂತರ ಇನ್ನೆರಡು ಪ್ರತಿಗಳನ್ನು ದೊರಕಿಸಲು ನನಗೆ ಪ್ರಯಾಸವಾಗಲಿಲ್ಲ. ಏಕೆಂದರೆ ಆಗಲೇ

ನಾನು ನನ್ನ ಬೀಗನು ಪ್ರಯೋಗಿಸಿದ ಅಸ್ತ್ರದ ಮರ್ಮವನ್ನು ತಿಳಿದಿದ್ದೆನು. ಅಂತು ಆಗ ಉಪಲಬ್ಧವಿದ್ದ (ಈಗ 'ಸಮಯ ಪರೀಕ್ಷೆ'ಯ ಇನ್ನೊಂದು ಪ್ರತಿ ಹೆಚ್ಚಾಗಿ ದೊರೆತಿದೆ.) ನಾಲ್ಕು ತಾಳೆಗರಿಗಳ ಹಸ್ತಪ್ರತಿಗಳನ್ನು ಹಿಡಿದುಕೊಂಡು ಮರಳಿದ ನಾನು ಅವುಗಳನ್ನು ಓದಲು ಆರಂಭಿಸಿದೆನು. 'ಗ್ರಂಥಸಂಪಾದನೆ'ಯ ಬಗೆಗೆ ಆಗಲೇ ಗ್ರಂಥಗಳು ಪ್ರಕಟವಾಗಿ ಅದೊಂದು 'ಶಾಸ್ತ್ರ'ವಾಗಿಹೋಗಿದ್ದರೂ, ನಾಕಷ್ಟು ಅನುಭವವಿಲ್ಲದೆ, ಯಾರದೂ ಮಾರ್ಗದರ್ಶನವಿಲ್ಲದೆ ಇದ್ದುದರಿಂದ, ನಾನೇ ನನ್ನಷ್ಟಕ್ಕೆ ನಿರ್ಧಾರ ಮಾಡಿಕೊಂಡು, ಆ ನಾಲ್ಕು ಪ್ರತಿಗಳಲ್ಲಿ ಶುದ್ಧ ಹಾಗೂ ಪ್ರಾಚೀನವೆಂದು ಅನ್ನಿಸಿದ ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಇನ್ನುಳಿದ ಮೂರು ಪ್ರತಿಗಳಲ್ಲಿಯ ಹಾಕಬೇಕಾದ ಅವಶ್ಯವಿಲ್ಲದಂತಹ ಸಣ್ಣ-ಪುಟ್ಟ ವ್ಯತ್ಯಾಸಗಳನ್ನೂ ಸಹ ಪಾಠಾಂತರದಲ್ಲಿ ಹಾಕಿದ್ದಿಲ್ಲವೆ, ಶುದ್ಧ ಪ್ರತಿಯಲ್ಲಿ, ಅಕಸ್ಮಾತ್ ಅರ್ಥ ಉಳಿದ ಪದ್ಯವನ್ನು ಅರ್ಧವಾಗಿ ಇಟ್ಟು, ಅದನ್ನು ಪೂರ್ತಿಗೊಳಿಸುವ ಪದಗಳನ್ನೂ ಸಹ ಪಾಠಾಂತರದಲ್ಲೇ ಸೇರಿಸಿಬಿಟ್ಟೆನು. ಅಂತು ಅಚ್ಚುಪ್ರತಿ ತಯಾರಿಸಿದ್ದಾಯಿತು. ಆದರೆ ಅದನ್ನು ಪ್ರಕಟಿಸಿ ಪ್ರಸಿದ್ಧಿಸಲು ಏಳು ವರುಷ ನಾನು ತಡೆಯಬೇಕಾಯಿತು. ಅಂತು ಒಮ್ಮೆ ನನ್ನ ಸುದೈವ ತೆರೆದು "ಸಮಯ ಪರೀಕ್ಷೆ" ಅಚ್ಚಾಯಿತು. ಅದಕ್ಕೆ ಮುನ್ನುಡಿ, ಪದ್ಯಗಳ ಅಕಾರಾದಿ, ಕಠಿನ ಶಬ್ದಗಳಿಗೆ, ಪಾರಿಭಾಷಿಕ ಶಬ್ದಗಳಿಗೆ ಅರ್ಥ ಕೊಡುವ ಕಾರ್ಯ ಮಾಡಬೇಕಾದ ಸಮಯ ಬಂದಾಗ, ಒಂದು ಪ್ರಾಚೀನ ಗ್ರಂಥವನ್ನು ಸಂಪಾದಿಸುವ ಸಂಪಾದಕನು ಎಂತಹ ಘನ ವಿದ್ವಾಂಸನಿರಬೇಕೆನ್ನುವ ಕಲ್ಪನೆ ಬಂದಿತು. ಸಂಪಾದಕನ ಹೊಣೆ ಬಹು ಘನತರವಾದುದಲ್ಲದೆ, ಅವನು ಕವಿಯ ಮನಸ್ಸನ್ನೂ ಪ್ರತಿಭೆ, ಪಾಂಡಿತ್ಯಗಳನ್ನೂ ಗುರುತಿಸುವ ಜ್ಞಾನಿಯಾಗಿರಬೇಕಲ್ಲದೆ, ಕವಿ ಕಂಡ ಲೋಕಾನುಭವವನ್ನು ಅರಿತ ಅಥವಾ ಅರಿತುಕೊಳ್ಳಬಲ್ಲ ಪಂಡಿತನೂ ಆಗಿರಬೇಕಾಗುತ್ತದೆ. ಕವಿ ಬ್ರಹ್ಮಶಿವನು "ಸೌರ ಕಾಳೋತ್ತರಮೆಂ | ಬಾರಾಧನೆ ಗಳೊಳಮಿಳಿವೇದ ಸ್ಮೃತಿ ತ || ತ್ಪೌರಾಣಮೆನಿಪ್ಪವರೋಳ್ | ಸಾರಮನಿಂಬಾಗಿ ನೆರೆಯೆ ನಿರುತಂ ಬಲ್ಲ" || ಮಹಾ ಮೇಧಾವಿಯೂ, ತರ್ಕಬದ್ಧವಾಗಿ ವಿಡಂಬನೆ ಮಾಡುವಲ್ಲಿ ಬಲ್ಲಿದನೂ ಆದ ಕುಶಲ ಕವಿಯಾಗಿದ್ದಾನೆ. ಇಂತಹ ಕವಿಯು ನಿರೂಪಿಸಿದ ವಿಸ್ತೃತ ವಿಷಯವನ್ನು ಇನ್ನೂ ಎಳಗದ ತಲೆಯಲ್ಲಿ ಸೇರಿಸಿಕೊಳ್ಳಲು ಪ್ರಯತ್ನಿಸಿ, ಸಂಪಾದಕನ ಕರ್ತವ್ಯವನ್ನು, ಅಸಮಾಧಾನಕರವಾದ ರೀತಿಯಲ್ಲಾದರೂ ಸಹ, ಪೂರ್ತಿಮಾಡಿ ಮುಗಿಸಿದೆನು. ಬಳಸಿದ ನಾಲ್ಕು ಪ್ರತಿಗಳಲ್ಲಿ ಒಂದು ಪ್ರತಿಯಲ್ಲಿ ಹೆಚ್ಚಿನ ಪದ್ಯಗಳಿದ್ದವು. ಅವು ಬಹು ಅಶುದ್ಧವಾಗಿದ್ದವು. ಅವುಗಳನ್ನು ಸಾಧ್ಯವಿದ್ದಷ್ಟು ತಿದ್ದಿ 'ಅನುಬಂಧ'ದಲ್ಲಿ ಹಾಕಲಾಯಿತು. ಅಶುದ್ಧವಿದ್ದ ಒಂದು ಪದ್ಯ ಹಾಗೂ ಅದನ್ನು ತಿದ್ದಿದ್ದಕ್ಕೆ ಇಲ್ಲಿ ಒಂದು ಉದಾಹರಣೆ ಕೊಡಲಾಗಿದೆ.

"ಆ ವಚನಪೂರ್ವಕದಿಂ । ತಜ್ಜಿನ ಚರಣಾಂಗುಷ್ಠ ನಖಮಣಿ ದ್ಯುತಿಯಿಂ ॥
ಮುನ್ನಿನ ತಮ್ಮನುಭವಮುನ ! ರಿವರೀಮನುಜರಿಂದೇಂ ತೀರ್ಥಕರನ
ಪೆಂಪತಿಶಯಮೋಂ ॥

"ಆನತ ಪೂರ್ವಕದಿಂ ತ-। ಜ್ಜಿನ ಚರಣಾಂಗುಷ್ಠ ನಖಮಣಿ ದ್ಯುತಿಯಿಂ ಮು-॥
ನ್ನಿನ ತಮ್ಮ ಭವಮನರಿವರ್ । ಮನುಜರಿಂದೇಂ ತೀರ್ಥಕರನ
ಪೆಂಪತಿಶಯಮೋ ॥

ಗ್ರಂಥ ಪ್ರಕಟವಾದಮೇಲೆ ನನ್ನ ಈ ಪ್ರಯತ್ನವನ್ನು ನೋಡಿದ ದಿವಂಗತ ಡಾ|| ಡಿ. ಎಲ್. ಎನ್. ಅವರು "ಬಹುಶಃ ಯಾರೂ ಹೊರತರುತ್ತಿರಲಿಲ್ಲವೆಂದು ತಿಳಿದುಕೊಂಡ ಒಂದು ಉತ್ತಮ ಕೃತಿಯನ್ನು ನೀವು ಹೊರತಂದಿದ್ದೀರಿ. ಒಳ್ಳೆ ಕೆಲಸ ಮಾಡಿದಿರಿ" ಎಂದು ನನ್ನ ಬೆನ್ನು ಚಪ್ಪರಿಸಿ, ಪಾಠಾಂತರಗಳನ್ನು ಹಾಕುವ ರೀತಿ, ಹಾಗೂ ಶಬ್ದಕೋಶ ಕೊಡುವ ವಿಧಾನ ಹೇಗೆ ಇರಬೇಕೆಂದು ತಿಳಿಸಿದರು. ನನ್ನ ಮುಂದಿನ ಗ್ರಂಥಗಳ ಸಂಪಾದನೆಯಲ್ಲಿ ಅವರ ಈ ಮಾರ್ಗದರ್ಶನ ನನಗೆ ಬಹು ಉಪಯುಕ್ತವಾಯಿತು. ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಇದು ನನ್ನ ಮೊದಲ ಅನುಭವ.

ಕವಿ ನೇಮಿಚಂದ್ರನ 'ಅರ್ಧನೇಮಿನಾಥ ಪುರಾಣ'ವನ್ನು ಸಂಪಾದಿಸುವ ಸುಯೋಗ ನನಗೆ ಒದಗಿಬಂತು. ಅದು ಆಗಲೇ ಪ್ರಸಿದ್ಧವಾದ ಗ್ರಂಥವಾಗಿತ್ತು. ಹಿಂದಿನವರು ಬಳಸಿಕೊಂಡ ಹಸ್ತಪ್ರತಿಗಳನ್ನು ಹಾಗೂ ಬೇರೆ ಒಂದೆರಡನ್ನು ಬಳಸಿಕೊಂಡು ಸಂಪಾದಿಸಿದೆನಾದರೂ, ಕಣ್ಣಲ್ಲಿ ಕಣ್ಣಿಟ್ಟು, ತ್ರುಟಿತ ಭಾಗಗಳಲ್ಲಿ ಸಹ ಅಡಗಿನಿಂತ ಅಕ್ಷರಗಳನ್ನು ಗುರುತಿಸುವ ತ್ರಾಸವನ್ನು ತೆಗೆದುಕೊಂಡದ್ದರಿಂದ, ಬಹು ಉಪಯುಕ್ತ ಪಾಠಾಂತರಗಳು ದೊರೆತು, ಹಿಂದಿನವುಗಳಲ್ಲಿ ಉಳಿದ ಹಲವಾರು ಸಂಶಯಗ್ರಸ್ತವಾದ ಭಾಗಗಳು ಸರಿಯಾದ ಅರ್ಥಕೊಡುವಂತಾಯಿತು. ಒಂದು ಮತೀಯ ಪುರಾಣದ ಈ ಗ್ರಂಥವನ್ನು ಸಂಪಾದಿಸುವಾಗ, ಪಾಠಾಂತರಗಳನ್ನು ಗುರುತಿಸುವ ಎಚ್ಚರಿಕೆ ಇದ್ದರಷ್ಟೇ ಸಾಲದು; ಆ ಮತದ ಸಂಸ್ಕಾರವಿರುವುದೂ ಅಷ್ಟೇ ಅವಶ್ಯವೆಂಬ ಅರಿವೂ ನನಗಾಯಿತು. ಈ ಸಂಸ್ಕಾರ ಅನೇಕ ಸಂದಿಗ್ಧ ಪ್ರಸಂಗಗಳನ್ನು ನಿವಾರಿಸಲು ಅನುಕೂಲವಾಗುತ್ತದೆ.

'ಜೀವಂಧರ ಚರಿತೆ'ಯನ್ನು ಸಂಪಾದಿಸುವಾಗ, ಕವಿ ಭಾಸ್ಕರನ ಬಗೆಗೆ ಬರೆಯುವಾಗ ಈ ಕವಿ ಅನ್ಯಕವಿಗಳ ಅನುಕರಣೆಯನ್ನು 'ಮಕ್ಕಿಕಾಮಕ್ಕಿ' ಮಾಡಿದ್ದಾನೆಂಬ ಹೇಳಿಕೆ ಸರಿಯೇ ಎಂಬ ಪ್ರಶ್ನೆ ಬಹು ಕಾಡಿತು. ಕನ್ನಡ ನಾಡಿನ ಬೇರೆಬೇರೆ ದಿಕ್ಕುಗಳಲ್ಲಿ ನೆಲಸಿದ ಇಬ್ಬರು ಕವಿಗಳು, ಅದೂ ಅವರು ಬಾಳಿದ ಕಾಲದ ಪ್ರಶ್ನೆ ಯಕ್ಷಪ್ರಶ್ನೆಯಾಗಿರುವಾಗ, ಇದೂ ಅಲ್ಲದೆ ಒಬ್ಬೊಬ್ಬರದೂ ಒಂದೊಂದು ವಿಭಿನ್ನ ಮತಸಂಸ್ಕಾರ. ಧ್ಯೇಯ ಬೇರೆಬೇರೆ. ಬಳಸುವ ಭಾಷೆ ಉತ್ತರ ದಕ್ಷಿಣ -

ಹೀಗಿರುವಾಗ ಒಬ್ಬ ಕವಿಯನ್ನು ಇನ್ನೊಬ್ಬ ಕವಿ 'ಮಕ್ಕಿಕಾಮಕ್ಕಿ'ಯಾಗಿ ಬಳಸಿರಲಾರನೆಂದು ಹೇಳಲು ಪ್ರಯತ್ನಿಸಲಿಕ್ಕೆ ಬಹಳ ಒದ್ದಾಡಬೇಕಾಯಿತು.

'ಲೋಭಪತ್ತ ಚರಿತ್ರೆ'ಯನ್ನು ಒಂದೇ ಪ್ರತಿಯ ಆಧಾರದಿಂದ ಸಂಪಾದಿಸಲಾಯಿತು. ಸಾಂಗತ್ಯ ಹಾಗೂ ರಗಳೆಗಳನ್ನು ಬಳಸಲಾದ ಈ ಕೃತಿಯಲ್ಲಿ ತ್ರುಟಿತ ಭಾಗ ಬಂದಾಗ ಹಾಗೂ ಛಂದಸ್ಸಿನ ದೋಷ ತಲೆದೋರಿದಾಗ ಅವುಗಳನ್ನು ಸರಿಪಡಿಸುವ ಕಾರ್ಯ. ಸಂಪಾದಕನು ಈ ಶಾಸ್ತ್ರದಲ್ಲೂ ಪರಿಣತನಿರಬೇಕೆಂಬುದನ್ನು ಮನದಟ್ಟು ಮಾಡಿಕೊಟ್ಟಿತು. 'ಚಾವುಂಡರಾಯ ಪುರಾಣ', 'ನೋಂಪಿ ಕಥೆ', 'ಪಾರ್ಶ್ವನಾಥ ಪುರಾಣ', 'ಜಾನಪದ ಪರಿಮಳ' ಮೊದಲಾದ ಕೃತಿಗಳನ್ನು ಸಂಪಾದಿಸಿ ಪ್ರಕಟಿಸುವ ಕಾರ್ಯವನ್ನು ನಿರ್ವಹಿಸಿದ್ದೇನೆ. ಈ ಕೆಲಸ ಇನ್ನೂ ಮುಂದುವರಿಯುತ್ತಿದೆ. ಆದರೆ ಸಂಪಾದಕನಾಗಿ ನನ್ನ ಅನುಭವವನ್ನು ಮುಚ್ಚಿಡದೆ ಹೇಳಬೇಕೆಂದರೆ—ಇನ್ನು ಒಂದು ಅನುಭವ ಇದೆ. ಅದು ಕಟು ಅನುಭವ. ನಾನು ಸಾಕಷ್ಟು ತೊಂದರೆ ವಹಿಸಿ, ಸಂಪಾದಿಸಬೇಕೆಂದು ತಯಾರಿಸಿಟ್ಟ, ಹಲವಾರು ಪ್ರತಿಗಳಿಂದ ಪಾಠಾಂತರಗಳನ್ನು ಹಾಕಿ ಕೆಲವು ಭಾಗವನ್ನು ಅಚ್ಚು ಸಹ ಮಾಡಿಸಿದ ಕೆಲವೊಂದು ಕೃತಿಗಳು ನನ್ನ ಕೈತಪ್ಪಿಹೋಗಿ—ಯಾರಿಗೋ ಹೆಸರು ತಂದು ಪ್ರಸಿದ್ಧವಾದವು. ಇದು ನನ್ನ ಅಶುಭ ಕರ್ಮದ ಫಲವಾದರೂ, ಆ ಒಳ್ಳೇ ಗ್ರಂಥಗಳು ಪ್ರಕಟವಾಗಿ ಕನ್ನಡದ ಶ್ರೇಷ್ಠ ಕವಿಗಳ ಕೃತಿಗಳು ಬೆಳಕಿಗೆ ಬಂದುವಲ್ಲಾ ಎಂಬುದೇ ನನ್ನ ಸಂತೋಷ!

ಒಟ್ಟಿನಲ್ಲಿ, ಗ್ರಂಥಸಂಪಾದನಾಕಾರ್ಯ, ನನ್ನ ಮಟ್ಟಿಗೆ ಬಹು ಪವಿತ್ರವಾದದ್ದು. ಸಂಪಾದಕನಲ್ಲಿ ದ್ವೇಷ, ಅಸೂಯೆಗೆ ಆಸ್ಪದವಿರಬಾರದು. ಪೂರ್ವಗೃಹೀತ ಅಭಿಪ್ರಾಯಗಳಿರಬಾರದು. ಆತನು ಕವಿಯ ಮನಸ್ಸಿನ ಸತ್ಯವನ್ನು ಆದಷ್ಟು ಸಮೀಪ ಹೋಗಿ, ಅದನ್ನು ಅರಿತು, ಆ ಕವಿಯ ಕಾಲ, ಮತ, ಸಂಸ್ಕಾರ, ಪಾಂಡಿತ್ಯ, ಪ್ರತಿಭೆ ಮೊದಲಾದವುಗಳನ್ನು ಸರಿಯಾಗಿ ಗುರುತಿಸಿ, ಕಾವ್ಯ ಸಾಮ್ರಾಜ್ಯದಲ್ಲಿ ಆತನ ಸ್ಥಾನಮಾನಗಳನ್ನು ಗುರುತಿಸಿ ಹೇಳುವ ನ್ಯಾಯ, ನೀತಿಗಳನ್ನು ಹೊಂದಿದವನಾಗಿರಬೇಕು. ಗ್ರಂಥಸಂಪಾದನೆ ಮಾಡಿ ಹಣಸಂಪಾದನೆ ಮಾಡಿದವರೂ ಇರಬಹುದು. ಹಾಗೆ ಮಾಡಲು ನನಗೆ ಪ್ರಚೋದಿಸಿದವರೂ ಉಂಟು. ಆದರೆ ಆ ವ್ಯಾಮೋಹಕ್ಕೆ ಬೀಳದೆ, ನನ್ನ ಕೈಲಾದಷ್ಟು ಅನುಕೂಲ ದೊರೆತುದದರ ಸದುಪಯೋಗ ಮಾಡಿಕೊಂಡು, ಅಲ್ಪ ಕಾರ್ಯವನ್ನು ಗ್ರಂಥಸಂಪಾದನಾ ಕಾರ್ಯಕ್ಷೇತ್ರದಲ್ಲಿ ಮಾಡಿದ್ದೇನಾದರೂ, ನನಗೆ ತೃಪ್ತಿ ಆಗಿಲ್ಲ. ನನ್ನಿಂದ ಆಗಬೇಕಾದಷ್ಟು ಕೆಲಸ ಆಗಲಿಲ್ಲ ಎಂಬ ಕೊರಗು ಉಳಿದೇ ಇದೆ. ಈ ಕೊರಗೇ ನನ್ನ ಸಂಪಾದನೆ.

# ಗ್ರಂಥಸಂಪಾದಕಿಯಾಗಿ ನನ್ನ ಅನುಭವ

— ಡಾ|| ಟಿ. ಎನ್. ನಾಗರತ್ನ

"ಹುಚ್ಚು ಹಿಡಿಯಿತು ಎನಗೆ ಹುಚ್ಚು ಹಿಡಿಯಿತು
ಅಚ್ಯುತನ ನಾಮವೆಂಬ...."

ಎಂದು ಪುರಂದರದಾಸರು ತಮಗೆ ಹರಿನಾಮದ ಹುಚ್ಚು ಹಿಡಿದುದನ್ನು ಹಾಡಿರುವಂತೆ ನನಗೆ, ಹರಿದಾಸ ಸಾಹಿತ್ಯದ ಹುಚ್ಚು ಹಿಡಿಸಿದವರು ನನ್ನ ಗುರುಗಳಾದ ಡಾ|| ಜಿ. ವರದರಾಜರಾಯರು. ನಾನು ಕನ್ನಡ ಎಂ.ಎ. ತರಗತಿಯಲ್ಲಿ ವಿಶೇಷ ವಿಷಯವಾಗಿ ಅಧ್ಯಯನ ಮಾಡಿದ್ದು ಹರಿದಾಸ ಸಾಹಿತ್ಯವನ್ನು. ಡಾಕ್ಟರೇಟ್ ಪದವಿಗೆ ಆರಿಸಿಕೊಂಡದ್ದೂ 'ಹರಿದಾಸರ ಭಕ್ತಿಸ್ವರೂಪ' ಎಂಬ ವಿಷಯವನ್ನೇ. ಪದವಿಯನ್ನು ಪಡೆದು ಕೆಲಸಕ್ಕೆ ಸೇರಿದ್ದೂ ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸಸಾಹಿತ್ಯ ಸಂಶೋಧನ ವಿಭಾಗದಲ್ಲೇ, ಸಂಶೋಧನ ಸಹಾಯಕಿಯಾಗಿ. ಇಲ್ಲಿ ನನ್ನ ಕೆಲಸ ಹರಿದಾಸರ ಕೃತಿಗಳನ್ನು ಸಂಪಾದಿಸುವುದು. ಹೀಗೆ, ನನ್ನ-ಹರಿದಾಸ ಸಾಹಿತ್ಯದ ನಂಟು ಬೆಳೆದುಬಂತು.

ನನ್ನ ಅನುಭವಕ್ಕೆ ಬಂದಂತೆ ಹರಿದಾಸರ ಕೃತಿಗಳ ಸಂಪಾದನೆಗೂ ಬೇರೆ ಕೃತಿಗಳ ಸಂಪಾದನೆಗೂ ತುಂಬ ವ್ಯತ್ಯಾಸವಿದೆ. ಹರಿದಾಸರ ಕೃತಿಗಳು ಬಾಯಿಂದ ಬಾಯಿಗೆ ಸಾಗಿಬಂದುದರಿಂದ ಅನೇಕ ವ್ಯತ್ಯಾಸಗಳನ್ನು ಮೈಗೂಡಿಸಿಕೊಂಡು ಬಂದಿರುತ್ತವೆ. ಅಂತಹ ವ್ಯತ್ಯಾಸಗಳಿಗೆ ಗ್ರಂಥಸ್ಥ ಕಾವ್ಯಗಳಗಿಂತ ಇಲ್ಲಿ ಅವಕಾಶ ಹೆಚ್ಚು. ಗ್ರಂಥಸಂಪಾದನ ತತ್ತ್ವಗಳನ್ನು ನಾವು ಇಂದು ಏನು ಒಪ್ಪಿಕೊಂಡಿದ್ದೇವೆ ಅವುಗಳನ್ನು ಹಾಗೆಯೇ ದಾಸ ಸಾಹಿತ್ಯ ಸಂಪಾದನೆಗೆ ಸಂಪೂರ್ಣವಾಗಿ ಅನ್ವಯಿಸುವುದು ಸಾಧ್ಯವಾಗುತ್ತಿಲ್ಲ. ಹಸ್ತಪ್ರತಿಗಳ ವಿಂಗಡನೆ, ವರ್ಗೀಕರಣಗಳನ್ನೇ ತೆಗೆದುಕೊಳ್ಳೋಣ. ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆ ದೊರೆತಿರುವ ಹಸ್ತಪ್ರತಿಗಳಲ್ಲಿ ಯಾವುದೇ ಒಂದು ಪ್ರತಿಯನ್ನು ಇನ್ನೊಂದು ಪ್ರತಿ ಸಂಪೂರ್ಣವಾಗಿ ಹೋಲುವುದಿಲ್ಲ. ಹಾಗಾಗಿ ಅವುಗಳನ್ನು ಒಂದರ ನಕಲು ಇನ್ನೊಂದು ಎಂದು ಯಾವ ಪ್ರತಿಯನ್ನೂ ಪರಿಗಣಿಸಲಾಗುವುದಿಲ್ಲ. ಬೇರೆ ಬೇರೆ ಕಡೆಗಳಲ್ಲಿ ದೊರಕಿದ ಹಸ್ತಪ್ರತಿಗಳಿದ್ದರೂ ಯಾವುದರಲ್ಲೂ ಸ್ಪಷ್ಟವಾಗಿ ಕಾಲನಿರ್ದೇಶನವಿರುವುದಿಲ್ಲ. (ಇದುವರೆಗೆ ನಮಗೆ ದೊರೆತಿರುವ ಒಂದೇ ಒಂದು ಕಾಲನಿರ್ದೇಶನವುಳ್ಳ ಪ್ರತಿ (ಪಾ. ೫೭) ೧೫೦ ವರ್ಷ ಹಿಂದಿನದು.) ಸಾಮಾನ್ಯವಾಗಿ ಪ್ರತಿಯೊಂದು ಹಸ್ತಪ್ರತಿಯೂ ಹಲವಾರು ದಾಸರ

ಗಳ ಹಲವಾರು ಕೃತಿಗಳಿಂದ ಚರ್ವಿತಚರ್ವಣವಾಗಿ ಪರಿಣಮಿಸಿರುತ್ತವೆ. ಒಬ್ಬರೇ ದಾಸರ, ಒಂದೇ ಅಂಕಿತದ ಕೀರ್ತನೆಗಳನ್ನು ಒಂದು ಪುಸ್ತಕವಾಗಿ ಸಂಗ್ರಹಿಸಿರುವುದನ್ನು ಮತ್ತು ಬೇರೆ ಬೇರೆ ದಾಸರ ಪದಗಳಿದ್ದರೂ ಅವುಗಳ ಕ್ರಮವಾದ ವಿಂಗಡನೆಯನ್ನು ಕೆಲವೊಮ್ಮೆ ಕಾಣಬಹುದು, ಅಷ್ಟೇ. ಈ ಸ್ವರೂಪದ ಪ್ರತಿಗಳನ್ನೂ ನಾವು ಬೇರೆ ಬೇರೆಯಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಅವುಗಳಲ್ಲೂ ವರ್ಗೀಕರಣ ಸಾಧ್ಯವಾಗುವುದಿಲ್ಲ. ಇಷ್ಟೆಲ್ಲ ಸಮಸ್ಯೆಗಳಿರುವುದರಿಂದ ದಾಸರ ಕೃತಿಗಳ ಯಾವುದೇ ಒಂದು ಸಂಕಲನವನ್ನೂ ಮೂಲಪ್ರತಿಯೆಂದು ಇಟ್ಟುಕೊಳ್ಳಲು ಸಾಧ್ಯವಿಲ್ಲ. ಒಂದೊಂದು ಪ್ರತ್ಯೇಕ ಕೀರ್ತನೆಗೂ ದೊರೆತ ಆಕರಗಳನ್ನೆಲ್ಲ ಒಟ್ಟುಮಾಡಿ, ಅವುಗಳಲ್ಲಿ ಆಯಾ ದಾಸರು ಬದುಕಿಬಾಳಿದ ಸ್ಥಳದ ದೃಷ್ಟಿಯಿಂದ ಪ್ರಾದೇಶಿಕವೆಂದಾಗಲೀ, ಪ್ರತಿಯ ಸ್ವರೂಪದ ದೃಷ್ಟಿಯಿಂದ ಪ್ರಾಚೀನವೆಂದಾಗಲೀ ಅಥವಾ ಶುದ್ಧಪಾಠವನ್ನಾಧರಿಸಿ ಒಂದು ಪ್ರತಿಯನ್ನು ಆಯ್ದು, ಅದನ್ನು ಮೂಲವೆಂದು ಭಾವಿಸಿ ಉಳಿದವುಗಳ ಪಾಠಗಳನ್ನು ಸಂಕಲಿಸುವುದು ಅನಿವಾರ್ಯವಾಗಿದೆ. ಈ ಕ್ರಮದಿಂದಾಗಿ ಒಂದೊಂದು ಕೀರ್ತನೆಯ ಸಂಪಾದನೆಯೂ ಒಂದೊಂದು ಕಾವ್ಯದ ಸಂಪಾದನೆಯಂತೆಯೇ ಇರುತ್ತದೆ. ಕೀರ್ತನೆಗಳು ಗಾತ್ರದಲ್ಲಿ ಚಿಕ್ಕವಿರಬಹುದು, ಅಷ್ಟೆ. ಈ ಕ್ರಮವನ್ನನುಸರಿಸಿ ಸಂಪಾದಿಸುವಾಗ ಸಾಮಾನ್ಯವಾಗಿ ಎರಡು ಭಿನ್ನ ಪ್ರತಿಗಳಲ್ಲಿರುವ ಕೃತಿಯನ್ನು—ಪಾಠಾಂತರಗಳೊಡನೆ ವಿಶ್ವಸನೀಯವೆಂದು ಭಾವಿಸುತ್ತೇವೆ. ಒಂದೇ ಒಂದು ಆಕರದಲ್ಲಿ ದೊರೆತ ಕೃತಿಗೆ ಅಷ್ಟು ನಿರ್ಣಾಯಕ ಸ್ಥಾನ ಕೊಡಲು ಸಾಧ್ಯವಿಲ್ಲ. ಆದ್ದರಿಂದ ಅಂತಹವುಗಳನ್ನು 'ಏಕೈಕ ಆಕರ'ಗಳೆಂದೇ ನಿರ್ದೇಶಿಸಿರುತ್ತೇವೆ [ನೋಡಿ : ಕನ್ನಡ ಅಧ್ಯಯನ ಸಂಸ್ಥೆ(ಮೈಸೂರು)ಯ 'ಹರಿದಾಸ ಸಾಹಿತ್ಯ ಮಾಲೆ'ಯಲ್ಲಿನ ಪ್ರಕಟನೆಗಳು]. ಇನ್ನೊಂದು ಆಕರ ದೊರೆಯುವವರೆಗೆ ಅದು ಅನುಮಾನಾಸ್ಪದವಾಗೇ ಉಳಿಯುತ್ತದೆ.

ಅಂಕಿತನಿರ್ಧಾರ ದಾಸರ ಕೃತಿಗಳ ಸಂಪಾದನೆಯಲ್ಲಿ ಒಂದು ಪ್ರಮುಖ ಹಂತ. ದಾಸರ ಕೃತಿಗಳನ್ನು ಇದು ಇಂತಹ ದಾಸರ ಕೃತಿಯೆಂದು ನಿರ್ಧರಿಸಲೂ ಮೂಲ ಆಧಾರಗಳೇ ಅಂಕಿತಗಳು(ರಂಗವಿಠಲ, ಹಯವದನ, ಪುರಂದರ ವಿಠಲ, ಜಗನ್ನಾಥ ವಿಠಲ—ಇತ್ಯಾದಿ). ಸಾಮಾನ್ಯವಾಗಿ ಒಂದು ಕೀರ್ತನೆ ಹೆಚ್ಚಿನ ಆಕರಗಳಲ್ಲಿ ಯಾವ ಅಂಕಿತದಲ್ಲಿರುತ್ತದೆಯೋ ಅದನ್ನೇ ಒಪ್ಪಿಕೊಳ್ಳುತ್ತೇವೆ. ಈಗ, 'ಒಲಿದೆ ಏತಕಮ್ಮಾ ಲಕುಮಿ' ಒಂದು ಕೀರ್ತನೆ ಒಂದು ಆಕರದಲ್ಲಿ ಮಾತ್ರ 'ಹಯವದನ' ಅಂಕಿತದಲ್ಲಿದ್ದು ಹೆಚ್ಚಿನ ಆಕರಗಳಲ್ಲಿ 'ಗುರುಗೋಪಾಲವಿಠಲ' ಅಂಕಿತದಲ್ಲಿ ದೊರೆತಿರುವುದರಿಂದ ಆ ಕೃತಿಯನ್ನು ದಾಸಪ್ಪದಾಸರದೆಂದು ಪರಿಗಣಿಸಬೇಕಾಗುತ್ತದೆ. ಅಂತೆಯೇ 'ಮಾಯಾವಾದಿ ಗಂಡನೊಲ್ಲೆನೆ' ಎಂಬ ಕೀರ್ತನೆ ಎರಡು ಆಕರಗಳಲ್ಲಿ 'ರಂಗವಿಠಲ' ಅಂಕಿತದಲ್ಲಿ ದೊರೆತಿದ್ದು, ಹೆಚ್ಚಿನ ಆಕರಗಳಲ್ಲಿ 'ಪುರಂದರವಿಠಲ' ಅಂಕಿತದಲ್ಲಿರುವುದರಿಂದ ಆ ಕೃತಿಯನ್ನು ಪುರಂದರ ದಾಸರದೆಂದು ತೀರ್ಮಾನಿಸಿ

ಬೇಕಾಗುತ್ತದೆ. ಮತ್ತು ಈ ಎರಡು ಕೃತಿಗಳೂ ಕ್ರಮವಾಗಿ 'ಹಯವದನ', 'ರಂಗವಿಠಲಾ'ಂಕಿತಗಳಾಗಿ ಮಾರ್ಪಟ್ಟಿವೆ, ಪಲ್ಲಟವಾಗಿವೆ ಎಂದು ಭಾವಿಸಬೇಕಾಗುತ್ತದೆ. ಆದರೆ ಕೆಲವು ಸಂದರ್ಭಗಳಲ್ಲಿ ಆಯಾ ಕೃತಿಯ ಅಂತಸ್ಸಂಭಾವ್ಯತೆಗೆ ಅನುಗುಣವಾಗಿ ಈ ಅಂಕಿತಬಾಹುಳ್ಯದ ಮೇಲಿನ ನಿರ್ಧಾರ ವ್ಯತ್ಯಾಸವಾಗುವುದೂ ಉಂಟು ಮತ್ತು ಸಾಮಾನ್ಯವಾಗಿ ಅಂಕಿತ ಪ್ರಾಸಸ್ಥಾನದಲ್ಲಿ ಬಂದಲ್ಲಿ ಪಲ್ಲಟವಾಗುವುದು ಅಪರೂಪ. ಇದು ಅಂಕಿತನಿರ್ಧಾರಕ್ಕೆ ಒಂದು ಬಲವಾದ ಅಂಶ. 'ನಾನೇ ಸಜ್ಜನನಾದಡೆ' ಎಂಬ ವಾದಿರಾಜರ ಕೃತಿಯನ್ನು ನೋಡಿದರೆ ಈ ಕೃತಿ ೧೪ ಆಕರಗಳಲ್ಲಿ 'ರಂಗವಿಠಲ' ಅಂಕಿತದಲ್ಲಿ ದೊರೆತಿದ್ದರೂ ಅಂಕಿತದಲ್ಲಿ ಪ್ರಾಸಕ್ಲೇಶವಿದೆ :

**ಹೇಯ ಶರೀರವ ಪೋಷಿಸಿಕೊಂಡು ಉ-**
**ಪಾಯವ ಚಿಂತಿಸಿ ಬಳಲುವೆನು**
**ರಾಯರ ಮಾಡಿ ಶರಣರ ಸಲಹುವ**
<u>ರಂಗವಿಠಲನ</u> **ಬೇಡುವೆನೇನಯ್ಯ** ೩

ಆದರೆ 'ಹಯವದನ' ಅಂಕಿತದಲ್ಲಿ ದೊರೆತಿರುವ ಕೆಲವೇ ಪ್ರತಿಗಳ ಆಧಾರದ ಮೇಲೆ ಆ ಕೃತಿಯನ್ನು ಪರಿಶೀಲಿಸಿದಾಗ ಪ್ರಾಸ ಸಹಜವಾಗಿ ಕೂಡಿಬಂದು, ಕ್ಲೇಶ ಪರಿಹಾರವಾಗುವುದರಿಂದ ಅದು ವಾದಿರಾಜರ ಕೃತಿಯೆಂದೇ ನಿರ್ಧಾರವಾಗುತ್ತದೆ.

**ಹೇಯ ಶರೀರವ ಪೋಷಿಸುವೆನೆಂದು-**
**ಪಾಯವನು ಮಾಡಿ ನಾ ಬಳಲುತಿಹೆ**
**ರಾಯರು ಮಾಡಿದ ಶರಣರ ಹೊರೆವ**
<u>ಹಯವದನ</u> **ನಿನ್ನ ನಾ ಮರೆತಿಹೆನೇನಯ್ಯ** ೨

ಹಾಗೆಯೇ ಒಂದೇ ಕೃತಿಯ ಭಿನ್ನ ಅಂಕಿತಗಳಲ್ಲಿ ದೊರೆಯುವ ಆಕರಗಳ ಸಂಖ್ಯೆ ಸಮವಾಗಿದ್ದಲ್ಲಿ ಅಂತಹ ರಚನೆಯ ಅಂಕಿತವನ್ನು ನಿರ್ಧರಿಸುವುದು ಕಷ್ಟ. ಅಂತಹ ಕೀರ್ತನೆಗಳನ್ನು 'ಅಂಕಿತ ಸಂದಿಗ್ಧ'ಗಳೆಂದು ನಿರ್ದೇಶಿಸಬೇಕಾಗುತ್ತದೆ.[1] (ನೋಡಿ : 'ಶ್ರೀ ವಾದಿರಾಜರ ಕೃತಿಗಳು'. ಅನುಬಂಧ–1)[2] ಈ ಅಂಕಿತ ನಿರ್ಧಾರದ ಹಂತದಲ್ಲಂತೂ ಎಷ್ಟು ಎಚ್ಚರಿಕೆಯಿಂದಿದ್ದರೂ ಸಾಲದು. 'ಗೋಪಾಲವಿಠಲ' ಅಂಕಿತ ಒಬ್ಬರದಾದರೆ (ಗೋಪಾಲದಾಸರು), 'ಗುರುಗೋಪಾಲವಿಠಲ' ಮತ್ತೊಬ್ಬರ ಅಂಕಿತವಾಗುತ್ತದೆ (ದಾಸಪ್ಪದಾಸರು), 'ವರದಗೋಪಾಲವಿಠಲ' ಇನ್ನೊಬ್ಬರ ಅಂಕಿತವಾಗುತ್ತದೆ (ಸೀನಪ್ಪದಾಸರು); ಮತ್ತು 'ತಂದೆ ಗೋಪಾಲವಿಠಲ' ಬೇರೆಯವರದಾಗುತ್ತದೆ (ರಂಗಪ್ಪದಾಸರು). ಹಾಗೆಯೇ 'ಜಗನ್ನಾಥವಿಠಲ'ರು ಜಗನ್ನಾಥದಾಸರಾದರೆ 'ಗುರು ಜಗನ್ನಾಥವಿಠಲ'ರು ಅವರ ಶಿಷ್ಯರಾದ ಕೋಸಗಿ ಆಚಾರ್ಯರು. ಹಯವದನ, ಹಯವದನಸಠಲ, ಮುದ್ದು ಹಯವದನ, ಹಯಮುಖ–ಇವುಗಳೂ ಬೇರೆ ಬೇರೆ ದಾಸರ ಅಂಕಿತಗಳು. ಆದುದರಿಂದ ಈ ಅಂಕಿತ ನಿರ್ಧಾರದಲ್ಲಿ ಎಷ್ಟರಮಟ್ಟಿಗೆ

ವಿಕೃತಪ್ಪುವ ಸಾಧ್ಯತೆಯಿದೆಯೆಂಬುದು ವೇದ್ಯವಾಗುತ್ತದೆ. ಯಾವುದು ವಿಶೇಷಣ. ಯಾವುದು ಅಂಕಿತ ಎಂಬುದನ್ನು ಬಹಳ ಎಚ್ಚರಿಕೆಯಿಂದ ನಿರ್ಧರಿಸಬೇಕಾಗುತ್ತದೆ.

ಅಂಕಿತ ನಿರ್ಧಾರದ ಅನಂತರ ಪಾಠಾಂತರಗಳನ್ನು ಸಂಕಲಿಸಿ, ಸೂಕ್ತಪಾಠವನ್ನು ಆಯ್ಕೆ ಮಾಡಬೇಕಾಗುತ್ತದೆ. ಈ ಹಂತದಲ್ಲೂ ಕೂಡ ಬಹುಪ್ರತಿಗಳ ಆಧಾರದ ಮೇಲೆ ಪಾಠನಿರ್ಣಯ ಮಾಡುವುದು ಸಾಮಾನ್ಯ ನಿಯಮವಾದರೂ ಅನೇಕವೇಳೆ ಅದು ಸಾಧ್ಯವಾಗುವುದಿಲ್ಲ. ಯಾವುದೋ ಒಂದು ಪ್ರತಿಯಲ್ಲಿ ಶುದ್ಧ ಪಾಠ ಅಡಗಿರುವ ಸಾಧ್ಯತೆಯೂ ಇದೆ. ಉದಾಹರಣೆಗೆ

**ನಂಬಿ ನೀ ಕೆಡದಿರು ಇಹಲೋಕ ಸುಖವೇಬ**
**ಕಂಬಳಿಯೊಳಬುತ್ತಿ**
**[ನಿಂಬೆಲೆಯಾಗಿನೂಟ]**...

ಎಂಬ ಕೀರ್ತನೆಯ ಭಾಗವನ್ನು ನೋಡಬಹುದು.[3] ಈ ಕೀರ್ತನೆಗೆ ಮೂರು ಆಕರಗಳಿವೆ. ಅವುಗಳ ಪಾಠಗಳು ಹೀಗಿವೆ: (1) ನಿಂಬೆಲೆಯಾಗಿನೋಟ(ಪ 21). (2) ನೀ ಬೆಲೆಯ ಊಟ(ಮು. 27) (ಮು. 30). ಎರಡನೆಯ ಪಾಠವಿರುವ ಎರಡೂ ಮುದ್ರಿತ ಪ್ರತಿಗಳು. ಅವುಗಳ ಸಂಪಾದಕರ ಗಮನಕ್ಕೆ ಬಾರದ 'ನಿಂಬೆಲೆಯಾಗಿನೂಟ' ಎನ್ನುವ ಪಾಠ (ಪ 21)ದಲ್ಲಿ ಅಡಗಿದೆ. ಕಂಬಳಿಯಲ್ಲಿ ಕಟ್ಟಿದ ಬುತ್ತಿ ಹೇಗೆ ಉಣ್ಣಲು ಸುಖಕರವಲ್ಲವೋ ಹಾಗೆಯೇ ಕಿರಿದಾದ ನಿಂಬೆಯ ಎಲೆಯಲ್ಲಿ ಉಣ್ಣುವುದೂ ಸುಖಕರವಲ್ಲವೆಂಬ ಇಲ್ಲಿಯ ಭಾವವನ್ನು ಗ್ರಹಿಸುವ ಜಾಣ್ಮೆ ಬೇಕಾಗುತ್ತದೆ, ಅಷ್ಟೇ. ಅಂತೆಯೇ

**ಊರ ಔತಣ ಹೇಳಿ ಸಾರಿ ಡಂಗುರಹೊಯಿಸಿ**
**ಧೀರ ರಾಯರಿಗೆಲ್ಲ ಸಾರ ಷಡ್ರಸವಿತ್ತು**
**ತೀರ ತೀರದಿ ಇನ್ನು ಚೀರುತ ಉಣುವಾಗ**
**ದ್ವಾರದಲೊಬ್ಬ [ಮಧುಕರದವ] ಬಂದಂ**
**ಆರಿಪಾರಿದರಿನ್ನು ಹಾರಿಸ್ಯಾಕುವರುಂಟೆ —**

ಎಂಬಲ್ಲಿ 'ಮಧುಕರದವ' ಎಂಬ ಪಾಠಕ್ಕೆ (1) ಮಾಧಕಾರದವನು(ಲ.16)(ಮು.31)
(2) ಮಾಧವಕರದವ(ಮು.27)(ಮು.30)
ಎಂಬ ಪಾಠಾಂತರಗಳಿವೆ. ಊರಿಗೆ ಔತಣ ಹೇಳಿ ಸಾರಷಡ್ರಸಗಳನ್ನು ಉಣಬಡಿಸುತ್ತಿರುವಾಗ ಒಬ್ಬ ಸಾಮಾನ್ಯ ಭಿಕ್ಷುಕ ಬಾಗಿಲಿಗೆ ಬಂದು ಬೇಡಿದರೆ ಅವನನ್ನು ಓಡಿಸುವರೇ? ಎಂಬುದು ಇಲ್ಲಿಯ ಭಾವ. ಆದ್ದರಿಂದ ಮೂಲಪಾಠ (ಮಧುಕರದವ) ಎಂದೇ ಇರಬೇಕು (ಮಧುಕರವೃತ್ತಿ = ಭಿಕ್ಷೆ ಎತ್ತುವ ಕೆಲಸ. 'ಮಧುಕರವೃತ್ತಿ ಎನ್ನದು' ಎನ್ನುವ ಪುರಂದರ ದಾಸರ ಮಾತನ್ನಿಲ್ಲಿ ನೆನೆಯಬಹುದು.) ಇಂತಹ ಸಂದರ್ಭಗಳಲ್ಲಿ ಕೃತಿಕಾರನ ಆಶಯವನ್ನು ಅರಿತುಕೊಳ್ಳುವ ಶಕ್ತಿ ಅತ್ಯಗತ್ಯ. ಇಂತಹ ಕಡೆಗಳಲ್ಲಿ ಸಂಪಾದಕರ ಪ್ರತಿಭೆ ವ್ಯುತ್ಪತ್ತಿಗಳು ಸಹಾಯಕ್ಕೆ ಬರುತ್ತವೆ.

ಮತ್ತು ಹಾಗೆ ಸರಿಯಾದ ಪಾಠ ಪತ್ತೆಯಾದಾಗಿನ ಅನುಭವ ರೋಮಾಂಚಕಾರಿಯಾಗಿರುತ್ತದೆ. ನನ್ನ ಈ ಒಂದು ಅನುಭವದ ಆನಂದಕ್ಕೆ ಉತ್ತಮ ಉದಾಹರಣೆಯೆಂದರೆ ವಾದಿರಾಜರ ಒಂದು ಕೃತಿಯ ಅಂತರಾರ್ಥ ಹೊಳೆದದ್ದು. ಕೃತಿ ಹೀಗೆ ಪ್ರಾರಂಭವಾಗುತ್ತದೆ :

**ನೆಲನಲ್ಲಿ ಪಸರಿಸಿದ ಪಾಲಮೇಲೊರಗಿದ್ದ**
**ಹಳೆಯ ಹಾವ ಕಂಡೆನದರಲದ್ಭುತವ ಕಂಡೆ** |ಪ|
**ನಡುಗಡಿದ ಸಿಂಗಡಿಯ ಬಿಲ್ಲ ಕಂಡೆನದರ ಮೇ**
**ಲ್ಗಡೆಯಲಧೋಮುಖದ ತುಂಬಿಗಳ ಹಿಂಡ ಕಂಡೆ**
**ಮಡುವೆರಡ ಕದೆಯಲ್ಲಿ ಒಂದೊಂದು ಮಕರಿಯ ಕಂಡೆ**
**ಕಡೆದ ಶಂಖ ಚತುರುವೇದಕೊದಗುವುದ ಕಂಡೆ**

—ಹೀಗೆ ತಾವು ಏನೇನು ಕಂಡರು ಎಂಬುದನ್ನು ಎಳೆಎಳೆಯಾಗಿ ಬಣ್ಣಿಸುತ್ತಾ, ಕೊನೆಗೆ

**ಬೆಳೆದೆರಡು ಗಜದಂತಗಳ ಕಂಡೆ ನಳನಳಿಪ**
**ನಳಿನಯುಗ್ಮದ ಕಂಡೆನದರೆಸಳುಗಳಲಿ**
**ತೊಳೆದ ಹತ್ತು ಮುತ್ತುಗಳ ಕಂಡೆ ಬೇಗದಲಿ ಶ್ರೀ**
**ಲಲನೆಯಾಳ್ದ ಹಯವದನನಾಳ್ಗಳೆ ಬಲ್ಲರ್ರೃಸೆ** ॥

ಎಂದು ಒಗಟಿನ ರೂಪದಲ್ಲಿ ಕೃತಿ ಮುಕ್ತಾಯವಾಗುತ್ತದೆ. ಒಂದೇ ಒಂದು ಪ್ರತಿಯಲ್ಲಿ ದೊರೆತಿರುವ ಈ ಕೃತಿಯನ್ನು ನಾಲ್ಕೈದು ಸಲ 'ಓದಿದರೂ' ಏನೂ ಅರ್ಥವಾಗಲೊಲ್ಲದು. ವಾದಿರಾಜರು ಇನ್ನೇನನ್ನು ಕಂಡರಪ್ಪಾ ಯಾರೂ ಕಾಣದ್ದು ಎಂದುಕೊಳ್ಳುತ್ತಾ, ಪಟ್ಟುಬಿಡದೆ ಮತ್ತೊಮ್ಮೆ ಓದಲು ಪ್ರಾರಂಭಿಸಿದಾಗ, ಕೃತಿಯ ಮೂರನೆಯ ನುಡಿಯ ಎರಡನೆಯ ಸಾಲಿನಲ್ಲಿ ನನಗೆ ಅದರ ಬೀಗವಕ್ಕೆ ಸಿಕ್ಕಿತು : 'ವಿಶಾಲವಾದ ನೀಲಮಣಿಯ ಹಲಗೆಯಲಿ ಹೆಣ್ಣ ಕಂಡೆ.' ಅಲ್ಲಿಂದ ತಾನೇ ತಾನಾಗಿ ಆ ಒಗಟು ಒಡೆಯುತ್ತಾ ಬಂತು. ಪಾಲಸಾಗರದಲ್ಲಿ ಮಲಗಿದ್ದ ಆದಿಶೇಷನ ಮೇಲೆ, ನಾರಾಯಣನ ಕಾಲಬುಡದಲ್ಲಿ ಕುಳಿತಿದ್ದ ಲಕ್ಷ್ಮಿಯ ಸೌಂದರ್ಯ ಇಲ್ಲಿ ವಾದಿರಾಜರನ್ನು ಸೆಳೆದಿದೆ. ಉದ್ದಕ್ಕೂ ಕವಿಸಮಯಗಳನ್ನು ಬಳಸಿ ಅವಳ ಹುಬ್ಬು, ದುಂಬಿಗುರುಳು, ಕೂರ್ಮಕದಪು, ಕಡೆದ ಶಂಖದೋಪಾದಿಯ ಕತ್ತು—ಇತ್ಯಾದಿಗಳನ್ನು ಭಕ್ತಿಭಾವಪರವಶರಾಗಿ ವರ್ಣಿಸುತ್ತಿದ್ದಾರೆ. ಹಾಗೆ ಮುಖದಿಂದ ಪಾದಗಳವರೆಗೂ ಬಣ್ಣಿಸಿ, ಕೊನೆಯ ನುಡಿಯಲ್ಲಿ ಗಜದಂತಗಳನ್ನು ಹೋಲುವ ಎರಡು ತೋಳುಗಳು, ಪದ್ಮಹಸ್ತಗಳು, ಮುತ್ತಿನ ಉಗುರುಗಳನ್ನೂ ಬಣ್ಣಿಸಿ ನಾರಾಯಣನನ್ನು ಬಲ್ಲವರು ಇವನ್ನು ಅರ್ಥಮಾಡಿಕೊಳ್ಳಬಲ್ಲರೆಂದು ಆ ಇಡೀ ವರ್ಣನೆಯನ್ನೇ ಒಂದು ಒಡಪನ್ನಾಗಿ ಮಾಡಿದ್ದಾರೆ. ಇಷ್ಟು ಹೊಳೆದ ಬಳಿಕ ನನಗಾದ ಆನಂದವನ್ನು ಆ ಕೂಡಲೆ ನನ್ನ ಗುರುಗಳಲ್ಲಿಗೆ ಹೋಗಿ ಹಂಚಿಕೊಂಡೆ. ಇಂತಹವು ನಿಜಕ್ಕೂ ಗ್ರಂಥ ಸಂಪಾದಕರ ಜೀವನದ ರಸನಿಮಿಷಗಳು.

ಇನ್ನು ಪಾಠಾಂತರಗಳನ್ನು ಸೂಚಿಸುವ ಸಂಕೇತಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ಅಗತ್ಯವೆನ್ನಿಸುತ್ತಿದೆ. ದಾಸಸಾಹಿತ್ಯದ ಮಟ್ಟಿಗೆ ಹೇಳುವುದಾದರೆ ಹಸ್ತಪ್ರತಿಗಳ ಬಾಹುಳ್ಯ, ಬಾಯಿಂದ ಬಾಯಿಗೆ ಸಾಗಿಬಂದಿರುವ ಕಾರಣ ಉಂಟಾಗಿರುವ ಅಸಂಖ್ಯಾತ ಸ್ಖಾಲಿತ್ಯಗಳು, ನುಡಿಗಳು, ಸಾಲುಗಳು, ಶಬ್ದಗಳ ಸ್ಥಾನಪಲ್ಲಟ, ಪ್ರಕ್ಷೇಪಗಳು, ಲೋಪಗಳು ಇತ್ಯಾದಿಗಳೆಲ್ಲವುಗಳನ್ನೂ ನಿರ್ದೇಶಿಸಬೇಕಾಗಿರುವುದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಸಂಕೇತಗಳನ್ನು ಬಳಸುವುದು ಅನಿವಾರ್ಯ. ಸಂಕೇತಗಳನ್ನು ಹೊಸದಾಗಿ ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಯಾವುದೇ ಒಂದು ಸಂಕೇತವನ್ನು ನಿಯತವಾಗಿ ಒಂದೇ ಅರ್ಥದಲ್ಲಿ ಒಂದು ಸಂಕಲನದುದ್ದಕ್ಕೂ ಬಳಸಲು ಸಾಧ್ಯವಾಗುವುದಿಲ್ಲ. ಒಂದು ಸಂಕಲನವೇಕೆ ಒಂದೇ ಒಂದು ಕೀರ್ತನೆಯಲ್ಲೂ ಬಳಸಲು ಸಾಧ್ಯವಿಲ್ಲ. ಏಕೆಂದರೆ ಪಲ್ಲವಿಯಿಂದ ಹಿಡಿದು ಪ್ರತಿ ನುಡಿಯಲ್ಲೂ ಪ್ರತಿ ಸಾಲಿನಲ್ಲೂ ವ್ಯತ್ಯಾಸ ಬರಲು ಆರಂಭಿಸಿದರೆ ಒಂದು ಸಂಕೇತದಿಂದ ಎಷ್ಟು ನುಡಿಗಳಲ್ಲಿ ಬರುವ ಒಂದೇ ರೀತಿಯ ವ್ಯತ್ಯಾಸಗಳನ್ನು ಸೂಚಿಸಬಹುದು? ಅದೂ ಒಂದೇ ಪುಟವಲ್ಲಿಯೇ ಬರುವುದರಿಂದ ಅಂತಹ ಸಂಕೇತಗಳು ಓದುಗರನ್ನು ಗೊಂದಲದಲ್ಲಿ ಕೆಡುಹಲು ಕಾರಣವಾಗುತ್ತವೆ. ಬಳಸಿರುವ ಒಂದು ಸಂಕೇತ ಒಂದನೆಯ ನುಡಿಯಲ್ಲಿನ ವ್ಯತ್ಯಾಸಸೂಚಿಯೋ ಅಥವಾ ಮೂರನೆಯ ನುಡಿಯದ್ದೋ, ಐದನೆಯ ನುಡಿಯದ್ದೋ ಎಂಬುದು ಸ್ಪಷ್ಟವಾಗದೆ ಕಣ್ಣುಕಣ್ಣು ಬಿಡುವಂತಾಗುತ್ತದೆ. ಈ ಕಾರಣದಿಂದ ಆದಷ್ಟೂ ಸ್ಪಷ್ಟತೆಗೆ ಒತ್ತುಕೊಟ್ಟು ಪ್ರತಿಪುಟವನ್ನೂ ಒಂದು ಪ್ರತ್ಯೇಕ ಘಟಕವಾಗಿಟ್ಟುಕೊಂಡು (ಸಂಕೇತಗಳ ದೃಷ್ಟಿಯಿಂದ) ಆಯಾ ಪುಟವಲ್ಲಿ ಮೇಲೆ ಕಾಣಿಸುವ ಸಂಕೇತಗಳಿಗೆ ಅದೇ ಪುಟದ ಅಡಿಟಿಪ್ಪಣಿಯಲ್ಲಿ ಆ ವಿವರವನ್ನು ಕಾಣಿಸಿದರೆ ಸಾಕೆನ್ನಿಸುತ್ತದೆ. ಆಯಾ ಸಂಕೇತದ ಕಾರ್ಯ ಅಲ್ಲಿಗೆ, ಆ ಪುಟಕ್ಕೆ ಮುಗಿದಂತೆ. ಇದಕ್ಕೆ ಹೊರತಾಗಿ ಸಂಕಲನದುದ್ದಕ್ಕೂ ಒಂದೇ ಅರ್ಥದಲ್ಲಿ ಬಳಸಿರುವ ಕೆಲವು ಸಂಕೇತಗಳನ್ನು ಮುಖ್ಯ ಸಂಕೇತಗಳೆಂದು ಕರೆದು ಸಂಕಲನದ ಆರಂಭದಲ್ಲಿಯೇ ಅವಕ್ಕೆ ವಿವರಣೆಯನ್ನೂ ಕೊಡಲಾಗಿರುತ್ತದೆ.[4]

ನಾವು, ಅಂದರೆ ಗ್ರಂಥಸಂಪಾದಕರು ಮಾಡುವ ಕೆಲಸಕ್ಕೆ ಪೂರಕವಾಗಿ ಅನೇಕ ಶಾಸ್ತ್ರ, ಕಾವ್ಯ, ಕಲೆಗಳ ನಿಕಟ ಪರಿಚಯ ಅತ್ಯಗತ್ಯ. ಅರೆಬರೆ ಜ್ಞಾನ ಅನೇಕ ವೇಳೆ ಆಭಾಸವನ್ನುಂಟುಮಾಡುವುದುಂಟು. ಉದಾಹರಣೆಗೆ ನನ್ನದೇ ಒಂದು ಆಭಾಸನ್ನು ಹೇಳುವುದಾದರೆ, ಗೋಪಾಲದಾಸರ ಕೃತಿಯೊಂದರಲ್ಲಿ ಬರುವ 'ಋಜುಗಣಾಧಿಪ ಪಾಡೆ'[5] ಎಂಬುದಕ್ಕೆ ನಾನು 'ದೇವತೆಗಳ ಸಮೂಹಕ್ಕೆ ಒಡೆಯನಾದ ಗಣಪತಿ ಹಾಡಲು' ಎಂದು ಅರ್ಥ ಮಾಡಿಕೊಂಡೆ. ಟಿಪ್ಪಣಿಯಲ್ಲಿ ಬರೆದೂಬಿಟ್ಟೆ. ಅದು ತಪ್ಪಿರಬಹುದೆಂಬ ಅನುಮಾನವೂ ನನಗೆ ಬರಲಿಲ್ಲ. ಆದರೆ ವಿಮರ್ಶಕರ ವಾಗ್ಬಾಣ ಸುಂಯ್ ಎಂದು ಬಂದು ನನಗೆ ನೇರವಾಗಿ ನಾಟಿದಾಗಲೇ ನನ್ನ ತಪ್ಪು ನನಗೆ ತಿಳಿದದ್ದು; ಮಧ್ವತತ್ತ್ವಗಳ ಬಗ್ಗೆ ನನ್ನ ಜ್ಞಾನ(ಅಜ್ಞಾನ)

ಎಷ್ಟರಮಟ್ಟಿಗೆ ಸಮ ಎಂಬುದು ಸ್ಪಷ್ಟವಾದದ್ದು. 'ಋಜುಗಣ'ವೆಂಬುದಕ್ಕೆ ಮಾಧ್ವ ಸಂಪ್ರದಾಯದ ಅರ್ಥವೇ ಬೇರೆ ಇದೆ. ಪ್ರಸ್ತುತ ಸಂದರ್ಭದ 'ಋಜುಗಣಾಧಿಪ' ಎಂಬುದು 'ಋಜುಗಳು' ಎಂಬ ದೇವತೆಗಳ ಒಡೆಯನಾದ ಮುಖ್ಯಪ್ರಾಣದೇವರಿಗೆ ಉಪಯೋಗಿಸಿರುವ ವಿಶೇಷಣ ಎಂಬುದಾಗಿ ತಿಳಿದುಬಂತು. ಆದರೇನು? ನನ್ನ ಗುರುಗಳು ಆಗಾಗ ಹೇಳುತ್ತಿರುವ ಗಾದೆಯಂತೆ 'ಅಚ್ಚಾದ ಮೇಲೆ ಪೆಚ್ಚಾದೆ'.

ಅನೇಕ ವೇಳೆ ಸಂಪಾದಕರ ಕೆಲಸ ಸಾಕಷ್ಟು ಅಚ್ಚುಕಟ್ಟಾಗಿದ್ದರೂ ಮುದ್ರಣ ದೋಷಗಳಿಂದಾಗಿ ಹಲವು ಭಯಾನಕವಾದ ತಪ್ಪುಗಳಾಗಿಬಿಡುತ್ತವೆ. ಮೃದಸಖ–ಮೃಡಖನಾದಾಗ, ಅಂಬಕ–ಅಂಬರವಾದಾಗ, ಬಟ್ಟು–ಬಿಟ್ಟು[6] ಆದಾಗ, ಧ್ಯಾನ–ಧಾನ್ಯವಾದಾಗ ಸಂಪಾದಕರಿಗಾಗುವ ನೋವು ಕೇವಲ ಅನುಭವವೇದ್ಯ. ಇಂತಹ ಮುದ್ರಣ ದೋಷಗಳೂ ಸಂಪಾದಕರಿಗೆ ಬೇಜವಾಬ್ದಾರಿಯ ಹಣೆಪಟ್ಟಿಯನ್ನು ತಗುಲಿಸುತ್ತವೆ; ಸಂಪಾದಕರ ವಿಧಿಯಾಗಿ ಕಾಡುತ್ತವೆ.

ಇಷ್ಟೆಲ್ಲ ಅಗ್ನಿದಿವ್ಯವನ್ನು ಹಾದುಬಂದರೂ ನಮ್ಮಿಂದ ಸಂಪಾದಿತವಾದ ಒಂದು ಕೃತಿ ಪ್ರಕಟವಾದಾಗ, ಆ ಪುಸ್ತಕವನ್ನು ಕೈಗೆ ತೆಗೆದುಕೊಂಡಾಗ ಹೊಸದಾಗಿ ಹುಟ್ಟಿದ ನಮ್ಮ ಮಗುವನ್ನೇ ಕೈಗೆತ್ತಿಕೊಂಡಷ್ಟು ಸುಖವಾಗುತ್ತದೆ, ಸಂತೋಷವಾಗುತ್ತದೆ, ತೃಪ್ತಿಯಾಗುತ್ತದೆ,

## ಟಿಪ್ಪಣಿಗಳು

1 ಕೀರ್ತನೆಗಳನ್ನು ಈ ರೀತಿ 'ಏಕೈಕ ಆಕರ' 'ಅಂಕಿತಸಂದಿಗ್ಧ' 'ಅಂಕಿತಪಲ್ಲಟ' ಇತ್ಯಾದಿ ಶಿರೋನಾಮೆಗಳಿಂದ ಮೊತ್ತಮೊದಲಿಗೆ ನಿರ್ದೇಶಿಸಿದವರು ಡಾ॥ ಜಿ. ವರದರಾಜರಾಯರು.

2 ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟನೆ; ಸಂ: ಡಾ॥ ಟಿ. ಎನ್. ನಾಗರತ್ನ.

3 'ಶ್ರೀ ಗೋಪಾಲದಾಸರ ಕೃತಿಗಳು' (ಪಂಡಿತ ಆವೃತ್ತಿ); ಪು. 161. ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟನೆ, ಸಂ: ಡಾ॥ ಟಿ. ಎನ್. ನಾಗರತ್ನ.

4 ನೋಡಿ: ಕ. ಅ. ಸಂಸ್ಥೆಯ 'ಹರಿದಾಸ ಸಾಹಿತ್ಯಮಾಲೆ'ಯ ಪ್ರಕಟನೆಗಳು.

5 'ಶ್ರೀ ಗೋಪಾಲದಾಸರ ಕೃತಿಗಳು' (ಪಂಡಿತ ಆವೃತ್ತಿ); ಕೀ, 42, ಪು, 125.

6 ಅದೇ; ಪು. 143, ಪು. 190, ಪು. 161.

# ಸಂಪಾದಕನಾಗಿ ನನ್ನ ಅನುಭವ

— ಕೆ. ಆರ್. ಶೇಷಗಿರಿ

ಅನೇಕ ಪ್ರಾಚೀನ ಗ್ರಂಥಗಳು ಇಂದಿಗೂ ಓಲೆಗರಿಗಳಲ್ಲೋ ಕಾಗದದ ಹಸ್ತಪ್ರತಿಗಳಲ್ಲೋ ಇವೆ; ಅವುಗಳನ್ನು ಶಾಸ್ತ್ರೀಯವಾಗಿ ಮುದ್ರಿಸಿ ಸಾಮಾನ್ಯ ಓದುಗರಿಗೆ ಎಟಕುವಂತೆ ಮಾಡುವ ಪೂರ್ವಭಾವಿ ಕೆಲಸವೇ ಗ್ರಂಥಸಂಪಾದನೆ. ಮೊದಮೊದಲು 'ಗ್ರಂಥಸಂಪಾದನೆ' ಎಂದರೆ ಹಣದ ಸಂಪಾದನೆಯಂತೆಯೋ ಇದೊಂದು ಪದಪುಂಜವೆಂದು ಭಾವಿಸುತ್ತಿದ್ದುದೂ ಉಂಟು. ಸುಮಾರು ೨೦-೨೫ ವರ್ಷಗಳ ಹಿಂದೆ ಗ್ರಂಥಸಂಪಾದನೆ ಎಂದರೆ ಅರ್ಥವಾಗುತ್ತಿದ್ದುದು ಎಲ್ಲೋ ಕೆಲವರಿಗೆ, ಅವರಲ್ಲಿಯೂ ಪಂಡಿತರಿಗೆ ಮಾತ್ರ. ಅಲ್ಲಿಂದೀಚೆಗೆ ಗ್ರಂಥಸಂಪಾದನೆ ಎಂಬ ವಿಷಯವನ್ನು ಕನ್ನಡ ಎಂ. ಎ. ತರಗತಿಗೆ ಸೇರಿಸಿದ್ದರಿಂದ ಕನ್ನಡ ಜನತೆಗೆ ಪರಿಚಯವಾಗುತ್ತಿದೆ. ತೀ. ನಂ. ಶ್ರೀ. ಅವರ 'ನಂಬಿಯಣ್ಣನ ರಗಳೆ, ಮುದ್ರಣಗೊಂಡಾಗ ಅವರ ಪರಿಶ್ರಮದಿಂದ ಸಂಪಾದಿತವಾದ ಆ ಕೃತಿಯ ಸ್ವರೂಪ ಅರ್ಥವಾದುದು ಕನ್ನಡನಾಡಿನಲ್ಲಿ ಹಲಕೆಲವರಿಗೆ ಮಾತ್ರ. 'ಗ್ರಂಥಸಂಪಾದನೆ' ಎಂಬ ವಿಷಯವನ್ನು ಎಂ. ಎ. ತರಗತಿಗೆ ಸೇರಿಸಿದಮೇಲೆ ಮೊಟ್ಟಮೊದಲು ಕನ್ನಡದಲ್ಲಿ ಡಿ. ಎಲ್. ಎನ್. ಅವರು 'ಗ್ರಂಥಸಂಪಾದನೆ' ಎಂಬ ಪುಸ್ತಕವನ್ನು ೧೯೬೮ರಲ್ಲಿ ಪ್ರಕಟಿಸಿದರು. ಅನಂತರ ಎಂ. ಎಂ. ಕಲಬುರ್ಗಿ, ಎಸ್. ಎಸ್. ಲಕ್ಷ್ಮೀನಾರಾಯಣಭಟ್ಟ (ಅನುವಾದಿತ ಗ್ರಂಥ), ಸೀತಾರಾಮ ಜಾಗೀರ್‌ದಾರ್ ಅವರ ಗ್ರಂಥಗಳು ಗ್ರಂಥಸಂಪಾದನೆ ಎಂಬ ವಸ್ತುವನ್ನು ಕುರಿತು ಬಂದುವು. ಈ ಗ್ರಂಥಗಳು ಬರುವುದಕ್ಕೆ ಮುಂಚೆ.ಗ್ರಂಥ-ಸಂಪಾದನೆ ಎಂದರೇನು ಎಂದು ನಾವೇ ಪ್ರಶ್ನಿಸಿಕೊಂಡು ಅದಕ್ಕೆ ಉತ್ತರವನ್ನು ಆ ಕೆಲಸದಲ್ಲಿಯೇ ನಿರತರಾಗಿ ಅರ್ಥೈಸಿಕೊಳ್ಳಬೇಕಾಗಿತ್ತು. ಈ ದಾರಿ ಯಾವ ಊರಿಗೆ ಹೋಗುತ್ತದೆ ಎಂದು ಯಾರಾದರೊಬ್ಬರು ವಿಚಾರಿಸಿದರೆ ಅವರಿಗೆ ಸಿಗುತ್ತಿದ್ದ ಉತ್ತರ–'ನಡೆದು ಹೋಗು ? ಮುಂದೆ ನಿನಗೇ ತಿಳಿಯುತ್ತದೆ'. ಆಗ ಗ್ರಂಥಸಂಪಾದನೆ ಅಷ್ಟು ಅಪರಿಚಿತ ವಿಷಯವಾಗಿತ್ತು. ಅಂದು ಗ್ರಂಥಸಂಪಾದನೆ ಎಂದರೆ ನಿಯೋಜಿಸಿದ ಒಂದು ಅಪ್ರಕಟಿತ ಕಾವ್ಯಕ್ಕೆ ಎಷ್ಟು ಹಸ್ತಪ್ರತಿಗಳು ದೊರಕುತ್ತವೆಯೋ ಅವನ್ನು ಒಂದೆಡೆ ಕಲೆಹಾಕಿ, ಅವುಗಳಲ್ಲಿ ಉತ್ತಮವೆನಿಸಿದ ಒಂದು ಹಸ್ತಪ್ರತಿಯಿಂದ ಮುದ್ರಣಪ್ರತಿಯನ್ನು ತಯಾರಿಸಿ, ಅದಕ್ಕೆ ಇತರ ಪ್ರತಿಗಳಿಂದ ದೊರೆತ ಪಾಠಾಂತರಗಳನ್ನು ಗುರುತಿಸಿ ಅವುಗಳಲ್ಲಿ ಒಂದು ಉತ್ತಮ ಪಾಠವನ್ನು ಆರಿಸಿ, ಉಳಿದುವನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟರೆ ಮುಗಿಯಿತು ; ಆದರೆ ಇಂದು ಸಂಪಾದನೆ ಎಂಬುದು

ಶಾಸ್ತ್ರವಾಗಿ ಪರಿಣಮಿಸಿದೆ. ಒಂದು ಹಸ್ತಪ್ರತಿಯನ್ನು ನಾನಾ ದೃಷ್ಟಿಗಳಿಂದ ಅವಲೋಕಿಸಬೇಕಾಗುತ್ತದೆ: ಲಿಪಿ, ಶಕಟರೇಫ, ಛಂದಸ್ಸು, ಪ್ರತಿಕಾರನ ಕಾಲ, ಪ್ರತಿಕಾರನ ಹೆಸರು, ಊರು ಇತ್ಯಾದಿ.

ಸಂಪಾದನೆಗೂ ಓಲೆಗ್ರಂಥಗಳ ಸಂಗ್ರಹಣೆಗೂ ನಿಕಟ ನಂಟು. ಸಂಗ್ರಹಣೆ ಇಲ್ಲದಿದ್ದರೆ ಸಂಪಾದನೆಯೇ ಇಲ್ಲ. ಹಸ್ತಪ್ರತಿಗಳಿದ್ದರೆ ತಾನೆ ಗ್ರಂಥಸಂಪಾದನೆಯ ವಿಷಯ? ಹಾಗಾಗಿ ಓಲೆಗ್ರಂಥಗಳ, ಕಾಗದದ ಹಸ್ತಪ್ರತಿಗಳ ಸಂಗ್ರಹಣೆ ಕಷ್ಟತರವಾದ ಕಾರ್ಯವೇ. ಹಸ್ತಪ್ರತಿಗಳನ್ನು ರಾಷ್ಟ್ರೀಯ ಆಸ್ತಿ ಎಂದು ಕೇಂದ್ರ ಸರ್ಕಾರ ಸಾರಿದ್ದರೂ* ಅವನ್ನು ಹೊಂದಿರುವವರು ಹೆಚ್ಚು ಗಮನ ನೀಡುತ್ತಿದ್ದಂತೆ ಕಾಣುತ್ತಿಲ್ಲ. ಸಂಸ್ಥೆಗಳಲ್ಲೋ, ಮಠಗಳಲ್ಲೋ, ಬಸ್ತಿಗಳಲ್ಲೋ ಅಂತಹ ಗ್ರಂಥಗಳು ಸಂಗ್ರಹವಾಗಿದ್ದು ಸುರಕ್ಷಿತವಾಗಿರುವಂತೆ ನೋಡಿಕೊಂಡು ಬರುತ್ತಿದ್ದರೆ ಎಂದಾದರೊಂದು ಸಮಯದಲ್ಲಿ ಬಳಸಿಕೊಳ್ಳಬಹುದು. ಆದರೆ ವೈಯಕ್ತಿಕವಾಗಿ ಅವುಗಳನ್ನು ಉಳಿಸಿಕೊಂಡಿದ್ದರೆ ಅಂತಹವರಿಗೆ ಅವನ್ನು ಕಾಪಾಡಿಕೊಂಡು ಬರುವುದು ದುಸ್ತರದ ಸಂಗತಿ. ಅವರು ಅವನ್ನು ಪೂರ್ವಜರ ಸ್ವತ್ತೆಂದು ಹೆಮ್ಮೆಯಿಂದ ಬೀಗುತ್ತಾ ಅವುಗಳಲ್ಲಿ ಏನಡಗಿದೆಯೆಂಬುದನ್ನು ತಿಳಿಯದೆ ಇತರರಿಗೂ ತೋರಿಸದೆ ಮನೆಯ ಸೂರಿನ ಅಡಿಯಲ್ಲಿಯೋ, ಪೆಟ್ಟಿಗೆಯಲ್ಲಿಯೋ ಬಚ್ಚಿಡುತ್ತಾರೆ. ಆ ಗ್ರಂಥಗಳಿಗೆ ಅವರು ನೀಡುವ ಉಪಚಾರವಾದರೂ ಎಂತಹದು? "ನವರಾತ್ರಿಯಂದು ಬೆಳಕು ಕಂಡು ಪೂಜಾರ್ಹವಾಗಿ, ಹಾಲುಂಡು ಮತ್ತೆ ಕತ್ತಲ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ"। ಹಸ್ತಪ್ರತಿಗಳನ್ನು 'ತಾನೂ ತಿನ್ನ ಪರರಿಗೂ ಕೊಡ' ಎಂಬ ಗಾದೆಯಂತೆ ಅವುಗಳಲ್ಲಿ ಏನಡಗಿದೆ ಎಂಬುವನ್ನೂ ತಿಳಿಯಲಿಚ್ಛಿಸದೆ ಅಥವಾ ತಿಳಿಯಲಾಗದೆ ಅವು ತಮ್ಮ ಪೂರ್ವಿಕರ ಆಸ್ತಿಯೆಂದು ಭಾವಿಸಿ ಬಚ್ಚಿಡುತ್ತಾರೆ. ಕಾಲಕ್ರಮೇಣ ಅವು ನಶಿಸಿ ಹೋಗುತ್ತಾ, ಅಪ್ರಯೋಜನವಾಗುತ್ತವೆ. ಒಮ್ಮೆ ಗುಬ್ಬಿಯ ಸಮೀಪದಲ್ಲಿರುವ ಚೇಳೂರಿಗೆ ಹೋಗಿ ಹಸ್ತಪ್ರತಿಗಳ ಶೋಧನೆ ನಡೆಸುತ್ತಿದ್ದಾಗ ಒಬ್ಬರು ಹೇಳಿದ ಮಾತಿದು- "ಸ್ವಾಮಿ. ಇನ್ನು ಆರು ತಿಂಗಳು ಮುಂಚೆ ಬಂದಿದ್ದರೆ ನಿಮಗೆ ಕೊನೇ ಪಕ್ಷ ೧೦೦ ಹಸ್ತಪ್ರತಿಗಳಾದರೂ ದೊರೆಯುತ್ತಿತ್ತು; ಆದರೆ ಅವರು ಸ್ವರ್ಗಸ್ಥರಾದಾಗ ಅವರೊಡನೆ ಆ ಗ್ರಂಥಗಳನ್ನೆಲ್ಲಾ ಸಮಾಧಿ ಮಾಡಿಬಿಟ್ಟರು." ಇಂತಹ ಮೌಢ್ಯಕ್ಕೇನೆನ್ನಬೇಕು ತಿಳಿಯದು. ಸಂಸ್ಥೆಯ ವತಿಯಿಂದ ಅವರ ಮನೆ-ಮನೆಗಳ ಮುಂದೆ ಹೋಗಿ ಬೇಡಿದಾಗ ಕೊಡಲು ನಿರಾಕರಿಸುವವರೂ, ಹೋಗಲಿ ಒಮ್ಮೆಯಾದರೂ ನೋಡಿಕೊಡುತ್ತೇನೆಂದು ಕೋರಿದರೂ ಒಪ್ಪದವರೂ ಇನ್ನೂ ಅಲ್ಲಲ್ಲಿ ಇದ್ದಾರೆ. ಅಂತಹವರು ಈಗಲಾದರೂ ಮನಸ್ಸು ಬದಲಾಯಿಸಿ ಪ್ರಾಚೀನ ಕನ್ನಡ ಸಾಹಿತ್ಯದ ಪ್ರಕಟನೆಗೆ ನೆರವಾಗಬೇಕು. ಅವರಲ್ಲಿರುವ ಹಸ್ತಪ್ರತಿಗಳನ್ನು ಸ್ವಯಂ

* ಹಾಗೆ ಸಾರಿದ್ದನ್ನು ಸರ್ಕಾರ ಬಳಿಕ ಹಿಂತೆಗೆದುಕೊಂಡಿತು.—ಸಂ.

ಪ್ರೇರಣೆಯಿಂದ ಮೈಸೂರು, ಧಾರವಾಡ, ಬೆಂಗಳೂರು ವಿಶ್ವವಿದ್ಯಾನಿಲಯಗಳಲ್ಲಿರುವ ಕನ್ನಡ ಇಲಾಖೆಗಳಿಗೆ ಸಂಭಾವನೆಯನ್ನು ಸ್ವೀಕರಿಸಿಯೋ, ಉಚಿತವಾಗಿ ನೀಡಿಯೋ ಸಹಕರಿಸಬೇಕಾದ ಕಾಲ ಈಗ ಸನ್ನಿಹಿತವಾಗಿದೆ.

ಗ್ರಂಥಸಂಪಾದನೆಗೆ ಕವಿಯ ಹಸ್ತಪ್ರತಿಯೇ ದೊರೆತರೆ ಸಂಪಾದಕನ ಕಾರ್ಯ ಬಹು ಸುಲಭವಾಗುತ್ತದೆ; ಹಾಗೆ ದೊರೆಯುವುದು ತುಂಬಾ ಅಪರೂಪ. ಪ್ರಾಚೀನ ಕಾಲದಲ್ಲಿ ಓಲೆಯಿಂದ ಓಲೆಗೆ ಪ್ರತಿಯಾಗುವಾಗ ವ್ಯತ್ಯಾಸಗಳು ಆಗುತ್ತಿದ್ದುದು ಸಹಜ. ಮೊದಲನೆಯ ಸಾರಿ ಬರೆದವನ ಹಸ್ತಪ್ರತಿಯನ್ನು ಇನ್ನೊಬ್ಬನು ಪ್ರತಿ ಮಾಡುವವನು ಮೊದಲು ಬರೆದವನ ಲಿಪಿಗಳನ್ನು ಸಂಪೂರ್ಣವಾಗಿ ತಿಳಿದಿರಲು ಸಾಧ್ಯವಾಗುವುದಿಲ್ಲ. ಏನಾದರೂ ಅಲ್ಪ-ಸ್ವಲ್ಪ ವ್ಯತ್ಯಾಸಗಳು ಸಂಭವ. ಕ–ತ, ಪ–ವ ಇತ್ಯಾದಿ ಕರುಬು–ತರುಬು, ನರಿ–ಸರಿ, ಪವಳ–ವವಳ ಹೀಗೆ ಅರ್ಥಗಳೂ ವ್ಯತ್ಯಾಸವಾಗುತ್ತವೆ. ಇಂತಹ ಶಬ್ದಗಳನ್ನು ಆಯಾ ಸಂದರ್ಭಕ್ಕನುಸಾರವಾಗಿ ಅರ್ಥಮಾಡಿಕೊಂಡು ಸಂಪಾದಕನು ತನ್ನ ಕಾರ್ಯದಲ್ಲಿ ನಿರತನಾಗಬೇಕಾಗುತ್ತದೆ. ಇಲ್ಲವೆ ಅಕ್ಷರಗಳಲ್ಲಿರುವ ಸೂಕ್ಷ್ಮ ವ್ಯತ್ಯಾಸವನ್ನು ಪ್ರಪ್ರಥಮವಾಗಿ ಗುರುತಿಸಿಕೊಳ್ಳಬೇಕು. ಅಂತಹ ದೋಷಗಳು ಕವಿಯದ್ದಾಗಿರದೆ ಪ್ರತಿಕಾರನದಾಗಿರುತ್ತವೆ. ತಾನು ಬರೆದ ಯಾವುದೇ ಪ್ರಬಂಧವನ್ನಾಗಲೀ ಪದ್ಯವನ್ನಾಗಲೀ ಪ್ರತಿಯೆತ್ತುವಾಗ ಹಲವು ಬದಲಾವಣೆಗಳನ್ನು ಮಾಡುವುದನ್ನು ಕಂಡಿದ್ದೇವೆ. ಇಂತಹ ಸಂದರ್ಭಗಳಲ್ಲಿ ಆ ವ್ಯತ್ಯಾಸಗಳಿಗೆಲ್ಲಾ ಅವನೇ ಹೊಣೆಗಾರನಾಗುತ್ತಾನೆ; ಆದರೆ ಪ್ರಾಚೀನ ಹಸ್ತಪ್ರತಿಗಳನ್ನು ಪ್ರತಿ ಮಾಡುವಾಗ ಸಾಕಷ್ಟು ಎಚ್ಚರ ವಹಿಸಬೇಕಾದುದು ಪ್ರತಿಕಾರನ ಆದ್ಯ ಕರ್ತವ್ಯ. ಇವನು ಮಾಡುವ ತಪ್ಪು ಒಪ್ಪುಗಳು ಆ ಕವಿಯ ಕೃತಿಯ ಬಗೆಗೆ ಪರಿಣಾಮ ಬೀರುತ್ತದೆ. ಹಾಗೂ ಅಪಚಾರವೆಸಗಿದಂತಾಗುತ್ತದೆ. ಪ್ರತಿಕಾರನ ಹೊಣೆ ಈ ದೃಷ್ಟಿಯಿಂದ ತುಂಬಾ ಹೆಚ್ಚಿನದು. ಪ್ರತಿಯಲ್ಲಿ ಹೇಗಿದೆಯೋ ಹಾಗೆ ಪ್ರತಿ ಮಾಡುವ ಅಭ್ಯಾಸ ಅತಿ ಮುಖ್ಯ. 'ಪ್ರತಿಯಿಂದ ಪ್ರತಿಗೆ ಲಿಪಿಕಾರರು ಕಾರಣವಾಗಿ ವ್ಯತ್ಯಾಸಗಳುಂಟಾಗಿ ಪಾಠ ಕೆಟ್ಟುಹೋಗುವುದೆಂಬ ವಿಷಯವನ್ನು ನಮ್ಮ ಪ್ರಾಚೀನರು ಬಲ್ಲವರಾಗಿದ್ದರು. ಅದನ್ನು ತಿದ್ದಿ ಸರಿಪಡಿಸಬೇಕಾದ ಆವಶ್ಯಕತೆಯನ್ನೂ ಅವರು ಬಲ್ಲವರಾಗಿದ್ದರು'[2]. ಕುಮಾರವ್ಯಾಸ ಭಾರತದ ಆದಿಪರ್ವದ ಪೀಠಿಕಾ ಸಂಧಿಯ ಮೊದಲ ಪದ್ಯದಲ್ಲಿರುವ ಈ ಪದ್ಯಭಾಗವನ್ನು ಗಮನಿಸಬಹುದು. '....ಕಾವುದಾನತ ಜನವ ಗದುಗಿನ ವೀರನಾರಾಯಣ' – ಇಲ್ಲಿ 'ಆನತ' ಎಂಬುದನ್ನು 'ಆತನ' ಎಂದು ಬದಲಿಸಿದ್ದರೆ ಅರ್ಥವೇನೋ ಬೇಗನೆ ಆಗುತ್ತಿತ್ತು. ಆದರೆ ಆನತ ಎಂದರೆ ಶರಣಾಗತನಾದ ಎಂಬ ಅರ್ಥದ ಸೊಗಸು ಸಿಗುತ್ತಿತ್ತೆ? ಸರಳ ಮಾರ್ಗಕ್ಕಿಂತ ಕಠಿಣತೆಯ ಕಡೆಗೆ ಹಲವು ಬಾರಿ ಸಂಪಾದಕನು ಒಲವು ತೋರಿಸಬೇಕಾಗುತ್ತದೆ. ಈ 'ಆನತ' ಎಂಬುದನ್ನು 'ಆತನ' ಎಂದು ಪ್ರತಿ ಮಾಡಿದರೆ ಅದು ಪ್ರತಿ ಲಿಪಿಕಾರನ ದೋಷವೇ ಹೊರತು ಕವಿಯದಲ್ಲ. ಪ್ರಕ್ಷೇಪ, ವ್ಯತ್ಯಾಸ, ಪ್ರಕ್ಷಿಪ್ತ

ಇವುಗಳು ಹಸ್ತಪ್ರತಿಗಳಲ್ಲಿ ಕಾಣಬರುವ ಸಹಜ ದೋಷಗಳು. ಅವುಗಳನ್ನು ಶಾಸ್ತ್ರೀಯವಾಗಿ ಗುರುತಿಸುವ ಕೆಲಸ ಸಂಪಾದಕನದು. ಕಾಲದ ಉಳಿತಾಯಕ್ಕಾಗಿ ಪ್ರತಿಕಾರನು ಗ್ರಂಥಲೋಪಕ್ಕೆ ಕೈಹಚ್ಚುತ್ತಾನೆ, ಅಥವಾ ಕಾಲಾವಕಾಶವಿಲ್ಲದೆ, ಮರೆವೆ ನಿದ್ರಾಲಸ್ಯಗಳಿಂದ ಕೆಲವು ಪದ್ಯಗಳೋ ಪದ್ಯದ ಕೆಲವು ಸಾಲುಗಳೋ ಬಿಟ್ಟುಹೋಗುವ ಸಂಭವವಿದೆ. ಅನುಪ್ರಾಸದಿಂದ ಕೂಡಿದ ಪದ್ಯಗಳಲ್ಲಿ ಈ ರೀತಿಯ ದೋಷಗಳು ಅಧಿಕ. ಪ್ರತಿಕಾರನು ಅಲ್ಪಸ್ವಲ್ಪ ಪಂಡಿತನೆನಿಸಿದ್ದರೆ ವ್ಯತ್ಯಾಸ ಆಗಲು ಸಾಧ್ಯ. ಕವಿಯು ಸೂಕ್ತವಾಗಿ ಬಳಸಿರುವ ಪದ ಅಥವಾ ಪದಪುಂಜವನ್ನೇ ತನ್ನ ಬುದ್ಧಿಯ ಒರೆಗಲ್ಲಿಗೆ ಹಚ್ಚಿ ವ್ಯತ್ಯಾಸ ಮಾಡುವುದೂ ಉಂಟು; ಹಾಗಾಗಿ [ಭಿನ್ನ] ಪಾಠಗಳಜನನ ಆರಂಭವಾಯಿತು. ಇನ್ನೂ ಕೆಲವು ಪದ್ಯಗಳು ಪ್ರತಿಕಾರನಿಗೆ ಸಹ್ಯವಾಗದೆ ವರ್ಜಿಸಿರುವುದು, ಅಥವಾ ಆದಿಪರ್ವದ ಆದಿಭಾಗದಲ್ಲಾಗಿರುವಂತೆ ಅನೇಕ ಪದ್ಯಗಳನ್ನೂ ಸಂಧಿಗಳನ್ನೂ ಬರೆದು ಸೇರಿಸಿರುವುದು ಕಂಡುಬರುತ್ತದೆ. ಹಾಗೆ ಸೇರಿಸುವಾಗ ತಮ್ಮ ಹೆಸರನ್ನು ಹೇಳಿಕೊಳ್ಳದೆ ಹೇಗೋ ಹೂವಿನಿಂದ ನಾರು ಸ್ವರ್ಗಕ್ಕೆ ಹೋಗಲಿ ಎಂಬ ಉದಾರ ಭಾವನೆಯಿಂದ ಆ ಪುಣ್ಯ ಕೆಲಸವನ್ನು ಮಾಡಿರುತ್ತಾರೆ. ಈ ಅಂಶವೂ ಕೂಡ ಕವಿಗೆ ಅಪಕಾರವಲ್ಲದೆ ಉಪಕಾರವೆನಿಸಗಿ ದಂತಾಗುವುದಿಲ್ಲ. ಪ್ರತಿಯಲ್ಲಿದ್ದಂತೆ ಪ್ರತಿಮಾಡಿಕೊಳ್ಳುವುದು ಪ್ರತಿಕಾರನ ಕೆಲಸ; ಹಾಗೆಯೇ ಸಂಪಾದಕನ ಕಾರ್ಯದ ಮೊದಲ ಹೆಜ್ಜೆ.

ಸಂಪಾದನೆಗೆ ತೆಗೆದುಕೊಳ್ಳುವ ಕೃತಿಗೆ ಸಂಬಂಧಿಸಿದ ಹಸ್ತಪ್ರತಿಗಳನ್ನು ಒಂದೆಡೆ ಕಲೆಹಾಕಿ, ಅವುಗಳಲ್ಲಿ ಉತ್ತಮವಾದ (ಪ್ರತಿಯ ಪ್ರಾಚೀನತೆ, ಶಕಟರೇಫ, ಪ್ರತಿಕಾರನ ಸ್ಥಳ, ಅವನ ಕಾಲ ಇತ್ಯಾದಿ ಅಂಶಗಳನ್ನು ಗಮನಿಸಿ) ಹಸ್ತಪ್ರತಿಯಿಂದ ಮುದ್ರಣಪ್ರತಿ ಮಾಡಿ ಅದಕ್ಕೆ ಇತರ ಪ್ರತಿಗಳಿಂದ ದೊರೆತ ಪಾಠಾಂತರಗಳನ್ನು ಎಚ್ಚರಿಕೆಯಿಂದ ಗುರುತಿಸಿಕೊಳ್ಳಬೇಕಾಗುತ್ತದೆ. ಅಕ್ಷರಗಳಿಗೊ, ಪದಗಳಿಗೊ, ಪಂಕ್ತಿಗಳಿಗೊ ವ್ಯತ್ಯಾಸವನ್ನು ಆಯಾ ಸಾಲಿನಲ್ಲಿಯೇ ನಮೂದಿಸಬೇಕು. ಲುಪ್ತ, ಪ್ರಕ್ಷಿಪ್ತ ಭಾಗಗಳನ್ನು ಗಮನಿಸಬೇಕು. ಪ್ರಕ್ಷಿಪ್ತವೆನಿಸಿದುದನ್ನು ಅನುಬಂಧದಲ್ಲಿ ಕೊಡುವುದು ಉತ್ತಮ. ಅಲ್ಲೊಂದು ಇಲ್ಲೊಂದು ಪದ್ಯಗಳೇನಾದರೂ ಅಧಿಕ ವಾಗಿದ್ದರೆ ಅಡಿಟಿಪ್ಪಣಿಯಲ್ಲಿಯೇ ಇರಿಸಬಹುದು. "ನಾಲ್ಕು ಹಸ್ತಪ್ರತಿಗಳು ಕಣ್ಣಮುಂದಿದ್ದು, ಪಾಠ ಭೇದಗಳಿರುವಾಗ, ಯಾವುದೊಂದು ಕವಿಯ ಸ್ವಹಸ್ತಾಕ್ಷರ ಪ್ರತಿಯಿಲ್ಲದಿರುವಾಗ, ಕವಿಪಾಠಕ್ಕೆ ಸಮೀಪವಾದ ಮೂಲ ಮಾತೃಕೆಯನ್ನು ಪಾಠಾಂತರಗಳ ಸಹಾಯದಿಂದ ಪುನರ್ನಿರ್ಮಾಣ ಮಾಡಬಹುದು. ಪಾಠಾಂತರಗಳೇ ಇಲ್ಲದೆ, ಪಾಠದೋಷವಿದೆಯೆಂದು ಮನವರಿಕೆಯಾದಾಗ ಆ ದೋಷ ಲಿಪಿಕಾರರ ಕೈತಪ್ಪುಗಳಿಂದ ಆದದ್ದು ಎಂದು ನಿರ್ಧರಿಸಿ ಪ್ರಕರಣ ಬಲದಿಂದಲೂ ವ್ಯಾಕರಣ, ಛಂದಸ್ಸು, ಶಾಸ್ತ್ರಗಳ ಜ್ಞಾನದ ಸಹಾಯದಿಂದಲೂ ಸರಿಯಾಗಿರಬಹುದಾದ ಪಾಠ ವನ್ನು ಊಹೆಯಿಂದ ಕಂಡುಹಿಡಿಯುವುದು ಗ್ರಂಥಸಂಪಾದಕನ ಧರ್ಮವೇ ಎಂಬು

ವನ್ನು ಆಧುನಿಕ ಗ್ರಂಥಸಂಪಾದನಾ ಶಾಸ್ತ್ರ ಒಪ್ಪುತ್ತದೆ'.[3] ಎಂದು ಎಂ. ವಿ. ಸೀತಾರಾಮಯ್ಯನವರು ವಿವರಿಸಿದ್ದಾರೆ. ತೀ.ನಂ.ಶ್ರೀ. ಅವರು ತಮ್ಮ 'ನಂಬಿಯಣ್ಣನ ರಗಳೆ'ಯ ಸಂಪಾದಿತ ಗ್ರಂಥದಲ್ಲಿ 'ಗ್ರಂಥಸಂಪಾದನ ಕಾರ್ಯವು ಈಗ ಒಂದು ಖಚಿತವಾದ ಶಾಸ್ತ್ರವಾಗಿ ಪರಿಣಮಿಸಿದೆ. ಅದರ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸಿದಲ್ಲಿ ಮೂಲ ಪಾಠವನ್ನು ಬಲುಮಟ್ಟಿಗೆ ಶುದ್ಧವಾಗಿ ನಿರ್ಣಯಿಸುವುದು ಸಾಧ್ಯ'[4] ಎಂದು ಗ್ರಂಥಸಂಪಾದನೆಯು ಒಂದು ಶಾಸ್ತ್ರವೆಂದು ದೃಢಪಡಿಸಿದ್ದಾರೆ. ಆದುದರಿಂದಲೇ ಈ ಕಾರ್ಯದಲ್ಲಿ ಶ್ರೀಗಳಾದ ಡಿ.ಎಲ್.ಎನ್., ತಿ.ನಂ.ಶ್ರೀ., ಎಂ. ಮರಿಯಪ್ಪ ಭಟ್ಟ, ಎಚ್. ದೇವೀರಪ್ಪ, ಎಚ್. ಶೇಷ ಐಯ್ಯಂಗಾರ್, ಆರ್. ಸಿ. ಹಿರೇಮಠ ಮೊದಲಾಗಿ ಬಹಳ ಕೆಲವೇ ಪಂಡಿತರು ಹೆಸರು ಗಳಿಸಿದ್ದಾರೆ. ಗ್ರಂಥ ಸಂಪಾದನೆಯಲ್ಲಿ ಅನೇಕ ಪ್ರತಿಗಳಲ್ಲಿರುವ ವ್ಯತ್ಯಾಸಗಳನ್ನವಲೋಕಿಸಿ ವಿಚಾರಮಾಡಿ, ಚಿಂತಿಸಿ ಕವಿಯ ಪಾಠವನ್ನು ಗುರುತಿಸಬೇಕಾಗುತ್ತದೆ. ಆದುದರಿಂದಲೇ ಸಂಪಾದಕನ ಹೊಣೆ ಅತಿ ಜವಾಬ್ದಾರಿಯುತವಾದದ್ದು. ಸಂಪಾದನೆ ಸಮರ್ಪಕವಾಗಿದ್ದರೆ ಕವಿಗಷ್ಟೇ ಅಲ್ಲ; ಸಂಪಾದಕನಿಗೂ ಕೀರ್ತಿ ದೊರೆಯುತ್ತದೆ. ವಿಮಲಾನಂದ ಕವಿಯ 'ಕೃಷ್ಣಾರ್ಜುನರ ಕಾಳಗ'ವನ್ನು ಮೂರು ಹಸ್ತಪ್ರತಿಗಳಿಂದ ಸಂಪಾದಿಸಿದ್ದೇನೆ.[5] ಬಳಸಿರುವ (ಅ, ಇ, ಕ) ಪ್ರತಿಗಳಲ್ಲಿ 'ಅ' ಕಾಗದದ ಪ್ರತಿ; ಆದರೆ ಇ ಮತ್ತು ಕ ಪ್ರತಿಗಳು ಅ ಗಿಂತ ಪ್ರಾಚೀನವಾದುವು. ಅವುಗಳಲ್ಲಿರುವ ಈ ಪದ್ಯಭಾಗವನ್ನು ನೋಡೋಣ:

ಎಲ್ಲಿ ಬಿದ್ದರು ಭಾವನವರೆನು
ತಲ್ಲಿ ಬೋಳೈಸುತ್ತ ಸತಿಯರ
ಹುಲ್ಲುನುಡಿಗಳ ಮಜಿವು* ದೆನುತೆತ್ತಿ* ನಿಲಿಸಿದ[1]ಳು[1]

[1]ನು (ಇ,.ಕ)

ಈಗ (ಇ, ಕ) ಪ್ರತಿಗಳಲ್ಲಿರುವ 'ನು' ಎಂಬ ಪಾಠವನ್ನು ಇಟ್ಟುಕೊಂಡರೆ ಲಿಂಗವೇ ವ್ಯತ್ಯಾಸವಾಗುತ್ತದೆ. ಇಲ್ಲಿ ಬಹುಮತಕ್ಕೆ ಅವಕಾಶವಿಲ್ಲ. ಅರ್ಥವೇ ಮುಖ್ಯ. ದ್ರೌಪದಿಯು ದುರ್ಯೋಧನನನ್ನು ಸಂತೈಸುವ ಸಂದರ್ಭ–ರಾಜಸೂಯ ಯಾಗದಲ್ಲಿ; ಇಲ್ಲಿನ ಪಾಠ ನಿಷ್ಕರ್ಷೆ ಬಹು ಸರಳ. ಇದೇ ಕಾವ್ಯದ ಇನ್ನೊಂದು ಪದ್ಯವನ್ನು ಗಮನಿಸಬಹುದು. ಈ ಪದ್ಯ ಅ ಮತ್ತು ಇ ಪ್ರತಿಗಳಲ್ಲಿ ಮಾತ್ರವಿದೆ:

ಬರುತ ನಡುಮಾರ್ಗದಲಿ ರಜಕನ
ಮಡಿಯ ಬಯಸುತ ಶುದ್ಧ ನೈಗೆಯ
ಕುಶಲೆಯರಸುತ ಬುದ್ಧಿ ಪರಿಮಳವೆಸೆವ ಪೂಮಾಲೆಯನು ಕೈಕೊಳುತ
ನಿರ್ಧರದಿ ಮೂಹೊರಡ ತಿದ್ದುತ
ಮರ್ದನ ಕದಂಬ ಸಮೃದ್ಧತೆಯ
ರೇಂದ್ರರೊಂದೇ ರಗ್ಗೆಯಲಿ ಮಧುರಾಪುರಾಂತರವ (೫-೧೫. ಅ ಪ್ರತಿ)

* * ಛಂದಸ್ಸಿನ ದೃಷ್ಟಿಯಿಂದ 'ದೆನ್ನುತ್ತೆತ್ತಿ' ಎಂದು ಇದ್ದಬೇಕಾಗುತ್ತದೆ.—ಸಂ.

ಇದೇ ಪದ್ಯ 'ಇ' ಪ್ರತಿಯಲ್ಲಿ ಹೀಗಿದೆ-

ಮುದ್ದು ರಜಕನ ಮಡಿಯನುಟ್ಟುತ
ಶುದ್ಧ ನೈಗೆಯ ಕಶದಿಯರಸುತ
ಬುದ್ಧಿ ಪರಿಮಳವೆಸೆವ ಪೂಮಾಲೆಯನು ಕೈಕೊಳುತ
ನಿರ್ಧರದಿ ಮಹೊರಡತ್ತಿದುತ
ಮರ್ಧನ ಕದಂಬದ ಸಮ್ಮೃಧರೇ
ರಿರ್ದರೊಂದೇ ಲಗ್ಗೆಯಲಿ ಮಧುರಾಪುರಾಂತಕವ

ಈ ಪದ್ಯದ ವೃತ್ತಾಂತ ಭಾಗವತದಲ್ಲಿ ಬಂದಿದೆ. ಇದರಲ್ಲಿ ಅಡಗಿರುವ ಮೂರು ವಿಷಯಗಳು ಅಸ್ಪಷ್ಟವಾಗಿವೆ. ವಿಮಲಾನಂದ ಕವಿ ಭಾಗವತವನ್ನು ಅವಲೋಕಿಸಿದ್ದ. ಕೃಷ್ಣಾವತಾರದ ವೃತ್ತಾಂತಗಳನ್ನು ಕೆಲವು ಕೆಡೆ ವಿಸ್ತಾರವಾಗಿ, ಇನ್ನೂ ಕೆಲವು ಕಡೆ ಸಂಕ್ಷಿಪ್ತವಾಗಿ ವಿವರಿಸಿದ್ದಾನೆ. ಕಂಸನು ಕೃಷ್ಣ ಬಲರಾಮರನ್ನು ಬಿಲ್ಲಹಬ್ಬಕ್ಕೆ ಕರೆತರಲು ಅಕ್ರೂರನನ್ನು ಕಳಿಸುವನು. ಅವರಿಬ್ಬರೂ ಅವನ ಕೋರಿಕೆಯಂತೆ ಮಧುರಾಪುರಿಯನ್ನು ಸೇರುವ ಮೊದಲು ಹಾದಿಯಲ್ಲಿ ಅಗಸನಲ್ಲಿ ಬಟ್ಟೆಯನ್ನು ಕೇಳಿದಾಗ ನಿರಾಕರಿಸಲು, ಅವನನ್ನು ಕೊಂದರು, ನೆಯ್ಗೆಯವನು ರಾಮಕೃಷ್ಣರಿಗೆ ಹೊಸ ಬಟ್ಟೆಯನ್ನಿತ್ತು ಗೌರವಿಸಿದನು. ಹೂವಾಡಿಗನ ಮನೆಯಲ್ಲಿ ಪುಷ್ಪಹಾರ ವನ್ನು ಸ್ವೀಕರಿಸಿದರು. ಕಂಸನಿಗಾಗಿ ಗಂಧವನ್ನು ತೆಗೆದುಕೊಂಡು ಹೋಗುತ್ತಿದ್ದ ಗೂನಿಯನ್ನು ಕಂಡು ಮಮತೆಯಿಂದ ಆವಳ ಗೂನನ್ನು ಪರಿಹರಿಸಿದರು. ಇಷ್ಟು ವಿಷಯಗಳನ್ನು ಪ್ರಸ್ತುತ ಕವಿ ಒಂದೇ ಪದ್ಯದಲ್ಲಿ ತಂದಿದ್ದಾನೆ. ಈ ಪದ್ಯ **ದ** ಕಾರ ಪ್ರಾಸವಾದ್ದರಿಂದ 'ಬರುತ ಮಾರ್ಗವಲಿ' ಎಂಬ ಪದ್ಯಗಳನ್ನು ತ್ಯಜಿಸಬೇಕಾಗುತ್ತದೆ. ಇವುಗಳ ಹಿನ್ನೆಲೆಯಲ್ಲಿ ಈ ಪದ್ಯವನ್ನು ಹೀಗೆ ನಿರೂಪಿಸಬಹುದು :

ಮುದ್ದು ರಜಕನ ಮಡಿಯ ಬಯಸುತ
ಶುದ್ಧ ನೆಯ್ಗೆಯ ಕುಶಲ ಹರಸುತ
ಬುದ್ಧಿ ಪರಿಮಳವೆಸೆವ ಪೂಮಾಲೆಯನು ಕೈಕೊಳುತ
ನಿರ್ಧರದಿ ಮಾ'ಹೊರಡ ತಿದ್ದುತ
ಮರ್ದನ ಕದಂಬದ ಸಮ್ಮೃದರೇ(? ಸಮುದರೇ–ಸಂ)
ರಿರ್ದರೊಂದೇ ಲಗ್ಗೆಯಲಿ ಮಧುರಾಪುರಾಂತಕವ

ಲಕ್ಷ್ಮಕವಿಯ 'ರುಕ್ಮಾಂಗದ ಚರಿತೆ' ಎಂಬ ಷಟ್ಪದೀ ಕಾವ್ಯವನ್ನು ಸಂಪಾದಿಸಿದ ಮೇಲೆ ಅದೇ ವಸ್ತುವಿಗೆ ಸಂಬಂಧಿಸಿದ ಸೋಮನಾಥನ 'ರುಕ್ಮಾಂಗದ ಚರಿತ್ರೆ' ಎಂಬ ಅಪ್ರಕಟಿತ ಗ್ರಂಥವನ್ನು ಸಂಪಾದಿಸಲು ಕೈಗೆತ್ತಿಕೊಂಡೆ. ಇದಕ್ಕೆ ದೊರಕಿದ್ದ ನಾಲ್ಕು ಹಸ್ತಪ್ರತಿಗಳಿಂದ ಸಂಪಾದನ ಕಾರ್ಯ ಮುಗಿಯಿತು. ಅನಂತರ ಶೇಷಕವಿಯ 'ರುಕ್ಮಾಂಗದ ಸಾಂಗತ್ಯ'ವಿರುವುದಾಗಿ ತಿಳಿದು ನನ್ನ ಉಪನಿರ್ದೇಶಕರು ಅದನ್ನೂ ಸಂಪಾದಿಸಲು ಸೂಚಿಸಿದರು. ಈ ಮಧ್ಯೆ ಪರಂಜ್ಯೋತಿ ಯತಿಯ 'ಅನುಭವ

ಮುಕುರ'ವನ್ನು ಸಂಪಾದಿಸಿದ್ದರಿಂದ ಸೋಮನ ಕಾವ್ಯ ನೆನಪಿನಿಂದ ಹಿಂದೆ ಸರಿದಿತ್ತು. ಶೇಷಕವಿಯ ಪ್ರತಿ ಒಂದೇ ಇದ್ದುದರಿಂದ ಸಂಪಾದನೆ ಸುಲಭವಾಗಿರಲಿಲ್ಲ. ಅಲ್ಲಲ್ಲಿ ಲುಪ್ತವಾಗಿದ್ದ ಭಾಗಗಳನ್ನು ತುಂಬುವುದಾದರೂ ಹೇಗೆ? 'ಅದನ್ನೇ ಹೇಗೋ ಆದಷ್ಟು ಶುದ್ಧವಾಗಿ ಅಚ್ಚು ಹಾಕಿಸಿದರಾಯಿತು' ಎಂಬ ನಿರ್ಧಾರ ಮೇಲಧಿಕಾರಿಗಳದು. ಕವಿಚರಿತಕಾರರು ಶೇಷನ ಬಗ್ಗೆ ಎಂದಿದ್ದಾರೆ: 'ಇವನು ರುಕ್ಮಾಂಗದ ಚರಿತೆ'ಯನ್ನೂ ಬರೆದಿದ್ದಾನೆ. ಈತನು ರಾಜವಂಶಕ್ಕೆ ಸೇರಿದವನಂತೆ ಕಾಣುತ್ತಾನೆ. ತನ್ನ ತಂದೆ ತಿಪ್ಪೇಂದ್ರ. ಅಣ್ಣ ರಾಘವ ಭೂವರ ಎಂದು ಈ ಪದ್ಯದಲ್ಲಿ ಹೇಳಿದ್ದಾನೆ —

ತಿಪ್ಪೇಂದ್ರತನಯ ರಾಘವ ಭೂವರನನುಜ
ನಪ್ರತಿಮ ವರದ ಶೇಷ
ಒಪ್ಪುವ ರುಕುಮಾಂಗದ ಚರಿತೆಯ ಲೋಕ
ಕಪ್ರತಿಯೆನೆ ವಿರಚಿಸಿದ

ಇವನು ಸು. ೧೬೫೦ರಲ್ಲಿ ಇದ್ದಿರಬಹುದೆಂದು ತೋರುತ್ತದೆ.'[7] ಎಂದಮೇಲೆ ಈತನ ಕೃತಿಯು ಸ್ವತಂತ್ರದ್ದೆಂದು ತಿಳಿದುಬರುತ್ತದೆ. ಸಂಪಾದಿಸಲು ತೊಡಗಿದಾಗ ಈತನ ಪದ್ಯಗಳು ಸೋಮನಾಥ ಕವಿಯ ಕೃತಿಯಲ್ಲಿದ್ದಂತೆ ನೆನಪು ಮರುಕಳಿಸುತ್ತಿತ್ತು; ಆದರೆ ಅಲ್ಲಿ ೧೧೧೫ ಪದ್ಯಗಳು, ಇದರಲ್ಲಿ ೩೧೩. ಅನಂತರ ಈ ಎರಡು ಕಾವ್ಯಗಳನ್ನು ಹೋಲಿಸಿದಾಗ ಶೇಷನ ಕಾವ್ಯದ ಪದ್ಯಗಳೆಲ್ಲಾ (೨೧ ಪದ್ಯಗಳನ್ನುಳಿದು) ಸೋಮನಾಥನ ಕೃತಿಯೊಂದಿಗೆ ಅಕ್ಷರಶಃ ಹೋಲುತ್ತಿರುವುದು ಕಂಡುಬಂದಿತು.[8] ಸೋಮನಾಥನ ಕೃತಿಯನ್ನು ೩೧೩ಕ್ಕೆ ಸಂಗ್ರಹಿಸಿ ಅದರಲ್ಲಿ ತನ್ನ ಸ್ವವಿಚಾರಗಳನ್ನು ಸೇರಿಸಿ ತನ್ನದೇ ಕಾವ್ಯವೆಂದು ಪ್ರಚುರಪಡಿಸಿದಂತೆ ತೋರುತ್ತದೆ. ಕಾವ್ಯರಚನಾ ಸಾಮರ್ಥ್ಯವುಳ್ಳ ಸೋಮನೇ ಪ್ರಾಚೀನನಾಗಿದ್ದು ಅವನ ಅನಂತರ ಬಂದ ಈ ಶೇಷನು ಆ ಕೃತಿಯ ಸಂಗ್ರಹ ಕಾವ್ಯವನ್ನು ತಂದಿರುವನೆಂದು ಹೇಳುವುದೇ ಸಮಂಜಸ. ಇದೊಂದು ರೀತಿಯ ಕೃತಿಚೌರ್ಯವೆನ್ನಬಹುದು.

ನನ್ನ ಪ್ರಥಮ ಸಂಪಾದನ ಕೃತಿ ಕುಮಾರವ್ಯಾಸ ಭಾರತದ ಆದಿಪರ್ವ. ಈ ಕೃತಿಯನ್ನು ಸಂಪಾದಿಸಲು ನಿಯೋಜಿಸಲ್ಪಟ್ಟಾಗ ಆವರೆಗೆ ಆದಿಪರ್ವದ ತಂಟೆಗೆ ಹೋಗದೆ ಉಳಿದ ಪರ್ವಗಳನ್ನು ಆರಿಸಿಕೊಂಡು ಸಂಪಾದಿಸಿದ್ದುದನ್ನು ಕಂಡರೆ ಸ್ವಲ್ಪ ದಿಗಿಲೇ ಆಯಿತು. ಅದಕ್ಕೆ ತಕ್ಕಂತೆ ಸಂಸ್ಥೆಯಲ್ಲಿ ಆಗಾಗ್ಗೆ ವಹಿಸುತ್ತಿದ್ದ ಇತರ ಕೆಲಸಗಳಿಂದ ಈ ಪರ್ವದ ಸಂಪಾದನೆಗೆ ಅಡ್ಡಿಯಾಗುತ್ತಿತ್ತು. ಆದರೂ ಅದನ್ನು ಹೇಗಾದರೂ ಸಂಪಾದಿಸಬೇಕೆಂಬ ಉತ್ಕಟಾಕಾಂಕ್ಷೆ ಏನೋ ಇತ್ತು. ಕುಮಾರವ್ಯಾಸ ಭಾರತವು ೩-೪ ಮಾತ್ರೆಯ ಲಯವಾದುದರಿಂದ ಅವನ ಕಾಲದಿಂದೀಚೆಗೆ ಇತರರು ಅನೇಕಾನೇಕ ಪದ್ಯಗಳನ್ನೂ ಸಂಧಿಗಳನ್ನೂ ರಚಿಸಿ ಸೇರಿಸಿರಬೇಕೆಂಬುದು ಅದನ್ನು ಅಭ್ಯಸಿಸಿದವರಿಗೆ ವೇದ್ಯವಾಗುತ್ತದೆ. ಕವಿಯ ಪದ್ಯವಾವುದು, ಅನ್ಯರು ಸೇರಿಸಿರುವುದಾವುದು ಎಂಬುದನ್ನು ಕಂಡುಹಿಡಿಯುವುದು ಸುಲಭಸಾಧ್ಯವಲ್ಲ. ನಾನು ನೋಡಿದ

ಕುಮಾರವ್ಯಾಸ ಭಾರತದ(ಆದಿಪರ್ವಕ್ಕೆ ಸಂಬಂಧಿಸಿದಂತೆ) ಹದಿನೇಳು ಪ್ರತಿಗಳಲ್ಲಿ 'ಕ' ಪ್ರತಿಯೆಂದು ಪ್ರಸಿದ್ಧವಾಗಿರುವ ಕ್ರಿ. ಶ. ೧೫೫೪ರಲ್ಲಿ ಪ್ರತಿಯಾದ ಉತ್ತಮ ಪ್ರತಿಯೇ ಆಧಾರ. ಇವರಲ್ಲಿ ಶಕಟರೇಫವಿದೆ. ಇದಕ್ಕಿಂತ ಪ್ರಾಚೀನ ಹಸ್ತಪ್ರತಿ ಉಪಲಬ್ಧವಿಲ್ಲ.

ಕುಮಾರವ್ಯಾಸ ಭಾರತದ ಆದಿಪರ್ವವನ್ನು ಸಂಪಾದಿಸುವಲ್ಲಿ ಅನೇಕ ಸಮಸ್ಯೆಗಳು ಎದುರಾದುವು. ಸಂಸ್ಕೃತ ಭಾಷೆಯಲ್ಲಿ ಡಾ. ಸುಕ್ತಂಕರವರು ೭೦ ಹಸ್ತಪ್ರತಿಗಳಿಂದ ೮೦೦೦ ಶ್ಲೋಕವಿರುವ ಆದಿಪರ್ವವನ್ನೂ ಅವರಲ್ಲಿರುವ ಅಕ್ಷರ ಅಕ್ಷರಗಳಿಗೂ ಪಾಠಗಳನ್ನು ಗುರುತಿಸಿ ಸಂಪಾದಿಸಿದರು. ಅದೇ ಮಾದರಿಯಲ್ಲಿ ಈ ಆದಿಪರ್ವವನ್ನು ೧೭ ಪ್ರತಿಗಳಿಂದ ಸಂಪಾದನೆ ಮಾಡಬಹುದಿತ್ತು. ಆದರೆ ಅದಕ್ಕೆ ಬಹಳ ಕಾಲಾವಕಾಶದ ಆವಶ್ಯಕತೆ ಇತ್ತು. ಶೀಘ್ರದಲ್ಲಿ ಅಪ್ರಕಟಿತ ಆದಿಪರ್ವವು ಹೊರ ಬರಬೇಕಾಗಿತ್ತು. ಆ ದಿಸೆಯಲ್ಲಿ ಅದನ್ನು ಸಂಪಾದಿಸಲಾಯಿತು. ಮೊದಮೊದಲು ಸಂಪಾದನೆಗೆ ಒಟ್ಟು ೧೭ ಪ್ರತಿಗಳನ್ನು ತೆಗೆದುಕೊಳ್ಳಲಾಯಿತು⁹; ಅವುಗಳಾವುವೆಂದರೆ ಕ(ಮುದ್ರಣ ಪ್ರತಿ), ಖ, ಗ, ಚ, ಜ, ಟ, ಡ, ಣ, ತ, ದ, ನ, ಪ, ಬ, ಮ, ರ, ಲ, ವ. ಇವುಗಳಲ್ಲಿ ಚ–ಕಲ್ಲಚ್ಚಿನ ಪ್ರತಿ (ಕ್ರಿ.ಶ. ೧೮೪೨), ವ–ಮುದ್ರಿತ ಪ್ರತಿ (ಕ್ರಿ.ಶ. ೧೮೮೨) ; ಇವೆರಡು ಕಾಗದದವು. ನಕಲು ಮಾಡಿದ ಏಳು ಹಸ್ತಪ್ರತಿಗಳಲ್ಲಿ ಪ್ರತಿಯಾದ ಕಾಲಗಳು ದೊರಕುತ್ತವೆ. ಕ(ಕೆ ೨೦೫), ನ(ಕೆ ೨), ಬ(ನಂ. ೧೨೮೬ ಸರಸ್ವತೀ ಭಂಡಾರ, ಮೈಸೂರು), ರ(ನಂ.೧೯೯೦ ಸ. ಭಂ.) ಈ ನಾಲ್ಕೂ ಪ್ರತಿಗಳಿಗೆ ಮಾತ್ರ ಶಕಟ ರೇಫದ ಪ್ರಯೋಗವಿದೆ. ಇವುಗಳನ್ನೂ ಮತ್ತು ಶಕಟ ರೇಫವಿಲ್ಲದ ದ(ಕೆ ೨೧೮) ಪ್ರತಿಯನ್ನೂ ಸಂಪಾದನೆಗಾಗಿ ಬಳಸಿಕೊಳ್ಳಲಾಯಿತು. 'ದ' ಪ್ರತಿಯು ಇತರ ಎಲ್ಲಾ ಪ್ರತಿಗಳಿಗಿಂತಲೂ ಹೆಚ್ಚಿನ ಪದ್ಯಗಳನ್ನೊಳಗೊಂಡಿದೆ, ಅಂದರೆ ಆದಿಪರ್ವದಲ್ಲಿಯೇ ೩೧೧೬ ಪದ್ಯಗಳಿವೆ ; ಸಂಭವ ಪರ್ವಗಳಿದ್ದು ಐರಾವತ ಸಂಧಿಯಿಲ್ಲದಿರುವುದು ಆಶ್ಚರ್ಯ. ಅಲ್ಲಲ್ಲಿ ಉತ್ತಮ ಪಾಠಗಳು ದೊರೆಯುತ್ತವೆ. ಮೈಸೂರು ಸರಸ್ವತೀ ಭಂಡಾರದ 'ಮ' ಪ್ರತಿ (ನಂ. ೪೬೬) ಬಹುಪಾಲು 'ಕ' ಪ್ರತಿಯನ್ನೇ ಹೋಲುತ್ತಿದ್ದುದರಿಂದ 'ಕ' ಪ್ರತಿಯಲ್ಲಿ ತ್ರುಟಿತವಾಗಿದ್ದು ತ್ರುಟಿತ ಭಾಗಗಳನ್ನು ಇದರಿಂದಲೇ ತುಂಬಲಾಯಿತು. 'ಕ'ಪ್ರತಿಯಲ್ಲಿ ಬರುವ ಪದ್ಯಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು ಉಳಿದ ಪ್ರತಿಗಳಲ್ಲಿ ದೊರೆಯಬಹುದಾದ ಹೆಚ್ಚಿನ ಪದ್ಯಗಳನ್ನು ಕೈಬಿಡಲಾಯಿತು. ಈ ಘಟ್ಟದಲ್ಲಿ ಅಂದಿನ ನಿರ್ದೇಶಕರ ಸಲಹೆಯಂತೆ ಏಕೆಂದರೆ, ಸಂಪಾದನೆಯಲ್ಲಿ ಇದು ಪ್ರಥಮ ಕೃತಿಯಾದ್ದರಿಂದ, ನಿರ್ವಹಿಸಲಾಯಿತು. ಇದೇ ರೀತಿಯ ನಿರ್ಧಾರವನ್ನು ಆದಿಪರ್ವದ ಪೀಠಿಕಾಸಂಧಿಯಿಂದಲೇ ಆರಂಭಿಸಲಾಯಿತು. ಇಲ್ಲಿಯೂ 'ಕ' ಪ್ರತಿಯನ್ನೇ ಅತ್ಯುತ್ತಮ ಪ್ರತಿಯೆಂದು ಪರಿಗಣಿಸಿ ಅದರಲ್ಲಿದ್ದ ಹತ್ತು ಪ್ರತಿಗಳನ್ನಷ್ಟೇ ಹಾಗೂ ಅವುಗಳಿಗೆ ಉಳಿದ ನಾಲ್ಕು ಪ್ರತಿಗಳ ಪಾಠಗಳನ್ನು ಗುರುತಿಸಿ ಸಂಪಾದಿಸ




ಲಾಯಿತು. ಅಂದರೆ ಸಂಪಾದನೆಗೆ ಮೊದಲೇ ೧೭ ಪ್ರತಿಗಳನ್ನು ಐದು ವಿಭಾಗಗಳಾಗಿ ವಿಂಗಡಿಸಲಾಯಿತು.[10] ಅವುಗಳಲ್ಲಿ ಮುಖ್ಯವಾದ ಒಂದೊಂದು ಪ್ರತಿಯನ್ನು ಆರಿಸಲಾಯಿತು. ಅವುಗಳೇ ಕ, ದ, ಸ, ಬ, ರ. ಈಗ ಇಲ್ಲಿ ನೀಡುವ ವಿವರಗಳು ಪೀಠಿಕಾಸಂಧಿಯನ್ನು ಕುರಿತು ಮಾತ್ರ (ಇದೇ ವಿಧಾನವನ್ನು ಮುಂದಿನ ಸಂಧಿಗಳಿಗೂ ಅನ್ವಯಿಸಿದೆ). ಈ ರೀತಿ ನಿರ್ಧರಿಸಿದ್ದರಿಂದ ಕೆಲವು ಅತ್ಯವಶ್ಯವಾಗಿ ಕೊಡಲೇ ಬೇಕಾದ ಪದ್ಯಗಳು ಪೀಠಿಕಾಸಂಧಿಯಲ್ಲಿ ಬಿಟ್ಟು ಹೋದಂತೆ ಭಾಸವಾದುವು.

ಅರಸುಗಳಿಗಿದು ವೀರ ದ್ವಿಜರಿಗೆ
ಪರಮ ವೇದದ ಸಾರ (ಖ ಗ ಚ ಜ ಟ ಣ ದ ಪ ರ ವ–ಪ್ರತಿಗಳಲ್ಲಿವೆ)
ವೇದ ಪಾರಾಯಣದ ಫಲಗಂ
ಗಾದಿ ತೀರ್ಥಸ್ನಾನ ಫಲ (ಖ ಗ ಚ ಟ ದ ಪ ರ ವ–ಪ್ರತಿಗಳಲ್ಲಿವೆ)
ಚೋರ ನಿಂದಿಸಿ ಶಶಿಯ ಬೈದರೆ
ಕ್ಷೀರವನು ಕ್ಷಯರೋಗಿ ಹಳಿದರೆ (ಗ ಚ ಟ ದ ಪ ಮ ರ ವ–ಪ್ರತಿಗಳಲ್ಲಿವೆ)
ಸರಸರಿಗೆ ಸಾಹಿತ್ಯರಿಗೆ ಹರಿ
ಶರಣರಿಗೆ ಸಜ್ಜನರಿಗ (ಖ ಗ ಜ ಟ ದ ಪ ಮ ಲ–ಪ್ರತಿಗಳಲ್ಲಿವೆ)
ವೇದ ಪುರುಷನ ಸುತನ ಸುತನ ಸ
ಹೋದರನ ಹೆಮ್ಮಗನ ಮಗನ (ಗ ಜ ದ–ಪ್ರತಿಗಳಲ್ಲಿವೆ)
ಕೃತಿ ಲಸತ್ಕರ್ನಾಟ ವೀ ಭಾ
ರತಕೆ ಮಂಜುಳ ಮಂಜರಿಗೆ (ಖ ಗ ಜ ಣ ದ ಪ ಮ ರ–ಪ್ರತಿಗಳಲ್ಲಿವೆ)

ಈ ಮೇಲಿನ ಕೆಲವು ಪೀಠಿಕಾ ಸಂಧಿಯ ಪದ್ಯಗಳಲ್ಲಿ 'ಅರಸುಗಳಿಗಿದು ವೀರ...' ಎಂಬ ಪದ್ಯವನ್ನು ಬಿಟ್ಟಿದ್ದು ತುಂಬಾ ಆಕ್ಷೇಪಣೆಗೊಳಗಾಯಿತು.

ಇದೇ ಭಾವವನ್ನು ತಂದುಕೊಡುವ ಪದ್ಯ ದೊಡ್ಡಣಾಂಕನ ಚಂದ್ರಪ್ರಭ ಷಟ್ಪದಿಯಲ್ಲಿದೆ.

ವೀರರಸವಿದು ಸುಭಟರಿಗೆ ಶೃಂ
ಗಾರರಸವಿದು ರಸಿಕರಿಗೆ ಸಂ
ಸಾರಭಯರಸವಿದು ಮಹಾಮುನಿರಾಜಹಂಸರಿಗೆ
ಸೇರುವುದು ಭೀಭತ್ಸುರಸ ಪರ
ನಾರಿಯರನೀಕ್ಷಿಸದರಿಂಗಿದು
ಭೂರಿಸಾರದ ತಿರುಳು ತಿಳಿಯಲ್ ಸತ್ಕಲಾಪಿದರು (೧–೨೮)

ಆತನ ಕಾಲ ಕ್ರಿ.ಶ. ೧೫೭೮. ಅಂದ ಮೇಲೆ ದೊಡ್ಡಣಾಂಕನಗಿಂತ ಮುಂಚೆಯೇ ಕುಮಾರವ್ಯಾಸನ ಈ ಪದ್ಯ ತುಂಬಾ ಪ್ರಚುರದಲ್ಲಿದ್ದಿರಬೇಕೆನಿಸುತ್ತದೆ.[11]

ಅವಲೋಕಿಸಿದ ೧೭ ಪ್ರತಿಗಳಲ್ಲಿ, ಹತ್ತುಪ್ರತಿಗಳಲ್ಲಿರುವುದು ಕಂಡುಬಂದಿತು. ಅವುಗಳಲ್ಲಿ ರ ಪ್ರತಿಯಲ್ಲಿ ಮೊದಲು ಉಲ್ಲೇಖವಾಗಿದೆ. ಆ ಪ್ರತಿಯಕಾಲ ಕ್ರಿ.ಶ. ೧೭೨೮. ಅನಂತರ ಇತರ ಪ್ರತಿಗಳಲ್ಲಿ ಸೇರಿತು. 'ಚೋರ ನಿಂದಿಸಿ....' ಎಂಬ ಪದ್ಯ ಎಂಟು ಪ್ರತಿಗಳಲ್ಲಿದೆ. ಈ ಎರಡೂ ಪದ್ಯಗಳಲ್ಲಿ ಸು. ೧೭೬೭ರಲ್ಲಿ ಪ್ರತಿಯಾಗಿದ್ದ 'ಙ' ಪ್ರತಿಯಲ್ಲಿ ಒಂದು ಪದ್ಯವಿದ್ದು ಇನ್ನೊಂದು ಕಾಣೆಯಾಯಿತು. 'ಡ' ಪ್ರತಿಯಲ್ಲಿ ಕೇವಲ ಎರಡೇ ಪದ್ಯಗಳು ಪೀಠಿಕಾ ಸಂಧಿಯಾಗಿ ತಲೆಯೆತ್ತಿತು. ಅವುಗಳಾವುವೆಂದರೆ–

೧. ಶ್ರೀವನಿತೆಯರಸನೆ ವಿಮಲ ರಾ
ಜೀವ ಪೀಠನ ಪಿತನೆ....

೨. ಶ್ರೀ ಸಕಲ ಜಗವಂದ್ಯ ಅಂಕುಶ
ಪಾಶ ಮೋದಕ ಪರಶುಧರ ವಿ
ಘ್ನೇಶ....

ಇಲ್ಲಿರುವ ೨ನೆಯ ಗಣಪತಿ ಸ್ತೋತ್ರದ ಪದ್ಯ 'ಖ ಟ ಡ ಮ' ಪ್ರತಿಗಳಲ್ಲಿ ಮಾತ್ರವಿದೆ.

ಎಲ್ಲಾ ಹಸ್ತಪ್ರತಿಗಳಲ್ಲಿ ದೊರೆವ ಪೀಠಿಕಾ ಸಂಧಿಯ ಒಟ್ಟು ಪದ್ಯಗಳ ಸಂಖ್ಯೆ ೯೭. 'ಡ' ಪ್ರತಿಯಲ್ಲಿ ಕನಿಷ್ಠ ಎರಡು ಪದ್ಯಗಳು, 'ದ' ಪ್ರತಿಯಲ್ಲಿ ಗರಿಷ್ಠ ೪೬ ಪದ್ಯಗಳು. 'ಕ' ಪ್ರತಿಯಲ್ಲಿ ಪರ್ವಕ್ಕೊಂದರಂತೆ ಲೆಕ್ಕಾಚಾರವಾಗಿ ರಚಿಸಿರುವಂತೆ ಹತ್ತೇ ಪದ್ಯಗಳು; ಆದರೆ ಆ ಕಾಲದ ವೇಳೆಗೆ ಪ್ರಕ್ಷಿಪ್ತವಾಗಿ ಅನೇಕಾನೇಕ ಪದ್ಯಗಳೂ ಸಂಧಿಗಳೂ ಆದಿಪರ್ವದಲ್ಲಿ ನುಸುಳಲಾರಂಭಿಸಿದುವು.

ತಿಳಿಯ ಹೇಳುವೆ ಕೃಷ್ಣ ಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯ ನೊರೆವೆನು ಕೃಷ್ಣ ಮೆಚ್ಚಲಿಕೆ....

ಎಂಬ ಈ ಪ್ರಸಿದ್ಧ ಪದ್ಯ 'ದ' ಹಸ್ತಪ್ರತಿಯೊಂದರಲ್ಲಿ ಮಾತ್ರವಿದೆ ಎಂದರೆ ಅಚ್ಚರಿಯ ಮಾತೇ ಸರಿ! ಇಂತಹ ಎಷ್ಟೋ ಪದ್ಯಗಳು ಪ್ರಕ್ಷಿಪ್ತವಾಗಿ ಹೆಸರುಗಳಿಸಿದುವು. ಆದಿಪರ್ವದಲ್ಲಿ ಕೊಟ್ಟಿರುವ ಹತ್ತು ಪದ್ಯಗಳಲ್ಲಿ ೪ನೆಯ ಪದ್ಯವಾದ 'ಗಜಮುಖನೆ ಮೆಜಿರ್ವೇಕದಂತನೆ....' ಎಂಬುವನ್ನು ತ್ಯಜಿಸಬಹುದಿತ್ತು. ಏಕೆಂದರೆ ೩ ಮತ್ತು ೪ನೆಯ ಪದ್ಯಗಳು ಗಣಪನ ಸ್ತುತಿಯನ್ನು ಕುರಿತದ್ದು. ಈ ೩ನೆಯ ಪದ್ಯ 'ಚ' ಪ್ರತಿಯಲ್ಲಿ ಮಾತ್ರ ಲುಪ್ತ ; ಆದರೆ ೪ನೆಯ ಪದ್ಯ ಕೇವಲ ಐದು ಪ್ರತಿ (ಕಚವಮವ) ಗಳಲ್ಲಿ ಮಾತ್ರವಿದೆ. ಹಾಗಾಗಿ ೪ರ ಬದಲಾಗಿ 'ಅರಸುಗಳಗಿದು ವೀರ....' ಎಂಬ ಪದ್ಯವನ್ನು ಪೀಠಿಕಾಸಂಧಿಯಲ್ಲಿ ಸೇರ್ಪಡಿಸಬಹುದಿತ್ತು. ಅದನ್ನು ೧೯೭೮ರಲ್ಲಿ ಎರಡನೆಯ ಮುದ್ರಣದಲ್ಲಿ ಸೇರಿಸಬೇಕೆನಿಸಿದರೂ ಪ್ರಥಮ ಮುದ್ರಣದಂತೆ ಯಥಾವತ್ತಾಗಿ ತರಾತುರಿಯಾಗಿ ಅಚ್ಚು ಹಾಕಿಸಬೇಕಾದುದರಿಂದ ಆಗಲೂ ಸಾಧ್ಯವಾಗಲಿಲ್ಲ.

ಪೀಠಿಕಾ ಸಂಧಿಯಲ್ಲಿಯೇ ಕವಿಯು ರಚಿಸಿರುವ ಪದ್ಯ ಸಂಖ್ಯೆಯನ್ನು ನಿರ್ಧರಿಸುವುದು ಮೇಲಿನ ಕೆಲವು ವಿವರಣೆಗಳಿಂದ ಎಷ್ಟು ದುಸ್ತರವೆಂಬುದು ಮನನವರಿಕೆಯಾದಂತಾಯಿತು. ಪೀಠಿಕಾ ಸಂಧಿಯಲ್ಲಿ ಅಧಿಕವಾಗಿ ದೊರೆಯುತ್ತಿದ್ದ ೮೭ ಪದ್ಯಗಳನ್ನು ಅನುಬಂಧದಲ್ಲಿ ಕೊಡಬಹುದಿತ್ತು ; ಹಾಗೆ ಈ ಪದ್ಯಗಳನ್ನು ಸೇರಿಸಿದ್ದರೆ ಮುಂದಿನ ಸಂಧಿಗಳಲ್ಲಿ ಬರುವ ಹೆಚ್ಚಿನ ಪದ್ಯಗಳ ಗತಿಯೇನು? ಈ ರೀತಿಯ ನಿರ್ಣಯದಿಂದ ಸಂಪಾದಕನ ಕಾರ್ಯವು ಯಶಸ್ವಿಯಾಯಿತೆಂದೂ ಭಾವಿಸಿಲ್ಲ. ಈ ಕಾರ್ಯದಲ್ಲಿ ನನ್ನ ಅನುಭವ ಅಷ್ಟು ಪಕ್ವವಾಗಿರಲಿಲ್ಲವಾದ್ದರಿಂದ ಮುಖ್ಯಸ್ಥರ ಸಲಹೆಗಳಿಗೆ ಅನುಸಾರವಾಗಿ ಈ ಗ್ರಂಥವನ್ನು ಸಂಪಾದಿಸಲಾಯಿತು. ಪೀಠಿಕಾ ಸಂಧಿಯ ಮುಂದಿನ ಹತ್ತೊಂಬತ್ತು ಸಂಧಿಗಳಲ್ಲಿ ಪಾಠಗಳನ್ನು ನಿರ್ಧರಿಸುವಾಗಲೂ ೧೭ ಹಸ್ತಪ್ರತಿಗಳನ್ನೂ ಅವುಗಳ ವಿಶಿಷ್ಟಗುಣಗಳನ್ನೂ ಗಮನಿಸಿ ಐದು ವರ್ಗಗಳಾಗಿ ಮಾಡಿಕೊಂಡು, ಅವುಗಳಲ್ಲಿ ಒಂದೊಂದು ಹಸ್ತಪ್ರತಿಯಂತೆ ಐದು ಹಸ್ತಪ್ರತಿಗಳನ್ನಾರಿಸಲಾಯಿತು. 'ಕ' ಪ್ರತಿಗೆ ಹೋಲುವ ಇತರ ಪ್ರತಿಗಳ ಪದ್ಯಗಳನ್ನು ಪರಿಗಣಿಸಿ ಅವುಗಳಿಗೆ ಪಾಠಗಳನ್ನು ಗುರುತಿಸಿ ಅನಂತರ ಸಂಪಾದನ ಕಾರ್ಯವನ್ನು ಮುಗಿಸಲಾಯಿತು.

ಹೀಗೆ ನನ್ನ ಪಾಲಿಗೆ ಸಂಪಾದನೆಗೆಂದು ಬಂದ ಪ್ರಥಮ ಕೃತಿಯಿದು. ಈ ಕಾರ್ಯದಲ್ಲಿ ಎಷ್ಟೊಂದು ಎಡರು ತೊಡರುಗಳಿದ್ದೂ ಕೊನೆಗೂ ಪ್ರಕಟವಾಯಿತಲ್ಲಾ ಎಂಬುದೇ ಸಮಾಧಾನದ ಸಂಗತಿ.

## ಟಿಪ್ಪಣಿಗಳು

1. ಆದಿಪರ್ವ (೧೯೭೧), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪುಟ vi.
2. ಡಿ. ಎಲ್. ನರಸಿಂಹಾಚಾರ್: ಕನ್ನಡ ಗ್ರಂಥಸಂಪಾದನೆ, ಪುಟ ೬.
3. ಎಂ. ವಿ. ಸೀತಾರಾಮಯ್ಯ: 'ಕನ್ನಡ ಗ್ರಂಥಸಂಪಾದನೆಗೆ ತೀನಂಶ್ರೀಯವರ ಕೊಡುಗೆ', ಶ್ರೀಕಂಠತೀರ್ಥ (೧೯೭೬), ಪುಟ ೧೯೦.
4. ತೀನಂಶ್ರೀ : ನಂಬಿಯಣ್ಣನ ರಗಳೆ (೧೯೪೬).
5. ಕನ್ನಡ ಅಧ್ಯಯನ ಸಂಸ್ಥೆಯ ವತಿಯಿಂದ ಅಚ್ಚಾಗುತ್ತಿದೆ.
6. ರುಕ್ಮಾಂಗದ ಚರಿತ್ರೆ, ಕೆ.ಎ. ೧೫೫/೧, ಹಸ್ತಪ್ರತಿ ಭಂಡಾರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
7. ಕ. ಕ.ಚ II (೧೯೧೯), ಪುಟ ೪೩೮.
8. ಶೇಷನ ರುಕ್ಮಾಂಗದ ಚರಿತೆ(ಕೆ ಎ. ೧೫೫/೧)ಯ ಒಂದನೇ ಸಂಧಿಯ ಕೆಲವು ಪದ್ಯಗಳನ್ನು ಸೋಮನ ಕೃತಿಗೆ ಹೋಲಿಸಿ—೨-೮, ೩-೭, ೪-೬, ೬-೧೧೦, ೭-೧೧೧, ೮-೧೧೨, ೯-೧೧೩, ೧೦-೧೧೪, ೧೧-೧೧೫, ೧೨-೧೨೨ ಇತ್ಯಾದಿ.

9. ಆದಿಪರ್ವ (ಕುಮಾರವ್ಯಾಸ ವಿರಚಿತ), ೧೯೭೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪುಟ xxxxvi-li.

9a. * ಇತ್ತೀಚೆಗೆ ಅಂದರೆ ದಿ. 30-1-81 ರಿಂದ 2-2-81ರ ವರೆಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ನಡಸಿದ 'ಹಸ್ತಪ್ರತಿಶಾಸ್ತ್ರ ಗೋಷ್ಠಿ'ಯ ಸಂದರ್ಭದಲ್ಲಿ ಪ್ರದರ್ಶಿಸಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ 'ಕುಮಾರವ್ಯಾಸ ಭಾರತ'ದ ಹಸ್ತಪ್ರತಿಯಲ್ಲಿ ಕಾಲವಿಚಾರವಿದೆ. ಅದು ಕಲಿವರ್ಷದಲ್ಲಿದೆ. ಅಂದರೆ ೪೬೭೭. ಆ ಕಾಲ ಕ್ರಿ.ಶ. ೧೫೭೬ಕ್ಕೆ ಸರಿಯಾಗುತ್ತದೆ. ಈ ಹಸ್ತಪ್ರತಿಯನ್ನೋ ಅಥವಾ 'ಅರಸುಗಳಿಗಿದು ವೀರ....' ಎಂಬ ಪದ್ಯವಿರುವ ಹಸ್ತಪ್ರತಿಯನ್ನೋ ದೊಡ್ಡಣಾಂಕ ನೋಡಿ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ತನ್ನ ಕಾವ್ಯದಲ್ಲಿ ಸೇರಿಸಿಕೊಂಡಿರಬಹುದು. ಹೀಗಾಗಿ 'ಅರಸುಗಳಿಗಿದು ವೀರ....' ಎಂಬ ಪದ್ಯವನ್ನು ಕುಮಾರವ್ಯಾಸ ಭಾರತದ ನಾಂದಿಪದ್ಯಗಳಲ್ಲಿ ಸೇರಿಸಬೇಕಾಗಿತ್ತೆಂಬ ತೀರ್ಮಾನಕ್ಕೆ ಈಗ ಪುಷ್ಟಿ ದೊರೆತಂತಾಯಿತು.

10. ಅದೇ, ಪರಿಷ್ಕರಣ ಭಾಗ, ಪುಟ xxxxiii.

---

## ಪಾಠಾಂತರಗಳಿಗೆ ಕವಿ ಕಾರಣ

**ಕುವೆಂಪು : ಮೊದಲ ಪಾಠ**

ಶಂಕರ ರಾಮಾನುಜ ವಿದ್ಯಾರಣ್ಯ
ಬಸವೇಶ್ವರರಿಹ ದಿವ್ಯಾರಣ್ಯ (ಧರ್ಮಾರಣ್ಯ)
ರನ್ನ ಷಡಕ್ಷರಿ ಪೊನ್ನ
ಪಂಪ ಲಕುಮಿಪತಿ ಜನ್ನ
ಕಬ್ಬಿಗರುದಿಸಿದ ಮಂಗಳಧಾಮ
ಕವಿಕೋಗಿಲೆಗಳ ಪುಣ್ಯಾರಾಮ.

**ತಿದ್ದಿದ ಪಾಠ** (ಈಗ ಆಯ್ಕೆಯಾದ ನಾಡಗೀತೆಯ ಬಗ್ಗೆ ಕನ್ನಡ ನಾಡಿನ ನಾನಾ ಕಡೆಗಳಿಂದ ಪರಿಷತ್ತಿನ ಅಭಿಮಾನಿಗಳನೇಕರು ಕೊಟ್ಟ ಸೂಚನೆಗಳನ್ನು ಕ್ರೋಢೀಕರಿಸಿ ರಾಷ್ಟ್ರಕವಿ ಕುವೆಂಪು ಅವರ ಗಮನಕ್ಕೆ ತಂದಾಗ, ಅವರು ಮಧ್ವಾಚಾರ್ಯ ಮತ್ತು ಕುಮಾರವ್ಯಾಸರ ಹೆಸರುಗಳನ್ನು ಈ ಗೀತೆಯಲ್ಲಿ ಅಳವಡಿಸಲು ಒಪ್ಪಿ ಗೀತೆಯ ಎರಡು ಸಾಲುಗಳನ್ನು ಪರಿಷ್ಕರಿಸಿ ಕೊಟ್ಟಿದ್ದಾರೆ.—ಕ.ನುಡಿ, 16-2-71).

ಶಂಕರ ರಾಮಾನುಜ ವಿದ್ಯಾರಣ್ಯ
ಬಸವೇಶ್ವರ ಮಧ್ವರ ದಿವ್ಯಾರಣ್ಯ
ರನ್ನ ಷಡಕ್ಷರಿ ಪೊನ್ನ
ಪಂಪ ಲಕುಮಿಪತಿ ಜನ್ನ
ಕುಮಾರವ್ಯಾಸರ ಮಂಗಳಧಾಮ
ಕವಿಕೋಗಿಲೆಗಳ ಪುಣ್ಯಾರಾಮ.

—o—



# ಪ್ರಾಚೀನ ಪದ್ಯಕೃತಿಗಳ ಸಂಪಾದನೆಯಲ್ಲಿ ಛಂದೋಜ್ಞಾನದ ಅಗತ್ಯ

**ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ**

"ಪ್ರಾಚೀನ ಪ್ರೌಢಕೃತಿಗಳ ಸಂಪಾದಕನಿಗೆ ಇರಬೇಕಾದ ಯೋಗ್ಯತೆಗೂ ಅಧಿಕಾರಕ್ಕೂ ಒಂದು ಮಿತಿಯನ್ನು ಕಲ್ಪಿಸುವುದಕ್ಕೆ ಆಗುವುದಿಲ್ಲ"[1] ಎನ್ನುವುದು ನಿಷ್ಣಾತ ಗ್ರಂಥಸಂಪಾದಕರಲ್ಲೊಬ್ಬರಾಗಿದ್ದ ಡಾ. ಡಿ. ಎಲ್. ನರಸಿಂಹಾಚಾರ್ಯರ ಹೇಳಿಕೆ. ಕಾವ್ಯವನ್ನು ರಚಿಸಿದ ಕವಿಗೆ ಎಷ್ಟೆಲ್ಲ ಶಾಸ್ತ್ರಜ್ಞಾನವಿರುತ್ತದೆಯೋ ಕನಿಷ್ಠ ಪಕ್ಷ ಅಷ್ಟಂತೂ ಮುಂದೆ ಅದನ್ನು ಸಂಪಾದಿಸಲು ಕೈಗೆತ್ತಿಕೊಳ್ಳುವ ಸಂಪಾದಕನಿಗೆ ಇರಬೇಕಾಗುತ್ತದೆ. ಕವಿಗಿರುವ ಸೃಜನಾತ್ಮಕ ಪ್ರತಿಭೆ ಸಂಪಾದಕನಿಗೆ ಇಲ್ಲದೆ ಇರಬಹುದು. ಏಕೆಂದರೆ ಅವನದು ಸೃಷ್ಟಿಯಲ್ಲ, ಅನುಸೃಷ್ಟಿ. ಆದರೆ ಅನುಸೃಷ್ಟಿಯ ಕಾರ್ಯವೇನು ಸಾಮಾನ್ಯವಾದದ್ದಲ್ಲ. ಪ್ರತಿಭೆಯೊಂದನ್ನುಳಿದರೂ ಕವಿಯಲ್ಲಿರುವ ಬೇರೆ ಎಲ್ಲ ತಿಳಿವಳಿಕೆಯೂ ಸಂಪಾದಕನಿಗಿರಬೇಕು. ಆ ತಿಳವಳಿಕೆಯ ಸ್ವರೂಪ ಎಂಥದೆನ್ನುವುದನ್ನು ಕ್ಷೇಮೇಂದ್ರ ಹೀಗೆ ಹೇಳುತ್ತಾನೆ :

ತತ್ರ ತರ್ಕ ವ್ಯಾಕರಣ ಭರತ ಚಾಣಕ್ಯ ವಾತ್ಸ್ಯಾಯನ ಭಾರತ
ರಾಮಾಯಣ ಮೋಕ್ಷೋಪಾಯಾತ್ಮಜ್ಞಾನ
ಧಾತುವಾದ ರತ್ನಪರೀಕ್ಷಾ ವೈದ್ಯಕ ಜ್ಯೋತಿಷ ಧನುರ್ವೇದ
ಗಜ ತುರಗ ಪುರುಷ ಲಕ್ಷಣ ದ್ಯೂತೇಂದ್ರಜಾಲ ಪ್ರಕೀರ್ಣೇಷು
ಪರಿಚಯಃಕವಿ ಸಾಮ್ರಾಜ್ಯವ್ಯಂಜನಃ[2]

ಇಷ್ಟೇ ಅಲ್ಲದೆ ಕಗಿಕಂಠಾಭರಣದಲ್ಲಿಯೇ ಬರುವ ಶಿಕ್ಷಾಶತದಲ್ಲಿ ಕವಿಗಿರಬೇಕಾದ ಜ್ಞಾನದ ವ್ಯಾಪ್ತಿಯ ಬಗ್ಗೆ ಇನ್ನೂ ವಿವರವಾಗಿ ಹೇಳಿದೆ.[3] ಕವಿಯ ವಿಷಯದಲ್ಲಿ ಹೇಳಲಾದ ಈ ಎಲ್ಲ ಜ್ಞಾನದ ಜೊತೆಗೆ ಕಾವ್ಯಾಸ್ವಾದನದಲ್ಲಿ ಸಹಜವಾದ ಪ್ರೀತಿಯಿದ್ದು, ಯಾವುದೇ ಕಾವ್ಯದ ಅಂತರಂಗವನ್ನು ಆಪ್ತವಾಗಿ ಅರಿತು, ಶಾಸ್ತ್ರಕ್ಕೆ ಮೀರಿದ ಒಂದು ಭಾವಬಲದಲ್ಲಿ ಅದರ ಸೂಕ್ಷ್ಮಗಳನ್ನು ಗ್ರಹಿಸುವ ಶಕ್ತಿ ಕಾವ್ಯಸಂಪಾದಕನಿಗೆ ಬೇಕು.

ಮೇಲೆ ಹೇಳಿದುದು ಅತ್ಯಂತ ಸಮರ್ಪಕವಾದ ಪಟ್ಟಿ ಎಂದೇನೂ ಅಲ್ಲ. ಆದರೆ ಗ್ರಂಥಸಂಪಾದಕನಿಗಿರಬೇಕಾದ ಜವಾಬ್ದಾರಿ ಎಂಥದೆನ್ನುವುದನ್ನು ಆ ಪಟ್ಟಿ ಸೂಚಿಸ

ಬಲ್ಲುದು. ಈ ತಿಳವಳಿಕೆಯಲ್ಲಿ ಛಂದಶ್ಶಾಸ್ತ್ರದ ನಿಕಟ ಜ್ಞಾನವೂ ಸೇರುತ್ತದೆ ಎನ್ನುವುದನ್ನು ಬಿಡಿಸಿ ಹೇಳುವ ಅಗತ್ಯವಿಲ್ಲ.

ಛಂದಶ್ಶಾಸ್ತ್ರದ ತಿಳವಳಿಕೆ ಕಾವ್ಯಕೃತಿಗಳ ಸಂಪಾದಕರಿಗೆ ಮಾತ್ರವಲ್ಲದೆ ಗದ್ಯಗ್ರಂಥ ಶಾಸ್ತ್ರಗ್ರಂಥ ಮತ್ತು ಶಾಸನ ಪಾಠಗಳ ಸಂಪಾದಕರಿಗೂ ಅಗತ್ಯವಾದದ್ದು. ಗದ್ಯಗ್ರಂಥಗಳಲ್ಲಿಯೂ ನಡುನಡುವೆ ಶ್ಲೋಕಗಳು, ಗಾಹೆಗಳು, ಸುಭಾಷಿತಗಳು, ಲಯಬದ್ಧವಾದ ವಾಗ್ರೂಢಿಗಳು ಬರುವುದುಂಟು. ವಡ್ಡಾರಾಧನೆಯಲ್ಲಿ ಬರುವ ಗಾಹೆ ಆರ್ಯೆ ಶ್ಲೋಕ ಕಂದ ವೃತ್ತಗಳು ಇದಕ್ಕೆ ನಿದರ್ಶನ. ಹಾಗೆಯೇ ಕಾವ್ಯವಲ್ಲದೆಯೂ ಛಂದೋಬದ್ಧವಾಗಿ ರಚಿತವಾದ ಶಾಸ್ತ್ರಗ್ರಂಥಗಳುಂಟು. ಸುಲಭವಾಗಿ ನೆನಪಿನಲ್ಲಿಡಲು ಸಾಧ್ಯ ಎಂಬ ಕಾರಣಕ್ಕೋ ಏನೋ ವೈದ್ಯ ಜ್ಯೋತಿಷ ನಿಘಂಟುಗಳಂಥ ಶಾಸ್ತ್ರಗ್ರಂಥಗಳನ್ನೂ ಸಹ ಪ್ರಾಚೀನ ಶಾಸ್ತ್ರಕಾರರು ಪದ್ಯದಲ್ಲಿ ರಚಿಸುತ್ತಿದ್ದುದೇ ಹೆಚ್ಚು. ಚಂದ್ರರಾಜನ ಮದನತಿಲಕ, ಶ್ರೀಧರಾಚಾರ್ಯನ ಜಾತಕ ತಿಲಕ ಈ ಬಗೆಯ ಛಂದೋಬದ್ಧ ಶಾಸ್ತ್ರಗ್ರಂಥಗಳು ಇಂಥ ಗ್ರಂಥಗಳ ಸಂಪಾದನೆಗೂ ಛಂದಸ್ಸಿನ ಚೆನ್ನಾದ ತಿಳವಳಿಕೆ ಅಗತ್ಯ.

ಪ್ರಾಚೀನ ಕಾವ್ಯಗಳನ್ನು ಸಂಪಾದಿಸುವ ವಿದ್ವಾಂಸರಿಗೆ ಇತರ ಕಾವ್ಯಗಳ ಸಂಪಾದಕರಿಗೆ ಇರುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಛಂದಶ್ಶಾಸ್ತ್ರದ ಮಾಹಿತಿ ಇರಬೇಕಾಗುತ್ತದೆ ಎಂದರೆ ತಪ್ಪಿಲ್ಲವೇನೋ. ಏಕೆಂದರೆ ಕನ್ನಡದ ಪ್ರಾಚೀನ ಕಾವ್ಯಗಳಲ್ಲಿ ಬಹುಮಟ್ಟಿಗೆ ಚಂಪೂಕಾವ್ಯಗಳು. ಚಂಪೂ ಕಾವ್ಯವು ಪ್ರಚಲಿತವಿರುವ ಎಲ್ಲ ಬಗೆಯ ಛಂದೋವಿನ್ಯಾಸಗಳನ್ನೂ ಬಳಸಲು ಯತ್ನಿಸುವ ಉದಾರ ಸ್ವರೂಪದ ಕಾವ್ಯ. ನಿದರ್ಶನಕ್ಕೆ ಪಂಪಭಾರತದಂಥವರಲ್ಲೇ ವರ್ಣಛಂದಸ್ಸು, ಮಾತ್ರಾ ಛಂದಸ್ಸು, ಅಂಶಛಂದಸ್ಸು ಮೂರೂ ಬಳಕೆಯಾಗಿವೆ. ಕಂದ ರಗಳೆಗಳಂಥ ಮಾತ್ರಾ ಲಯಗಳಿವೆ. ಅಕ್ಕರ ಪಿರಿಯಕ್ಕರಗಳಂಥ ಅಂಶಲಯಗಳಿವೆ. ವರ್ಣಛಂದಸ್ಸೊಂದರಲ್ಲಿಯೇ ಪ್ರಸಿದ್ಧವಾದ ಕರ್ಣಾಟಕ ವೃತ್ತಗಳಲ್ಲದೆ ಪೃಥ್ವೀ, ತರಳ, ಹರಿಣ, ಮಲ್ಲಿಕಾಮಾಲೆ, ಖಚರಪ್ಲುತ, ಅನವದ್ಯ, ಮಂದಾಕ್ರಾಂತ, ಪುಷ್ಪಿತಾಗ್ರ ಮೊದಲಾದ ಸುಮಾರು ಇಪ್ಪತ್ತು ಬಗೆಯ ವೃತ್ತಗಳಿವೆ. ಒಂದು ಛಂದಶ್ಶಾಸ್ತ್ರವನ್ನೇ ಬರೆದು ಅದಕ್ಕೆ ಸ್ವಂತ ನಿದರ್ಶನಗಳನ್ನು ರಚಿಸಿಕೊಡಬಲ್ಲ ಯೋಗ್ಯತೆ ಇಂಥ ಕವಿಗಳಲ್ಲಿರುವುದು ತಿಳಿಯುತ್ತದೆ. ಹೀಗಿರುವುದರಿಂದಲೇ ಅಂಥ ಕವಿಗಳ ಕೃತಿಗಳನ್ನು ಸಂಪಾದಿಸುವ ಸಂಪಾದಕ ಕೂಡ ಛಂದಶ್ಶಾಸ್ತ್ರವನ್ನು ಆಮೂಲಾಗ್ರವಾಗಿ ಅಭ್ಯಾಸಮಾಡಿ ಎಲ್ಲ ಬಗೆಯ ಲಯವಿಧಾನಗಳನ್ನು ಚೆನ್ನಾಗಿ ಮನನ ಮಾಡಿಕೊಂಡಿರಬೇಕಾಗುತ್ತದೆ. ಒಂದು ಕಾವ್ಯವನ್ನು ಕಟ್ಟುವಾಗ ಅಗತ್ಯವಾದ ಲಯಜ್ಞಾನ ಅವರ ಅಪಪಾಠಗಳನ್ನು ಸರಿಪಡಿಸಿಕೊಡುವಾಗಲೂ ಅಗತ್ಯವೇ.

ಕಾವ್ಯವೊಂದರ ಲಭ್ಯ ಪಾಠಾಂತರಗಳಲ್ಲಿ ಛಂದಸ್ಸಿಗೆ ಹೊಂದದ ಯಾವುದೇ ಪಾಠಾಂತರ ಇಡಿಯಧಾಗಿ (ಅದು ಇರುವಂತೆಯೇ) ಕವಿಪಾಠವಾಗಿರಲು ಸಾಧ್ಯವಿಲ್ಲ

ಎನ್ನುವುದು ಗಟ್ಟಿಮಾತು ಎನ್ನಬಹುದು. ಏಕೆಂದರೆ ಎಂಥ ಹೊತ್ತಿನಲ್ಲಿಯೂ ಛಂದೋಭಂಗಕ್ಕೆಡೆಯಾಗುವ ರೀತಿಯಲ್ಲಿ ಹಿಂದಿನ ಕವಿಗಳು ಬರೆಯುತ್ತಿರಲಿಲ್ಲ.[4] ಉಳಿದ ವಿಷಯಗಳಲ್ಲಿ ಸ್ವತಂತ್ರ ಮನೋಧರ್ಮ ತೋರಿಸುವ ಕುಮಾರವ್ಯಾಸನಂಥ ನಿರ್ಭೀತ ಕವಿ ಕೂಡ ಇದಕ್ಕೆ ಅಪವಾದವಲ್ಲ.[5] ಲಯಪಾಲನೆಗಾಗಿ ಕಾವ್ಯದ ಮೊದಲನೆಯ ಷಟ್ಪದಿಯಲ್ಲಿಯೆ ತನ್ನ ಅಧಿದೈವವಾದ ವೀರನಾರಾಯಣನ ಹೆಸರಿನ ಕಾಗುಣಿತವನ್ನು ವ್ಯತ್ಯಾಸಗೊಳಿಸಲೂ ಅವನು ಹಿಂಜರಿಯಲಿಲ್ಲ.[6] ಹಾಗೆಂದೇ ಪ್ರಾಚೀನ ಕವಿಗಳ ರಚನೆಗಳಲ್ಲಿ ಪದ್ಯದ ಲಯಕ್ಕೆ ಹೊರತಾಗುವ ಪಾಠ (ಹೆಚ್ಚೆಂದರೆ ಕವಿಪಾಠವನ್ನು ಪತ್ತೆ ಮಾಡುವಲ್ಲಿ ಸಹಾಯಕವಾದ ಸಾಮಗ್ರಿಯಾಗಬಹುದೇ ಹೊರತು) ಇಡಿಯಾಗಿ ಕವಿಪಾಠವಾಗಿರಲು ಸಾಧ್ಯವಿಲ್ಲ.

ಪ್ರಾಚೀನ ಕಾವ್ಯಗಳ ಸಂಪಾದನೆಯಲ್ಲಿ ಸ್ವೀಕೃತವಾಗುವ ಪಾಠ ಛಂದೋಬದ್ಧವಾಗಿರಬೇಕೆನ್ನುವುದು ಎಷ್ಟು ಕಡ್ಡಾಯ ಎನ್ನುವುದಕ್ಕೆ ಪಂಪಭಾರತವನ್ನು ಸಂಪಾದಿಸಿರುವ ವಿದ್ವಾಂಸರ ಸ್ವೀಕೃತ ಪಾಠವೊಂದನ್ನು ಇಲ್ಲಿ ಗಮನಿಸಬಹುದು :

> ಬಿಳಿಯ ತಾವರೆಯೆಸಟಿರ್ೊಳ್ ಮಾಡಿದ ಬೆಳ್ಗೊಡೆ ರಯ್ಯಮಾಗೆಡದ ಕೆಯ್ಯೊಳ್
> ಪೊಳೆವ ಚೆಂಬೊನ್ನ ಕಾವಿನ ಚಾಮರಮುರ್ದಿರೆ ಭೇರಿ ಸಿಂಹಾಸನಮುಂ
> ಬಟಿಯೊಳ್ ಜವಂ ಮಿಳಿರೆ ರಾಜ್ಯಚಿಹ್ನಂಗಳ್ವೆರಸಿಂತು ನಡೆತಂದು ರಾಜ್ಯಲಕ್ಷ್ಮಿ
> ಬಳೆದ ಸಂತೋಷದಂತಮನೆಯ್ದೆ ಪತ್ತಿದರ್ ಸಹಜ ಮನೋಜನಂ
>
> ೧ ನಾಡೋಜನಂ[7]
>
> ೧ ನಾಣ್ಗೆ ನಾಡೊವಜ (ಕ ಖ ಗ ಘ ಘ§)

ಮೇಲಿನ ಪಿರಿಯಕ್ಕರದಲ್ಲಿ ಅಂಕೆಯಿಂದ ಗುರುತು ಮಾಡಿರುವ ಭಾಗ ಸಂಪಾದಕರು ಆಯ್ಕೆ ಮಾಡಿಕೊಂಡಿರುವ ಪಾಠ. ಸಂಪಾದನೆಗೆ ಬಳಸಿದ (ಕ ಖ ಗ ಘ ಘ§ ಎಂಬ) ಐದೂ ಪ್ರತಿಗಳಲ್ಲಿ 'ನಾಣ್ಗೆ ನಾಡೊವಜ' ಎಂಬ ಒಂದೇ ಪಾಠವಿದೆ. ಹಾಗೆಂದೇ ಸಂಪಾದಕರು ಅದನ್ನು ಅಡಿಟಿಪ್ಪಣಿಯಲ್ಲಿ 'ಸ' ಎಂಬ ಚಿಹ್ನೆಯಿಂದ (ಸರ್ವಪ್ರತಿಗಳ ಪಾಠ ಎಂದು) ಗುರುತಿಸಿದ್ದಾರೆ. ಎಲ್ಲ ಪ್ರತಿಗಳೂ ಒಂದೇ ಪಾಠವನ್ನು ಸೂಚಿಸುತ್ತಿರುವಾಗಲೂ ಸಂಪಾದಕರು ಅದನ್ನು ಒಪ್ಪದೆಹೋಗಲು ಕಾರಣವಾದ ಅಂಶವೆಂದರೆ ಅದು ಛಂದೋಹೀನವಾದದ್ದೆನ್ನುವುದು. ಪಿರಿಯಕ್ಕರದ ಪ್ರತಿಸಾಲಿನ ಕಡೆಯಲ್ಲಿ ರುದ್ರಗಣ ಬರಬೇಕು. ಅದು ಅಲ್ಲಿ ಕಡ್ಡಾಯವಾದದ್ದು. ಮೇಲಿನ ಪದ್ಯದ ಮೊದಲ ಮೂರು ಪಾದಗಳ ಕಡೆಗಳಲ್ಲಿ ಅದು ತಪ್ಪದೆ ಬಂದಿದೆ. ಕಡೆಯ ಪಾದದಲ್ಲಿ ಮಾತ್ರ ಅಗತ್ಯಕ್ಕಿಂತ ಎರಡಂಶ ಹೆಚ್ಚಾಗಿರುವ ಪಾಠವಿದೆ. ಜೊತೆಗೆ ಅದು ಅರ್ಥಕ್ಕೂ ಹೊಂದಿಕೆಯಾಗುತ್ತಿಲ್ಲ. ಈ ನಿದರ್ಶನವನ್ನು ಕೊಟ್ಟ ಕಾರಣವಿಷ್ಟೆ : ಒಂದು ಪಾಠ ಎಲ್ಲ ಪ್ರತಿಗಳಲ್ಲಿಯೂ ಇದ್ದು, ಯಾವುದೇ ಕಾರಣಗಳಿಂದ ಎಷ್ಟೇ ಬಲವಾಗಿ ಸಮರ್ಥಿತವಾಗುತ್ತಿದ್ದರೂ, ಅದು ಛಂದೋಹೀನವಾದ

ಪಾಠವಾಗಿದ್ದಲ್ಲಿ ಕವಿಪಾಠ ಅಲ್ಲವೆಂದು ತಿಳಿಯಬೇಕು. ಪ್ರಾಚೀನ ಕನ್ನಡ ಕವಿಗಳ ವಿಷಯದಲ್ಲಿಯಂತೂ ಇದು ಸುನಿಶ್ಚಿತವಾದದ್ದು.

ಪದ್ಯದೊಳಗೆ (ಲಿಪಿಕಾರನ ತಪ್ಪಿನಿಂದಾಗಿ) ನುಸುಳಿರುವ ಛಂದೋದೋಷ ಥಟ್ಟನೆ ಅರಿವಿಗೆ ಬರದಷ್ಟು ಸೂಕ್ಷ್ಮ ಪ್ರಮಾಣದ್ದಾಗಿರಬಹುದು. ಆದರೆ ಸಂಪಾದಕನಿಗೆ ಅದನ್ನು ತಿಳಿಯುವ ಸಾಮರ್ಥ್ಯ ಬೇಕು. ಕೆಳಗೆ ಅಂಥ ಒಂದು ನಿದರ್ಶನ ಇದೆ :

ಸುರಸಿಂಧೂದ್ಭವ ಕುಂಭಜನ್ಮದಿನ ಕೃತ್ಪುತ್ರಾದಿಗಳ್ ಸಾಯೆ ಸಂ
ಗರದೊಳ್ ಪಾಂಡವರಂ ಗೆಲಲ್ ನೆಱೆಯನಿಲ್ಲೇಕಾಕಿ ದುರ್ಯೋಧನಂ
ಸೆರಗಂ ಪಾರ್ದಪನೆಂಗುಮೀ ಧರೆ ಭುಜಾದಂಡಂ ಗದಾದಂಡಮೆಂ
ಬೆರಡುಂ ಸಂಜಯ ಮಜ್ಜಯ[೧]ಕ್ಕೆ ನೆರವಿಂ ಮತ್ತನ್ಯರಂ ಪಾ[೧]ರ್ವೆನೇ[8]

೧ a ಕ್ಕಿದುವೆನೆ ಮತ್ತನ್ಯರಂ ಪಾ (ಮ)
b ಕ್ಕೆನೆರವಿಂ ಮತ್ತಾರ್ಸೆಱಂ ಬಾ (ನ, ಅ)

ಸಂಪಾದಕರು ಮ ಪ್ರತಿಯ ಪಾಠದಿಂದ 'ಮತ್ತನ್ಯರಂ ಪಾ' ಎಂಬ ಭಾಗವನ್ನು ಮಾತ್ರ ಸ್ವೀಕರಿಸಿ 'ಕ್ಕಿದುವೆನೆ' ಎಂಬ ಉಳಿದ ಭಾಗಕ್ಕೆ ಬದಲಾಗಿ ನ, ಅ ಪ್ರತಿಗಳ (ಕ್ಕೆ ನೆರವಿಂ ಎಂಬ) ಪಾಠ ತಗೆದುಕೊಂಡಿದ್ದಾರೆ. ಇವಕ್ಕೆ ಕಾರಣ 'ಕ್ಕಿದುವೆನೆ' ಎಂಬ ಪಾಠದ ಅಂತ್ಯಾಕ್ಷರ ಗುರುವಾಗದೆ ಲಘುವಾಗಿರುವುದು. ಮತ್ತೇಭವಿಕ್ರೀಡಿತದ ಪ್ರತಿ ಪಾದದ ಐದನೆಯ ಗಣ ಮ ಗಣವಾಗಿರಬೇಕು. 'ಕ್ಕಿದುವೆನೆ' ಎಂಬ ಪಾಠದಿಂದ ಅದು ಯ ಗಣವಾಗುತ್ತದೆ. ಪದ್ಯದ ಓಟದಲ್ಲಿ ಇವರಿಂದಾಗುವ ವ್ಯತ್ಯಾಸ ಎಷ್ಟು ಗಣನೀಯವಾದದ್ದೆನ್ನುವುದು ಲಯ ಹಿಡಿದು ಪದ್ಯವನ್ನು ಓದುವ ಓದುಗನಿಗೆ ಮಾತ್ರ ತಿಳಿಯುತ್ತದೆ. ಒಳ್ಳೆಯ ಸಂಗೀತದಲ್ಲಿ ನಡುವೆ ಕಿಂಚಿತ್ ಅಪಸ್ವರ ಸುಳಿದರೂ ಉತ್ತಮ ರುಚಿಯುಳ್ಳ ಶ್ರೋತೃವಿಗೆ ಕಿರಿಕಿರಿಯುಂಟಾಗುವಂತೆ ಪದ್ಯದ ಲಯದಲ್ಲಾಗುವ ವ್ಯತ್ಯಾಸ ಚುರುಕುಶ್ರುತಿಯ ಸಹೃದಯನನ್ನು ಬಾಧಿಸುತ್ತದೆ. ಈ ಛಂದೋದೋಷ ಪತ್ತೆಯಾಗಲು ದೊಡ್ಡ ಅಡ್ಡಿಯೊಂದಿದೆ ಎನ್ನುವುದು ಇಲ್ಲಿ ಗಮನಿಸಬೇಕಾದ ವಿಷಯ. 'ಕ್ಕಿದುವೆನೆ' ಪಾಠದ ಅಂತ್ಯಾಕ್ಷರದ ನಂತರ ಯತಿ ಇರುವುದರಿಂದ ಆ ಅಕ್ಷರವನ್ನು ದೀರ್ಘವಾಗಿ ಮಾಡಿಕೊಂಡು ನಮಗೇ ತಿಳಿಯದಂತೆ ಲಯಕ್ಕೆ ಹೊಂದಿಸಿಕೊಂಡುಬಿಡುವ ಸಾಧ್ಯತೆಯಿದೆ. ಆದರೆ ಆಗ ಅರ್ಥಕ್ಕೆ ಬಾಧೆ ಬರುತ್ತದೆ. ಇಷ್ಟು ಸೂಕ್ಷ್ಮವಾದ ಛಂದೋದೋಷವನ್ನು ಪತ್ತೆ ಮಾಡಬೇಕಾದರೆ ಸಂಪಾದಕ ಶ್ರೇಷ್ಠವಾದ ಕಾವ್ಯಸಂಸ್ಕಾರವುಳ್ಳವನಾಗಿದ್ದರೆ ಮಾತ್ರ ಸಾಧ್ಯ.

ಎಲ್ಲ ರೀತಿಯ ಸಿದ್ಧತೆಗಳಿದ್ದು ಉತ್ತಮ ಸಂಪಾದನ ಕಾರ್ಯ ಮಾಡಿರುವ ಸಂಪಾದಕರು ಸಹ ಪದ್ಯಗಳನ್ನು ಲಯ ಹಿಡಿದು ಓದದೆಹೋದಾಗ ಹೇಗೆ ಸಣ್ಣಪುಟ್ಟ ಛಂದೋದುಷ್ಟ ಪಾಠಗಳಿಗೆ ಎಡೆಯಾಗಿಬಿಡುತ್ತದೆ ಎನ್ನುವುದಕ್ಕೆ ಪಂಪನ ಕೃತಿಯೊಂದರ ಸಂಪಾದನೆಯಿಂದಲೇ ನಿದರ್ಶನ ಸಿಗುತ್ತದೆ. ಆದಿಪುರಾಣದ ಈ ಪದ್ಯವನ್ನು ಗಮನಿಸಿ :

ಕ್ಷಿತಿಚಕ್ರಾರ್ಚಿತ ಚಕ್ರವರ್ತಿ ಪದಮುಂ ದೇವೇಂದ್ರ ರಾಜ್ಯೋದಯೋ
ನ್ನತಿಯುಂ ಭವ್ಯಜನಂಗಳಾಸೆವಡುತಿರ್ಪಾರ್ಹಂತ್ಯಮುಂ ಸಾರ್ಗುಮ
ನ್ವಿತ ದಾನಂಗರಿಮುಂಟೆ ಸೌಖ್ಯಮೆನುತ್ತುಂ–ದಾನಪ್ರಭಾವಕ್ಕೆ ಸಂ
ಚಿತ ಪುಣ್ಯೋದಯನಾಗಳಾದಮೆಸೆದಂ ಸಂಸಾರ ಸಾರೋದಯಂ[9]

ಮೂರನೆಯ ಸಾಲಿನಲ್ಲಿ 'ಎನುತ್ತುಂ' ಎಂಬ ಮಾತಿದೆಯಷ್ಟೆ. ಅದು 'ಎನುತುಂ' ಎಂದಿರಬೇಕು. ಇದೇನೂ ಮುದ್ರಣ ದೋಷವಲ್ಲ. ಅರ್ಥದೃಷ್ಟಿಯಿಂದ ಎನುತುಂ ಎನುತ್ತುಂ ಎರಡೂ ಸಾಧುರೂಪಗಳೇ. ಆದರೆ ಪದ್ಯ ಲಯದೃಷ್ಟಿಯಿಂದಲೂ ಸರಿಯಾಗಲು ಎನುತುಂ ಎಂಬ ಪಾಠವೇ ಇರಬೇಕಾಗುತ್ತದೆ. ಈ ದೋಷ ಕೂಡ ಯತಿಸ್ಥಾನದಲ್ಲಿಯೇ ಉಂಟಾಗಿದೆ ಎನ್ನುವುದು ಗಮನಾರ್ಹವಾದ ಅಂಶ.

ಲಭ್ಯ ಪಾಠಾಂತರಗಳನ್ನೆಲ್ಲ ಉಪಯೋಗಿಸಿಕೊಂಡು ಛಂದಸ್ಸಿನ ನಿರ್ದೇಶನದಲ್ಲಿ ಪಾಠವನ್ನು ರೂಪಿಸುವ ರೀತಿಗೆ 'ಬಸವರಾಜ ದೇವರ ರಗಳೆ'ಯಲ್ಲಿ ದೊರೆಯುವ ಒಂದು ನಿದರ್ಶನವನ್ನು ನೋಡಬಹುದು. ಕ ಮತ್ತು ಖ ಎಂಬ ಎರಡು ಭಿನ್ನ ಪ್ರತಿಗಳಲ್ಲಿ ದೊರೆಯುವ ಪಾದವೊಂದರ ಭಿನ್ನಪಾಠ ಹೀಗಿದೆ :

ಇರೆ ದೂರ ದೇಶಾಂತರ ಪ್ರವೇಶದೊಳಂದು (ಕ)
ಇರೆ ದೂರದಂತರ ಪ್ರವಾಸದೊಳಂದು (ಖ)

ಇವುಗಳಲ್ಲಿ 'ಕ'ದ ಪಾಠ ಅರ್ಥದೃಷ್ಟಿಯಿಂದ ಅಸಮಂಜಸವಾಗಿದೆ. 'ಖ'ದ ಪಾಠ ಛಂದಸ್ಸಿನ ದೋಷಕ್ಕೆ ಎಡೆಗೊಟ್ಟಿದೆ. ಈ ಎರಡು ಅಪಪಾಠಗಳನ್ನು ಉಪಯೋಗಿಸಿಕೊಂಡು ಅವುಗಳ ಬಲದ ಮೇಲೆಯೆ ಲಯಬದ್ಧವಾದ ಅರ್ಥಪೂರ್ಣ ಪಾಠವನ್ನು ರೂಪಿಸಿಕೊಂಡು ಸಂಪಾದಕರು ಆ ಪಾದವನ್ನು

ಇರೆ ದೂರ ದೇಶಾಂತರ ಪ್ರವಾಸದೊಳಂದು[10]

ಎಂದು ಸಮರ್ಪಕವಾಗಿ ತಿದ್ದಿದ್ದಾರೆ.

ಪಾಠನಿರ್ಣಯದ ಕಾರ್ಯದಲ್ಲಿ ಕೆಲವು ಸಲ ಪ್ರಾಸಾಕ್ಷರಗಳು ಸಹಾಯಕ್ಕೆ ಒದಗುವುದುಂಟು. 'ಗದಾಯುದ್ಧ'ದಲ್ಲಿ ದೊರೆಯುವ ಮುಂದಿನ ಪದ್ಯ ಅಂಥ ಉದಾಹರಣೆಯೊಂದನ್ನು ಒದಗಿಸಿದೆ.

ಕೂರಿಸಿ ವೀರಶ್ರೀಯಂ
ಕೂರದರಂ ಕೊಂದು ಸಮರಜಯಮಂ ಮಾಡಲ್
ಕೂರಸಿಯೊಳ್ ನೆಲಸುಗೆ ೧ಕಂ
ಠೀರವ ವಾಹನೆ ಚಳುಕ್ಯ ಕಂಠೀರವನಾ[11]

೧ ಲಕ್ಷ್ಮ್ರಚರಣಂ ವೈರಿ ಕಳಭ (ನ)
ಲಕ್ಷ್ಮೀಚರಣಂ ವೈರಿ ಕಳಭ (ಅ೧ಪಾ)

ಮೇಲೆ ಕೊಟ್ಟಿರುವ ಪಾಠಾಂತರಗಳಲ್ಲಿ 'ನ' ಪ್ರತಿಯ ಪಾಠ ಸರಿಯಲ್ಲವೆನ್ನುವುದು ಲಯದ ದೋಷದಿಂದಲೇ ತಿಳಿಯುತ್ತದೆ. ಆದರೆ ಲಕ್ಷ್ಮೀಚರಣಂ ವೈರಿ ಕಳಭ ಎನ್ನುವುದು ಲಯದ ಓಟ, ಅರ್ಥಸಾಧುತ್ವ ಎರಡನ್ನೂ ಪಡೆದಿದೆ. ಹೀಗಿದ್ದೂ ಅದು ಸರಿಯಾದ ಪಾಠವಲ್ಲವೆನ್ನುವುದು ಅದು ಪ್ರಾಸನ್ಯೂನವಾಗಿರುವುದರಿಂದ ತಿಳಿಯುತ್ತದೆ. ಆದ್ದರಿಂದ 'ಕಾವ್ಯಾವಲೋಕನ'ದಲ್ಲಿ ಬರುವ (ಇದೇ ಪದ್ಯ ಒದಗಿಸುವ) ಮತ್ತೊಂದು ಪಾಠ ಇಲ್ಲಿ ಸ್ವೀಕೃತವಾಗಿದೆ. ಅದು ಎಲ್ಲ ದೃಷ್ಟಿಗಳಿಂದಲೂ ಸಾಧುವಾಗಿದೆ. 'ಚಳುಕ್ಯ ಕಂಠೀರವನ' ಕತ್ತಿನಲ್ಲಿ ನೆಲಸಬೇಕಾದದ್ದು 'ಕಂಠೀರವವಾಹನೆ'ಯೇ ಹೊರತು 'ಲಕ್ಷ್ಮೀಚರಣಂ' ಅಲ್ಲ.

ಬೇರೆ ಯಾವುದೋ ಛಂದೋಕ್ರಮದಲ್ಲಿ ಲಿಖಿತವಾಗಿರುವ ಪದ್ಯಗಳನ್ನು ಪ್ರಾಸದ ಆಧಾರದ ಮೇಲೆ ಅವುಗಳ ನಿಜವಿನ್ಯಾಸಕ್ಕೆ ವಿದ್ವಾಂಸರು ಅಳವಡಿಸಿಕೊಟ್ಟ ನಿದರ್ಶನಗಳಿವೆ. ಕ್ರಿ.ಶ. ೧೦೬೭ರ ಚಿತ್ರದುರ್ಗದ ಶಾಸನದಲ್ಲಿ (ಸಂಖ್ಯೆ ೪೭) ಅಂಶಗಣದ ಷಟ್ಪದಿಯೊಂದು ಚತುಷ್ಪದಿಯಂತೆ ಉತ್ಕೀರ್ಣವಾದದ್ದುಂಟು. ಬರೆದ ರೀತಿಯಲ್ಲೂ ಅದು ಲಯಪ್ರಾಸಬದ್ಧವಾಗಿ ಅರ್ಥಸಾಧುವೂ ಆಗಿರುವುದರಿಂದ ಅದು ತಪ್ಪು ವಿನ್ಯಾಸದಲ್ಲಿ ಲಿಖಿತವಾಗಿದೆಯೆಂದು ತಿಳಿಯುವಂತೆಯೇ ಇಲ್ಲ. ಆದರೆ ಪದ್ಯದ ಮೊದಲ ಮತ್ತು ಮೂರನೆಯ ಸಾಲುಗಳಲ್ಲಿ ಅನುಪ್ರಾಸದ ವೇಷದಲ್ಲಿ ಕುಳಿತ (ಅಂಶಲಯದ ಷಟ್ಪದಿಯ ಸಾಲುಗಳಿಗೆ ಅಗತ್ಯವಾದ) ಇನ್ನೆರಡು ಪ್ರಾಸಗಳನ್ನು ಗಮನಿಸಿ ಅದು ಚತುಷ್ಪದಿಯ ರೂಪದಲ್ಲಿ ಲಿಖಿತವಾದ ಒಂದು ಷಟ್ಪದಿಯೆನ್ನುವುದನ್ನು ತೋರಿಸಿಕೊಟ್ಟವರು ಡಿ. ಎಲ್. ನರಸಿಂಹಾಚಾರ್ಯರು.[12] ಆ ಪದ್ಯ ಲಿಖಿತವಾಗಿದ್ದ ರೀತಿ ಇದು :

ಮಣ್ಡಲಿಗಾವ ಪ್ರಚಣ್ಡ ಬಿಪ್ಪಿಗಂ ಜಯ
ಗೊಣ್ಡೇಶ್ವರಕ್ಕೆ ಬಿಟ್ಟುಂಬಳಿಯಂ
ಭಣ್ಡಣಕಳ್ಕದ ಗಣ್ಡನೀಯಲ್ಕಾಂಪ
ಗಣ್ಡಂ ಮಾಚಿಗನೆಯ್ದೆ ರಕ್ಷಿಪಂ

ಇದು ಇರಬೇಕಾಗಿದ್ದ ರೀತಿ :

ಮಣ್ಡಲಿಗಾವ ಪ್ರ
ಚಣ್ಡ ಬಿಪ್ಪಿಗಂ ಜಯ
ಗೊಣ್ಡೇಶ್ವರಕ್ಕೆ ಬಿಟ್ಟುಂಬಳಿಯಂ
ಭಣ್ಡಣಕಳ್ಕದ
ಗಣ್ಡನೀಯಲ್ಕಾಂಪ
ಗಣ್ಡಂ ಮಾಚಿಗನೆಯ್ದೆ ರಕ್ಷಿಪಂ

ಹೀಗೆಯೇ ಎರಡು ಸಾಲುಗಳ ರೂಪದಲ್ಲಿ ಲಿಖಿತವಾಗಿದ್ದ ಧವಳದ ಹಾಡಿನ ಚರಣಗಳನ್ನು ಪ್ರಾಸದ ಆಧಾರದ ಮೇಲೆ ಆರು ಸಾಲಿನ ಪದ್ಯಗಳೆಂದು ಡಿ.ಎಲ್.ಎನ್. ಅವರೇ ಗುರುತಿಸಿದ್ದನ್ನು, 'ಮಾನಸೋಲ್ಲಾಸ'ದಲ್ಲಿ ದೊರೆಯುವ ಕನ್ನಡದ ತ್ರಿಪದಿ ಮತ್ತು ಷಟ್ಪದಿಯ ನಿವರ್ತನಪದ್ಯಗಳನ್ನು ಆಶ್ಚರ್ಯಕರವೆನಿಸುವಷ್ಟು ಸಮರ್ಪಕವಾಗಿ ಛಂದಸ್ಸಿನ ಬಲದ ಮೇಲೆ ಪುನರ್ರಚಿಸಿದ್ದನ್ನು ಇಲ್ಲಿ ಸ್ಮರಿಸಬಹುದು.[13]

ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಪ್ರಸ್ತಾವಯೋಗ್ಯವಾದ ವಿಚಾರವೊಂದು ದೃಢವಾಗಿ ಪ್ರತಿಪಾದಿತವಾದದ್ದು ಛಂದೋಪ್ರಧಾನವಾದ ಪಾಠಭೇದಗಳ ಬಲದ ಮೇಲೆ. ಷಟ್ಪದಿ ಅಂಶಲಯಘಟಿತವಾದುದೆಂಬ ವಿಚಾರ ಆಗಲೇ ತಿಳಿದಿತ್ತಾದರೂ[14] ಛಂದೋಂಬುಧಿಯಲ್ಲಿ ದೊರೆಯುತ್ತಿದ್ದ ನಾಗವರ್ಮನ ಪದ್ಯ ಪೂರ್ತಿಯಾಗಿ ಅಂಶಗಣ ಘಟಿತವಾದುದಾಗಿರಲಿಲ್ಲ. ಆ ಪದ್ಯ ಇದ್ದುದು ಹೀಗೆ :

ಮಂದರ ಧರಗಣ
ಮೊಂದಿರೆ ಕಡೆಯೊಳ್
ಕುಂದದೆ ನೆಲಸುಗೆ ಮದನಹರಂ
ಇಂದುನಿ ಭಾನನೆ
ಮುಂದಣ ತೆಱನೀ
ಯಂದಮೆಯಾಗಲೆ ಷಟ್ಪದಿ ಕೇಳ್

ಬಿ.ಎಂ.ಶ್ರೀ.ಯವರು ಈ ಪದ್ಯದ ಸಂಬಂಧದಲ್ಲಿ ಹೇಳುತ್ತ "ಮೊದಲು ಅಂಶವಿವಕ್ಷೆ ಮಾತ್ರ ಉಳ್ಳ ವಿಷ್ಣು ಗಣಗಳು ಇದ್ದು ಆಮೇಲೆ ಮಾತ್ರಾನಿಯಮವೂ ಉಂಟಾಯಿತೋ" ಎಂಬ ಊಹೆ ಮಾಡಿದ್ದರು.[15] ಈ ಷಟ್ಪದಿಯಲ್ಲಿ ಬರುವ 'ಮಂದರ ಧರಗಣ' 'ಮದನ ಹರಗಣ' ಎಂಬ ಮಾತುಗಳ ಜೊತೆಗೆ ಎರಡನೆಯ ಪಾದಕ್ಕೆ ದೊರೆಯುವ 'ಬಂದಿರ್ಕಾಜಿಂತ್ಯದೊಳ್', 'ಬಂದಿರಾಜಿಂತ್ಯದೊಳ್' ಎಂಬ ಪಾಠಾಂತರಗಳನ್ನೂ ಅವರು ತಮ್ಮ ಊಹೆಗೆ ಆಧಾರವಾಗಿಟ್ಟುಕೊಂಡಿದ್ದರು. ಆದರೆ ಸಮಸ್ಯೆ ಇನ್ನೂ ಕೊಂಚ ಉಳಿದಿತ್ತು.[16] ಷಟ್ಪದಿಯ ಉತ್ತರಾರ್ಧದ ಎರಡನೆಯ ಪಾದದ ಎರಡನೆಯ ಗಣ ಬ್ರಹ್ಮಗಣವೇ ಆಗಿ ಉಳಿದಿತ್ತು. ಇದು ಲಕ್ಷಣ ಪದ್ಯವಾದುದರಿಂದ ಈ ಸಣ್ಣ ರಿಯಾಯಿತಿಯನ್ನೂ ಅದಕ್ಕೆ ಕೊಡುವುದು ಸಾಧ್ಯವಿರಲಿಲ್ಲ. ಅಲ್ಲದೆ ಉತ್ತರಾರ್ಧದಲ್ಲಿ ಇದ್ದ ವಿಷ್ಣುಗಣಗಳೆಲ್ಲವೂ (ಶರಷಟ್ಪದಿಗೆ ಹೊಂದುವ) ೪ ಮಾತ್ರೆಗಳ ವಿಷ್ಣುಗಣಗಳೇ ಆಗಿದ್ದುವು. ಮುಂದೆ 'ಅಪೂರ್ವ ಷಟ್ಪದಿ'ಯನ್ನು ಕುರಿತು ಬರೆಯುವ ಕಾಲಕ್ಕೆ ತೀನಂಶ್ರೀಯವರು ಈ ಷಟ್ಪದಿಯ ಉತ್ತರಾರ್ಧಕ್ಕೆ ದೊರೆಯುವ ಪಾಠಾಂತರಗಳನ್ನೂ ಪತ್ತೆಮಾಡಿ ಪದ್ಯವನ್ನು ಸರಿಪಡಿಸಿ ಬ್ರಹ್ಮಗಣದ ಜಾಗದಲ್ಲಿ ವಿಷ್ಣುಗಣವೇ ಇರುವುದನ್ನೂ ಶರಷಟ್ಪದಿಯ ಲಯಕ್ಕೆ ಹೊಂದದ ಐದು ಮಾತ್ರೆಯ ಇನ್ನೆರಡು ವಿಷ್ಣುಗಣಗಳು ಕಡೆಯ ಪಾದದಲ್ಲಿ ಇರುವುದನ್ನೂ ತೋರಿಸಿ ಷಟ್ಪದಿ

ಮೊದಲು ಅಂಶಲಯವಲ್ಲಿಯೇ ಇತ್ತು ಎನ್ನುವುದನ್ನು ಅಪವಾದವಿರದಂತೆ ಪ್ರತಿಪಾದಿಸಿದರು.

೨

ಈವರೆಗೆ ನಮ್ಮ ಹಲವರು ಹಿರಿಯ ಗ್ರಂಥ ಸಂಪಾದಕರು ಛಂದಸ್ಸಿನ ಆಧಾರದ ಮೇಲೆ ಆಯ್ಕೆಮಾಡಿಕೊಂಡ ಪಾಠಗಳನ್ನು ನಿದರ್ಶನವಾಗಿಟ್ಟುಕೊಂಡು ವಿಷಯ ಪರಿಶೀಲನೆ ಮಾಡಿದ್ದಾಯಿತು. ಹಲವರು ಸಂಪಾದಕರು ಒಪ್ಪಿ ಸ್ವೀಕರಿಸಿರುವ ಕೆಲವು ಪಾಠಾಂತರಗಳು ಏಕೆ ಅಸಾಧುವಾಗಿವೆ ಎಂದು ತಿಳಿಯಲು ಛಂದಸ್ಸು ಹೇಗೆ ನೆರವಾಗುತ್ತದೆ ಎಂದು ಮುಂದೆ ಪರಿಶೀಲಿಸಬಹುದು.

ಸಂಪಾದಿತವಾದ ಗ್ರಂಥವೊಂದರಲ್ಲಿ ಸಂಪಾದಕರು ಬಳಸಿರುವ ಪಾಠಗಳು ಎಲ್ಲರಿಗೂ ಒಪ್ಪಿಗೆಯಾಗಬೇಕು ಎಂದೇನೂ ಇಲ್ಲ. ಹೆಸರಾದ ವಿದ್ವಾಂಸರು ಆಯ್ಕೆ ಮಾಡಿಕೊಂಡ ಪಾಠವನ್ನೇ ಪ್ರಶ್ನಿಸುವುದು, ಅವರು ಅಡಿಟಿಪ್ಪಣಿಗೆ ಹಾಕಿರುವ ಪಾಠಾಂತರಗಳು ಪದ್ಯದಲ್ಲಿ ಸೇರಬೇಕಾಗಿತ್ತೆಂದು ಸತಾರ್ಕಿಕವಾಗಿ ತೋರಿಸಿಕೊಡುವುದು ಸಾಧ್ಯವಿರಬಹುದು. ಡಿ. ಎಲ್. ನರಸಿಂಹಾಚಾರ್ಯರು ತಮ್ಮ 'ಕನ್ನಡ ಗ್ರಂಥ ಸಂಪಾದನೆ'ಯ 'ಪಾಠಪರಿಷ್ಕರಣ'ವೆಂಬ ಅಧ್ಯಾಯದಲ್ಲಿ ಇಂಥ ಅನೇಕ ನಿದರ್ಶನಗಳನ್ನು ತೋರಿಸಿಕೊಟ್ಟಿದ್ದಾರೆ. ಆದರೆ ಇವೆಲ್ಲ ಅರ್ಥದೃಷ್ಟಿಯಿಂದ ಭಿನ್ನವಾಗುವ ಪಾಠಾಂತರಗಳ ವಿಷಯವಾಯಿತು. ಇಂಥ ಒಂದೊಂದು ಪಾಠಾಂತರದ ಪರವಾಗಿಯೂ ಬೇರೆ ಬೇರೆ ಸಮರ್ಥನದೃಷ್ಟಿವಾದಗಳು ಇರಬಹುದಾಗಿ ಇದು ಸಾಧ್ಯ. ಆದರೆ ಛಂದಸ್ಸು ತಪ್ಪಾಗಿರುವ ಪಾಠಾಂತರವನ್ನು ಮಾತ್ರ ಯಾವ ವಿದ್ವಾಂಸನೂ ಪಾಠದ ಮೈಯಲ್ಲಿ ಸೇರಿಸುವಂತಿಲ್ಲ. ಅಂಥ ಪಾಠಾಂತರ ಅಡಿಟಿಪ್ಪಣಿಗೇ ಹೋಗಬೇಕಾಗುತ್ತದೆ. ಹೀಗಿದ್ದು ಇಂಥ ಪಾಠಾಂತರಗಳು ಮುಖ್ಯ ಪಾಠದಲ್ಲಿ ಉಳಿದುಕೊಂಡಿರುವುದನ್ನು ನಾವು ಹಲವೆಡೆಗಳಲ್ಲಿ ಕಾಣಬಹುದು. ಕೆಳಗೆ ಅಂಥ ನಾಲ್ಕಾರು ನಿದರ್ಶನಗಳಿವೆ. ಹಿರಿಯ ನೇಮಣ್ಣನ 'ಯಶೋಧರ ಚರಿತೆ' ಎಂಬ ಸಂಪಾದಿತ ಕೃತಿಯಲ್ಲಿ ದೊರೆಯುವ ಪದ್ಯ ಇದು :

ಅರಸು ಅಮೃತಮತಿಯಿದಿರಾಗಿ ಬರೆ ಕಂಡು
ಸರಸದಿಂದಿಟ್ಟನು ಉತ್ಪಲದಿಂ
ಭರದಿಂದ ೧ಮೂರ್ಛೆಯೊಳೀಂ ತಣ್ಣೀರಲಿ
ಅರಸಿ ಎಚ್ಚರೆ ನೃಪ ನುಡಿದ।7

೧ ಮೂರ್ಛೆಯೊಳಿರೆ ಕಂಡು (ಜ ಪ್ರತಿ)

ಸಾಂಗತ್ಯದ ಲಯ ಹಿಡಿದು ಪದ್ಯವನ್ನು ಓದಿದಾಗ ಎರಡು ಮತ್ತು ಮೂರನೆಯ ಪಾದಗಳಲ್ಲಿ ಪದ್ಯದ ಓಟ ಕೆಟ್ಟಿರುವುದು ಸ್ಪಷ್ಟವಾಗುತ್ತದೆ. ಎರಡನೆಯ ಪಾದದಲ್ಲಿ ಈಗಿರುವಂತೆ ಕಡೆಯ ಪದದಲ್ಲಿರುವ 'ಲದಿಂ' ಎಂಬಷ್ಟು ಭಾಗ ಲಯಕ್ಕೆ ಹೊರತಾಗಿ

ಉಳಿಯುತ್ತದೆ. ಮೂರನೆಯ ಪಾದವಲ್ಲಿ ಎರಡನೆಯ ವಿಷ್ಣುಗಣದ ನಂತರ ಲಯ ಕೆಟ್ಟಿದೆ. ಪಾಠದ ಅರ್ಥವಲ್ಲಿ ಏನೂ ವ್ಯತ್ಯಾಸ ಮಾಡದೆ ಮೊದಲ ತಪ್ಪನ್ನೂ, ಸಂಪಾದಕರೇ ಕೊಟ್ಟಿರುವ 'ಜ' ಪ್ರತಿಯ ಪಾಠದ ಆಧಾರದ ಮೇಲೆ ಎರಡನೆಯ ತಪ್ಪನ್ನೂ ಸರಿಪಡಿಸಬಹುದು. ಆಗ—

ಅರಸು ಅಮೃತಮತಿಯಿದಿರಾಗಿ ಬರೆ ಕಂಡು
ಸರಸದಿಂದಿಟ್ಟನುತ್ಪಲದಿಂ
ಭರದಿಂದ ಮೂರ್ಛೆಯೊಳಿರೆ ಕಣ್ಣೀರಲಿ18
ಅರಸಿ ಎಚ್ಚರೆ ನೃಪ ನುಡಿದ

ಮೂವರು ಸಂಪಾದಕರ ಸಂಯುಕ್ತ ಪರಿಶೀಲನೆಯಲ್ಲಿ ಸಿದ್ಧವಾದ 'ಭರತೇಶ ವೈಭವ'ದ ಮುದ್ರಣವೊಂದರಲ್ಲಿ ಕೆಲವು ಛಂದೋದೂಷಿತ ಪಾಠಾಂತರಗಳು ಮುಖ್ಯ ಪಾಠದ ಮೈಯಲ್ಲಿ ಸೇರಿರುವುದು ಕಾಣುತ್ತದೆ. ಇಲ್ಲಿ ಎರಡು ನಿದರ್ಶನಗಳನ್ನು ಕೊಟ್ಟಿದೆ :

ಬೆಡಗಿಂದ ಕೆಲಬರ ಕೈಲಾಗುವಿಡಿದಡಿ
೧ಯಿಡುತಿಡುತಿರ್ದನು ಕೆಲರನುಂ
ನಡುವನೆಡದ ಕೈಯೊಳಪ್ಪಿ ಮಾತಾಡುತ
ನಡೆವುತಿರ್ದನು ಮೋಡಿಕಾರ19

೧ಯಿಡುತಿರ್ದ ಮತ್ತೆ ಕೆಲಬರ

ಭಾವಾಕ್ಷಿಯಿಂದ ಶ್ರೀ ಗುರು ಹಂಸನಾಥನ
ಭಾವವ ನೋಡಿ ಬೀಳ್ಕೊಂಡು
ಶ್ರೀವೀತರಾಗಯೆಂದೊಡನೆ ಕಣ್ದೆರೆದನಾ
ಭಾವಿತಾತ್ಮಕ ೨ಶಿರೋಮಣಿ೨ 20

೨ ಶಿರೋರತ್ನ

ಸಂಪಾದಕರು ಮೇಲಿನ ಎರಡು ಪದ್ಯಗಳಲ್ಲಿಯೂ ಸ್ವೀಕಾರಯೋಗ್ಯವಾದ ಪಾಠಾಂತರಗಳನ್ನು ಅಡಿಟಿಪ್ಪಣಿಗೆ ತಳ್ಳಿ ಛಂದೋದುಷ್ಟವಾದ ಪಾಠಾಂತರಗಳನ್ನು ಪದ್ಯದಲ್ಲಿ ಹಾಕಿಕೊಂಡಿದ್ದಾರೆ. ಮೊದಲನೆಯ ಪದ್ಯದಲ್ಲಿ ಆಯ್ದುಕೊಂಡ ಪಾಠ ಕಡ್ಡಾಯವಾಗಿ ಬರಬೇಕಾದ ಬ್ರಹ್ಮಗಣದ ಜಾಗದಲ್ಲಿ ವಿಷ್ಣುಗಣವನ್ನು ತಂದಿದೆ. ಎರಡನೆಯ ಪದ್ಯದಲ್ಲಿ ಸ್ವೀಕೃತವಾಗಿರುವ ಪಾಠಾಂತರದಿಂದಾಗಿ ಬ್ರಹ್ಮಗಣಕ್ಕೆ ಒಂದು ಅಂಶ ಕಡಿಮೆಯಾಗಿ ಅದು ಗಣವೇ ಆಗದೆಹೋಗಿದೆ. ಸಾಂಗತ್ಯದ ಎರಡು ಮತ್ತು ನಾಲ್ಕನೆಯ ಪಾದಗಳ ಕಡೆಯಲ್ಲಿ ಬರುವ ಬ್ರಹ್ಮಗಣಗಳು ನಿಲುಗಡೆಯ ಸ್ಥಾನದಲ್ಲಿ ಬರುವ ಗಣಗಳಾದುದರಿಂದ ಸಾಂಗತ್ಯದ ವಾಚನ ವೈಶಿಷ್ಟ್ಯಕ್ಕೆ ಅತ್ಯಂತ ಅಗತ್ಯವಾದ

ಗಣಗಳು. ಅವು ಸ್ವರೂಪಗೆಟ್ಟಾಗ ವಾಚನರೀತಿಗೇ ಕುಂದುಂಟಾಗುತ್ತದೆ ಎನ್ನುವುದನ್ನು ಗಮನಿಸಬೇಕು.

'ಹರಿಶ್ಚಂದ್ರ ಕಾವ್ಯ'ದ ದ್ವಾದಶಸ್ಥಲದಲ್ಲಿ ಬರುವ ಮಂದಾನಿಲ ರಗಳೆಯಿಂದ ಒಂದು ಪಾಠದ ಲಯಸಾಧುತ್ವವನ್ನು ಇಲ್ಲಿ ವಿಚಾರ ಮಾಡಬಹುದು.[21] ಸಂಪಾದಕರು ಒಪ್ಪಿರುವ ಪಾಠ ಹೀಗಿದೆ:

೧ ಏನೇನವಸ್ಥೆ ಬಂದಡೆಯಿಂಬಿಡಲು ೧
೨ತಾನೇ ಬಂದುದು ಇಳೆ ನಾಂ ಬಿಡಲು೨

ಮೇಲಿನ ಸಾಲುಗಳಿಗಿರುವ ಪಾಠಾಂತರಗಳು ಹೀಗಿವೆ:

೧ ನಾನಾವಸ್ಥೆಗಳಂ ನೀ ಪಡಲು (ರಾ)
ಏನವಸ್ಥೆ ಬಂದಡೆಯಿಂಬಿಟ್ಟೆ. (ನ)
೨ ತಾನೇ ಬಂದುದು ವಿಧಿ ಬೆಂಗುಡಲು (ರಾ)
ನೀನೇ ಗತಿಯೆನುತಿರ್ದೆನು ಕೆಟ್ಟೆ (ನ, ಬ)

ಸಂಪಾದಕರು ಸ್ವೀಕರಿಸಿರುವ ಪಾಠದಲ್ಲಿ ಮೊದಲ ಪಾದ ಲಯದ ದೃಷ್ಟಿಯಿಂದ ದೋಷಯುತವಾಗಿದೆ. ರಚನೆ ಮಂದಾನಿಲ ರಗಳೆಯಲ್ಲಿರುವುದರಿಂದ ಇದರ ಪ್ರತಿ ಪಾದದಲ್ಲಿಯೂ ೪ ಮಾತ್ರೆಯ ೪ ಗಣಗಳಿರಬೇಕು. (ಈ ನಿರ್ದಿಷ್ಟ ನಿದರ್ಶನದಲ್ಲಿ ಪಾಠದ ಕಡೆಯ ಗಣ ಮೂರು ಮಾತ್ರೆಗಳದ್ದಾದರೂ ತಪ್ಪಿಲ್ಲ. ಕಡೆಯ ಅಕ್ಷರವನ್ನು ಎಳೆದು ಹೇಳಿಕೊಳ್ಳುವುದರ ಮೂಲಕ ಅದನ್ನು ಸರಿಮಾಡಿಕೊಳ್ಳಬೇಕು.) ಆದರೆ ಸಂಪಾದಕರ ಪಾಠದಲ್ಲಿ ಕಡೆಯ ಗಣ ಐದುಮಾತ್ರೆಯ ಗಣವಾಗುತ್ತದೆ. ಆದ್ದರಿಂದ ಲಯ ಕೆಡುತ್ತದೆ. ಸಂಪಾದನೆಗೆ ಬಳಸಿದ ೯ ಪ್ರತಿಗಳನ್ನೂ ಸಂಪಾದಕರು ವರ್ಣಿಸಿದ್ದಾರೆ. ಆ ಪ್ರಕಾರ 'ನ' ಮತ್ತು 'ರಾ' ಗಳೆರಡೂ ಉತ್ತಮ ಪ್ರತಿಗಳು ಎನ್ನಬಹುದು. ಎರಡರಲ್ಲಿಯೂ ಶಕಟರೇಫದ ಸಮರ್ಪಕವಾದ ಬಳಕೆಯಿದೆ. ಅಂಥ ಪ್ರತಿಗಳ ಪಾಠವನ್ನು, ಆ ಪಾಠ ಸಮರ್ಪಕವಾಗಿದ್ದರೂ, ಏಕೋ ಸಂಪಾದಕರು ಅಡಿಟಿಪ್ಪಣಿಯಲ್ಲಿ ಕಾಣಿಸಿದ್ದಾರೆ. ಸಂಪಾದಕರ ಪಾಠವನ್ನು ನ, ರಾ ಪ್ರತಿಗಳ ಬಲದ ಮೇಲೆ ಉತ್ತಮಪಡಿಸಲು ಸಾಧ್ಯ.

ನಾನಾವಸ್ಥೆಗಳಂ ನೀ ಪಡಲು
ತಾನೇ ಬಂದುದು ವಿಧಿ ಬೆಂಗುಡಲು

ಎಂದಾಗಲೀ

ಏನವಸ್ಥೆ ಬಂದಡೆಯಿಂಬಿಟ್ಟೆ
ನೀನೇ ಗತಿಯೆನುತಿರ್ದೆನು ಕೆಟ್ಟೆ

ಎಂದಾಗಲೀ ಇಟ್ಟುಕೊಂಡರೆ ಪಾಠ ಛಂದೋಬದ್ಧವಾಗುತ್ತದೆ. ಸಂಪಾದಕರ ಪಾಠವಲ್ಲಿ ಮೊದಲ ಸಾಲಿನ ಅರ್ಥಕ್ಕೂ ಎರಡನೆಯದಕ್ಕೂ ಹೊಂದಿಕೆಯಿಲ್ಲ. ಆ ದೋಷವೂ ಇದರಿಂದ ನಿವಾರಣೆಯಾಗುತ್ತದೆ.

ಒಮ್ಮೊಮ್ಮೆ ಕಾವ್ಯಪ್ರಂದರ ಒಂದೇ ಹಸ್ತಪ್ರತಿ ಸಿಕ್ಕಿದ್ದು ಪಚ್ಚಿನ ಹಸ್ತಪ್ರತಿಗಳು ಸಿಗುವ ಸಂಭವವಿರುವುದಿಲ್ಲ. ಆಗ ಸಂಪಾದಕ ಅದರ ಸಾಮಾನ್ಯ ಸ್ಖಾಲಿತ್ಯಗಳನ್ನು ಸರಿಪಡಿಸಿ ಅದನ್ನು ಅಚ್ಚುಹಾಕಬೇಕಾಗುತ್ತದೆ. ಎಲ್ಲಿಯಾದರೂ ಪಾಠ ಕೊಂಚ ಲೋಪವಾಗಿದೆಯೆನಿಸಿದರೆ ಎಲ್ಲ ದೃಷ್ಟಿಯಿಂದ ಅಲ್ಲಿಗೆ ಹೊಂದುವಂತಹ ಪಾಠವನ್ನು ಕಂಸವಲ್ಲಿ ಕೊಡಬೇಕು. ಆದರೆ ಮಧುರ ಕವಿಯ 'ಧರ್ಮನಾಥ ಪುರಾಣ'ವನ್ನು ಸಂಪಾದಿಸಿರುವ ವಿದ್ವಾಂಸರು ಕೆಲವು ಕಡೆ ಪಾಠ ಛಂದೋಹೀನವಾಗಿದ್ದರೂ ಹಾಗೆಯೇ ಅಚ್ಚುಹಾಕಿದ್ದಾರೆ. ಅವರು ಅಲ್ಲಿಯ ದೋಷವನ್ನು ಗಮನಿಸಿಯೇ ಇಲ್ಲವೋ ಅಥವಾ ಗಮನಿಸಿಯೂ ಹಾಗೇ ಬಿಟ್ಟಿದ್ದಾರೋ ತಿಳಿಯದು. ಅಲ್ಲಿಯ ಲೋಪವನ್ನು ಯಾವುದಾದರೂ ರೀತಿಯಲ್ಲಿ (ಕಡೆಯಪಕ್ಷ ಅಡಿಟಿಪ್ಪಣಿಯಲ್ಲಿ) ಅವರು ಸೂಚಿಸಬಹುದಾಗಿತ್ತು. ಹಾಗೆ ಮಾಡದಿರುವುದರಿಂದ ಆ ಲೋಪ ಅವರ ಗಮನಕ್ಕೆ ಬಂದಿಲ್ಲವೆನ್ನಿಸುತ್ತದೆ. ಪದ್ಯ ಹೀಗಿದೆ:

ಮೃಗಶಿಶು ನಯನೆಯ ನಚ್ಚಿನ
ಮೊಗಮಂ ಕಂಡು ಕಂಡು ಸೈರಿಸದೆ ಸಮಂ
ತೊಗೆದ ಕಳಂಕದ ನೆವದಿಂ
ಮೃಗಧರನೆರ್ದೆ ಪೊತ್ತಿ ಪೊಗೆವುತಿರ್ಪುದಿನ್ನು[22]

ಎರಡನೆಯ ಸಾಲಿನ ಮೊದಲ ನಾಲ್ಕುಮಾತ್ರೆಯ ಗಣದ ಅನಂತರ ಎರಡು ಮಾತ್ರೆಗಳಷ್ಟು ಪಾಠ ಬಿಟ್ಟುಹೋಗಿದೆ. ಕಡೆಯ ಪಾಠದ ಕಡೆಯ ಗಣ ಸಹ ಛಂದೋದೋಷಕ್ಕೆ ಗುರಿಯಾಗಿರುವುದು ಕಾಣುತ್ತದೆ. ಆ ಜಾಗಗಳನ್ನು ಸರಿಪಡಿಸಿ ಹೀಗೆ ಬರೆಯಬಹುದು:

ಮೃಗಶಿಶು ನಯನೆಯ ನಚ್ಚಿನ
ಮೊಗಮಂ [ತಾಂ] ಕಂಡು ಕಂಡು ಸೈರಿಸದೆ ಸಮಂ
ತೊಗೆದ ಕಳಂಕದ ನೆವದಿಂ
ಮೃಗಧರನೆರ್ದೆ ಪೊತ್ತಿ ಪೊಗೆವು[ತಿರ್ದಪುದಿನ್ನುಂ]

ಅದೇ ರೀತಿಯಲ್ಲಿ—

ತೆಗೆದುಪ್ಪೋ ಕೇದಗೆಯ ಮಿಜುಪುಗರಿಗಳ ಚೆಲ್ವಂ[23]

ಎನ್ನುವುದನ್ನು—

ತೆಗೆದುಪ್ಪೊ ಕೇದಗೆಯ ಮಿಜುಪುಗರಿಗಳ ಚೆಲ್ವಂ

ಎಂದು ಸರಿಪಡಿಸಬಹುದಾಗಿತ್ತು.[24]

ಹಸ್ತಪ್ರತಿಯಲ್ಲಿ ಪಾಠ ಸರಿಯಾಗಿದ್ದರೂ ಸಂಪಾದಕರು ಅದನ್ನು ಲಯ ಕೆಡಿಸಿ ಅಚ್ಚಿಟ್ಟಿರುವುದೂ ಉಂಟು. ಒಂದು ಸಾಂಗತ್ಯ ಪದ್ಯ ಹೀಗೆ ಅಚ್ಚಾಗಿದೆ :

ಸುರುಚಿರ ನಂದನವನ ಸರಸಿಗಳು
ಪುರವ ಬಳಸಿ ಒಪ್ಪುತಿಹವು
ಪರಿಖೆ ಬಳಸೆ ಕೋಟೆಯರಮನೆ
ಕರುಮಾಡ ಸುರರಾಜ ಗೃಹವೆಂದೆನಿಸಿ[25]

ಕಡೆಯ ಚರಣದ ಆರಂಭದಲ್ಲಿರುವ 'ಕರುಮಾಡ' ಎಂಬ ಪದ ಅದರ ಹಿಂದಿನ (ಎಂದರೆ ಮೂರನೆಯ) ಚರಣದ ಕಡೆಯಲ್ಲಿ ಬರಬೇಕಾದ ವಿಷ್ಣುಗಣ ಕರುಮಾಡದ ಪದದಲ್ಲಿರುವ ರಕಾರವನ್ನು ಪ್ರಾಸಾಕ್ಷರವೆಂದು ಭಾವಿಸಿಯೋ ಏನೋ ಸಂಪಾದಕರು ಅದನ್ನು ನಾಲ್ಕನೆಯ ಸಾಲಿನಲ್ಲಿ (ಪ್ರಾಸಕ್ಕೆ ಹೊಂದುವ ರೀತಿಯಲ್ಲಿ ಇಟ್ಟಿದ್ದಾರೆ. ಎಂದರೆ ಈ ಭಾಗದಲ್ಲಿ ಅವರು ಪದ್ಯದ ಓಟವನ್ನು ಗಮನಿಸಿದಂತೆ ಕಾಣುವುದಿಲ್ಲ. ಅದು ಇರಬೇಕಾಗಿದ್ದ ರೀತಿ :

ಸುರುಚಿರ ನಂದನವನ ಸರಸಿಗಳು
ಪುರವ ಬಳಸಿ ಒಪ್ಪುತಿಹವು
ಪರಿಖೆ ಬಳಸೆ ಕೋಟೆಯರಮನೆ ಕರುಮಾಡ
ಸುರರಾಜ ಗೃಹವೆಂದೆನಿಸಿ

ಸಂಪಾದಕರು ಕವಿ ಬಳಸಿರುವ ಛಂದೋವಿಧಾನಕ್ಕೆ ಕಿವಿಯನ್ನು ಚುರುಕುಗೊಳಿಸಿಕೊಂಡಿಲ್ಲದಿದ್ದಲ್ಲಿ ಇಂಥ ದೋಷಗಳು ಮತ್ತೆ ಮತ್ತೆ ಕಾಣಿಸಿಕೊಂಡು ಸಂಪಾದನ ಕಾರ್ಯವೇ ಅಸಮರ್ಪಕವೆನಿಸಿಕೊಳ್ಳುವ ಘಟ್ಟಕ್ಕೆ ಹೋಗಬಹುದು ಎನ್ನಲು ಮೇಲಿನ ಗ್ರಂಥದಿಂದಲೇ ಇನ್ನೆರಡು ನಿದರ್ಶನಗಳನ್ನು ಕೊಡಬಹುದು :

ಚಾಗಿ ۥಸತ್ಯಾಗಳೆۥ ಕಾಳಂಗದೊಳ್ಪಂಜೆಮ್ಮೆ
ಮಾಗಿರೆಯದ ಪೇಟಿೀವರದ
ಸಾಗಿಬಂದುಜ್ಜೈನಿಗಾಗ ಬಂಜೆಯ ಬಿಕೆ
ಪೋಗಿ ಮುಳುಗೆ ಸಿಂಪಾನದಿಯ[26]

ۥಸತ್ಯಾಗۥ (ಜ)

ಚಂದದಾಶ್ವೈಜ ಮಾಸದ ಶುಕ್ಲ ಪಕ್ಷದೊ
ಳೊಂದಿ ಭೌಮಾಷ್ಟಮಿಯಂದು
ಕುಂದದೆ ಜಾತ್ರೆಯಾನಂದ ۥದಿಂದಿಲ್ಲಿۥ ಮಾಡಿ
ಯೆಂದು ನೃಪತಿ ಪ್ರಜೆಗೆಂದ[27]

ۥದಿಂದಲಿۥ (ಜ)

ಮೇಲಿನ ಎರಡು ಪದ್ಯಗಳ ಅಂಗೀಕೃತ ಪಾಠಗಳಲ್ಲಿಯೂ ಛಂದೋದೋಷ ವಿದ್ದು ಅಡಿ ಟಿಪ್ಪಣಿಯಲ್ಲಿ ಕೊಟ್ಟಿರುವ 'ಜ' ಪ್ರತಿಯ ಪಾಠಾಂತರಗಳೇ ಸಮರ್ಪಕ ವಾಗಿವೆ.

ಕೇಶಿರಾಜನು ತನ್ನ 'ಶಬ್ದಮಣಿದರ್ಪಣ'ದಲ್ಲಿ ಲಕ್ಷ್ಯಗಳ ಸಲುವಾಗಿ ಅನ್ಯರ ಕಾವ್ಯಗಳಿಂದ ಆಯ್ದು ಅನೇಕ ಪ್ರಯೋಗಗಳನ್ನು ಬಳಸಿದ್ದಾನಷ್ಟೆ. ಹಾಗೆ ಲಕ್ಷ್ಯಕ್ಕೆ ಬಳಸಿದ ಪ್ರಯೋಗಗಳಲ್ಲಿ ಇಡಿ ಪದ್ಯಗಳೂ ಇವೆ. ಆದರೆ ಹೆಚ್ಚು ಕಡೆ ಲಕ್ಷ್ಯಾಂಶಕ್ಕೆ ಸಂಬಂಧಿಸಿದ ಭಾಗ ಬರುವ ಪಾದ ಅಥವಾ ವಾಕ್ಯಗಳನ್ನುಳಿಸಿಕೊಂಡು ಪದ್ಯದ ಉಳಿದ ಭಾಗವನ್ನು ಬಿಟ್ಟಿರುವುದೂ ಕಾಣುತ್ತದೆ. ಇದನ್ನು ಕೇಶಿರಾಜನೇ ಮಾಡಿದ್ದನೋ ಅಥವಾ ಅವನ ಮುಂದಿನವರು ಮಾಡಿದರೋ ತಿಳಿಯದು. ಅದು ಹೇಗೇ ಇರಲಿ. ದರ್ಪಣದ ಸಂಪಾದಕರು ಈ ಪ್ರಯೋಗಗಳನ್ನು ತೋರಿಸುವಾಗ ಅವುಗಳ ಛಂದೋವಿನ್ಯಾಸಕ್ಕೆ ಅನುಗುಣವಾಗಿ ಅಚ್ಚುಮಾಡುವುದು ಸರಿಯಾದುದು. ಡಿ. ಎಲ್. ಎನ್. ತಾವು ಸಂಪಾದಿಸಿರುವ 'ಶಬ್ದಮಣಿದರ್ಪಣ'ದಲ್ಲಿ ಎಲ್ಲ ಕಡೆ ಹಾಗೆಯೇ ಮಾಡಿದ್ದಾರೆ. ಉದಾ :

ಪಗಲಿನ ರವಿಕಿರಣಂಗಳೆ
ಮಗುಳ್ದಿ[illegible]ಗಳ್ . . . . . (ಕಂದ)

. . . . . . ನೆರೆದರಸುಗ
ಳಸಿಬರ[illegible]ಯ್ದು ಗೆಲ್ದನೊರ್ಬನೆ ಪಾರ್ಥಂ (ಕಂದ)

. . . [illegible]ಬಿಂಬದ ಮೊಲಂ ಕಲಿ ಮೂಕವರಾಹನಗ್ನಿಮಿ
ತ್ರನ ಪ[illegible] ವಿನಾಯಕನ ಮೂಷಕಂ . . . . . . (ಚಂಪಕ ಮಾಲೆ)

ಆದರೆ ಕೆಲವು ಕಡೆ ಅವರು ಪ್ರಯೋಗಗಳನ್ನು ಅಚ್ಚಿಟ್ಟಿರುವ ರೀತಿ ಅವುಗಳ ಲಯ ವಿನ್ಯಾಸಕ್ಕೆ ಸರಿಯಾಗಿ ಇಲ್ಲ. ಉದಾಹರಣೆಗೆ ಒಂದೆರಡನ್ನು ನೋಡಬಹುದು. ಮೊದಲು ಡಿ.ಎಲ್.ಎನ್. ಅವರು ಪ್ರಯೋಗಗಳನ್ನು ಮಂಡಿಸಿರುವ ರೀತಿಯನ್ನು ತೋರಿಸಿ ಅನಂತರ ಅವು ಇರಬೇಕಾದ ರೀತಿಯನ್ನು ತೋರಿಸಿದೆ.

I ೧೬೪ ನೆಯ ಸೂತ್ರಕ್ಕೆ ಕೊಟ್ಟಿರುವ ಎರಡನೆಯ ಕಾವ್ಯಪ್ರಯೋಗ. ಅದು ಅಚ್ಚಾಗಿರುವ ರೀತಿ :

'ವಿಚಾರಿಸದುಂತೆ ಪೊಸಂಬರೊತ್ತೆಯಂ ಕೊಳ್ವುದು ತಕ್ಕುದಲ್ತು'

ಇರಬೇಕಾದ ರೀತಿ :

x x x x x x x x ವಿಚಾರಿಸದುಂತೆ ಪೊಸಂಬರೊತ್ತೆಯಂ
ಕೊಳ್ವುದು ತಕ್ಕುದಲ್ತು x x x x x x x x x x x x x
(ಉತ್ಪಲಮಾಲೆ)

II ೧೯೯ನೆಯ ಸೂತ್ರಕ್ಕೆ ಕೊಟ್ಟಿರುವ ಆರನೆಯ ಪ್ರಯೋಗ. ಇರುವ ರೀತಿ :

‘ಆವ ರೀತಿ ಪೇೞಿಂದೊಡೆ ಬಯ್ಸರೀಗಳನ ದೇಸಿಗೆ ವಿಬ್ದಿ ಮಹಾಕವೀಶ್ವರರ್’

ಇರಬೇಕಾದ ರೀತಿ :

x x x x x x x x x x x x x x x ಆವ ರೀತಿ ಪೇ
ೞಿಂದೊಡೆ ಬಯ್ಸರೀಗಳನ ದೇಸಗೆ ವಿಬ್ದಿ ಮಹಾಕವೀಶ್ವರರ್
(ಉತ್ಪಲ ಮಾಲೆ)

III ೧೦೮ನೆಯ ಸೂತ್ರಕ್ಕೆ ಕೊಟ್ಟಿರುವ ಒಂದನೆಯ ಪ್ರಯೋಗ ಅಚ್ಚಾಗಿರುವ ರೀತಿ :

ಕಾರ್ಯವಿಚಾರ ಕೋವಿದರಿರ್ಪ ಪೆೞಿಪ್ದಿಡೇಂ ಬೇಸರವಾಗದು
ನೀತಿಮಾರ್ಗದೊಳ್.

ಇರಬೇಕಾದ ರೀತಿ :

x x x x x x x x x x x x ಕಾರ್ಯವಿಚಾರ [ಮಂತ್ರಿಗಳ್]
ಕೋವಿದರಿರ್ಪ ಪೇೞಿಪ್ರ[ರೆನೆ] ಬೇಸರವಾಗದು ನೀತಿಮಾರ್ಗದೊಳ್.[28]
(ಉತ್ಪಲ ಮಾಲೆ)

ಡಾ|| ರಂ. ಶ್ರೀ. ಮುಗಳಿಯವರು ಈಚಿಗೆ ಹೆಳವನಕಟ್ಟೆ ಗಿರಿಯಮ್ಮನ ‘ಬ್ರಹ್ಮ ಕೊರವಂಜಿ’ ಎಂಬ ಪುಟ್ಟ ಕೃತಿಯನ್ನು ಸಂಪಾದಿಸಿದ್ದಾರೆ.[29] ಅದರ ನಾಲ್ಕನೆಯ ಚರಣದಲ್ಲಿ ಅವರು ಸ್ವೀಕರಿಸಿರುವ ಪಾಠಾಂತರವೊಂದನ್ನು ಇಲ್ಲಿ ಗಮನಿಸಬಹುದು. ಪದ್ಯ ಹೀಗಿದೆ. (ಚರ್ಚೆಗೆ ಬೇಕಾಗುವ ಪಾಠಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ.)

ಕನ್ನಡಿಯ ಪಿಡಿದೆಡೆಯೆ ೧ ಕದಪು ಕಂಗಳಲಿ ಎಸೆಯೆ ೨
ಕರ್ಣಕುಂಡಲದ ಸಂಪಿಗೆಯ ನಾಸಿಕದಾ
ರನ್ನತುಟಿ ಝಗಝಗಿಸೆ ಕುಡಿಹುಬ್ಬುಗಳು ಎಳೆಯ
ಮನ್ಮಥನ ಚಾಪದಂತೆಸೆವ ಮೂರುತಿಯಾ

೧ ಕನ್ನಡಿಗಳನೆ ಪೋಲ್ವಾ (ಕ)
ಕಂನಡಿನಮು ಪಳೆದುಳಿಪ (ಗ)

೨ ಕದಪು ಕಂಗಳ ಥಾಳ (ಕ)
ಕದಪು ಕಂಗಳ ಚಲ್ವು (ಗ)
ಕದಪು ಕಂಗಳು ಎಸೆಯೆ (ಜ)

ಪಾಠಾಂತರದ ಆಯ್ಕೆಯಲ್ಲಿ ಸಂಪಾದಕರ ಉತ್ತಮ ಕಾವ್ಯಾಭಿರುಚಿ, ಕೌಶಲ್ಯ ಕಾಣುತ್ತವೆ. 'ಕನ್ನಡಿಯ ಪಿಡಿದೆಡೆಯೆ' ಎಂಬ ಪಾಠವನ್ನು ಅದಕ್ಕಿರುವ ಇತರ ಪಾಠಾಂತರಗಳೊಂದಿಗೆ ಹೋಲಿಸಿದರೆ ಅದು ಕೊಂಚ ಕ್ಲಿಷ್ಟವಾದ ಮತ್ತು ಅರ್ಥ ಮನೋಹರವಾದ ಪಾಠ ಎನಿಸುತ್ತದೆ. ಕೃಷ್ಣನ ಮುಖಕ್ಕೆ ಕನ್ನಡಿ ಹಿಡಿದಾಗ ಅದು ಕನ್ನಡಿಯಲ್ಲಿ ಬೆಳಗುವುದಿರಲಿ, 'ಕನ್ನಡಿಯ ಹಿಡಿದೆಡೆಯೆ' ಅವನ ಕೆನ್ನೆ ಕಣ್ಣುಗಳಲ್ಲಿ ಪ್ರತಿಫಲಿತವಾಗುವುದಂತೆ. ಪಾಠದ ಕ್ಲಿಷ್ಟತೆ ಮತ್ತು ಅರ್ಥವಿಶೇಷತೆಗಳೆರಡನ್ನೂ ಗಮನಿಸಿ ಅದು ಮೂಲಕ್ಕೆ ಸಮೀಪವಾದದ್ದೆಂದು ಮುಗಳಿಯವರು ತೀರ್ಮಾನಿಸಿರುವುದು ಸಾಧುವಾಗಿಯೇ ಇದೆ. ಆದರೆ 'ಕದಪು ಕಂಗಳಲಿ' ಎನ್ನುವ ಮಾತು ಮಾತ್ರ (ಪಾದವೊಂದೊಂದರಲ್ಲಿಯೂ ಐದು ಮಾತ್ರೆಗಳ ನಾಲ್ಕು ಗಣಗಳಿರುವ) ಈ ಪದ್ಯಕ್ಕೆ[30] ಲಯದ ನೆಲೆಯಲ್ಲಿ ಹೊಂದಿಕೆಯಾಗುವುದಿಲ್ಲ. ಆದ್ದರಿಂದ ಮೊದಲ ಪಾದವನ್ನು

'ಕನ್ನಡಿಯ ಪಿಡಿದೆಡೆಯೆ ಕದಪು ಕಂಗಳಲೆಸೆಯೆ'

ಎಂದು ಮಾರ್ಪಡಿಸಬಹುದೇನೋ ಎನ್ನಿಸುತ್ತದೆ.

ಈಚೆಗೆ ಮೊದಲ ಬಾರಿಗೆ ಸಂಪಾದನೆಗೊಂಡು ಪ್ರಕಟವಾದ 'ಶಂಭುಜನೋದ್ಭವ ಕಾವ್ಯ'ದ ಹಲವು ಪದ್ಯಗಳಲ್ಲಿ ಸಂಪಾದಕರಿಂದಾಗಿ ಛಂದೋದೋಷಗಳು ಉಂಟಾಗಿರುವುದು ಕಾಣುತ್ತದೆ. ಒಂದೆರಡನ್ನು ಇಲ್ಲಿ ನೋಡಬಹುದು. ಸಂಪಾದಕರು ಈ ಕಾವ್ಯದ ೪೭ನೆಯ ಪದ್ಯದ ಉತ್ತರಾರ್ಧವನ್ನು ಹೀಗೆ ಕೊಟ್ಟಿದ್ದಾರೆ:

ನೋಡುತಿದ್ದರು ಜನರು ಜಿನರ
ಕೊಂಡಾಡುತಿದ್ದರು ಕಿನ್ನರರು[31]

ವಾಸ್ತವವಾಗಿ ಕೊನೆಯ ಪಾದದಲ್ಲಿರುವ 'ಕೊಂಡಾಡುತಿದ್ದರು' ಎಂಬ ಪದದ ಮೊದಲ ಅಕ್ಷರ ಹಿಂದಿನ ಪಾದದ ಕಡೆಯಲ್ಲಿ ಇರಬೇಕು. ಆಗ ಮೂರನೆಯ ಪಾದದ ಕಡೆಯ ಗಣ ಆ ಜಾಗದಲ್ಲಿ ಸಾಮಾನ್ಯವಾಗಿ ಬರುವ ವಿಷ್ಣುಗಣವಾಗುತ್ತದೆ; ಮಾತ್ರವಲ್ಲ ನಾಲ್ಕನೆಯ ಪಾದವೂ ಲಯಬದ್ಧವಾಗುತ್ತದೆ. ಈಗಿರುವಂತೆ ನಾಲ್ಕನೆಯ ಪಾದದಲ್ಲಿ ಸಾಮಾನ್ಯವಾಗಿ ಬರಬೇಕಾದುದಕ್ಕಿಂತ ಮೂರು ಅಂಶಗಳು ಹೆಚ್ಚಾಗಿ ಬಂದಿರುವುದಕ್ಕೆ ಸಂಪಾದಕರಿಂದಾದ ತಪ್ಪೇ ಕಾರಣ. ಇಂಥ ತಪ್ಪು ಆಗಿರುವಾಗಲೂ ಅದು ಅವರ ಗಮನಕ್ಕೆ ಬರದಿರಲು ಕಾರಣವೆಂದರೆ 'ಕೊಂಡಾಡು' ಎಂಬ ಪದದಲ್ಲಿನ 'ಡು' ಪ್ರಾಸಕ್ಕೆ ಹೊಂದಿಕೊಂಡುಬಿಟ್ಟಿರುವುದು. ಆದರೆ ಉಳಿದ ಪಾದಗಳಲ್ಲಿ ಪ್ರಾಸದ ಹಿಂದಿನ ಅಕ್ಷರ ದೀರ್ಘವಾಗಿರುವುದನ್ನು ಗಮನಿಸಿದ್ದರೆ, ಅಥವಾ ಪಾದವನ್ನು ಲಯಬದ್ಧವಾಗಿ ಓದಿದ್ದರೆ ಈ ತಪ್ಪು ತಕ್ಷಣ ಪತ್ತೆಯಾಗುತ್ತಿತ್ತು. ಮೇಲಿನ ಉದ್ಧೃತ ಭಾಗ ಇರಬೇಕಾದ ರೀತಿ:

ನೋಡುತಿದ್ದರು ಜನರು ಜಿನರ ಕೊಂ-
ಡಾಡುತಿದ್ದರು ಕಿನ್ನರರು

ಇದೇ ಕೃತಿಯ ಕೆಲವು ಪದ್ಯಗಳ ಮೊದಲ ಮತ್ತು ಮೂರನೆಯ ಪಾದಗಳಲ್ಲಿ ಮುಡಿಯ ಅನಂತರ ಬರಬೇಕಾದ ಲಂಬರೇಖೆಯನ್ನು ಸಂಪಾದಕರು ತಪ್ಪಾದ ಸ್ಥಳದಲ್ಲಿ ಹಾಕಿದ್ದಾರೆ. ಇದರಿಂದ ಪದ್ಯವನ್ನು ತಪ್ಪಾಗಿ ಓದಿಕೊಳ್ಳುವಂತಾಗುತ್ತದೆ.[32] ಲಂಬರೇಖೆಯನ್ನು ತಪ್ಪಾಗಿ ಹಾಕಿರುವುದಕ್ಕೆ ಇಲ್ಲಿ ಒಂದು ಉದಾಹರಣೆಯನ್ನು ಮಾತ್ರ ನೋಡಬಹುದು.

ಅಷ್ಟವಿಧಾರ್ಚನೆಯ ಮಾಡಿ | ತಾವು
ಅಷ್ಟದಿಕ್ಪಾಲಕರೆಲ್ಲ

ಮೇಲಿನ ಸಾಲುಗಳು ಇರಬೇಕಾಗಿದ್ದ ರೀತಿ :

ಅಷ್ಟವಿಧಾರ್ಚನೆಯ | ಮಾಡಿ ತಾವು
ಅಷ್ಟದಿಕ್ಪಾಲಕರೆಲ್ಲ

ಇದೇ ತಪ್ಪು ಆ ಕಾವ್ಯದ ೪೮, ೫೧, ೬೯, ೧೦೧ನೆಯ ಪದ್ಯಗಳಲ್ಲಿಯೂ ಆಗಿವೆ.

## ಟಿಪ್ಪಣಿಗಳು

1. ಡಾ. ಡಿ. ಎಲ್. ನರಸಿಂಹಾಚಾರ್ : ಕನ್ನಡ ಗ್ರಂಥ ಸಂಪಾದನೆ, ಪು. 163
2. ಕ್ಷೇಮೇಂದ್ರ : ಕವಿಕಂಠಾಭರಣ, ಐದನೆಯ ಸಂಧಿ, ಪು. 53 (ಅನು. ಡಾ. ಕೆ. ಕೃಷ್ಣಮೂರ್ತಿ)
3. ಅದೇ, ಪು. 24
4. ಷೆಲ್ಲಿಯ Rosaland and Helen, Daemon of the world, Jullion and Madallo-ಮೊದಲಾದ ಕವಿತೆಗಳಲ್ಲಿ ಕಾಣುವ ಕೆಲವು ಛಂದೋದೋಷಗಳಿಗೆ ಸ್ವತಃ ಕವಿಯೇ ಕಾರಣನಾಗಿದ್ದನೆನ್ನುವುದು ಅವನ ಹಸ್ತಪ್ರತಿಗಳ ಪರಿಶೀಲನೆಯಿಂದ ತಿಳಿದಿದೆ. ಆದರೆ ನಮ್ಮ ಕವಿಗಳು ಅದರಲ್ಲಿಯೂ ಪ್ರಾಚೀನರು ಛಂದೋಪಾಲನೆಯ ವಿಷಯದಲ್ಲಿ ತುಂಬ ಕಟ್ಟುನಿಟ್ಟಾಗಿದ್ದವರು.
5. ಕುಮಾರವ್ಯಾಸ ವ್ಯಾಕರಣವಿಷಯದಲ್ಲಿ ಎಷ್ಟು ಸ್ವಾತಂತ್ರ್ಯ ವಹಿಸುತ್ತಾನೆನ್ನುವುದು ಎಲ್ಲರಿಗೂ ತಿಳಿದೇ ಇದೆ. ಅವನು ಎಗ್ಗಿಲ್ಲದೆ ಬಳಸುವ ಭಾರಿದೇವ, ಇಕ್ಷುದೋಟಿ, ಗಾಳಿಯಾತ್ಮಜ, ಮುಖದಯ್ಯ, ಕಣ್ಣುರಿಗಾರೆ—ಇಂಥ ಹಲವಾರು ಪ್ರಯೋಗಗಳು ಈ ಮಾತಿಗೆ ಸಾಕ್ಷಿ.

6. 'ಕಾವುದಾನತ ಜನವ ಗದುಗಿನ ವೀರ ನಾರಯಣ' ಎನ್ನುವುದು ಕವಿಪಾಠ. ನಾರಾಯಣ ಎಂಬ ಶಬ್ದವನ್ನು ನಾರಯಣ ಇರುವ ಎಡೆಯಲ್ಲಿ ಬಳಸಿದರೆ ಒಂದು ಮಾತ್ರೆ ಹೆಚ್ಚಾಗಿ ಲಯ ಕೆಡುವುದೆಂಬ ಕಾರಣದಿಂದ ನಾರಯಣ ರೂಪವನ್ನೇ ಅವನು ಬಳಸಿದ.

7. ಪಂಪಭಾರತಂ : ಮೈಸೂರು ವಿಶ್ವವಿದ್ಯಾನಿಲಯ, ಆಶ್ವಾಸ 13, ಪದ್ಯ 108

8. ಗದಾಯುದ್ಧ ಸಂಗ್ರಹ : (ಸಂ) ತೀ. ನಂ. ಶ್ರೀಕಂಠಯ್ಯ

9. ಆದಿಪುರಾಣ : (ಸಂ) ಡಾ. ಎಲ್. ಬಸವರಾಜು. (ಚಾರಣಯುಗಳ ದಾನೋತ್ಸವ, 4-99)

10. ಬಸವರಾಜ ದೇವರ ರಗಳೆ : (ಸಂ) ಪ್ರೊ. ಟಿ. ಎಸ್. ವೆಂಕಣ್ಣಯ್ಯ, ಪು. 9–137

11. ಗದಾಯುದ್ಧ ಸಂಗ್ರಹ : (ಸಂ) ತೀ. ನಂ. ಶ್ರೀಕಂಠಯ್ಯ

12. ತೀ. ನಂ. ಶ್ರೀ. : ಸಮಾಲೋಕನ (ಅಪೂರ್ವ ಷಟ್ಪದಿಯ ಲಕ್ಷಣ ಎಂಬ ಲೇಖನದ ಪರಿಶಿಷ್ಟ ನೋಡಿ)

13. ಡಿ. ಎಲ್. ನರಸಿಂಹಾಚಾರ್ : ಪೀಠಿಕೆಗಳು ಲೇಖನಗಳು (ವಾಸನೋಲ್ಲಾಸದಲ್ಲಿ ಛಂದಸ್ಸು)

14. ತ. ಸು. ಶಾಮರಾಯರು : ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (31-2) ಶಾಂತಿನಾಥನ ಸುಕುಮಾರ ಚರಿತೆಯಿಂದ 'ಅದು ಪರಮಾಸ್ಪದ....' ಎಂದು ಆರಂಭವಾಗುವ ಸಂಪೂರ್ಣ ಅಂಶಲಯಘಟಿತವಾದ ಷಟ್ಪದಿಯೊಂದನ್ನು ಕುರಿತು ಲೇಖನವನ್ನು ಪ್ರಕಟಿಸಿದ್ದರು.

15. ಕನ್ನಡ ಕೈಪಿಡಿ (ಕನ್ನಡ ಛಂದಸ್ಸಿನ ಚರಿತ್ರೆ) ; ಪು. 144 (1955ರ ಮುದ್ರಣ)

16. ತೀ. ನಂ. ಶ್ರೀ.ಯವರು ಅಂಶಗಣ ಘಟಿತ ಷಟ್ಪದಿಯ ಸ್ವರೂಪದ ಬಗೆಗೆ ಹೊಸದಾಗಿ ಹೇಳಬೇಕಾದದ್ದು ಏನೂ ಇರಲಿಲ್ಲ ಎಂದು ಶ್ರೀ ಎಂ. ವಿ. ಸೀತಾರಾಮಯ್ಯನವರು ಅಭಿಪ್ರಾಯ ಪಡುತ್ತಾರೆ. ಇದನ್ನು ಒಪ್ಪುವುದು ಕಷ್ಟವಾಗುತ್ತದೆ. ನೋಡಿ : ಶ್ರೀಕಂಠತೀರ್ಥ, (ಕನ್ನಡ ಗ್ರಂಥಸಂಪಾದನೆಗೆ ತೀನಂಶ್ರೀಯವರ ಕೊಡುಗೆ : ಎಂ. ವಿ. ಸೀತಾರಾಮಯ್ಯ) ಪು. 199

17. ಪಿರಿಯ ನೇಮಣ್ಣನ ಯಶೋಧರ ಚರಿತೆ : (ಸಂ) ಶುಭಚಂದ್ರ (ವಿವೇಕ ಪ್ರಕಾಶನ, ಮೈಸೂರು–9) ಪದ್ಯ 47

18. ಸಂಪಾದಕರು ಬಳಸಿರುವ 'ತಣ್ಣೀರಲಿ' ಎಂಬ ಪದ ಮೂಲದಲ್ಲಿ 'ಕಣ್ಣೀರಲಿ' ಎಂದು ಇರಬೇಕು. ಹೂವಿನ ಏಟಿನಿಂದ ನೊಂದ ರಾಣಿಯ ಕಣ್ಣಿನಲ್ಲಿ ನೀರು ಹೊಮ್ಮಿ ಅವಳು ಮೂರ್ಛೆ ಹೋಗಿರಬೇಕು. ಅಲ್ಲದೆ ತಣ್ಣೀರು ಎಂಬ ಮಾತಿಗೆ ಇಲ್ಲಿ ಅರ್ಥದೃಷ್ಟಿಯಿಂದ ಔಚಿತ್ಯವೇನೂ ಇಲ್ಲ. 'ಕಣ್ಣೀರಲಿ' ಎಂಬ ಪಾಠಕ್ಕೆ ಲಿಪಿಕಾರ ಲೇಖನ ಸಂಭಾವ್ಯತೆಯ ಬೆಂಬಲ ಇದೆ ; ಅರ್ಥೌಚಿತ್ಯವೂ ಇದೆ.

19. ಭರತೇಶವೈಭವ : (ಸಂ) ಜಿ. ಬ್ರಹ್ಮಪ್ಪ, ಹಂಪ ನಾಗರಾಜಯ್ಯ, ಕಮಲ ಹಂಪನಾ. (ಅಚ್ಚುಮೆಚ್ಚು ಪ್ರಕಾಶನ, ಬಸವನಗುಡಿ, ಬೆಂಗಳೂರು, 1967) ಶಯ್ಯಾಗೃಹ ಸಂಧಿ, ಪದ್ಯ 7

20. ಅದೇ ಶಯ್ಯಾಗೃಹ ಸಂಧಿ, ಪದ್ಯ 136

21. ಹರಿಶ್ಚಂದ್ರ ಕಾವ್ಯ : (ಸಂ) ಎನ್. ಬಸವಾರಾಧ್ಯ ಮತ್ತು ಎಸ್. ಬಸಪ್ಪ

22. ಧರ್ಮನಾಥಪುರಾಣ : (ಸಂ) ಎಂ. ಸಿ. ಪದ್ಮನಾಭಶರ್ಮ ಮತ್ತು ಜಿ. ಬ್ರಹ್ಮಪ್ಪ. ಪದ್ಯ 3–80

23. ಅದೇ, ಪದ್ಯ. 3–79

24. ಅದೇ ಕಾವ್ಯದಿಂದ ತೆಗೆದ ಇಂಥ ಇನ್ನೊಂದು ನಿದರ್ಶನವನ್ನು ಡಿ. ಎಲ್. ಎನ್. ತಮ್ಮ 'ಕನ್ನಡ ಗ್ರಂಥ ಸಂಪಾದನೆ'ಯಲ್ಲಿ ಕೊಡುತ್ತಾರೆ. ನೋಡಿ: ಕನ್ನಡ ಗ್ರಂಥ ಸಂಪಾದನೆ, ಪು. 112

25. ಪಿರಿಯ ನೇಮಣ್ಣನ ಯಶೋಧರ ಚರಿತೆ : (ಸಂ) ಶುಭಚಂದ್ರ, ಪದ್ಯ 4

26. ಅದೇ, ಪದ್ಯ 80

27. ಅದೇ, ಪದ್ಯ 8

28. ಮುಂತ್ರಿಗಳ್ ಎನ್ನುವುದು ಕೇವಲ ಒಂದು ಊಹಾಪಾಠ. – ∪ – ವಿನ್ಯಾಸದ ಮೂರು ಅಕ್ಷರಗಳು ಆ ಜಾಗದಲ್ಲಿ ಬರಬೇಕು. 'ಪೇಟಿತ್ರೊಡ್ಡಂ' ಎನ್ನುವ ಪಾಠ ತಪ್ಪೆನ್ನುವುದು ಲಯದಿಂದ ತಿಳಿಯುತ್ತದೆ. 'ಡೇಂ' ಎಂಬ ವರ್ಣದ ಬದಲು ಎರಡು ಲಘು ಬರಬೇಕು. ಅರ್ಥಕ್ಕೆ ಹೊಂದುವಂತೆ ಅದನ್ನು 'ರೆನೆ' ಎಂದು ಊಹಿಸಿದೆ.

29. ಸಾಧನೆ, ಸಂಪುಟ 9, ಸಂಚಿಕೆ 1

30. ಎರಡನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಮಾತ್ರ ಕಡೆಯ ಗಣ ಪದ್ಮಗಣ ಆಗಬಹುದು.

31 ಶಂಖಜಿನೋದ್ಭವ ಕಾವ್ಯದ ಛಂದಸ್ಸಿನ ಸಾಮಾನ್ಯ ನಕ್ಷೆ ಹೀಗಿರುತ್ತದೆ :

| | | | | |
|---|---|---|---|---|
| ಹಸ್ತಿನಿ\|ಪದ್ಮಿನಿ\|ಯು\| ಶಂಖಿಣಿ | ವಿ | ವಿ | ಮು | ವಿ |
| ಚಿತ್ತಿನಿ\|ಯರುನೆರೆ\|ದು | ವಿ | ವಿ | ಮು | |
| ಮುತ್ತಿನ\|ಅರತಿ\|ಯ\|ತಂದರು | ವಿ | ವಿ | ಮು | ವಿ |
| ಚಿತ್ತಜ\|ಹರಜಿನ\|ಗೆ | ವಿ | ವಿ | ಮು | |

ವಿಷ್ಣುಗಣದ ಜಾಗದಲ್ಲಿ ಅಪುರೂಪವಾಗಿ ಬ್ರಹ್ಮ ಅಥವಾ ರುದ್ರಗಣ ಬರಬಹುದು. ಒಂದು ಮೂರನೆಯ ಪಾದಗಳ ಕಡೆಯ ವಿಷ್ಣುಗಣದ ಆರಂಭಕ್ಕೆ ಒಂದು ಹುಸಿ ಬರುವುದೂ ಉಂಟು.

32. ಡಾ. ಚಿದಾನಂದಮೂರ್ತಿಯವರು 'ಉಯ್ಯಾಲೆ ಗಣಗಳಿರುವ ಅಪೂರ್ವ ಅಂಶಲಯದ ಧಾಟಿ' ಎಂಬ ತಮ್ಮ ಲೇಖನದಲ್ಲಿ (ಸಾಧನೆ, ಸಂಪುಟ 9 ಸಂಚಿಕೆ 1) ಹೀಗೆ ಮಾಡಿರುವುದನ್ನು ನೋಡಬಹುದು. ಒಂದು ಮತ್ತು ಮೂರನೆಯ ಪಾದಗಳ ಅಂತ್ಯಗಣವನ್ನು ಇಂಥ ಕಡೆಗಳಲ್ಲಿ ಅವರು ಮೂರುಮಾತ್ರೆಯ ಕಾಲವ್ಯಾಪ್ತಿ ಇರುವ ಗಣವಾಗಿ ಭಾವಿಸಿದ್ದಾರೆ.

—o—

# ಕನ್ನಡ ಯಕ್ಷಗಾನ ಕೃತಿಗಳ ಸಂಪಾದನೆ

**ಟಿ. ಕೇಶವ ಭಟ್ಟ**

'ಸಂಪಾದನೆ' ಎಂದರೆ ಪಡೆಯುವುದು, ಗಳಿಸುವುದು ಎಂದು ಪ್ರಸಿದ್ಧಾರ್ಥ. ಆಸ್ತಿ, ವಿದ್ಯೆ, ಉದ್ಯೋಗ, ಧನ, ವಸ್ತು ಮುಂತಾದವುಗಳ ಗಳಿಕೆ ವಾಡಿಕೆಯಾಗಿ ಸಂಪಾದನೆಯೆನಿಸುತ್ತದೆ. ಪಿತ್ರಾರ್ಜಿತದ ಪ್ರಾಪ್ತಿ ಅಥವಾ ತಾನೇತಾನಾದ ಉಪಲಬ್ಧಿ ಸಂಪಾದನೆಯೆನಿಸುವುದಿಲ್ಲ. ಸ್ವಪ್ರಯತ್ನದ ಫಲವಾಗಿ ದೊರೆತುದು ಸಂಪಾದನೆ. ಈ ಅರ್ಥವಲ್ಲಿ ಕೃತಿಗಳ ಸಂಪಾದನೆಯೆಂದರೆ, ಪಡೆದು ಇಟ್ಟುಕೊಳ್ಳುವುದು ಎಂದು ಮಾತ್ರ ಅರ್ಥವಾದೀತು. ಆದರೆ ಈ ಅರ್ಥವನ್ನಿಟ್ಟುಕೊಳ್ಳುವುದು ಅಜ್ಞಾನಿಗಳ ವರ್ತನೆಯಾದೀತು. ಸರಿಯಾಗಿ ಪಡೆಯುವುದು, ಶುದ್ಧಗೊಳಿಸುವುದು ಎಂಬುದೇ ಗ್ರಂಥಸಂಪಾದನೆಯ ನಿಜಾರ್ಥ.

ಪೂರ್ವಕವಿಗಳು ಬರೆದ ಕೃತಿಗಳನ್ನು ಬೇರೆ ಬೇರೆ ಕಾಲದಲ್ಲಿ ಲಿಪಿಕಾರರು ಪ್ರತಿಮಾಡುತ್ತ ಬಂದಿದ್ದಾರೆ. ಪ್ರತಿಮಾಡುವಲ್ಲೆಲ್ಲ ಲಿಪಿಕಾರರ ಕೈಗಳ ಕೇಡಿನಿಂದ, ಅನವಧಾನದಿಂದ ತಪ್ಪುಗಳಾಗುವುದು ಸಹಜ ; ಮೂಲದ ತಿದ್ದುಪಡಿಗಳಾಗುವುದೂ ಉಂಟು ; ಲಿಪಿಕಾರರೇ ಕವಿತೆ ಕಟ್ಟಿ ಸೇರಿಸುವುದೂ ಇಲ್ಲದಿಲ್ಲ. ಇದರಿಂದಾಗಿ ಮೂಲಕೃತಿ ರೂಪಾಂತರವನ್ನು ತಾಳುತ್ತದೆ. ಮುಂದಿನವರಿಗೆ ಶುದ್ಧಮೂಲಪ್ರತಿ ತಿಳಿಯದಂತಾಗುತ್ತದೆ. ಹೀಗಿರುವ ಕೃತಿಯನ್ನು ಹಲವು ಇತರ ಪ್ರತಿಗಳ ಆಧಾರದಿಂದ ವಿವೇಚಿಸಿ, ಮೂಲ ಗ್ರಂಥದ ಶುದ್ಧರೂಪವನ್ನು ನಿರ್ಧರಿಸಿ, ಅದನ್ನು ಓದುಗರಿಗೆ ಒದಗಿಸುವ ಕಾರ್ಯವೇ ಸಂಪಾದನೆ. ಈ ಕಾರ್ಯಕ್ಕಾಗಿ ಅನುಸರಿಸುವ ಹಂತಗಳೆಂದರೆ– ಮೂಲಪ್ರತಿಗಳ ಶೇಖರಣೆ, ಅವುಗಳ ವರ್ಗೀಕರಣ, ಪಾಠಾಂತರಗಳನ್ನು ಲಕ್ಷಿಸಿ ಪಾಠಪರಿಷ್ಕರಣ, ಉನ್ನತ ವಿಮರ್ಶೆ, ಗ್ರಂಥಾಧ್ಯಯನಕ್ಕೆ ವಿವಿಧ ಸೌಕರ್ಯಗಳ ನಿರ್ಮಾಣ– ಎಂಬಿವು. ಈ ಪಂಚಾಂಗದ ನೆಲೆಗಟ್ಟಿನಲ್ಲಿ ಆದ ಗ್ರಂಥ ಮುದ್ರಣ ಪ್ರಕಾಶನಗಳಿಂದ ಕೃತಿಮಂದಿರ ಭವ್ಯವೆನಿಸುತ್ತದೆ ; ಪರಿಪೂರ್ಣವೆನಿಸುತ್ತದೆ.

ಈ ಹಿನ್ನೆಲೆಯಿಂದ, ಇಂದು ಪ್ರಚಲಿತವಾಗಿರುವ ಹಾಗೂ ಮುದ್ರಿತವಾಗಿರುವ ಯಕ್ಷಗಾನ ಕೃತಿಗಳ ಸ್ವರೂಪ ಹೇಗಿದೆ? ಈ ಕ್ಷೇತ್ರದಲ್ಲಿ ಶಾಸ್ತ್ರೀಯವಾಗಿ ಗ್ರಂಥ ಸಂಪಾದನೆ ನಡೆದಿದೆಯೆ? ಇಲ್ಲವೆ? ಯಾಕೆ ನಡೆದಿಲ್ಲ? ಯಕ್ಷಗಾನ ಕೃತಿಗಳ ಸಂಪಾದನೆಯಲ್ಲಿ ತೊಡಕುಗಳೇನು? ಈ ದಿಶೆಯಲ್ಲಿ ಆಗಬೇಕಾದುದೇನು? ಮುಂತಾದ ಅಂಶಗಳನ್ನು ವಿವೇಚಿಸುವುದು ಅವಶ್ಯ.

ಗ್ರಾಂಥಿಕ ಭಾಷೆಯಲ್ಲಿ ರಚಿತವಾದ ಪ್ರಾಚೀನ ಕಾವ್ಯಸಾಹಿತ್ಯಗಳಿಗೆ ಅನ್ವಯಿಸು ವಂತೆ ಸಮಗ್ರವಾಗಿ ಜನಪದ ಸಾಹಿತ್ಯಕ್ಕೆ, ಯಕ್ಷಗಾನ ಕೃತಿಗಳಿಗೆ ಗ್ರಂಥಸಂಪಾದನ ವಿಧಾನಗಳನ್ನು ಅನುಸರಿಸುವುದು ಸುಲಭವಲ್ಲ. ಈ ದಿಶೆಯಲ್ಲಿ ಪ್ರಯತ್ನಮಾಡಿ ದವರೂ ವಿರಳ. ಜಾನಪದ ಸಾಹಿತ್ಯವನ್ನು ಮತ್ತು ಯಕ್ಷಗಾನ ಕೃತಿಗಳನ್ನು ಅಚ್ಚು ಹಾಕಿಸವುದು ಮಾತ್ರವೇ ಸಂಪಾದನೆಯೆನಿಸಿದೆ. ಜನಪದ ಸಾಹಿತ್ಯವನ್ನು ಸಂಪಾ ದಿಸುವುದು ಹೇಗೆ ಎಂಬ ಬಗೆಗೆ ಶ್ರೀ ಕೆ. ಶಿವರಾಮ ಐತಾಳರು ತಮ್ಮ ಪುಸ್ತಕದಲ್ಲಿ ಸ್ವಾನುಭವದಿಂದ ವಿವರಣೆ ಮಾಡಿದ್ದಾರೆ.[1] ಜನಪದ ಗೀತೆಗಳ ಬಗೆಗೆ ವಿವಿಧ ಪಾಠ ಗಳ ಏಕತ್ರ ಸಂಕಲನ, ಪಾಠಗಳ ತೌಲನಿಕ ಅಧ್ಯಯನ, ವಿಮರ್ಶೆಗಳು ಸಾಕಷ್ಟು ನಡೆದಿಲ್ಲ. ಯಕ್ಷಗಾನ ಕೃತಿಗಳ ಪರಿಸ್ಥಿತಿಯೂ ಇದೇ.

ಯಕ್ಷಗಾನ ಕೃತಿಗಳು ಗೇಯ ಸಾಹಿತ್ಯಕ್ಕೆ ಸೇರಿದವು. ಅವುಗಳ ಧಾಟಿ ತಿಳಿಯದವರಿಗೆ, ಲಯ ವಿನ್ಯಾಸ–ತಾಳ ಗೊತ್ತಿಲ್ಲದವರಿಗೆ ಅವನ್ನು ಓದಲು ಕೂಡ ಸಾಧ್ಯವಾಗದು. ಭಾಷಾಪಾಂಡಿತ್ಯ, ಇತರ ಸಾಹಿತ್ಯ ಪರಿಜ್ಞಾನ ಇದ್ದರೂ ಅಂಥವರಿಂದ ಯಕ್ಷಗಾನ ಕೃತಿಗಳ ಸಂಪಾದನೆಯ ಕಾರ್ಯ ಈಡೇರದು. ಅವುಗಳ ಧಾಟಿ, ಲಯ ವಿನ್ಯಾಸಾದಿಗಳನ್ನು ಬಲ್ಲವರು ಸೂಕ್ತ ರೀತಿಯಲ್ಲಿ ಸಂಪಾದಿಸುವ ಕಾರ್ಯಕ್ಕೆ ಹೋಗಿಲ್ಲ. ಒಟ್ಟನಲ್ಲಿ ಎಲ್ಲ ಕನ್ನಡಿಗರಿಗೆ ಓದಲು ಅನುಕೂಲವಾಗುವ ಮಟ್ಟದಲ್ಲಿ ಯಕ್ಷಗಾನ ಕೃತಿಗಳು ಅಚ್ಚಾಗಿಬಂದಿಲ್ಲವೆನ್ನಬಹುದು.

ಯಕ್ಷಗಾನ ಕೃತಿಗಳನ್ನು ದೊಡ್ಡಾಟಕ್ಕೆ ಸಂಬಂಧಿಸಿದವು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಬಡಗು–ತೆಂಕು ತಿಟ್ಟುಗಳಿಗೆ ತಕ್ಕವು ಹಾಗೂ ಓದಲು ಮಾತ್ರ ಒದಗುವಂಥವು–ಎಂದು ವರ್ಗೀಕರಿಸಬಹುದು. ಇವುಗಳಲ್ಲಿ ಬಯಲಾಟ – ತಾಳ ಮದ್ದಳೆಗಳೆಂಬ ಪ್ರಯೋಗಕ್ಕೆ ಅರ್ಹವಾದ ಜನಪ್ರಿಯ ಕೃತಿಗಳು–ಪಾರ್ತಿಸುಬ್ಬನ ಕೃತಿಗಳು, ಮುಂತಾದವು ಹತ್ತಾರು ಪುನರ್ಮುದ್ರಣವಾಗಿ ಪ್ರಚಲಿತವಾಗಿವೆ. ಕರ್ನಾಟಕ ವಿಶ್ವವಿದ್ಯಾಲಯದ ಜನಪದ ಸಾಹಿತ್ಯ ಮಾಲೆಯಲ್ಲಿ ಪ್ರಮೀಳೆ, ಅಲ್ಲಮ ಪ್ರಭು ಮುಂತಾದ ದೊಡ್ಡಾಟ ರೂಪದ ಬಯಲಾಟ ಕೃತಿಗಳು ಅಚ್ಚಾಗಿ ಹೊರ ಬಂದಿವೆ. ಈ ಕೃತಿಗಳಿಗೆ ಪ್ರಸ್ತಾವನೆ, ಅಲ್ಲಲ್ಲಿ ಶಿರೋನಾಮಗಳು, ಲಿಖಿತವಾದ ಪಾತ್ರಸಂವಾದ, ಸೊಗಸಾದ ಮುದ್ರಣ ಎಂಬಿಷ್ಟೇ ಸಂಪಾದನ ಮೌಲ್ಯ. ಇವೇ ಜನಪದ ಸಾಹಿತ್ಯಮಾಲೆಯಲ್ಲಿ 'ಶ್ರೀಕೃಷ್ಣ ಸಂಧಾನ' ಎಂಬ ಯಕ್ಷಗಾನ ಕೃತಿಯೂ ಹೊರಬಂದಿದೆ. ಇದು ದಕ್ಷಿಣ ಕನ್ನಡದಲ್ಲಿ ಪ್ರಚಲಿತವಿರುವ ಕೃತಿ. ಪಾತ್ರ ಸಂವಾದದೊಂದಿಗೆ ಇದು ಅಚ್ಚಾಗಿದೆಯೆಂಬಷ್ಟೇ ಇವರ ಮೌಲ್ಯ. ಇದು ಅಸಂಖ್ಯ ಪಾಠಾಂತರಗಳಿಂದ ಕೂಡಿದ ಕೃತಿ. ಹೀಗಿದ್ದರೂ ಪಾಠಾಂತರಗಳನ್ನು ಗುರುತಿಸಿ, ಶುದ್ಧ ಪಾಠ ನಿರ್ಣಯಿಸಿ ಸಂಪಾದಿಸುವ ಕಾರ್ಯವನ್ನು ಯಾರೂ ಮಾಡಿಲ್ಲ. ಮುದ್ರಿತವಾದ ಪ್ರತಿಯ ಪಾಠ ಮತ್ತು ಪ್ರಚಲಿತವಿರುವ ಇತರ ಶುದ್ಧಪಾಠಗಳಿಗೆ

ಒಂದೆರಡು ಉದಾಹರಣೆಗಳವು–ಶತಾನಂದರೊಡನೆ ಧರ್ಮರಾಯನು ಹೇಳುವ ಮಾತು–ಝಂಪೆತಾಳದ ಪದ್ಯ :

ಅವನಿಯೊಳಗರ್ಧರಾ
ಜ್ಯವನೆಮಗೆ ಕೊಡುಯೆಂದು
ಸುವಿವೇಕದಿಂ ಕೇಳ್ದು
ಜವದಿ ಬಹುದೆಂದ||

ಈ ಪದ್ಯದ ಪೂರ್ವಾರ್ಧದಲ್ಲಿ 'ಅವನಿಯೊಳಗರ್ಧರಾಜ್ಯವನು ಕೊಡುವದೆನುತ್ತ' ಎಂಬ ಪಾಠಾಂತರದ ರೂಪ ಪ್ರಚಲಿತವಾಗಿದೆ. ಮೇಲಿನ ಸ್ವೀಕೃತ ಪಾಠದಲ್ಲಿ 'ಕೊಡುಯೆಂದು' ಎಂಬಲ್ಲಿ ಸಂಧಿದೋಷವಿದೆ. 'ಕೊಡು ಎಂದು' ಎಂದಿರಬೇಕಿತ್ತು. ಇನ್ನೊಂದು ಉದಾಹರಣೆ–

ಪೊರೆಗೈದರಿನ್ನು ಸಂಗರಮುಖದೊಳಲ್ಲದೆನೆ
ಧರಣಿಯನು ಕೊಡೆನೆಂದು ಕುರುರಾಯನಿರಲು (ಮುದ್ರಿತ)

ಪೊರೆಗೈದಲಿನ್ನು ಸಂಗರಮುಖದೊಳಲ್ಲದೆಯೆ
ಧರೆಯ ನಾ ಕೊಡೆನೆಂದು ಕುರುರಾಯನಿರ್ದ (ಪಾಠಾಂತರ)

ಈ ಕೃತಿಯುದ್ದಕ್ಕೂ ಪಾಠಾಂತರವುಳ್ಳ ಪ್ರತಿಗಳಿವೆ. ಅಂತಹ ಮೂಲಪ್ರತಿಗಳನ್ನು ಸಂಗ್ರಹಿಸಿ, ಶುದ್ಧಪಾಠವನ್ನು ನಿರ್ಣಯಿಸುವ ಗ್ರಂಥಸಂಸ್ಕರಣ ಕಾರ್ಯ ಈ ಜನಪ್ರಿಯ ಪ್ರಸಂಗದಲ್ಲಿ ಏನೂ ನಡೆದಿಲ್ಲ.

ಓಲೆಗರಿಯಲ್ಲಿರುವ ಯಕ್ಷಗಾನ ಕೃತಿಗಳ ಪದ್ಯಗಳೆಲ್ಲವೂ 'ದಂಡಾಕಾರ'ವಾಗಿ ಬರೆದುವು. ಕೈಬರಹದ ಕಾಗದ ಪ್ರತಿಗಳೂ ಇರುವುದು ಹೀಗೆಯೆ. ಯಕ್ಷಗಾನ ಪದ್ಯಗಳ ಧಾಟಿ ಬಲ್ಲವರಿಗೆ ಅವನ್ನು ಓದಲು ಗೊತ್ತು. ಭಾಗವತರು ಇಂತಹ ಪುಸ್ತಕಗಳನ್ನು ಓದಿಕೊಂಡು ಹಾಡುತ್ತಿದ್ದರು; ಇಂದಿಗೂ ಹಾಡಬಲ್ಲರು. ಈ ಹಾಡಿನ ಆಧಾರದಿಂದ ಅರ್ಥಧಾರಿಗಳು ಹಾಗೂ ಪಾತ್ರಧಾರಿಗಳು ಸಂವಾದ ನಡೆಸಬಲ್ಲರು. ಯಕ್ಷಗಾನ ಕಲಾವಿದರಿಗೆ ಇದೆಲ್ಲ ಹಾಸುಹೊಕ್ಕು. ಈಚೆಗೆ ಅಚ್ಚಾದ ಯಕ್ಷಗಾನ ಪ್ರತಿಗಳು ಕೂಡ ಪಾದಸೂಚಕವಾಗಿ ಇಲ್ಲ. ಅಲ್ಲಲ್ಲಿ ಭಾಮಿನಿ, ಕಂದ, ಆರ್ಯೆ, ವಾರ್ಧಕ, ದ್ವಿಪದಿ ಎಂಬ ಛಂದಸ್ಸೂಚನೆ ಅಲ್ಲಲ್ಲಿ ಇರುತ್ತದೆ. ರಾಗ–ತಾಳ ಸೂಚಿಯೂ ಇರುತ್ತದೆ. ಪದ್ಯಗಳೆಲ್ಲ ಉದ್ದಕ್ಕೆ ಅಚ್ಚಾಗಿರುತ್ತವೆ. ಪಾದಾಂತ್ಯ ಸೂಚಕವಾಗಿ ನೇರಗೆರೆಗಳಿರುತ್ತವೆ.

ಪಾರ್ತಿಸುಬ್ಬನ 'ಪಂಚವಟಿ ಪ್ರಸಂಗ'ದ ಯಕ್ಷಗಾನ ಕೃತಿಯ ಆಧಾರವುಳ್ಳ, ಸಂಕಯ್ಯ ಭಾಗವತರ 'ತುಳು ಪಂಚವಟಿ' ಯಕ್ಷಗಾನ ಕೃತಿ ಈ ಲೇಖಕನಿಂದಲೆ

ಸಂಪಾದಿತವಾಯಿತು.[2] ನಾಲ್ಕು ಮೂಲಪ್ರತಿಗಳಿಂದ ಪ್ರತಿಯನ್ನು ಸಿದ್ಧಪಡಿಸಲಾಗಿದ್ದಿತು. ಪಾಠಾಂತರಗಳನ್ನು ಕೊಟ್ಟಿದ್ದರೂ ಪ್ರಕಾಶಕರು ಅದು ಅನವಶ್ಯವೆಂದು ಕೈಬಿಟ್ಟರು. ಸ್ವೀಕೃತ ಪಾಠವನ್ನು ಮಾತ್ರ ಅಚ್ಚುಹಾಕಿಸಿದರು. ಪೀಠಿಕೆಯಲ್ಲಿ ಸಂಪಾದಕನ ಈ ಮಾತುಗಳಿವೆ—"ಇದುವರೆಗೆ ಪ್ರಸಂಗಗಳನ್ನು ಪ್ರತಿ ಮಾಡಿದವರೂ ಮುದ್ರಿಸಿದವರೂ ಹೆಚ್ಚಾಗಿ ಪದಗಳನ್ನು ದಂಡಾಕಾರವಾಗಿಯೆ ಕಾಣಿಸುತ್ತಿದ್ದರು. ಇತ್ತೀಚೆಯ ಮುದ್ರಣಗಳಲ್ಲಿ ಕಂದ, ಷಟ್ಪದಿ, ವೃತ್ತಪದ್ಯಗಳನ್ನು ಮಾತ್ರ ಪಾದಾನುಗುಣವಾಗಿ ಕಾಣಿಸತೊಡಗಿದ್ದಾರೆ. ಇದರ ಮುಂದುಹೆಜ್ಜೆಯಾಗಿ ಈ ಪ್ರಸಂಗವನ್ನು ಇಲ್ಲಿ ಪೂರ್ಣವಾಗಿ ಪಾದಾನುಗುಣವಾಗಿ ಸಂಸ್ಕರಿಸಿ ಬರೆದು, ಪದಗಳ ಛಂದಃಸ್ವರೂಪವನ್ನು ಯಥಾಕ್ರಮ ತೋರಿಸಿ, ಓದುಗರಿಗೂ ಹಾಡುಗಾರರಿಗೂ ವಿಮರ್ಶಕರಿಗೂ ಸೌಲಭ್ಯವೊದಗಿಸುವ ದೃಷ್ಟಿಯಿಟ್ಟಿದೆ." ಈ ಮಾತಿನಂತೆ ಅಚ್ಚಾಗದಿರುವುದಕ್ಕೆ ಪ್ರಕಾಶಕರ ಅಚಾತುರ್ಯವೆ ಹೊಣೆಯಾಗಿರುತ್ತದೆ.

ಯಕ್ಷಗಾನ ಕೃತಿಗಳ ರಚನೆಯ ಮುಖ್ಯೋದ್ದೇಶ—ಅವನ್ನು ಬಯಲಾಟ ತಾಳಮದ್ದಳೆಗಳ ಪ್ರಯೋಗಕ್ಕಾಗಿ ಹಾಡುವುದೇ ಆಗಿರುತ್ತದೆ. ಹೀಗಿದ್ದರೂ ಕಾವ್ಯದಂತೆ, ಕೀರ್ತನೆಗಳಂತೆ ಓದಿ ಆನಂದಿಸುವುದಕ್ಕಾಗಿ ರಚಿತವಾದ ಕೃತಿಗಳೂ ಕೆಲವಿವೆ. 'ಮದ್ದಿನ ಪ್ರಸಂಗ' ಅಥವಾ 'ಭೇಷಜ ಪ್ರಸಂಗ' ಎಂಬುದು ಪ್ರಸ್ತುತ ಲೇಖಕನ ವಶದಲ್ಲಿರುವ ಅಂತಹ ಒಂದು ಕೃತಿ ; ಇದು ಅಚ್ಚಾಗಿಲ್ಲ. ಗಿಡಮೂಲಿಕೆಗಳನ್ನು ಯಾವ ಯಾವ ರೋಗನಿವಾರಣೆಗಾಗಿ ಹೇಗೆ ಉಪಯೋಗಿಸಬಹುದು ಎಂಬುದನ್ನು ಯಕ್ಷಗಾನ ಪದ್ಯರೂಪದಲ್ಲಿ ಈ ಕೃತಿ ನಿರೂಪಿಸುತ್ತದೆ. ಓದಿ ಆನಂದಿಸುವುದಕ್ಕಾಗಿ ರಚಿತವಾದ ಇತರ ಯಕ್ಷಗಾನಗಳಲ್ಲಿ ಯಕ್ಷಗಾನ ಗೋವಿನ ಹಾಡು, ಕಾಶ್ಮೀರ ಭೂಪಾಲನ ಚರಿತ್ರೆ, ನಳ ಚರಿತ್ರೆ, ಹನುಮದ್ವಿಲಾಸ—ಮುಂತಾದುವನ್ನು ಹೆಸರಿಸಬಹುದು. ಈ ಕೃತಿಗಳಾವುವೂ ಶಾಸ್ತ್ರೀಯವಾಗಿ ಸಂಪಾದಿತವಾಗಿಲ್ಲ ; ಮುದ್ರಿತವಾಗಿವೆ.

'ಪಾರ್ತಿಸುಬ್ಬನ ಯಕ್ಷಗಾನಗಳು' ಎಂಬ ಯಕ್ಷಗಾನ ಕೃತಿಸಮುಚ್ಚಯ ಈಚೆಗೆ ಪ್ರಕಾಶಿತವಾಯಿತು.[3] ಲಾಕ್ಷಣಿಕವಾಗಿ ಸಂಪಾದಿತವಾದ ಗ್ರಂಥವೆಂದು ಇದನ್ನು ಹೆಸರಿಸಬಹುದು. ಸಂಪಾದಕರಾದ ಕುಕ್ಕಿಲ ಕೃಷ್ಣಭಟ್ಟರು ತಮ್ಮ ಗ್ರಂಥ ಸಂಪಾದನೆಗೆ ಬಳಸಿಕೊಂಡ ಕೈಬರಹದ ಪ್ರತಿಗಳನ್ನೂ ಅಚ್ಚಿನ ಪ್ರತಿಗಳನ್ನೂ ಗ್ರಂಥ ಪೀಠಿಕೆಯಲ್ಲಿ ಉಲ್ಲೇಖಿಸಿ, ತಮ್ಮ ಅನುಸರಣೆಯನ್ನು ಕುರಿತು ಹೀಗೆಂದಿದ್ದಾರೆ—

"ಇವುಗಳಲ್ಲಿರುವ ಪ್ರತಿಯೊಂದೂ ಪಾಠಭೇದಗಳನ್ನು ಗ್ರಂಥಕ್ರಮವಾಗಿ ಕೊಡಲಿಲ್ಲ. ಪ್ರಾರಂಭದಲ್ಲಿ ಆ ಪ್ರಯತ್ನ ಮಾಡಿನೋಡಿದಲ್ಲಿ ಮೂಲಕ್ಕಿಂತ ಟಿಪ್ಪಣಿ ಉದ್ದ ಬೆಳೆಯುವ ಸ್ಥಿತಿ ಬಂದುದರಿಂದ ಅದನ್ನು ಕೈಬಿಡುವುದು ಅನಿವಾರ್ಯವಾಯಿತು. ಹಾಗೂ ತಜ್ಞವಿದ್ವಾಂಸರ ಸಲಹೆಯಂತೆ ಈ ಹಾಡುಗಬ್ಬದಲ್ಲಿ ಅಂಥ ಪರಿಶೋಧನೆ ಅನವಶ್ಯ ಪ್ರಯಾಸವೆಂದೂ ಭಾವಿಸಲಾಯಿತು. ಆದುದರಿಂದ ಅರ್ಥವ್ಯತ್ಯಾಸ

ಕಂಡುಬರುವ ಭಿನ್ನಪಾಠಗಳನ್ನಷ್ಟೇ ಪ್ರಕೃತ ಟಿಪ್ಪಣಿಯಲ್ಲಿ ಕೊಟ್ಟಿದ್ದಾಗಿದೆ. ಓಲೆ ಗ್ರಂಥಗಳಲ್ಲಿರುವ ಪಾಠಾಂತರವನ್ನು (ಓ), ಕಾಗದ ಹಸ್ತಪ್ರತಿಗಳಲ್ಲಿರುವುದನ್ನು (ಕಾ), ಅಚ್ಚಿನ ಪ್ರತಿಗಳಲ್ಲಿರುವುದನ್ನು (ಅ) ಎಂಬ ಸಂಕೇತಾಕ್ಷರಗಳಿಂದ ಸೂಚಿಸಲಾಗಿದೆ. ಪ್ರಕ್ಷಿಪ್ತ ಹಾಗೂ ಇತರ ಗ್ರಂಥಗಳ ಪದ್ಯಗಳೆಂದು ಖಚಿತವಾದವುಗಳನ್ನು ಕಳೆದು ಬಿಡಲಾಗಿದೆ. ಸಂದೇಹಾಸ್ಪದವಾದವುಗಳನ್ನು ಗ್ರಂಥಪಾಠದಲ್ಲಿ [ ] ಕಂಸಗಳೊಳಗೂ ಅಡಿಟಿಪ್ಪಣಿಯಲ್ಲಿಯೂ ಕೊಟ್ಟಿದೆ. ಗ್ರಂಥಪಾಠವು ಓಲೆಪ್ರತಿಗಳದ್ದೇ ಆಗಿದೆ."

ಈ ಗ್ರಂಥಸಂಪಾದನೆಯಲ್ಲಿ ಒಂದು ವೈಶಿಷ್ಟ್ಯವುಂಟು. ಪ್ರತಿಯೊಂದು ತಾಳದ ಪದ್ಯಕ್ಕೂ ತಾಳಾನುಗುಣವಾಗಿ ಗಣ ವಿಭಾಗವಿದೆ. ಆಯಾ ಪದ್ಯ ಯಾರ 'ಅರ್ಥ'ಕ್ಕೆ (ಪಾತ್ರಸಂವಾದಕ್ಕೆ) ಸಂಬಂಧಿಸಿದೆಯೆಂಬ ಸೂಚನೆಯೂ ಉಂಟು. ಹಲವು ಮೂಲ ಕೃತಿಗಳನ್ನು ಪರಿಶೀಲಿಸಿ ಗ್ರಂಥಪರಿಷ್ಕರಣ ಮಾಡಿದ್ದರೂ ಇದಕ್ಕಿಂತ ಸಮರ್ಪಕ ವೆನಿಸಿದ ಪಾಠಾಂತರ ಈ ಸಂಪಾದಕರಿಗೆ ಏಕೆ ಸಿಕ್ಕಲಿಲ್ಲವೆಂದು ಪ್ರಶ್ನಿಸುವಂತಾಗಿದೆ. ಉದಾ : ಪಂಚವಟಿ ಭಾಗದಲ್ಲಿ ಶೂರ್ಪನಖಿಯ ಪ್ರವೇಶದ ಸಂದರ್ಭದ ಪದ್ಯ—

ಆರೆ|ಲೋ ಮನು|ಜಾ—ಈ|ವನಕೆ ಬಂದವ ... || ಪಲ್ಲವಿ ||
ಭಾರಿ ಭಾರಿಗೆ | ಮೆಯ್ಯವಾಸನೆ | ಬೀರುತಿದೆ ಪೊಸ ಗಮಲುಗಳ ಬಲು |
ಧೀರರೆಲ್ಲರು | ಬನ್ನಿ ನಮ್ಮಯ | ಬಾರಣೆಗೆ ತು|ತ್ತಾಗಿ ಬಂದವ ||

ಯಕ್ಷಗಾನ ಕ್ಷೇತ್ರದಲ್ಲಿ ಬಹುಕಾಲದಿಂದ ಕಂಠಗತಮಾಡಿ, ಭಾಗವತರು ಹಾಡುವ ಹಾಗೂ ಕೈಬರಹದ ಈ ಪದ್ಯದ ಸಾಹಿತ್ಯರೂಪ ಹೀಗಿದೆ—

ಆರೆಲೋ ಮನುಜಾ | ಈ ವನದೊಳಿಪ್ಪವ || ಪಲ್ಲವಿ ||
ಬಾರಿಬಾರಿಗೆ ಮೈಯ ವಾಸನೆ
ತೋರುತಿದೆ ಪೊಸತೌತಣಕೆ ನಿಶಿ
ಚಾರರೆಲ್ಲರು ಬನ್ನಿರೆಮ್ಮಯ
ಪಾರಣೆಗೆ ತುತ್ತಾಗಿ ಬಂದವ ||

ಇಂತಹದೆ ಅಲ್ಲಲ್ಲಿಯ ಪಾಠಾಂತರದ ಉದಾಹರಣೆಗಳನ್ನೆಷ್ಟೂ ಕೊಡಬಹುದು. ಈ ಗ್ರಂಥಸಂಪಾದನೆ ಪರಿಪೂರ್ಣವಲ್ಲದಿದ್ದರೂ ಇಷ್ಟೊಂದು ಶ್ರಮದ ಫಲವಾಗಿ ಬೇರೆ ಯಕ್ಷಗಾನ ಕೃತಿ ಯಾವುದೂ ಇತರರಿಂದ ಸಂಪಾದನೆಯಾಗಿಲ್ಲ.

ಯಕ್ಷಗಾನ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಲು ತೊಡಕು ಹೆಚ್ಚು. ಸಂಪಾದಕನು ಸ್ವತಃ ಯಕ್ಷಗಾನ ಪದ್ಯಗಳ ಧಾಟಿ ಹಾಗೂ ತಾಳಗಳ ಮರ್ಮವನ್ನು ತಿಳಿದವನಾಗಿರಬೇಕು. ಭಾಷಾವೈದುಷ್ಯ, ಸಾಹಿತ್ಯಪರಿಜ್ಞಾನಗಳು ಮಾತ್ರ ಸಾಲವು. ಛಂದಸ್ಸು–ತಾಳಗಳ ಪರಿಜ್ಞಾನ ಅನಿವಾರ್ಯ. ಯಕ್ಷಗಾನ ಪ್ರಯೋಗದ ಮಾಹಿತಿ

ಬೇಕೇಬೇಕು. ಈ ಅರಿವು ಇರುವುದರಿಂದ ಪಾರ್ತಿಸುಬ್ಬನ ಕೃತಿಗಳನ್ನು ಸಂಪಾದಿಸಲು ಕುಕ್ಕಿಲ ಕೃಷ್ಣ ಭಟ್ಟರಿಗೆ ಸಾಧ್ಯವಾಯಿತು. ಯಕ್ಷಗಾನ ಸಾಹಿತ್ಯ ನೂರಾರು ಕೃತಿಗಳಿಂದ ಕೂಡಿದೆ. ಅವನ್ನು ಶಾಸ್ತ್ರೀಯವಾಗಿ ಸಂಪಾದಿಸುವ ಆವಶ್ಯಕತೆಯಿದೆ. ಪ್ರತಿಯೊಂದು ಕೃತಿಗೆ ಯೋಗ್ಯವಾದ ಪ್ರಸ್ತಾವನೆ, ಕಥಾಸಾರ, ಕೃತಿವಿಮರ್ಶೆಗಳಿದ್ದರೆ ಹೆಚ್ಚು ಉಪಯುಕ್ತವಾಗುವುದು. ಉತ್ತಮ ಗ್ರಂಥಪಾಠವನ್ನು ಸ್ವೀಕರಿಸಿ, ಇತರ ಪಾಠಗಳನ್ನು ಅಲ್ಲಲ್ಲಿ ಕೊಡುವ ಆವಶ್ಯಕತೆಯಿದೆ. ಯಕ್ಷಗಾನ ಕಲಾಭ್ಯಾಸ ಮಾಡುವವರಿಗೆ, ಇವನ್ನೇ ಒಂದು ಪಠ್ಯವಿಷಯವಾಗಿ ತೆಗೆದುಕೊಂಡು ಉನ್ನತ ವ್ಯಾಸಂಗ ಮಾಡುವವರಿಗೆ, ಇದರಿಂದ ಹೆಚ್ಚಿನ ಸೌಕರ್ಯವಾದೀತು ಎಂಬುದರಲ್ಲಿ ಸಂಶಯವಿಲ್ಲ. ಈ ಕಾರ್ಯ ಇನ್ನುಮುಂದೆ ನಡೆಯಬೇಕು.

## ಟಿಪ್ಪಣಿಗಳು

1. ಕೆ. ಶಿವರಾಮ ಐತಾಳ: 'ದಕ್ಷಿಣ ಕನ್ನಡ ಜನಪದ ಸಾಹಿತ್ಯ' (1971), ಪೀಠಿಕೆ.
2. ಟಿ. ಕೇಶವ ಭಟ್ಟ (ಸಂ.): 'ಪಂಚವಟಿ ರಾಮಾಯಣ', 'ವಾಲಿಸುಗ್ರೀವರ ಕಾಳಗ'; ಪ್ರಕಾಶಕರು: ಜ. ಕೃಷ್ಣಭಟ್ಟ.
3. ಕುಕ್ಕಿಲ ಕೃಷ್ಣಭಟ್ಟ (ಸಂ): ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ, 1975.

—o—

## ಓಲೆಯ ಸೂಡು

ಪ್ರಾಚೀನ ಕರ್ನಾಟಕದ ಶಾಸನಗಳು ಆ ಕಾಲದ ಸಂತೆಗಳಲ್ಲಿ ಮಾರಾಟವಾಗುತ್ತಿದ್ದ ವಿವಿಧ ಸಾಮಗ್ರಿಗಳ ಬಗ್ಗೆ ಮತ್ತು ಅವುಗಳ ಮೇಲೆ ವಿಧಿಸುತ್ತಿದ್ದ ಸುಂಕದ ಬಗ್ಗೆ ನಮಗೆ ಮಾಹಿತಿಯನ್ನು ಒದಗಿಸುತ್ತವೆ. ಈ ರೀತಿಯ ಶಾಸನಗಳಲ್ಲಿ ಒಂದಾದ ಬೆಳಗಾವಿಯ ಕಿ. ಶ. ೧೨೦೪ರ ಶಾಸನವು ತಾಳೆಗರಿಗಳು ಸಂತೆಯಲ್ಲಿ ಮಾರಾಟವಾಗುತ್ತಿದ್ದ ವಿಷಯವನ್ನು ತಿಳಿಸುತ್ತದೆ. ಮುಮ್ಮುರಿದಂಡಿಗಳು ಮೊದಲಾದ ವ್ಯವಹಾರಿಗಳು ವೇಣುಗ್ರಾಮದ ಸಂತೆಯ ಸುಂಕದ ಆದಾಯವನ್ನು ಶಾನ್ತಿನಾಥ ದೇವರ ಬಸದಿಗೆ ಬಿಡುತ್ತಾರೆ. ಅನೇಕ ಸಾಮಗ್ರಿಗಳನ್ನು ಪ್ರಸ್ತಾಪ ಮಾಡುತ್ತಾ "ಓಲೆಯ ಹೇಱಂಗೆ ಓಲೆಯ ಸೂಡೆರಡು ಆ ಹೊಱೆಗೆ ಸೂಡೊಂದು" ಎಂಬುದಾಗಿ ಅಂದು ಓಲೆ ಕಟ್ಟುಗಳ ಮೇಲೆ ವಿಧಿಸಿದ್ದ ಸುಂಕವನ್ನು ತಿಳಿಸುತ್ತದೆ. ಅಂದರೆ ಒಂದು ಓಲೆಗರಿಗಳ ಹೊರೆಗೆ ಎರಡು ಸೂಡನ್ನ ಸುಂಕವಾಗಿಯೂ, ಒಂದು ಹೊರೆ ಓಲೆಗಳಿಗೆ ಒಂದು ಸೂಡನ್ನ ತೆರಿಗೆಯಾಗಿಯೂ ಕೊಡಬೇಕಾಗಿದ್ದಿತು.

('ಶಾಸನ ಸಾಹಿತ್ಯ ಸಂಚಯ'; ಸಂಪಾದಕರು: ಎ. ಎಂ. ಅಣ್ಣಿಗೇರಿ ಮತ್ತು ಮೇವುಂಡಿ ಮಲ್ಲಾರಿ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, 1961. ಪು. 151.)

# ಶಾಸನ ಸಂಪಾದನೆ

---

**ಬಾ. ರಾ. ಗೋಪಾಲ್**

ಇದೊಂದು ಹೊಸ ಶೀರ್ಷಿಕೆ. ಗ್ರಂಥಸಂಪಾದನೆ ಎಂಬುದೊಂದು ಶಾಸ್ತ್ರವೆಂಬುದು ಎಲ್ಲರಿಗೂ ತಿಳಿದ ವಿಷಯವೇ. ಶಿಷ್ಟ ಸಾಹಿತ್ಯದಲ್ಲಿ ಕೃತಿಯ ಮೂಲ ಪಾಠವನ್ನು ಅರಿಯಲು ಮಾಡುವ ಪ್ರಯತ್ನ ಗ್ರಂಥಸಂಪಾದನಕಾರನದು. ಕಾರಣಾಂತರಗಳಿಂದ ಲಭ್ಯವಿರುವ ಹಸ್ತಪ್ರತಿಗಳಲ್ಲಿ ಕಾಣಿಸಿಕೊಳ್ಳುವ ಪಾಠಾಂತರಗಳಲ್ಲಿ ಯಾವುದು ಮೂಲಕೃತಿಗೆ ಅತಿ ಸಮೀಪವಾಗಿದೆ, ನಿಷ್ಕೃಷ್ಟವಾಗಿದೆ ಎಂಬುವನ್ನಾದರೂ ತೋರಿಸುವ ಹೊಣೆಗಾರಿಕೆ ಆತನದಾಗಿರುತ್ತದೆ. ಆದುದರಿಂದ ಆ ಪಾಠಾಂತರಗಳನ್ನು ಪರಿಶೀಲಿಸಿ, ತಾನು ಸ್ವೀಕರಿಸಿದ ಪಾಠಕ್ಕೆ ಸಾಧ್ಯವಾದರೆ ಕಾರಣಗಳನ್ನು ಕೊಡುವುದು ಸಹ ಅವನ ಕರ್ತವ್ಯವಾಗುತ್ತದೆ.

ಆದರೆ 'ಶಾಸನ ಸಂಪಾದನೆ' ಎನ್ನುವುದು ಈ ಉದ್ದೇಶವನ್ನು ಹೊಂದಿಲ್ಲ. ಶಾಸನಸಂಪಾದನೆಯಲ್ಲಿ ಪಾಠಾಂತರದ ಪ್ರಶ್ನೆ ಏಳುವುದೇ ಇಲ್ಲ. ಅನೇಕ ಕಾರಣಗಳಿಂದ ಶಾಸನ ಭಿನ್ನವಾಗಿರುವ ಸಂದರ್ಭಗಳಲ್ಲಿ ಲಭ್ಯವಿರುವ ಅಕ್ಷರವಿನ್ಯಾಸವನ್ನನುಸರಿಸಿ ಅಕ್ಷರ ಯಾವುದಾಗಿರಬಹುದೆಂಬುದನ್ನು ಊಹಿಸಬಹುದಷ್ಟೆ. ಶಾಸನಪಾಠದ ಭಾಗಗಳು ಒಡೆದು ಮುಕ್ಕಾಗಿ ಲಭಿಸದೇ ಇದ್ದ ಸಂದರ್ಭದಲ್ಲಿ ಊಹಾತ್ಮಕವಾಗಿ ಶಾಸನ ಪಾಠವನ್ನು ಪೂರ್ಣಗೊಳಿಸುವ, ತಿದ್ದುವ ಯತ್ನಗಳನ್ನು ಹಲವರು ಮಾಡಿದ್ದಾರೆ. ಆದರೆ ಅದು 'ಶಾಸನಸಂಪಾದನೆ' ಆಗುವುದಿಲ್ಲ.

ಇಲ್ಲಿ ಒಂದು ಮಾತನ್ನು ಗಮನಿಸಬೇಕು. ಶಾಸನ ಎಂಬುದು ವಾಸ್ತವಿಕವಾಗಿ ಒಂದು ದಾಖಲೆ ಪತ್ರ. ಶಾಸನ ಬರೆಯುವಾತ ಕವಿತಾಸಾಮರ್ಥ್ಯವುಳ್ಳವನಾಗಿದ್ದಾಗ ಮಾತ್ರ ಅರಸನ ವಂಶಾವಳಿ, ದಾನಿಯ, ಪ್ರತಿಗ್ರಹಿಯ ವರ್ಣನೆ ಇತ್ಯಾದಿಗಳಿಂದ ತನ್ನ ಶಾಸನವನ್ನು ಕಾವ್ಯರೂಪದಲ್ಲಿ ಸಿದ್ಧಗೊಳಿಸುತ್ತಾನೆ. ೧೦–೧೧ನೆಯ ಶತಮಾನಗಳಲ್ಲಿ ಅರಸನಿಂದ ಇವಕ್ಕಾಗಿ ನಿಯಮಿತರಾದ ಲೇಖಕರು, ಕವಿಗಳು ಆಸ್ಥಾನಗಳಲ್ಲಿ ಕಾಣಿಸಿಕೊಂಡರು. ಎಂತಲೇ ಆ ಮೂರು ನಾಲ್ಕು ಶತಮಾನಗಳಲ್ಲಿ ಶಾಸನ ಸಾಹಿತ್ಯವೆಂಬ ಒಂದು ಪ್ರಕಾರ ಹುಟ್ಟಿಕೊಂಡಿತು. ಇಲ್ಲಿಯೂ ಸಹ ಒಮ್ಮೆ ಒಂದು ಮಾದರಿ ಸಿದ್ಧಗೊಂಡ ಬಳಿಕ, ಅಲ್ಲಿ ಸ್ವಲ್ಪ ಬದಲಾವಣೆಗಳೊಂದಿಗೆ ಇದು ಅಧಿಕೃತ ಮಾದರಿಯಾಗಿ ಉಳಿದುಕೊಂಡು ಬಂದಿದೆ. ಬೇರೆ ಬೇರೆ ಕಡೆಗಳಲ್ಲಿ ಲಭಿಸಿರುವ ಶಾಸನಗಳಲ್ಲಿ ಒಡೆದುಹೋಗಿರುವ, ಮುಕ್ಕಾಗಿರುವ ಶಾಸನಗಳಲ್ಲಿನ

ಪಾಠಗಳನ್ನು ಪುನರ್ರಚಿಸಹುದು ಎಂಬುದು ನಿಜವಾದರೂ ಇದು ಶಾಸನ ಸಂಪಾದನೆಯ ಒಂದು ಅಂಗವೇ ? ಎಂಬ ಪ್ರಶ್ನೆ ಏಳುತ್ತದೆ.

ಇತ್ತೀಚೆಗೆ ಮದರಾಸು ವಿಶ್ವವಿದ್ಯಾನಿಲಯದವರು ಪ್ರಕಟಿಸಿರುವ 'ಸಾಹಿತ್ಯ ಸಂಪಾದನೆ' ಎಂಬ ಪುಸ್ತಕದಲ್ಲಿ ಶಾಸನಸಂಪಾದನೆಯನ್ನು ಕುರಿತು ಡಾ. ಕಲಬುರ್ಗಿ ಯವರು ಸುದೀರ್ಘವಾಗಿ ಚರ್ಚಿಸಿದ್ದಾರೆ. ನನಗೆ ತಿಳಿದಂತೆ ಈ ವಿಷಯದಲ್ಲಿ ಇದು ಮೊದಲ ಯತ್ನ ಎಂದು ಹೇಳಬಹುದಾಗಿದೆ. ಆದರೆ ಅದರಲ್ಲಿನ ಇವರ ಅಭಿಪ್ರಾಯ ಬಹಳ ಚರ್ಚಾಸ್ಪದವಾಗಿದೆ.

ಇಲ್ಲಿ 'ಶಾಸನ ಸಂಪಾದನೆ' ಎಂಬ ಮಾತಿನ ಅರ್ಥವನ್ನು ಕುರಿತೇ ಒಂದೆರಡು ಅಂಶಗಳನ್ನು ಪ್ರಸ್ತಾಪಿಸುವುದು ಸೂಕ್ತ. ಶಾಸನ ಒಂದು ದಾಖಲೆ ಪತ್ರ ಎಂದು ಹೇಳಿದೆ. ಶಾಸನತಜ್ಞನ ಮೊದಲ ಕರ್ತವ್ಯ ಶಾಸನಪಾಠವನ್ನು ಖಚಿತವಾಗಿ ನಿರ್ಧರಿಸುವುದು. ಇದಕ್ಕಾಗಿ ಆತನಿಗೆ ಕರಾರುವಾಕ್ಕಾಗಿ ಲಿಪಿಗಳನ್ನು ಓದುವ ಸಾಮರ್ಥ್ಯ, ಜ್ಞಾನ ಇರಬೇಕು. ವಾಸ್ತವಿಕವಾಗಿ ಶಾಸನತಜ್ಞನ ಕೆಲಸ ಖಚಿತ ವಾದ ಶಾಸನಪಾಠವನ್ನು ಸಿದ್ಧಗೊಳಿಸುವುದರೊಂದಿಗೆ ಮುಗಿಯುತ್ತದೆ. ಅಲ್ಲಿಗೆ ದಾಖಲೆಪತ್ರದ ಪ್ರತಿ ಸಿದ್ಧವಾದಂತೆ. ಅದನ್ನು ಅರ್ಥೈಸುವಾಗ, ಶಾಸನತಜ್ಞನು ಇತಿಹಾಸಕಾರನೋ, ಸಾಹಿತ್ಯಜ್ಞನೋ, ಸಮಾಜ ವಿಜ್ಞಾನಿಯೋ ಆಗಿ ಪರಿವರ್ತಿತ ನಾಗುತ್ತಾನೆ. ಇಲ್ಲಿ ವ್ಯಾಖ್ಯಾನದ ಪ್ರಶ್ನೆ ಬರುತ್ತದೆ. ತನಗೆ ತಿಳಿದಂತೆ, ತಾನು ಅರ್ಥಮಾಡಿಕೊಂಡಂತೆ ಅದನ್ನು ಆತ ಅರ್ಥೈಸುತ್ತಾನೆ. ಆದರೆ ಹಾಗೆ ಮಾಡುವ ಮೊದಲು ಸ್ಪಷ್ಟವಾದ ಶಾಸನಪಾಠ ನೀಡುವುದು ಅತ್ಯಾವಶ್ಯಕ. ಅಲ್ಲಿಯೂ ಶಾಸನ ತಜ್ಞನಿಗೆ ಸ್ವಲ್ಪಮಟ್ಟಿಗಾದರೂ ಭಾಷಾಜ್ಞಾನ, ಇತಿಹಾಸಜ್ಞಾನ, ಸಂಸ್ಕೃತಿಯ ಪರಿಚಯ ಇತ್ಯಾದಿಗಳಿರಬೇಕಾಗುತ್ತದೆ. ಶಾಸನಪಾಠವನ್ನು ಸಿದ್ಧಗೊಳಿಸುವಾಗ ಪದವಿಭಾಗದಲ್ಲಿಯೇ ಶಾಸನತಜ್ಞ ಎಡವಿದರೆ ತಪ್ಪಾದ ಶಾಸನಪಾಠ ಸಿದ್ಧಗೊಂಡು ಅದನ್ನವಲಂಬಿಸಿದ ವ್ಯಾಖ್ಯೆಗಳೂ ತಪ್ಪಾಗುತ್ತವೆ. ಒಂದೆರಡು ಉದಾಹರಣೆಗಳನ್ನು ನೀಡಬಹುದು. ಒಬ್ಬ ಅರಸ "ವಿನೋದದಿಂದೊಡ್ಡೋಲಗಂಗೊಟ್ಟು" ಎಂಬ ಪಾಠವಲ್ಲಿ ತಪ್ಪಾಗಿ ಪದವಿಭಾಗ ಮಾಡಿ "ವಿನೋದದಿಂ" ಒಂದು ಭಾಗವಾಗಿ "ದೊಡ್ಡೋಲಗಂ ಗೊಟ್ಟು" ಇನ್ನೊಂದು ಭಾಗವಾಗಿ ಭೇದಿಸಿದರೆ ಅರ್ಥದಲ್ಲಿ ಎಷ್ಟು ವ್ಯತ್ಯಯ ಬರುತ್ತದೆ ಎಂಬುದು ಸ್ಪಷ್ಟ. ಹಿಂದೊಮ್ಮೆ ಪಂಡಿತರೊಬ್ಬರು ಹನಸೋಗೆ ಶಾಸನ ವನ್ನು ಓದುವಾಗ 'ಮುನ್ನಿನಂತೆ ಕಾದನಾರಾಮಠದತ್ತಿಯ' ಎಂದು ಓದಿ ಬಿಹಾರದ ಆರಾದಲ್ಲಿ ಈ ಶತಮಾನದ ಆರಂಭದಲ್ಲಿ ಅಸ್ತಿತ್ವಕ್ಕೆ ಬಂದ ಆರಾಮಠ ಅತಿ ಪ್ರಾಚೀನ ವಾದುದೆಂಬ ಯಾದೃಚ್ಛಿಕವಾದ ಊಹೆ ಮಾಡಿರುವುದನ್ನು ನಾನು ಈಗಾಗಲೇ ಪ್ರಸ್ತಾಪಿಸಿದ್ದೇನೆ.[1] ದೊಡ್ಡ ಹುಂಡಿಯ ವೀರಗಲ್ಲಿನ ಶಾಸನದಲ್ಲಿ 'ಪೆರ್ಮ್ಮಾನಡಿಗಳ ಸು(ಪು)ಪುತ್ರ ಸತ್ಯವಾಕ್ಯಪೆರ್ಮ್ಮಾನಡಿ'ಗಳೆಂಬ ಪಾಠವಲ್ಲಿನ 'ಸುಪುತ್ರ'ವನ್ನು

ಫ್ಲೀಟ್‌ರವರು 'ಅಗ್ಗ ಪುತ್ರ' ಎಂದು ಓದಿ ಹಿರಿಯ ಮಗನೆಂದು ಅರ್ಥೈಸುವುದನ್ನು ತೋರಿಸಿದ್ದೇನೆ.[2]

ಶಾಸನತಜ್ಞನು ಸ್ಪಷ್ಟವಾದ ಪಾಠವನ್ನು ಒದಗಿಸಬೇಕೆಂಬುದು ಇದರಿಂದ ಸ್ಪಷ್ಟವಾಗುವ ಅಂಶ. ಇಲ್ಲಿ ಕೆಲವು ಸಂಪ್ರದಾಯಗಳನ್ನು ಹಾಕಿಕೊಳ್ಳಲಾಗಿದೆ. ಸಾಮಾನ್ಯವಾಗಿ ಶಾಸನಪಾಠವಲ್ಲಿ ಅಕ್ಷರವೋ, ಪದವೋ ಸ್ಪಷ್ಟವಾಗಿಲ್ಲದಿದ್ದಾಗ ಆ ಪಾಠ ಒಂದು ವಿಧದಲ್ಲಿ ಸಂದೇಹಾಸ್ಪದವೆಂದು ತೋರಿಸಲು ಅದನ್ನು ಚೌಕಕಂಸದಲ್ಲಿ ಹಾಕಲಾಗುತ್ತದೆ. ಒಮ್ಮೊಮ್ಮೆ ಊಹಾತ್ಮಕ ಪಾಠವನ್ನು ತೋರಿಸುವಾಗ ಅಥವಾ ಹೆಚ್ಚಿನ ಅಕ್ಷರಗಳೋ, ಪದಗಳೋ ಇವೆಯೆಂದು ತೋರಿಸುವಾಗ ಆ ಭಾಗವನ್ನು ದುಂಡು ಕಂಸದಲ್ಲಿ ತೋರಿಸಲಾಗುತ್ತದೆ. ಶಾಸನಪಾಠದಲ್ಲಿಲ್ಲದಿರುವ ಅಕ್ಷರವನ್ನು ಸೇರಿಸಬೇಕಾದಾಗ ಚೌಕಕಂಸದೊಳಗೆ ನಕ್ಷತ್ರದ ಚಿಹ್ನೆಯನ್ನು ಇಡುವುದರ ಮೂಲಕ ಅಂಶವನ್ನು ಸೂಚಿಸಲಾಗುತ್ತದೆ. ಸಾಮಾನ್ಯವಾಗಿ ಶಾಸನಪಾಠವಲ್ಲಿ ಒಂದು ಚುಕ್ಕೆ ಒಂದು ಅಕ್ಷರಕ್ಕೆ ಸಂವಾದಿಯಾಗುತ್ತದೆ. ಹತ್ತು ಅಥವಾ ಅದಕ್ಕೂ ಮೀರಿದ ಅಕ್ಷರಗಳನ್ನು ಓದಲಾಗದೆ ಹೋದಾಗ ಶಾಸನಪಾಠದಲ್ಲಿ ಹತ್ತು ಚುಕ್ಕೆಗಳನ್ನಿಟ್ಟು ಸೂಚಿಸಲಾಗುತ್ತದೆ. ಶಾಸನಶಾಸ್ತ್ರಾಧ್ಯಯನ ಆರಂಭವಾದಾಗಲಿಂದ ನಮ್ಮಲ್ಲಿ ನಡೆದು ಬಂದಿರುವ ಸಂಪ್ರದಾಯವಿದು.

ಇನ್ನೂ ಒಂದು ಅಂಶವನ್ನು ಗಮನಿಸಬೇಕು. ಶಾಸನಪಾಠವನ್ನು ಇದ್ದುದಿದ್ದಂತೆ ಸಿದ್ಧಗೊಳಿಸುವುದು ಮುಖ್ಯ. ಆದರೆ ಅಂತಹ ಶಾಸನಪಾಠದಲ್ಲಿ ತಪ್ಪು ಇತ್ಯಾದಿಗಳಿದ್ದು ಆ ಶಾಸನವನ್ನು ಸಂಪಾದಿಸುವ ಸಂದರ್ಭ ಒದಗಿದಾಗ, ಅದಕ್ಕೆ ಸಂಬಂಧಿಸಿದ ಲೇಖನಗಳಲ್ಲಿ ಶಾಸನದಲ್ಲಿ ಬಳಸಲಾದ ಲಿಪಿ, ಅದರ ವಿನ್ಯಾಸ, ಅದರ ತಪ್ಪುಒಪ್ಪುಗಳು, ವ್ಯಾಕರಣ ಇತ್ಯಾದಿಗಳಿಗೆ ಸಂಬಂಧಿಸಿದ ವಿವರಗಳು ಮುಂತಾದವುಗಳನ್ನು ದೀರ್ಘವಾಗಿ ಚರ್ಚಿಸಲಾಗುತ್ತದೆ. ಅಂತಹ ಸಂದರ್ಭದಲ್ಲಿ ಶಾಸನ ಸಂಪಾದಕ ಶಾಸನಪಾಠವನ್ನು ನೀಡುವುದಲ್ಲದೆ, ಅದರಲ್ಲಿನ ಕುಂದುಗಳನ್ನೂ, ಊಹಾತ್ಮಕ ಪಾಠಗಳನ್ನೂ ಅಡಿಟಿಪ್ಪಣಿಗಳಲ್ಲಿ ಸ್ಪಷ್ಟವಾಗಿ ಸೂಚಿಸಬಹುದು. ಒಂದು ಅಥವಾ ಹಲವು ಶಾಸನಗಳನ್ನು ಇಷ್ಟು ವಿವರಗಳೊಂದಗೆ 'ಸಂಪಾದಿಸುವ' ಸಂದರ್ಭದಲ್ಲಿ ಈ ವಿವರಗಳನ್ನು ಆ ಲೇಖನದಲ್ಲಿ ಅಳವಡಿಸುವುದೂ ಅವಶ್ಯ. ಇದಕ್ಕೆಂದೇ 'ಎಪಿಗ್ರಾಫಿಯಾ ಇಂಡಿಕಾ'ದಂತಹ ನಿಯತಕಾಲಿಕಗಳಿವೆ.

'ಶಾಸನ ಸಂಪಾದನೆ' ಎಂಬ ಮಾತನ್ನು ಹಲವಾರು ಶಾಸನಗಳನ್ನು ಒಂದು ಸಂಪುಟದಲ್ಲಿ, ಶಾಸನಪಾಠ, ಅದರ ಅರ್ಥ, ಸಾಧ್ಯವಾದರೆ, ಅವಶ್ಯವೆನಿಸಿದರೆ ಇಂಗ್ಲಿಷ್‌ನಲ್ಲಿ ಭಾಷಾಂತರ ಮುಂತಾದವುಗಳನ್ನು ಸಂಗ್ರಹಿಸಿದ 'ಸಂಪಾದನ ಕಾರ್ಯ'ಕ್ಕೂ ಅನ್ವಯಿಸಬಹುದು. ಇಲ್ಲಿ ಕೆಲವು ವರ್ಷಗಳಲ್ಲಿ ಸಂಗ್ರಹಿಸಲಾದ ಶಾಸನಗಳನ್ನು ಅಥವಾ ಕೆಲವು ಪ್ರದೇಶಗಳಿಗೆ ಸೇರಿದ ಅಥವಾ ಹಲವು ಅರಸುಮನೆತನಗಳಿಗೆ ಸೇರಿದ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸುವ ಪದ್ಧತಿಯನ್ನು ಗಮನಕ್ಕೆ ತಂದುಕೊಳ್ಳಬೇಕು.

'ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್', 'ಕರ್ನಾಟಕ ಇನ್‌ಸ್ಕ್ರಿಪ್‌ಷನ್ಸ್', 'ಎಪಿಗ್ರಾಫಿಯ ಕರ್ನಾಟಿಕ', 'ಧಾರವಾಡ ತಾಲೂಕು ಶಾಸನಗಳು' ಮುಂತಾದವು ಇದಕ್ಕೆ ಉದಾಹರಣೆಗಳು.

ಇಂತಹ ಶಾಸನಗ್ರಂಥಗಳಲ್ಲಿ ಶಾಸನಪಾಠಕ್ಕೆ ಪ್ರಾಧಾನ್ಯತೆ. ನಾಡಿನ ಇತಿಹಾಸ, ಸಂಸ್ಕೃತಿಗಳನ್ನು ಅರಿಯಲು ಶಾಸನಗಳು ಪ್ರಮುಖವಾದ ಮೂಲ ಸಾಮಗ್ರಿಗಳು. ದಕ್ಷಿಣ ಭಾರತದಲ್ಲಿ ಶಾಸನ ಸಂಪತ್ತು ಅಪಾರ. ಆದರೆ ಆ ಶಾಸನಗಳ ಸಂಗ್ರಹಕಾರ್ಯದಲ್ಲಿ ತೀರ ಇತ್ತೀಚಿನವರೆಗೂ ನಿರತವಾಗಿದ್ದುದು ಕೇಂದ್ರ ಅಥವಾ ಪ್ರಾಂತೀಯ ಸರ್ಕಾರದ ಪುರಾತತ್ವ ಇಲಾಖೆಗಳು. ಅವು ಸಹಸ್ರಾರು ಸಂಖ್ಯೆಗಳಲ್ಲಿ ಶಾಸನಗಳನ್ನು ಸಂಗ್ರಹಿಸಿದ್ದರೂ, ಅವುಗಳ ಪ್ರಕಟನ ಕಾರ್ಯ ಬಹಳಷ್ಟು ಹಿಂದೆ ಬಿದ್ದಿದೆ. ದಕ್ಷಿಣ ಭಾರತದ ಶಾಸನಗಳ ಸಂಪುಟಗಳನ್ನು ಆರಂಭಿಸಿದಾಗ ಮೊದಲು ಆ ಶಾಸನಗಳ ದೀರ್ಘವಾದ ಚರ್ಚೆಯೂ ಇರಬೇಕೆಂಬ ದೃಷ್ಟಿಯಿತ್ತು. ಆ ಮಾಲೆಯ ಒಂದೆರಡು ಸಂಪುಟಗಳಲ್ಲಿ ಇದನ್ನು ಗಮನಿಸಬಹುದು. ಆದರೆ ಅನಂತರ ಶೀಘ್ರವಾಗಿ ಶಾಸನಪಾಠಗಳನ್ನು ಸಂಶೋಧಕರಿಗೂ, ಆಸಕ್ತರಿಗೂ ಒದಗಿಸುವುದು ಆವಶ್ಯಕವೆನಿಸಿ, ಟಿಪ್ಪಣಿಗಳೂ ಇಲ್ಲದೆ, ಕೇವಲ ಪಾಠಗಳನ್ನು ಮಾತ್ರ ಶಾಸನ ಸಂಪುಟಗಳಲ್ಲಿ (ಸಂಪುಟ ೪ ರಿಂದ ಮುಂದಿನ ಸಂಪುಟಗಳು) ಪ್ರಕಟಿಸುವ ಕಾರ್ಯ ಆರಂಭವಾಯಿತು. ಆದರೆ ಆ ಶಾಸನಗಳ ಭಾಷೆಯ ಜ್ಞಾನ ಇಲ್ಲದವರಿಗೆ ಅನುಕೂಲವಾಗಲೆಂದು ಪ್ರತಿಯೊಂದು ಶಾಸನದ ಸಾರಾಂಶವನ್ನೂ ಸೂಕ್ಷ್ಮವಾಗಿ ಕೊಟ್ಟು ಆಯಾ ಸಂಪುಟಗಳಲ್ಲಿನ ಹಲವಾರು ದೃಷ್ಟಿಗಳಿಂದ ಮಹತ್ತ್ವವೆನಿಸುವ ಶಾಸನಗಳ ವಿಸ್ತೃತ ವ್ಯಾಖ್ಯೆಯನ್ನು ಪೀಠಿಕೆಯಲ್ಲಿ ಚರ್ಚಿಸುವ ಪರಿಪಾಠ ಆರಂಭವಾಯಿತು. (ಸಂಪುಟ ೧೦ರಿಂದ ಆರಂಭಿಸಿ ಇತ್ತೀಚಿನವರೆಗೂ ಪ್ರಕಟವಾಗಿರುವ ೨೪ರವರೆಗಿನ ಸಂಪುಟಗಳು). ಇದು ಕೇಂದ್ರ ಪುರಾತತ್ವ ಇಲಾಖೆಯ ಶಾಸನವಿಭಾಗ ಪ್ರಕಟಿಸಿದ ದಕ್ಷಿಣ ಭಾರತೀಯ ಶಾಸನಗಳಲ್ಲಿ ನಾವು ಕಾಣುವ ಅಂಶಗಳು.

ಆದರೆ ಈ ಕಾರ್ಯದಲ್ಲಿ ಮಹತ್ತರವಾದ ಸೇವೆ ಕರ್ನಾಟಕಕ್ಕೆ ಸಂದುದು ರೈಸ್‌ರವರಿಂದ. ಹಳೆಯ ಮೈಸೂರು ಸಂಸ್ಥಾನದ ಸಮಾರು ೯೦೦೦ ಶಾಸನಗಳನ್ನು ಎಪಿಗ್ರಾಫಿಯ ಕರ್ನಾಟಿಕದ ೧೨ ಸಂಪುಟಗಳಲ್ಲಿ ಒಟ್ಟುಗೂಡಿಸಿ ಜಿಲ್ಲಾವಾರಾಗಿ ಪ್ರಕಟಿಸಿದ ಕೀರ್ತಿ ಇವರದು. ಇವರು ಸ್ವಲ್ಪಮಟ್ಟಿಗೆ ಭಿನ್ನವಾದ ವಿಧಾನವನ್ನು ಆರಂಭಿಸಿದರು. ಶಾಸನಪಾಠಗಳನ್ನು ಕನ್ನಡ ಅಥವಾ ತಮಿಳು ಲಿಪಿಗಳಲ್ಲಿ ಅವರಿಂದ ನೇಮಿಸಲ್ಪಟ್ಟ ಪಂಡಿತರು ಓದಿದಂತೆ, ಹಾಗೂ ಅದೇ ಶಾಸನಪಾಠಗಳ ಇಂಗ್ಲಿಷ್ ಲಿಪ್ಯಂತರದ ಪಾಠಗಳನ್ನು ತಾವೇ ಓದಿಕೊಂಡಂತೆ ಇವುಗಳಲ್ಲಿ ಪ್ರಕಟಿಸಿದರು. ಬಹುಶಃ ಶಾಸನಪಾಠಗಳು ತ್ವರಿತವಾಗಿ ಪ್ರಕಟವಾಗಬೇಕೆಂಬ ಉದ್ದೇಶದಿಂದಲೋ ಏನೋ, ರೈಸರವರು ತಮ್ಮ ಪಂಡಿತರು ತಯಾರಿಸಿದ ಶಾಸನಪಾಠಕ್ಕೂ, ತಾವೇ

ಸಿದ್ಧಪಡಿಸಿಕೊಂಡ ಶಾಸನಪಾಠಕ್ಕೂ ಇರುವ ವ್ಯತ್ಯಾಸಗಳನ್ನು ಗುರುತಿಸಿ, ಉಚಿತವಾದ, ಸರಿಯಾದ ಪಾಠಗಳನ್ನು ಕೊಡುವಷ್ಟು ಸಹನೆಯನ್ನು ತೋರಿಸಲಿಲ್ಲ. ಎಂತಲೇ ಆ ಶಾಸನ ಸಂಪುಟಗಳಲ್ಲಿ ನೂರಾರು ಸಂದರ್ಭಗಳಲ್ಲಿ ಕನ್ನಡದಲ್ಲಿರುವ ಶಾಸನಪಾಠಕ್ಕೂ ಲಿಪ್ಯಂತರದಲ್ಲಿರುವ ಶಾಸನಪಾಠಕ್ಕೂ ವಿಪರೀತ ವ್ಯತ್ಯಾಸಗಳಿವೆ. ಶಾಸನಗಳಲ್ಲಿದ್ದಿರಬಹುದಾದ, ವ್ಯಾಕರಣ ಹಾಗೂ ಇತರ ಲೋಪದೋಷಗಳನ್ನು ಅನೇಕ ಸಂದರ್ಭಗಳಲ್ಲಿ, ರೈಸ್‌ರವರೋ ಅಥವಾ ಅವರ ಪಂಡಿತರೋ ತಿದ್ದಿಬಿಟ್ಟಿರುವ ಕಾರಣ, ಸರಿಯಾದ ಶಾಸನಪಾಠ ಯಾವುದು ಎಂಬುದು ತಿಳಿಯದೆಯೇಹೋಗಿದೆ.

ಇಂತಹ ಸಂಪುಟಗಳನ್ನು ಕಾಲವನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಕಟಿಸುವಾಗ, ಮೂಲಪಾಠವನ್ನು ಅಡಿಟಿಪ್ಪಣಿಗಳಲ್ಲಿ ಅದರ ತಿದ್ದುಪಡಿ, ಮಾಡಿರುವ ಮಾರ್ಪಾಡುಗಳನ್ನು ಸೂಚಿಸುತ್ತಾ ಹೋಗುವುದು ಬಹಳ ಕಷ್ಟವಾಗುತ್ತದೆ. ಇದಕ್ಕೆ ವಿಶೇಷವಾಗಿ ಸಮಯ ಅವಶ್ಯ. ಈ ಕೆಲಸವನ್ನು ಮಾಡುತ್ತಾ ಹೋದರೆ ಒಂದೊಂದು ಸಂಪುಟವನ್ನು ಹೊರತರಲು ಹಲವಾರು ವರ್ಷಗಳೇ ಹಿಡಿದೀತು. ಆದರೆ ಹಾಗೆಂದು ಶಾಸನಪಾಠಗಳನ್ನು ತಿದ್ದಿ ಮೂಲರೂಪವನ್ನು ಮಾರ್ಪಡಿಸಿ ಒದಗಿಸುವುದು ಶಾಸನ ವಿಜ್ಞಾನಕ್ಕೆ ಅಪಚಾರವೆಸಗಿದಂತೆ. ಛಂದಸ್ಸು, ಪ್ರಾಸಗಳ ದೃಷ್ಟಿಯಿಂದಲೇ ಆಗಲಿ, ತಮಗಿರುವ ಸಾಹಿತ್ಯದ–ಸಾಹಿತ್ಯ ಕೃತಿಗಳ ಜ್ಞಾನದ ಪ್ರಚಾರ ದೃಷ್ಟಿಯಿಂದಲೇ ಆಗಲಿ ಶಾಸನಪಾಠಗಳನ್ನು 'ತಿದ್ದು'ವುದು ಸಲ್ಲ. 'ನೆಂಬನ್ನೆನ್ನಗಂ' ಎಂಬುದನ್ನು 'ನೆಂಬಿನೆಗಂ' ಎಂದೂ, 'ಸ್ಥಿರಗಂಭೀರ ಉದಾತ್ತಸದ್ಗುಣ..' ಎಂಬುದನ್ನು, ಪ್ರಾಸಸ್ಥಾನ ಬಲದಿಂದ 'ಸ್ಥಿರಗಂಭೀರ'ನೆಂದು ತಿದ್ದುವುದೂ ಶಾಸನತಜ್ಞನಿಗೆ ಶೋಭಿಸದು. ಇದನ್ನು ವಿವರವಾಗಿ ಚರ್ಚಿಸಿ ಪ್ರಕಟಿಸುವ ಮಾತು ಬೇರೆ. ಅದನ್ನು ಮೇಲೆ ಹೇಳಿದ್ದೇನೆ. ಆದರೆ ಶಾಸನಪಾಠಗಳ ಸಂಪುಟಗಳಲ್ಲಿ ಹೀಗೆ ತಿದ್ದುವುದು ತಪ್ಪು, ಶಾಸನ ಸಂಪಾದನಕಾರ್ಯಕ್ಕೆ ವಿಹಿತವಲ್ಲದ್ದು.[4]

ಅವಸರ ಪ್ರವೃತ್ತಿಯಿಂದಾಗಿ ಅಸ್ಪಷ್ಟವೆಂದು ಚುಕ್ಕಿ ಇಟ್ಟು ಸಾಗುವುದು, ಪಾಠವನ್ನು ತಪ್ಪು ತಪ್ಪಾಗಿ ಓದುವುದು ಸಂಪಾದಕನಿಗೆ ಶೋಭಿಸದು ಎಂಬ ಉದ್ಗಾರ ತೆಗೆದಿದ್ದಾರೆ ಡಾ|| ಕಲಬುರ್ಗಿಯವರು.[5] ಒಪ್ಪತಕ್ಕ ಮಾತೇ ಸರಿ. ಅವರು ನೀಡಿರುವ ಉದಾಹರಣೆಗಳನ್ನು ನೋಡಿದಾಗ ಮಾತ್ರ ನನಗೆ ದಿಗ್ಭ್ರಮೆಯುಂಟಾಗಿದೆ. ಅದು ನಾನೇ ಸಂಪಾದಿಸಿದ ಕರ್ನಾಟಕ ಶಾಸನಗಳ (Karnatak Inscriptions) ಐದನೆಯ ಸಂಪುಟದಲ್ಲಿನ ಶಾಸನ. ದೊಡ್ಡ ಶಾಸನವಿದ್ದ ಕಲ್ಲು ತುಂಡುಗಳಾಗಿದ್ದು ಕೇವಲ ಎರಡು ತುಂಡುಗಳು ಮಾತ್ರ ದೊರೆತಿವೆ. ಆ ತುಂಡುಗಳಲ್ಲಿದ್ದ ಶಾಸನ ಪಾಠಗಳನ್ನು ನಾನು ಅಲ್ಲಿ ಕೊಟ್ಟಿದ್ದೇನೆ. ಅದು ಹೀಗಿದೆ—

ಮೊದಲನೆಯ ತುಂಡಿನ ಎರಡನೆಯ ಪಟ್ಟಿಯ ೬–೭ನೆಯ ಸಾಲುಗಳು :

ಪಾತ್ರಮತ . . ರ್ಪ್ಪಣೆ [ಬಾ][6]
. . . . . . . ದಯ ಶುಭಲಕ್ಷಣಲಕ್ಷಿತಾಂ[ಗಿ]
ರಾ . . . . . . ಮೃದು ಮಧುರವಚನರಚನಾ
ಚತುರಕಳಾರಂಜಿತಂ ಪ್ರ–

ಹೀಗಿವೆ. ೬ನೆಯ ಸಾಲಿನ ಆರಂಭದ ಭಾಗ ಕಲಬುರ್ಗಿಯವರು ಪ್ರಸ್ತಾಪಿಸಿಲ್ಲವಾಗಿ ಇಲ್ಲೂ ಅದರ ಪ್ರಸ್ತಾಪವಿಲ್ಲ.

ಇದನ್ನು ಕಲಬುರ್ಗಿಯವರು ತಿದ್ದಿ

ಪಾತ್ರಮುಖದರ್ಪಣೆ ಚಾಳುಕ್ಯರಾಯರಾಜ್ಯಾ
ಭ್ಯುದಯ ಶುಭಲಕ್ಷಣಲಕ್ಷಿತಾಂ[ಗಿ] ರಾಯ
ಸರ್ಬ್ಬಜ್ಞ ದರ್ಪ್ಪಣಂಗಿ, ಮೃದುಮಧುರವಚನರಚನ
ಚತುರಕಳಾಪೆ ರತ್ನಪ್ರದೀಪೆ

ಎಂದು ಓದಿಬಿಟ್ಟಿದ್ದಾರೆ. ಶಾಸನಪಾಠದಲ್ಲಿ ಚುಕ್ಕೆಗಳಿರುವ ಅರ್ಥದ ಬಗೆಗೆ ಈಗಾಗಲೇ ಹೇಳಿದ್ದೇನೆ. ಇಲ್ಲಿ ಇನ್ನೊಂದು ಗಮನಾರ್ಹವಾದ ಸಂಗತಿ ಎಂದರೆ ಮೊದಲನೆಯ ತುಂಡಿನಲ್ಲಿನ ೬ನೆಯ ಸಾಲು ಅದೇ ತುಂಡಿನ ೭ನೆಯ ಸಾಲಿಗೆ ಮುಂದುವರಿದಿಲ್ಲ, ಅದರ ಮುಂದಿನ ಭಾಗವಿದ್ದ ತುಂಡು ಈಗ ಲಭ್ಯವಿಲ್ಲ, ಪ್ರಕಟವಾದ ಶಾಸನಪಾಠ ಲಭಿಸಿರುವ ಎರಡು ತುಂಡುಗಳಲ್ಲಿದ್ದಂತಿದೆ ಎನ್ನುವುದು. ಎಂತಲೇ ನಾನು ನೀಡಿದ ಪಾಠದ ೬ನೆಯ ಸಾಲಿನ ಕೊನೆಯ ಅಕ್ಷರ ಸಂದೇಹಾಸ್ಪದವಾಗಿ '[ಬಾ]' ಎಂದಿದೆ. ಏಳನೆಯ ಸಾಲಿನ ಮೊದಲ ಏಳು ಅಕ್ಷರಗಳು ಓದಲಾಗದ ಸ್ಥಿತಿಯಲ್ಲಿ ಹಾಳಾಗಿವೆ. ಆ ಸಾಲು 'ದಯ' ಎಂದು ಆರಂಭವಾಗುತ್ತದೆ. ಕಲಬುರ್ಗಿಯವರು ಬಹಳ ಸುಲಭವಾಗಿ ಇದನ್ನು 'ಸರಿಯಾಗಿ'? 'ಚಾಳುಕ್ಯರಾಯ ರಾಜ್ಯಾಭ್ಯುದಯ' ಎಂದು ಓದಿಬಿಟ್ಟರು. ಏಳನೆಯ ಸಾಲಿನ ಆರಂಭಕ್ಕೂ ಆರನೆಯ ಸಾಲಿನ ಅಂತ್ಯಕ್ಕೂ ನಡುವೆ ಶಾಸನ ಕಲ್ಲಿನ ಒಂದು ತುಂಡೇ ಹೋಗಿದೆ ಎಂಬ, ನನ್ನ ಟಿಪ್ಪಣಿಯಲ್ಲಿನ ಮಾತನ್ನೇ ಅವರು ಗಮನಿಸದೆ ನನ್ನದನ್ನು ತಪ್ಪುತಪ್ಪಾಗಿ ಓದಿದ, ಚುಕ್ಕೆ ಇಟ್ಟು ಮುಂದೆಸಾಗಿದ ಪಾಠವೆಂದಿರುವುದೀಗ ಸೋಜಿಗದ ಮಾತು.

'ಶಾಸನಸಾಹಿತ್ಯ ನಿರ್ಮಿತಿಯಲ್ಲಿ ಗ್ರಂಥಸಾಹಿತ್ಯದ ಕವಿಗಳ ಪಾಲು, ಪ್ರಭಾವ ಆಗಾಗ ಕಂಡುಬರುತ್ತದೆ' ಎಂಬ ಅವರ ಮಾತು ನಿಸ್ಸಂದೇಹವಾದದ್ದು. ಆದರೆ (ಶಾಸನ) ಸಂಪಾದನ ಕಾರ್ಯದಲ್ಲಿ ಈ 'ಜ್ಞಾನ' (?) ಎಂಥ ನೆರವು ನೀಡಬಲ್ಲು ದೆಂಬುದನ್ನು ತೋರಿಸಲು ಅವರು ನೀಡಿರುವ ಉದಾಹರಣೆ ನನ್ನನ್ನು ಮೂಕನನ್ನಾಗಿ ಮಾಡಿದೆ.

. . ವೆತ್ತ
. . ಯಬ್ಬೆ
ಸಾಯಲೆನ್ದು
. . ಪೊತ್ತ
ಣ್ನಳೊಗಳೆ

ಎಂಬ ಶ್ರವಣಬೆಳಗೊಳ ಶಾಸನದ ಪಾಠವನ್ನು ತಮಗಿರುವ 'ಅಜಿತಪುರಾಣದ' ಮೇಲಿನ ಪ್ರಭುತ್ವವನ್ನು ತೋರಿಸಿ ಅವರ ನೆರವಿನಿಂದ ಕಲಬುರ್ಗಿಯವರು ತಿದ್ದಿದಾಗ ಅದು :

[ಮೊಲೆ ?]ವೆತ್ತ
[ಸಾವಿ ?]ಯಬ್ಬೆ
ಸಾಯಲೆನ್ದು
ಪೆಂಡತಿಯೆ
[ಮೀಸೆ]ಪೊತ್ನ
ಣ್ನಳೊಗಳೆ

ಎಂದಾಯಿತು. ಎರಡಕ್ಕೂ ತಾಳೆಯೇನೋ ಹೊಂದಿತು. ಅರ್ಥ? ನಷ್ಟಪಾಠವನ್ನು ಹೀಗೆ ಗ್ರಂಥಪದ್ಯಗಳ ಜ್ಞಾನದಿಂದ ತುಂಬಿಕೊಳ್ಳುವಾಗ ಅರ್ಥದ ಬಗೆಗೂ ಲಕ್ಷ್ಯ ಕೊಡಬೇಡವೇ? ಇದು ಶಾಸನಸಂಪಾದನೆ ಖಂಡಿತ ಅಲ್ಲ ಎಂದು ವಿಷಾದದಿಂದ ಹೇಳಬೇಕಾಗಿದೆ.

ನೂರಾರು ಶಾಸನಗಳನ್ನೊಳಗೊಂಡ ಸಂಪುಟಗಳನ್ನು ಪ್ರಕಟಿಸುವಾಗ ಇಂತಹ ತಿದ್ದುಪಡಿಗಳನ್ನು ಮಾಡುತ್ತಾ ಹೋಗುವುದು ಅಸಾಧ್ಯ. ಸಕಾರಣವಾಗಿ ಸ್ಪಷ್ಟೀಕರಣ ನೀಡಿ ತಿದ್ದುಪಾಡುಗಳನ್ನು ಮಾಡಬಹುದಾದರೂ ಅದಕ್ಕೆ ಬೇಕಾಗುವ ಶ್ರಮ, ವಿನಿಯೋಗವಾಗುವ ಸಮಯ, ಹಿಡಿಸುವ ವೆಚ್ಚ ಇತ್ಯಾದಿಗಳನ್ನು ಗಮನಿಸಿದಾಗ ಯಥಾವತ್ತಾಗಿ ಶಾಸನಪಾಠಗಳನ್ನು ಸಿದ್ಧಗೊಳಿಸಿ ಪ್ರಕಟಿಸುವುದು ಶಾಸನತಜ್ಞನ ಕರ್ತವ್ಯವಾಗುತ್ತದೆ. ಆತ ಈ ದಿಶೆಯಲ್ಲಿ ಶ್ರಮಿಸಬೇಕಾದುದು ಅವಶ್ಯ ಎಂದು ಹೇಳದೆ ಬೇರೆ ಮಾರ್ಗವಿಲ್ಲ. ವೈಜ್ಞಾನಿಕವಾಗಿ ಒಂದೊಂದು ಶಾಸನವನ್ನೂ 'ಸಂಪಾದಿಸಲು' ಅವಕ್ಕಾಗಿಯೇ ಮೀಸಲಾದ ಪತ್ರಿಕೆಗಳಿವೆ. ಅವುಗಳಲ್ಲಿ ಅಂತಹ ಶಾಸನಗಳನ್ನು ಬಿಡಿ ಲೇಖನಗಳ ಮೂಲಕ ಪ್ರಕಟಿಸುವುದಕ್ಕಂತೂ ಯಾವ ತೆರನಾದ ಅಡ್ಡಿಯೂ ಇಲ್ಲ.

ಇನ್ನು ಶಾಸನಪಾಠಗಳ ಜೊತೆಗೆ ಅವುಗಳೆಲ್ಲದರ ಚಿತ್ರಗಳನ್ನು, ಶಾಸನಗಳನ್ನೊಳಗೊಂಡ ವೀರಗಲ್ಲು, ಮಾಸ್ತಿಕಲ್ಲು ಮುಂತಾದವುಗಳ ಚಿತ್ರಗಳನ್ನೂ ಪ್ರಕಟಿಸಲು ಲಕ್ಷಾಂತರ ರೂಪಾಯಿಗಳ ಆವಶ್ಯಕತೆ ಇದೆ. ಇದು ಮಾಡಬಹುದಾದ ಕೆಲಸ.

ಆದರೆ ಹಣದ ಕೊರತೆಯ ಜೊತೆಗೆ ಇಂತಹ ಸಂಪುಟಗಳನ್ನು ಒಬ್ಬೊಬ್ಬರ ಜೀವಮಾನದಲ್ಲಿ ಒಂದೆರಡನ್ನಾದರೂ ಯಶಸ್ವಿಯಾಗಿ ತರಲಾದೀತೆಂಬುದರಲ್ಲಿ ನನಗೆ ಸಂದೇಹವಿದೆ. ಎಪಿಗ್ರಾಫಿಯ ಕರ್ನಾಟಿಕದ ಪರಿಷ್ಕರಣ ಕಾರ್ಯದಲ್ಲಿ ತೊಡಗಿರುವ ನನಗೂ ನನ್ನ ಸಹೋದ್ಯೋಗಿಗಳಿಗೂ ಹಿಂದೆ ರೈಸ್ ಪ್ರತಿಮಾಡಿಕೊಂಡಿದ್ದ ಶಾಸನದ ಕಲ್ಲುಗಳೇ ಹಲವಾರು ಸಂಖ್ಯೆಯಲ್ಲಿ ಈಗ ಕಾಣದೇ ಹೋಗಿದ್ದು ಪರಿಷ್ಕರಣದ ಕಾರ್ಯ ಬಹಳ ಕಷ್ಟವಾಗಿದೆ ಎಂಬುದು ಅನುಭವಕ್ಕೆ ಬಂದಿರುವ ವಿಷಯ. ಇಂತಹ ಸಂದರ್ಭದಲ್ಲಿ ಸರಿಯಾದ ಶಾಸನಪಾಠವನ್ನು ತಪ್ಪುಗಳಿಲ್ಲದೆ ತಿದ್ದುಪಡಿಗಳಿಲ್ಲದೆ ಪ್ರಕಟಿಸುವುದು ಮೊದಲ ಕೆಲಸವೆಂದೇ ಭಾವಿಸಬೇಕು.

ಈ ಸಂದರ್ಭದಲ್ಲಿ ಶಾಸನಕ್ಷೇತ್ರದಲ್ಲಿ ಪಟ್ಟಭದ್ರ ಗುರು–ಶಿಷ್ಯಪರಂಪರೆ ಬೆಳೆದು ಬರುತ್ತಿದೆ ಎಂಬ ಕಲಬುರ್ಗಿಯವರ ಆಕ್ಷೇಪ (?) ಅನುಚಿತವಾದದ್ದು. ಶಾಸನ ಸಂಪಾದನಕಾರ್ಯ ಶೀಘ್ರವಾದ ಯಶಸ್ಸು ಮತ್ತು ಕೀರ್ತಿಗಳನ್ನು ತಂದುಕೊಡು ವಂತಹುದಲ್ಲ. ಇದರಲ್ಲಿ ಆಸಕ್ತಿಯುಳ್ಳವರಷ್ಟೇ ಈ ಕೆಲಸ ಮಾಡಬಲ್ಲರು. ಮೆತ್ತೆ ಆಸನದ ಕೆಲಸವಲ್ಲ ಇದು. ಇದಕ್ಕಾಗಿ ಸಮಯವನ್ನು ವಿನಿಯೋಗಿಸಬೇಕು. ಕ್ಷೇತ್ರಕಾರ್ಯ ಮಾಡಬೇಕು. ಇಂತಹ ಕೆಲಸಗಳಿಗಾಗಿ ತಮ್ಮನ್ನು ತಾವೇ ಮುಡುಪಾಗಿಟ್ಟುಕೊಂಡ 'ಗುರು–ಶಿಷ್ಯವರ್ಗ' ಬೆಳೆದುಬಂದರೆ ತಪ್ಪೇನೂ ಅಲ್ಲ. ಈ ಕಾರ್ಯ ಯಾವುದೇ ಪಂಥದವರಿಗೆ ಸೀಮಿತವಾದುದಲ್ಲ. ಯಾರಾದರೂ ಆಸಕ್ತರು ಮಾಡಬಹುದಾದ ಕಾರ್ಯ. ಆಸಕ್ತಿ ಯಾವುದರಲ್ಲಿ ಎಂಬುದಷ್ಟೇ ಪ್ರಶ್ನೆ.

## ಟಿಪ್ಪಣಿಗಳು

1. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ 5 (ಪರಿಷ್ಕೃತ), 1976, ಸಂ: ಡಾ. ಬಾ. ರಾ. ಗೋಪಾಲ್, ಪೀಠಿಕೆ, ಪು. Lxxv-Lxxvi.
2. ಅದೇ, ಪೀಠಿಕೆ, ಪು. xLviii.
3. ಇಂಡಿಯನ್ ಆ್ಯಂಟಿಕ್ವೆರಿ, ಎಪಿಗ್ರಾಫಿಯ ಆಂಧ್ರಿಕ, ಜರ್ನಲ್ ಆಫ್ ದಿ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯ, ಇತ್ಯಾದಿಗಳು.
4. ಡಾ|| ಎಂ. ಎಂ. ಕಲಬುರ್ಗಿ : 'ಸಾಹಿತ್ಯ ಸಂಪಾದನೆ', ಪು. 33.
5. ಅದೇ, ಪು. 29.
6. ಡಾ|| ಕಲಬುರ್ಗಿಯವರ ಪುಸ್ತಕದಲ್ಲಿ ಇದು 'ಪಾತ್ರಮು|ರ್ಪಣೆ ಬಾ' ಎಂದು ತಪ್ಪುತಪ್ಪಾಗಿ ಅಚ್ಚಾಗಿದೆ.

—o—



# ಗ್ರಂಥರಚನಾಕಾಲದ ನಿರ್ಣಯ

**ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ**

ಪಾಠಪರಿಷ್ಕರಣವು ಗ್ರಂಥಸಂಪಾದನೆಯ ಒಂದು ಮುಖ್ಯವಾದ ಅಂಗ. ಗ್ರಂಥಕಾರಕನ ಶೈಲಿ, ಅವನ ಕಾಲದ ಭಾಷೆ, ಅವನು ಅನುಸರಿಸಿರಬಹುದಾದ ಹಿಂದಿನ ಗ್ರಂಥಗಳು, ಹಸ್ತಪ್ರತಿಗಳ ಲಿಪಿ, ಲಿಪಿಕಾರರಿಂದ ಆಗಿರಬಹುದಾದ ತಪ್ಪುಗಳು ಇವನ್ನೆಲ್ಲ ಗಮನದಲ್ಲಿರಿಸಿಕೊಂಡು ಪಾಠಪರಿಷ್ಕರಣವನ್ನು ಮಾಡಬೇಕಾಗುತ್ತದೆ. ಆದುದರಿಂದ ಪಾಠಪರಿಷ್ಕರಣಕ್ಕೆ ಗ್ರಂಥರಚನೆಯ ಕಾಲನಿರ್ಣಯ ಆವಶ್ಯಕ.

ಸಾಧಾರಣವಾಗಿ ಗ್ರಂಥಕಾರರು ಗ್ರಂಥರಚನೆಯ ಕಾಲವನ್ನು ಹೇಳಿರುವುದಿಲ್ಲ. ಆದುದರಿಂದ ಆಂತರಿಕ ಮತ್ತು ಬಾಹ್ಯ ಆಧಾರಗಳಿಂದ ಕಾಲವನ್ನು ನಿರ್ಣಯಿಸ ಬೇಕಾಗುತ್ತದೆ. ಅಂತಹ ಆಧಾರಗಳೆಂದರೆ :

(೧) ಗ್ರಂಥದಲ್ಲಿ ಉಕ್ತವಾದ ಪೂರ್ವಕವಿಗಳ ಅಥವಾ ಶಾಸ್ತ್ರಕಾರರ ಕಾಲ ;

(೨) ಗ್ರಂಥಕಾರನ ಪೋಷಕರ, ಅವನ ಗುರುಗಳ ಅಥವಾ ಗ್ರಂಥದಲ್ಲಿ ಕಾಣಬರುವ ಇತರ ವ್ಯಕ್ತಿಗಳ ಕಾಲ ;

(೩) ಗ್ರಂಥದಲ್ಲಿ ವರ್ಣಿತವಾದ ಐತಿಹಾಸಿಕ ಸಂಗತಿಗಳು ;

(೪) ಗ್ರಂಥದ ಭಾಷಾಶೈಲಿಯಿಂದ ಸೂಚಿತವಾಗುವ ಕಾಲ ;

(೫) ಈ ಗ್ರಂಥಕಾರನನ್ನು ಹೆಸರಿಸಿರುವ ಈಚಿನ ಗ್ರಂಥಕಾರರ ಕಾಲ ; ಇತ್ಯಾದಿ.

ಕೆಲವು ಕವಿಗಳು ತಾವು ಗ್ರಂಥವನ್ನು "ಪೇಳ್ದ", "ಪ್ರಕಟಿಸಿದ", "ಪ್ರತಿಷ್ಠೆಮಾಡಿದ" ಕಾಲವನ್ನು ಹೇಳಿರುತ್ತಾರೆ. ಉದಾಹರಣೆಗೆ,

(i) ವಿಜಯ ಸಂವತ್ಸರ ಕಾರ್ತಿಕ ನಂದೀಶ್ವರ ದಿನದೊಳ್ ಪ್ರಕಟಿಸಿದುದು —ರನ್ನ ;[1]

(ii) ಚಿತ್ರಭಾನುಸಮಾಖ್ಯಾಬ್ದಕ ಮಾಶ್ವಯುಗ್ಬಹುಳ........ಕೂಡೆ ವರ್ತಿಸೆ ಪೇಳ್ದಂ ಕವಿತಾಗುಣೋದಯನಿದಂ—ನಾಗವರ್ಮ ;[2]

(iii) ಶುಕ್ಲದಾಶ್ವಯುಜ ಕೃಷ್ಣದ ಪಂಚಮಿ ಭೂತಳದೊಳೀಕೃತಿ ಪೆತ್ತುದು ಸುಪ್ರತಿಷ್ಠೆಯಂ—ಜನ್ನ.[3]

ಕೃತಕ ಶಾಸನಗಳಿರುವಂತೆಯೇ, ಅನೇಕ ಗ್ರಂಥಗಳಲ್ಲಿ ಪ್ರಕ್ಷಿಪ್ತ ಭಾಗಗಳೂ ಕಂಡುಬರುವುದರಿಂದ, ಗ್ರಂಥದಲ್ಲಿ ರಚನಾಕಾಲದ ಸೂಚನೆ ಇದ್ದಾಗಲೂ ಸಹ ಆ ಕಾಲವನ್ನು ಒಪ್ಪಿಕೊಳ್ಳುವುದಕ್ಕೆ ಮುಂಚೆ, ಅದು ಇತರ ಆಧಾರಗಳಿಂದ ಊಹಿಸಬಹುದಾದ ಕಾಲಕ್ಕೆ ಹೊಂದುತ್ತದೆಯೇ ಎಂದು ನೋಡಬೇಕು ; ಮತ್ತು ಗ್ರಂಥದಲ್ಲಿ ಹೇಳಿರುವ ವರ್ಷ ತಿಥಿ ವಾರ ನಕ್ಷತ್ರಾದಿಗಳಲ್ಲಿ ಸಾಮರಸ್ಯವಿದೆಯೇ ಎಂದು ಪರೀಕ್ಷಿಸಬೇಕು. ಹಾಗೆ ಪರೀಕ್ಷಿಸಲು ತಜ್ಞರ ಸಹಾಯ ಪಡೆಯಬೇಕಾಗಬಹುದಾದರೂ, ಗ್ರಂಥಸಂಪಾದಕನಿಗೆ ಭಾರತೀಯ ಜ್ಯೋತಿಸ್ಸಿದ್ಧಾಂತದ (Indian Astronomy) ಸ್ಥೂಲಪರಿಚಯವಾದರೂ ಇರಬೇಕು.

ಕಾಲಸೂಚಕಪದ್ಯಗಳಲ್ಲಿ ಸಾಮಾನ್ಯವಾಗಿ ಶಕವರ್ಷ, ಪ್ರಭವಾದಿ (ಬಾರ್ಹಸ್ಪತ್ಯಮಾನ) ಸಂವತ್ಸರ, ತಿಥಿ, ವಾರ—ಕೆಲವು ವೇಳೆ ನಕ್ಷತ್ರ ಮತ್ತು ಯೋಗಗಳು—ಈ ವಿವರಗಳಿರುತ್ತವೆ. ದಕ್ಷಿಣ ಭಾರತದಲ್ಲಿ ಶಾಲಿವಾಹನ ಶಕ ಬಳಕೆಯಲ್ಲಿದ್ದರೂ, ಅಪೂರ್ವವಾಗಿ ವಿಕ್ರಮಶಕವರ್ಷಗಳನ್ನೂ ಕೊಡುವುದುಂಟು. ಆದುದರಿಂದ ಹೆಸರಿಸಿರುವ ಸಂವತ್ಸರ ಯಾವ ಶಕೆಗೆ ಹೊಂದುವುದೆನ್ನುವುದನ್ನು ಪರೀಕ್ಷಿಸುವುದು ಅಗತ್ಯ. ಈ ಸಂದರ್ಭದಲ್ಲಿ, ಮಹಾವೀರ ವರ್ಧಮಾನ ತೀರ್ಥಂಕರ ನಿರ್ವಾಣ ಶಕೆಯ ಪ್ರಸ್ತಾಪ ಅಪ್ರಸ್ತುತವಾಗದು.

ಶ್ವೇತಾಂಬರಸಂಪ್ರದಾಯದಂತೆ ಮಹಾವೀರ ನಿರ್ವಾಣವಾದದ್ದು ವಿಕ್ರಮ ಶಕಪೂರ್ವ ೪೭೦ ವರ್ಷದಲ್ಲಿ ; ಆದರೆ ದಿಗಂಬರ ಸಂಪ್ರದಾಯದಂತೆ ವಿಕ್ರಮ ಶಕಾರಂಭಕ್ಕೆ ೬೦೫ ವರ್ಷಗಳಿಗೆ ಮುಂಚೆ. ಈ ೧೩೫ ವರ್ಷಗಳ ವ್ಯತ್ಯಾಸ ವಿಕ್ರಮ ಮತ್ತು ಶಾಲಿವಾಹನ ಶಕಾರಂಭಗಳ ವ್ಯತ್ಯಾಸಕ್ಕೆ ಸಮವಾಗಿರುವುದರಿಂದ ದಿಗಂಬರ ಸಂಪ್ರದಾಯದಂತೆ ನಿರ್ವಾಣ ಕಾಲ ಶಾಲಿವಾಹನಶಕ ಪೂರ್ವ ೬೦೫ ವರ್ಷಗಳದ್ದಿರಬಹುದೆಂದು ಕನಿಂಗ್‌ಹ್ಯಾಂ ಊಹಿಸಿದ್ದಾರೆ.[4] ದಕ್ಷಿಣ ದೇಶದಲ್ಲಿ 'ಶಾಲಿವಾಹನ' ಪದವನ್ನು ಸೇರಿಸದೆ ಬರಿಯ 'ಶಕವರ್ಷ'ಗಳೆಂದು ವ್ಯವಹರಿಸುವುದರಿಂದ, ಮೊದಲು ಮಹಾವೀರ ನಿರ್ವಾಣ ಕಾಲ ಶಕ ೬೦೫ ಎಂದಿದ್ದುದು ಉತ್ತರದ ಜೈನ ಗ್ರಂಥಗಳ ಪ್ರಭಾವದಿಂದ–ಇವುಗಳಲ್ಲಿ ವಿಕ್ರಮಶಕವನ್ನು ಉಪಯೋಗಿಸಿದ್ದಾರೆ (ಉದಾಹರಣೆಗೆ, ಮೇರುತುಂಗಾಚಾರ್ಯನ 'ಪ್ರಬಂಧ ಚಿಂತಾಮಣಿ')—ಮುಂದೆ ವಿಕ್ರಮಪೂರ್ವ ೬೦೫ ಎಂದು ಮಾರ್ಪಟ್ಟಿರುವುದು ಸಾಧ್ಯ.

ಶಾಲಿವಾಹನ ಶಕದ ಮೊದಲನೆಯ ವರ್ಷ ಬಹುಧಾನ್ಯ ಸಂವತ್ಸರ ಮತ್ತು ಪ್ರಭವಾದಿ ಬಾರ್ಹಸ್ಪತ್ಯಮಾನ ವರ್ಷಗಳ ಸಂಖ್ಯೆ ೬೦ ಆದುದರಿಂದ, ಶಕವರ್ಷ ಮತ್ತು ಸಂವತ್ಸರದ ಹೆಸರು ಗೊತ್ತಿರುವಾಗ ಇವುಗಳು ಹೊಂದುತ್ತವೆಯೇ ಇಲ್ಲವೇ ಎನ್ನುವುದನ್ನು ತಿಳಿಯುವುದು ಸುಲಭ.[5] ಶಕವರ್ಷವನ್ನು ಕೊಡದೆ ಸಂವತ್ಸರದ ಹೆಸರನ್ನು ಮಾತ್ರ ಕೊಟ್ಟಿರುವಾಗಲೂ, ವಾರನಕ್ಷತ್ರಗಳನ್ನು ಕೊಟ್ಟಿದ್ದರೆ ಶಕವರ್ಷವನ್ನು ನಿರ್ಧರಿಸಲು ಸಾಧ್ಯವಾಗಬಹುದು.

ಸಾಧಾರಣವಾಗಿ ಶಕಾರಂಭದಿಂದ ಕಳೆದಿರುವ ಅಂದರೆ ಗತ ಶಕವರ್ಷಗಳನ್ನೇ 'ಗತ' ಶಬ್ದವನ್ನು ಪ್ರಯೋಗಿಸದೆ ಶಕವರ್ಷಗಳೆಂದು ವ್ಯವಹರಿಸುತ್ತಾರೆ. ಕೆಲವು ವೇಳೆ ವರ್ತಮಾನ ಎಂದರೆ ನಡೆಯುತ್ತಿರುವ ವರ್ಷ ಸಂಖ್ಯೆಯನ್ನು, 'ವರ್ತಮಾನ' ಶಬ್ದವನ್ನು ಪ್ರಯೋಗಿಸದೆ, ಶಕವರ್ಷವೆಂದು ಕೊಟ್ಟಿರುವುದೂ ಉಂಟು. ಸಂವತ್ಸರದ ಹೆಸರಿನಿಂದ ಕೊಟ್ಟಿರುವ ಶಕಸಂಖ್ಯೆ ಗತವರ್ಷಗಳದ್ದೇ ಅಥವಾ ವರ್ತಮಾನ ವರ್ಷದ್ದೇ ಎಂದು ನಿರ್ಧರಿಸಬಹುದು.

ತಿಥಿ ವಾರ ನಕ್ಷತ್ರಾದಿಗಳು ಪರಸ್ಪರ ಸಮಂಜಸವಾಗಿವೆಯೇ ಎಂದು ತಿಳಿಯಲು L. D. ಸ್ವಾಮಿಕಣ್ಣು ಪಿಳ್ಳೆಯವರ Indian Ephemerisನಿಂದ ಬಹಳ ಸಹಾಯ ವಾಗುತ್ತದೆ. ಈ ಗ್ರಂಥ ೮ ಸಂಪುಟಗಳಲ್ಲಿದ್ದು, ಅವುಗಳ ವ್ಯಾಪ್ತಿ ಇಂತಿದೆ :

Vol. I, Part I ೧೫೦ ಪುಟಗಳಷ್ಟು ದೀರ್ಘವಾದ ಉಪೋದ್ಘಾತ, ಕೋಷ್ಟಕಗಳು, ಪರಿಶಿಷ್ಟಗಳು (ಒಟ್ಟು ೪೯೬ ಪುಟಗಳು)

Vol. I, Part II ಕ್ರಿ.ಶ. ೭೦೦–೭೯೯ (೨೦೦ ಪುಟಗಳು) ಈ ಸಂಪುಟದಲ್ಲಿ ಪ್ರತಿವರ್ಷಕ್ಕೂ ಎರಡು ಪುಟಗಳಿದ್ದು ಪುಟಗಳ ಮೇಲ್ಭಾಗದಲ್ಲಿ ಆ ಕ್ರಿಸ್ತ ಶಕವರ್ಷಕ್ಕೆ ಸಂವಾದಿಯಾದ ಶಾಲಿವಾಹನ ಶಕ ವಿಕ್ರಮ ಸಂವತ್ ಬಂಗಾಳೀ ಸನ್ ಕಲಿಯುಗ ಕೊಲ್ಲಂ ಮತ್ತು ಹಿಜಿರಾ ವರ್ಷದ ಸಂಖ್ಯೆಗಳು, ಪ್ರಭವಾದಿ ಬಾರ್ಹಸ್ಪತ್ಯಮಾನ (ದಾಕ್ಷಿಣಾತ್ಯ ಮತ್ತು ಔತ್ತರೇಯ ಸಂಪ್ರದಾಯಗಳಂತೆ) ಸಂವತ್ಸರದ ಹೆಸರು, ಮೇಷ ಸಂಕ್ರಮಣಕಾಲ, ಕೊಲ್ಲಂ ವರ್ಷಾರಂಭ ದಿನ (ದಕ್ಷಿಣ ಮತ್ತು ಉತ್ತರ ಮಲಬಾರ್ ಸಂಪ್ರದಾಯಗಳಂತೆ), ಹಿಜಿರಾ ವರ್ಷದ ಆರಂಭ ದಿನ ಈ ವಿವರಗಳನ್ನು ಕೊಟ್ಟಿದೆ. ಕೆಳಗೆ ಕೋಷ್ಟಕದಲ್ಲಿ ಜನವರಿ ೧ ರಿಂದ ಡಿಸೆಂಬರು ೩೧ ರ ವರೆಗಿನ ಪ್ರತಿದಿನಕ್ಕೂ ಸೌರಮಾಸ ತೇದಿ, ವಾರ, ಚಂದ್ರಮಾನ ತಿಥಿ ನಕ್ಷತ್ರಗಳು (ತಿಥಿ ನಕ್ಷತ್ರಗಳ ಪ್ರಮಾಣವನ್ನು ದಿನಮಾನದ ದಶಮಾಂಶ ರೂಪದಲ್ಲಿ), ಮಹಮ್ಮದೀಯ ತಿಂಗಳು ಮತ್ತು ದಿನಗಳನ್ನು ಕೊಟ್ಟಿದೆ.

ಉಳಿದ ೬ ಸಂಪುಟಗಳಲ್ಲಿ (ಪ್ರತಿಯೊಂದರಲ್ಲೂ ೪೦೦ ಪುಟಗಳಿವೆ), ಒಂದು ಸಂಪುಟದಲ್ಲಿ ೨ ಶತಮಾನಗಳಂತೆ, ಕ್ರಿ. ಶ. ೮೦೦ ರಿಂದ ೨೦೦೦ ವರೆಗಿನ ವರ್ಷಗಳಿಗೆ ವಿವರಗಳಿವೆ.[6]

ಎಫಿಮೆರಿಸ್‌ನಲ್ಲಿರುವ ತಿಥ್ಯಾದಿ ವಿವರಗಳು ಪೂರ್ಣ ಸರಿಯಲ್ಲವೆಂಬ ಮಾತು ಕೇಳಬಂದಿದೆ. ಆದರೆ ನಾನು ಅದರಿಂದ ವಿವರಗಳನ್ನು ತೆಗೆದುಕೊಂಡಾಗಲೆಲ್ಲ, ಸೂರ್ಯಸಿದ್ಧಾಂತಾನುಯಾಯಿಯಾದ ಕರಣಗ್ರಂಥದ ಪ್ರಕಾರ ಸ್ವತಂತ್ರವಾಗಿ ಲೆಕ್ಕ ಮಾಡಿ ನೋಡಿದ್ದೇನೆ ; ಎಲ್ಲೂ ತಪ್ಪು ಕಂಡುಬಂದಿಲ್ಲ. ಕರಣಗ್ರಂಥಗಳ ಆಧಾರದಿಂದ

ಗಣಿತ ಮಾಡಿದಾಗ ತಿಥಿ ನಕ್ಷತ್ರಗಳ ಸೂರ್ಯೋದಯಾದಿ ಘಳಿಗೆಗಳು ಸಿಕ್ಕುತ್ತವೆ. ಎಫಿಮೆರಿಸ್‌ನಲ್ಲಿ ಉಜ್ಜಯಿನೀ ಮಧ್ಯಮ ಸೂರ್ಯೋದಯ ಕಾಲ(6 A.M.)ದಿಂದ ತಿಥಿ ಮತ್ತು ನಕ್ಷತ್ರಾಂಶ ಕಾಲವನ್ನು ದಿನದ ದಶಮಾಂಶ ರೂಪದಲ್ಲಿ ಕೊಟ್ಟಿದೆ. ಈ ಕಾರಣದಿಂದಲೂ, ಬೇರೆ ಬೇರೆ ಸ್ಥಳಗಳಿಗೆ ಕಾಲಭೇದವಾಗುವುದರಿಂದಲೂ ತಿಥಿ ನಕ್ಷತ್ರ ಕಾಲಗಳಲ್ಲಿ ೧–೨ ಘಳಿಗೆಯಷ್ಟು ವ್ಯತ್ಯಾಸವಾಗಬಹುದು.

ಎಫಿಮೆರಿಸ್‌ನಲ್ಲಿ ದಿನದ ಪ್ರಾರಂಭಕಾಲದ (6 A.M.) ತಿಥಿನಕ್ಷತ್ರಗಳನ್ನು ಕೊಟ್ಟಿದೆ. ಗ್ರಂಥಗಳಲ್ಲೂ, ನಮ್ಮ ವ್ಯವಹಾರವಲ್ಲೂ, ಸಾಧಾರಣವಾಗಿ ಸೂರ್ಯೋದಯ ಕಾಲದ ತಿಥಿನಕ್ಷತ್ರಯೋಗಾದಿಗಳನ್ನು ಹೇಳುವ ರೂಢಿಯಿದ್ದರೂ, ಗ್ರಂಥ ಸಮಾಪ್ತಿ ಕಾಲವನ್ನಾಗಲೀ ಬೇರೆ ಯಾವುದಾದರೂ ಮುಹೂರ್ತಕಾಲವನ್ನಾಗಲೀ ಹೇಳುವಾಗ ತತ್ಕಾಲೀನ ತಿಥಿನಕ್ಷತ್ರಾದಿಗಳನ್ನು ಹೇಳುವುದುಂಟು. ಆ ಸಮಯಕ್ಕೆ ಸೂರ್ಯೋದಯ ಕಾಲದ ತಿಥಿನಕ್ಷತ್ರಗಳು ಮುಗಿದು ಮುಂದಿನವು ಬಂದಿರಬಹುದು. ಉದಾಹರಣೆಗೆ, 'ವರ್ಧಮಾನ ಪುರಾಣ'ದ ಸಮಾಪ್ತಿಕಾಲ ಚಿತ್ರಭಾನು ಸಂವತ್ಸರ ಆಶ್ವಯುಜ ಬಹುಳ ಷಷ್ಠೀ ಗುರುವಾರ (ಕ್ರಿ. ಶ. ೭–೧೦–೧೦೪೨) ಪುನರ್ವಸು ನಕ್ಷತ್ರದಲ್ಲಿ. ಆ ದಿನ ಸೂರ್ಯೋದಯ ಕಾಲದಲ್ಲಿ ಷಷ್ಠೀ ಆರ್ದ್ರಾ ನಕ್ಷತ್ರವಿದ್ದು, ಷಷ್ಠೀ ತಿಥಿ ಮುಗಿಯುವುದಕ್ಕೆ ಮುಂಚೆಯೇ, ಮಧ್ಯಾಹ್ನಕ್ಕೆ ಪುನರ್ವಸು ನಕ್ಷತ್ರ ಬರುತ್ತದೆ.[7]

Ephemeris ಉಪಯೋಗಿಸುವ ಮುಂಚೆ (ಪ್ರತಿ ಸಂಪುಟದ ಆರಂಭದಲ್ಲೂ ಕೊಟ್ಟಿರುವ) Instructions ಭಾಗವನ್ನು ಓದಿಕೊಳ್ಳುವುದು ಅತ್ಯಗತ್ಯ.

ಗ್ರಂಥಸಂಪಾದಕರಿಗೆ ಅತ್ಯುಪಯುಕ್ತವಾದ ಮತ್ತೊಂದು ಗ್ರಂಥ Cunningham ರವರ *Book of Indian Eras* (ಸುಮಾರು ೧೫೦ ವರ್ಷಗಳ ಹಿಂದೆ ರಚಿತವಾದ ಈ ಗ್ರಂಥದ ಪುನರ್ಮುದ್ರಣವಾಗಿದ್ದು, ಪ್ರತಿಗಳು ಸಿಕ್ಕುತ್ತವೆ). ಇದರಲ್ಲಿ ವಿವಿಧ ಶಕೆಗಳ ವಿವೇಚನೆಯೂ, ಕೋಷ್ಟಕಗಳೂ ಇವೆ. ಇದರ xvii ನೆಯ ಕೋಷ್ಟಕದಲ್ಲಿ, ಕ್ರಿ.ಪೂ. ೬೦ ರಿಂದ ಕ್ರಿ.ಶ. ೨೦೦೦ದ ವರೆಗಿನ, ಪ್ರತಿವರ್ಷಕ್ಕೂ ಸಂವಾದಿಯಾದ ಕಲಿಯುಗ ವಿಕ್ರಮಶಕ ಶಾಲಿವಾಹನಶಕ ಸಪ್ತರ್ಷಿಕಾಲ ಚೇದಿಸಂವತ್ಸರ ಹರ್ಷಕಾಲ ವರ್ಷಗಳು, ಪ್ರಭವಾದಿ ಬಾರ್ಹಸ್ಪತ್ಯಮಾನ ಸಂವತ್ಸರಗಳು (ದಾಕ್ಷಿಣಾತ್ಯ ಮತ್ತು ಔತ್ತರೇಯ ಸಂಪ್ರದಾಯಗಳಂತೆ),[೮] ಸೌರಮಾನ ಮತ್ತು ಚಾಂದ್ರಮಾನ ವರ್ಷಗಳ ಆರಂಭದ ತಾರೀಖು ವಾರಗಳು (ವಾರದಲ್ಲಿ ಕೆಲವು ತಪ್ಪುಗಳು ನನಗೆ ಕಂಡುಬಂದಿವೆ), ಆ ಚಾಂದ್ರಮಾನ ವರ್ಷದಲ್ಲಿನ ಅಧಿಕಕ್ಷಯ ಮಾಸಗಳ ಹೆಸರುಗಳು, ಈ ವಿವರಗಳಿವೆ. xviii ನೇ ಕೋಷ್ಟಕದಲ್ಲಿ ಕ್ರಿ. ಶ. ೧–೨೦೦೦ ವರೆಗಿನ ಗ್ರಹಣಗಳ ಪಟ್ಟಿಮಾಡಿದೆ.

ಕೆಲವು ವೇಳೆ ಗ್ರಂಥಗಳಲ್ಲಿ ಕೊಟ್ಟಿರುವ ಶಕ ವರ್ಷಕ್ಕೂ ಪ್ರಭವಾದಿ ಸಂವತ್ಸರಕ್ಕೂ ತಾಳೆಬರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ತಿಥ್ಯಾದಿ ವಿವರಗಳು ಯಾವುದಕ್ಕೆ ಸರಿಬರುವುವೆಂದು ನೋಡಿ ಕಾಲನಿರ್ಣಯ ಮಾಡಬೇಕಾಗುವುದು,

ಉದಾಹರಣೆಗೆ, ನಯಸೇನನ 'ಧರ್ಮಾಮೃತ'ವಲ್ಲಿನ ಕಾಲಸೂಚಕ ಪದ್ಯವನ್ನು ತೆಗೆದುಕೊಳ್ಳಬಹುದು. ಆ ಪದ್ಯ :

ಗಿರಿಶಿಖಿ ವಾಯುಮಾರ್ಗ ಶಶಿಸಂಖ್ಯೆಯೊಳಾವಗಮೊಂದಿ ವರ್ತಿಸು |
ತ್ತಿರೆ ಶಕಕಾಲ ಮುನ್ನತಿಯ ನಂದನವತ್ಸರದೊಳ್ ಮಹೋತ್ಸವಂ ||
ಬೆರಸೆಸೆದಿರ್ದ ಭಾದ್ರಪದಮಾಸದೊಳಗ್ಗದ ಶುಕ್ಲಪಕ್ಷದೊಳ್ |
ನಿರುಪಮಮಪ್ಪ ಪಾಡಿವದೊಳೊಪ್ಪುವ ಹಸ್ತಯುತಾರ್ಕವಾರದೊಳ್ ||

೧೪–೧೬೪

ಆರ್. ನರಸಿಂಹಾಚಾರ್ಯರು ಕವಿಚರಿತೆಯಲ್ಲಿ ಈ ಪದ್ಯದ ಎರಡನೆಯ ಪಾದದ 'ನಂದನವತ್ಸರದೊಳ್' ಎನ್ನುವ ವರೆಗಿನ ಭಾಗವನ್ನು ಮಾತ್ರ ಕೊಟ್ಟು, ಈ "ಅಸಮಗ್ರ ಪದ್ಯದಿಂದ ಈ ಗ್ರಂಥವನ್ನು ಶಕ ೧೦೩೭ರಲ್ಲಿ ಬರೆದಂತೆ ತಿಳಿಯುತ್ತದೆ. ಆದರೆ ನಂದನ ವರ್ಷವು ೧೦೩೭ ಆಗುವುದಿಲ್ಲ. ೧೦೩೪ ಆಗುತ್ತದೆ. 'ಗಿರಿ' ಎಂಬುದರಿಂದ ಜೈನರು ನಾಲ್ಕು ಎಂಬ ಸಂಖ್ಯೆಯನ್ನು ಸೂಚಿಸುವಂತೆ ತೋರುತ್ತದೆ. ಹಾಗಿದ್ದರೆ ೧೧೧೨ರಲ್ಲಿ ಈ ಗ್ರಂಥವು ಹುಟ್ಟಿರಬೇಕು" ಎಂದು ಹೇಳಿರುತ್ತಾರೆ.[9] ಅವರು ಪದ್ಯವು ಅಸಮಗ್ರವೆಂದಿರುವುದರಿಂದಲೂ ಮಾಸ ತಿಥ್ಯಾದಿ ವಿವರಗಳಿರುವ ಭಾಗ ಅಲ್ಲಿ ಇಲ್ಲದಿರುವುದರಿಂದಲೂ ೧೦೩೭ ತಪ್ಪು, ನಂದನ ವರ್ಷ ಸರಿಯೆಂದು ಹೇಗೆ ತೀರ್ಮಾನಿಸಿದರೆಂದು ಗೊತ್ತಾಗುವುದಿಲ್ಲ. ಜೈನರು 'ಗಿರಿ' ಶಬ್ದವನ್ನು ನಾಲ್ಕನ್ನು ಸೂಚಿಸಲು ಉಪಯೋಗಿಸುತ್ತಾರೆನ್ನುವುದಕ್ಕೆ ಯಾವ ಆಧಾರವನ್ನೂ ನರಸಿಂಹಾಚಾರ್ಯರು ಹೇಳಿಲ್ಲ.

ಸೂರ್ಯಸಿದ್ಧಾನ್ತಾನುಸಾರಿಯಾದ 'ಜ್ಯೋತಿಸ್ಸಿದ್ಧಾನ್ತ ಸಂಗ್ರಹ'ದಂತೆ ಗ್ರಹ ಗಣಿತ ಮಾಡಿ ಬಂದ ವಿವರಗಳು ಇಂತಿವೆ :

ಶಾಲಿವಾಹನಶಕ ಗತಾಬ್ದ ೧೦೩೪ (ಗತಕಲ್ಯಬ್ದ ೪೨೧೩) ಭಾನುವಾರ (ತಾರೀಖು ೨೫–೮–೧೧೧೨) ನಂದನ ಸಂವತ್ಸರ ಭಾದ್ರಪದ ಶುಕ್ಲ ಪಾಡ್ಯ ಸೂರ್ಯೋದಯಾದಿ ಘಳಿಗೆ ೧೬–೭ (Ephemeris ಪ್ರಕಾರ .೨೮ = ಘಳಿಗೆ ೧೬–೪೮) ಉತ್ತರಾ ನಕ್ಷತ್ರ ೧೫–೩೭ (Ephemeris ಪ್ರಕಾರ .೨೫ = ಘಳಿಗೆ ೧೫–೦)

(ಇನ್ನು ಮುಂದೆ Ephemeris ಪ್ರಕಾರ ವಿವರಗಳನ್ನು Eph. ಎಂದು ತೋರಿಸಿ ದಿನದ ದಶಮಾಂಶ ಭಾಗವನ್ನು ಕೊಡದೆ ಅದಕ್ಕೆ ಸಮಾನವಾದ ಘಳಿಗೆಗಳನ್ನು ಮಾತ್ರ ತೋರಿಸಿದ್ದೇನೆ.)

ಉತ್ತರಾ ನಕ್ಷತ್ರ ಕಳೆದಮೇಲೆ ಪಾಡ್ಯ ಮತ್ತು ಹಸ್ತ ನಕ್ಷತ್ರಗಳ ಯೋಗವಿದ್ದು, ಪದ್ಯದಲ್ಲಿನ ವಿವರಗಳು ಸರಿಹೊಂದುತ್ತವೆ.

ಈಗ ಶಕವರ್ಷ ಮತ್ತು ನಂದನ ಸಂವತ್ಸರಗಳ ಸಮನ್ವಯದ ಪ್ರಶ್ನೆ ಏಳುತ್ತದೆ. ಶ್ರೀ ಬಿ. ಬಿ. ಮಹೀಶವಾಡಿಯವರು "ಜೈನಶಾಸ್ತ್ರಗಳ ಪ್ರಕಾರ ಭೋಗಭೂಮಿಯ ನಾಭಿಗಿರಿಗಳು ನಾಲ್ಕು" ಎಂದು ಹೇಳಿ, 'ಗಿರಿ' ಎಂದರೆ ನಾಲ್ಕು ಎಂದು ಅರ್ಥಮಾಡಿ ಸಮನ್ವಯ ಮಾಡಲು ಯತ್ನಿಸಿದ್ದಾರೆ.[10] ಬಹುಶಃ ಅವರನ್ನು ಅನುಸರಿಸಿಯೋ ಏನೋ ಶ್ರೀ ಸುಧಾಕರ ಅವರು 'ಗಿರಿ' ಶಬ್ದಕ್ಕೆ "ನಾಲ್ಕರ ಸಂಖ್ಯಾರ್ಥವನ್ನು ಅನ್ವಯಿಸಿದರೆ, ಆಗ ನಂದನ ವರ್ಷಕ್ಕೆ ಹೊಂದುತ್ತದೆ" ಎಂದಿದ್ದಾರೆ.[11] ಶ್ರೀ ಮಹೀಶವಾಡಿಯವರಾಗಲೀ ಶ್ರೀ ಸುಧಾಕರರಾಗಲೀ ನಾಲ್ಕು ಎಂಬರ್ಥದಲ್ಲಿ 'ಗಿರಿ' ಶಬ್ದದ ಬೇರಾವ ಪ್ರಯೋಗವನ್ನೂ ಕೊಟ್ಟಿಲ್ಲ. ಜೈನ ಗ್ರಂಥಗಳ ಪ್ರಕಾರವಾಗಿ ಕುಲಪರ್ವತಗಳು ಮೂವತ್ತು.[12] ಹೀಗೆಯೇ ಜೈನಶಾಸ್ತ್ರಗಳಲ್ಲಿ ಅನೇಕ ಬೇರೆಬೇರೆ ಪರ್ವತಗಳ ಸಮೂಹದ ಸಂಖ್ಯೆಗಳಿವೆ. (ವಿವರಗಳಿಗೆ, ಭಾರತೀಯ ಜ್ಞಾನಪೀಠ ಪ್ರಕಾಶನವಾದ 'ಜೈನೇಂದ್ರ ಸಿದ್ಧಾಂತಕೋಶ'ವನ್ನು ನೋಡಬಹುದು.) ಹೀಗಿರುವಾಗ, ಭೋಗಭೂಮಿಯ ನಾಭಿಗಿರಿಗಳ ಸಂಖ್ಯೆಯ ಆಧಾರದ ಮೇಲೆ 'ಗಿರಿ' ಎಂದರೆ ನಾಲ್ಕು ಎಂದರೆ ಅದು ಅಪ್ರಸಿದ್ಧ ಸಂಕೇತವಾಗುವುದು. 'ಗಿರಿ' ಮತ್ತು ಅದರ ಪರ್ಯಾಯಪದಗಳನ್ನು ಏಳನ್ನು ಸೂಚಿಸಲು ಜ್ಯೋತಿಷಗ್ರಂಥಗಳಲ್ಲಿ ಉಪಯೋಗಿಸಿದ್ದಾರೆ. ಈ ಪ್ರಸಿದ್ಧಾರ್ಥವನ್ನು ಬಿಟ್ಟು, ಪ್ರಯೋಗಾಧಾರವಿಲ್ಲದ ಅಪ್ರಸಿದ್ಧಾರ್ಥವನ್ನು ತೆಗೆದುಕೊಳ್ಳುವುದು ಸಲ್ಲದು.[13]

ಕೈಬರಹದಲ್ಲಿ ಅಕ್ಷರಗಳನ್ನು ಸೇರಿಸಿ ಬರೆದಿರುವಾಗ 'ಶರ' ಎಂಬುದನ್ನು 'ಗಿರಿ' ಎಂದು ಓದುವ ಸಾಧ್ಯತೆಯಿದೆ :

ಬಹುಶಃ ಮೂಲಪಾಠ "ಶರಶಿಖಿ ವಾಯುಮಾರ್ಗ ಶಶಿಸಂಖ್ಯೆ" ಎಂದು ಇದ್ದಿರಬಹುದು. ಆಗ ಶರ=೫ ಆದುದರಿಂದ ಶಕವರ್ಷ ೧೦೩೫ ಆಗುವುದು. ಇದು ನಂದನ ಸಂವತ್ಸರದ ವರ್ತಮಾನ ಶಕಸಂಖ್ಯೆ. ಹೀಗೆ ನಯಸೇನನ ಪದ್ಯದ ಶಕವರ್ಷ ಸಂವತ್ಸರಗಳ ಸಮನ್ವಯವಾಗುವುದು.

ಚೈತ್ರ, ವೈಶಾಖಾದಿ ಚಾಂದ್ರಮಾಸಗಳು ಕ್ರಮವಾಗಿ ಮೀನ, ಮೇಷಾದಿ ಸೌರಮಾಸಗಳಲ್ಲಿ ಆರಂಭವಾಗುತ್ತವೆ. ಬೇರೆಬೇರೆ ಮಾಸಗಳ ಪೂರ್ಣಿಮೆ ಮತ್ತು ಅಮಾವಾಸ್ಯೆಗಳ ಕಾಲದಲ್ಲಿ, ಈ ಕೆಳಗಿನ ಕೋಷ್ಟಕದಲ್ಲಿ ಕೊಟ್ಟಿರುವಂತೆ ನಕ್ಷತ್ರಗಳು ಬರುವ ಸಾಧ್ಯತೆ ಇದೆ.

| ತಿಂಗಳು | ಪೂರ್ಣಿಮೆಯಲ್ಲಿ ಬರಬಹುದಾದ ನಕ್ಷತ್ರ | ಅಮಾವಾಸ್ಯೆಯಲ್ಲಿ ಬರಬಹುದಾದ ನಕ್ಷತ್ರ |
|---|---|---|
| ಚೈತ್ರ | ಉತ್ತರಾ, ಹಸ್ತ, ಚಿತ್ತೆ, ಸ್ವಾತಿ | ರೇವತಿ, ಅಶ್ವಿನಿ, ಭರಣಿ, ಕೃತ್ತಿಕೆ |
| ವೈಶಾಖ | ಚಿತ್ತೆ, ಸ್ವಾತಿ, ವಿಶಾಖೆ, ಅನೂರಾಧೆ | ಭರಣಿ, ಕೃತ್ತಿಕೆ, ರೋಹಿಣಿ, ಮಗಶಿರ |
| ಜ್ಯೇಷ್ಠ | ವಿಶಾಖೆ, ಅನೂರಾಧೆ, ಜ್ಯೇಷ್ಠ, ಮೂಲಾ | ರೋಹಿಣಿ, ಮೃಗಶಿರ, ಆದ್ರ್ರ, ಪುನರ್ವಸು |
| ಆಷಾಢ | ಮೂಲಾ, ಪೂರ್ವಾಷಾಢ, ಉತ್ತರಾಷಾಢ, ಶ್ರವಣ | ಆದ್ರ್ರ, ಪುನರ್ವಸು, ಪುಷ್ಯ, ಆಶ್ಲೇಷಾ |
| ಶ್ರಾವಣ | ಉತ್ತರಾಷಾಢ, ಶ್ರವಣ, ಧನಿಷ್ಠಾ, ಶತಭಿಷಾ | ಆಶ್ಲೇಷಾ, ಮಖಾ, ಪುಬ್ಬ, ಉತ್ತರಾ |
| ಭಾದ್ರಪದ | ಧನಿಷ್ಠಾ, ಶತಭಿಷಾ, ಪೂರ್ವಾಭಾದ್ರ, ಉತ್ತರಾಭಾದ್ರ | ಪುಬ್ಬ, ಉತ್ತರಾ, ಹಸ್ತ, ಚಿತ್ತೆ |
| ಆಶ್ವಯುಜ | ಉತ್ತರಾಭಾದ್ರ, ರೇವತಿ, ಅಶ್ವಿನಿ | ಹಸ್ತ, ಚಿತ್ತೆ, ಸ್ವಾತಿ, ವಿಶಾಖೆ |
| ಕಾರ್ತಿಕ | ಅಶ್ವಿನಿ, ಭರಣಿ, ಕೃತ್ತಿಕೆ, ರೋಹಿಣಿ | ಸ್ವಾತಿ, ವಿಶಾಖೆ, ಅನೂರಾಧೆ, ಜ್ಯೇಷ್ಠ |
| ಮಾರ್ಗಶಿರ | ಕೃತ್ತಿಕೆ, ರೋಹಿಣಿ, ಮೃಗಶಿರ, ಆದ್ರ್ರ | ಜ್ಯೇಷ್ಠ, ಮೂಲಾ, ಪೂರ್ವಾಷಾಢ, ಉತ್ತರಾಷಾಢ |
| ಪುಷ್ಯ | ಮೃಗಶಿರ, ಆದ್ರ್ರ, ಪುನರ್ವಸು, ಪುಷ್ಯ | ಪೂರ್ವಾಷಾಢ, ಉತ್ತರಾಷಾಢ, ಶ್ರವಣ, ಧನಿಷ್ಠಾ |
| ಮಾಘ | ಪುನರ್ವಸು, ಪುಷ್ಯ, ಆಶ್ಲೇಷಾ, ಮಖಾ | ಶ್ರವಣ, ಧನಿಷ್ಠಾ, ಶತಭಿಷಾ, ಪೂರ್ವಾಭಾದ್ರ |
| ಫಾಲ್ಗುಣ | ಮಖಾ, ಪುಬ್ಬ, ಉತ್ತರಾ, ಹಸ್ತ | ಶತಭಿಷಾ, ಪೂರ್ವಾಭಾದ್ರ, ಉತ್ತರಾಭಾದ್ರ, ರೇವತಿ |

ಪೂರ್ಣಿಮೆ ಅಥವಾ ಅಮಾವಾಸ್ಯೆಯಿಂದ ಎಣಿಸಿ ಇತರ ಕೃಷ್ಣ ಮತ್ತು ಶುಕ್ಲಪಕ್ಷದ ತಿಥಿಗಳ ಕಾಲದಲ್ಲಿ ಬರಬಹುದಾದ ನಕ್ಷತ್ರಗಳನ್ನು ತಿಳಿಯಬಹುದು.

ಈಗ, ಹಿಂದೆ ಉದಾಹರಣೆಯಾಗಿ ಕೊಟ್ಟಿರುವ, ಜನ್ನನ 'ಯಶೋಧರ ಚರಿತೆ'ಯ ಪದ್ಯದಲ್ಲಿನ ಕಾಲವನ್ನು ಪರೀಕ್ಷಿಸಬಹುದು. ಆ ಪದ್ಯದ ಪೂರ್ಣಪಾಠ ಹೀಗಿದೆ :

ಶ್ರೀ ಗಿರಿದುರ್ಗಮಲ್ಲ ನೃಪರಾಜ್ಯದ ವತ್ಸರಮುತ್ತರೋತ್ತರ ।
ಕ್ಕಾಗಿರೆ ಶುಕ್ಲದಾಶ್ವಯುಜ ಕೃಷ್ಣದ ಪಂಚಮಿ *ಪುಷ್ಯತಾರೆ ಪೂ॥
ರ್ಣಾ* ಗುರುವಾಗೆ ಭೂತಳದೊಳೀಕೃತಿ ಪೆತ್ತುದು ಸುಪ್ರತಿಷ್ಠೆಯಂ ।
ಚಾಗದಭೋಗದಗ್ಗಳಿಕೆಯಂ ಮೆಱೆದಂ ಕವಿಭಾಳಲೋಚನಂ

(ಪಾಠಾಂತರ—* ಪೂರ್ಣಪುಷ್ಯತಾರಾ)

ಈ ಪದ್ಯದಲ್ಲಿ ಶಕವರ್ಷವನ್ನು ಹೇಳಿಲ್ಲವಾದರೂ, ಅವನ 'ಅನಂತನಾಥ ಪುರಾಣ'ದ ಕಾಲ (ಗತಶಕ ೧೧೫೨) ಮತ್ತು ತರೀಕೆರೆಯ ೪೫ನೇ ಶಾಸನದ ಕಾಲ (ಗತಶಕ ೧೧೧೯ ಇವುಗಳ ಮಧ್ಯವರ್ತಿಯಾದ ಶುಕ್ಲಸಂವತ್ಸರವೇ (ಗತಶಕ ೧೧೩೧) 'ಯಶೋಧರ ಚರಿತೆ'ಯಲ್ಲಿ ಹೇಳಿರುವ ಕಾಲವೆನ್ನಲು ಅಡ್ಡಿಯಿಲ್ಲ. ಈ ವರ್ಷಕ್ಕೆ ಗ್ರಹಗಣಿತದಿಂದ ಬಂದ ತಿಥ್ಯಾದಿ ವಿವರಗಳು :

(i) ಭಾನುವಾರ ೨೦–೯–೧೨೦೯ ಶುಕ್ಲ ಸಂವತ್ಸರ ಆಶ್ವಯುಜ ಕೃಷ್ಣ ಪಂಚಮೀ ಸೂರ್ಯೋದಯಾದಿ ಘಳಿಗೆ ೮–೪೭ (Eph. ೮–೨೪) ರೋಹಿಣೀನಕ್ಷತ್ರ ೧೨–೪೯ (Eph. ೧೨–೩೬)

(ii) ಗುರುವಾರ ೨೪–೯–೧೨೦೯ ಶುಕ್ಲ ಸಂವತ್ಸರ ಆಶ್ವಯುಜ ಕೃಷ್ಣ ನವಮೀ ಸೂರ್ಯೋದಯಾದಿ ಘಳಿಗೆ ೧೫–೪೩ (Eph. ೧೬–೧೨ ಪುಷ್ಯನಕ್ಷತ್ರ ೨೬–೧೧ (Eph. ೨೫–೪೮)

ಪದ್ಯದಲ್ಲಿ ಹೇಳಿರುವ ಪುಷ್ಯನಕ್ಷತ್ರ ಗುರುವಾರಗಳು ಕೃಷ್ಣ ಪಂಚಮಿಯಂದು ಬರದೆ, ಕೃಷ್ಣನವಮಿ/ದಶಮಿಗೆ ಬರುತ್ತವೆ. ಆದುದರಿಂದ ಜನ್ನನು ಈ ಪದ್ಯವನ್ನು ಗ್ರಂಥಸಮಾಪ್ತಿ ಕಾಲದಲ್ಲೋ 'ಪ್ರತಿಷ್ಠೆ ಮಾಡಿಸಿ'ದಾಗಲೋ ಬರೆಯದೆ, ಎಷ್ಟೋ ಕಾಲದ ಅನಂತರ ಬರೆದು ಸೇರಿಸಿದುದರಿಂದ, ವಿಸ್ಮೃತಿಯಿಂದಾಗಿ ತಪ್ಪು ವಿವರಗಳನ್ನು ಕೊಟ್ಟಿರಬೇಕು; ಅಥವಾ ಶುಭ ತಿಥಿ ವಾರನಕ್ಷತ್ರಯುತವಾದ ದಿನದಲ್ಲಿ ಕಾವ್ಯಸಮಾಪ್ತಿ ಪ್ರತಿಷ್ಠೆಯಾಯಿತೆಂದು ಹೇಳಲು — ಇಲ್ಲಿ ಕೊಟ್ಟಿರುವಂತೆ ಅವು ಸೇರಿಬರುವುದು ಅಸಾಧ್ಯವೆಂಬುದನ್ನರಿಯದೆ ಜನ್ನನೋ ಬೇರಾರೋ ಈ ಪದ್ಯ ರಚಿಸಿ ಸೇರಿಸಿರಬೇಕು.

ಕೊನೆಯದಾಗಿ, ಅನೇಕ ತೊಡಕುಗಳಿರುವ ಒಂದು ಉದಾಹರಣೆಯನ್ನು ಪರಿಶೀಲಿಸಬಹುದು,

ಡಾ|| ಬಿ. ಸ್ವಿ. ಶಿರೂರರು ತಮ್ಮ ‘ಶ್ರವಣಬೆಳಗೊಳ’ ವೆಂಬ ಗ್ರಂಥದ[14] ೧೬೫ ನೆಯ ಪುಟದಲ್ಲಿ ದೊಡ್ಡಯ್ಯನೆಂಬ ಕವಿ (ಕ್ರಿ.ಶ.ಸು. ೧೫೫೦) ‘ಭುಜಬಲಿಚರಿತ’, ‘ಚಂದ್ರಪ್ರಭಚರಿತೆ’ಯೆಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆಂದು ಹೇಳಿ, ಭುಜಬಲಿ ಚರಿತದಿಂದ ನಾಲ್ಕು ಪದ್ಯಗಳನ್ನುದ್ಧರಿಸಿ ಕೊಟ್ಟಿದ್ದಾರೆ. ಅವರು ಆಧಾರ ಗ್ರಂಥ ವೆಂದು ಅಡಿಟಿಪ್ಪಣಿಯಲ್ಲಿ ಕೊಟ್ಟಿರುವ ಕವಿಚರಿತೆ II ರಲ್ಲಿ ಭುಜಬಲಿ ಚರಿತದ ಉಲ್ಲೇಖವಿಲ್ಲ. ಡಾ|| ಶಿರೂರರು ಈ ಗ್ರಂಥ ಯಾವ ಭಾಷೆಯಲ್ಲಿ ರಚಿತವಾಗಿದೆ ಯೆಂದು ಸ್ಪಷ್ಟಪಡಿಸದಿದ್ದರೂ ಅವರು ಉದಾಹರಿಸಿರುವ ಪದ್ಯಗಳು ನಾಲ್ಕೂ ಸಂಸ್ಕೃತದಲ್ಲಿರುವುದರಿಂದಲೂ ಗ್ರಂಥದ ಕೊನೆಯಲ್ಲಿದೆಯೆಂದು ಹೇಳಲಾದ, ಗ್ರಂಥ ಕಾರನ ವಂಶ ಮತ್ತು ವಾಸಸ್ಥಳಗಳನ್ನುಲ್ಲೇಖಿಸುವ ಪದ್ಯದ ಸಂಖ್ಯೆ ೧೦೨ ಆಗಿರುವುದರಿಂದಲೂ ಭುಜಬಲಿ ಚರಿತ ಸಂಸ್ಕೃತ ಭಾಷೆಯ ಶತಕ ಗ್ರಂಥವೆಂದು ತೋರುತ್ತದೆ. ಅವರು ಕೊಟ್ಟಿರುವ ಪದ್ಯಗಳಲ್ಲೊಂದು ಗೋಮಟೇಶ ಪ್ರತಿಷ್ಠೆಯ ಕಾಲವನ್ನು ಹೇಳುತ್ತದೆ. ಆ ಪದ್ಯ :

ಕಲ್ಯಬ್ದೇ ಷಟ್‌ಶತಾಖ್ಯೇ ವಿನುತ ವಿಭವ ಸಂವತ್ಸರೇ ಮಾಸಿ ಚೈತ್ರೇ |
ಪಂಚಮ್ಯಾಂ ಶುಕ್ಲಪಕ್ಷೇ ದಿನಮಣಿದಿವಸೇ ಕುಂಭಲಗ್ನೇ ಮನೋಜ್ಞೇ ||
ಸೌಭಾಗ್ಯಾಖ್ಯಾನುಯೋಗೇ ಮೃಗಶಿರ (?) ಭಗಣೇ ಸುಪ್ರಶಸ್ತಾಂ ಚಕಾರ |
ಶ್ರೀಮಚ್ಚಾಮುಂಡರಾಜೋ ಬೆಲಗುಲನಗರೇ ಗೊಮ್ಮಟೇಶಪ್ರತಿಷ್ಠಾಮ್
||೫೫||

(ಇಲ್ಲಿ ಪ್ರಶ್ನಾರ್ಥಕ ಚಿಹ್ನೆಯನ್ನು ಏಕೆ ಹಾಕಿದ್ದಾರೋ ತಿಳಿಯದು.)

ಡಾ|| ಶಿರೂರರು ಮತ್ತೆ, ಅದೇ ಗ್ರಂಥದ ೨೨೫ನೆಯ ಪುಟದಲ್ಲಿ “ಕ್ರಿ. ಶ. ೧೫೫೦ ರಲ್ಲಿ ಪಿರಿಯಪಟ್ಟಣದ ದೊಡ್ಡಯ್ಯನು ಸಂಸ್ಕೃತದಲ್ಲಿ ಬರೆದ ‘ಬಾಹುಬಲಿ ಶತಕಂ’ ಎಂಬ ಗ್ರಂಥದ್ದೆಂದು

ಕಲ್ಯಬ್ದೇ ಷಟ್ಛತಾಖ್ಯೇ ವಿನುತವಿಭವಸಂವತ್ಸರೇ ಮಾಸಿ ಚೈತ್ರೇ |
ಪಂಚಮ್ಯಾಂ ಶುಕ್ಲ ಪಕ್ಷೇ ದಿನಮಣಿದಿವಸೇ ಕುಂಭಲಗ್ನೇ ಸುಯೋಗೇ ||
ಸೌಭಾಗ್ಯೇ ಹಸ್ತನಾಮ್ನಿ ಪ್ರಕಟಿತ ಭಗಣೇ ಸುಪ್ರಶಸ್ತಾಂ ಚಕಾರ |
ಶ್ರೀ ಚಾಮುಂಡರಾಜೋ ಬೆಳಗುಳನಗರೇ ಗೋಮಟೇಶ ಪ್ರತಿಷ್ಠಾಮ್ ||

ಎಂಬ ಪದ್ಯವನ್ನು ಕೊಟ್ಟಿದ್ದಾರೆ. ಈ ಪದ್ಯಗಳಲ್ಲಿ ಕಂಡುಬರುವ ವ್ಯತ್ಯಾಸಗಳ ವಿಷಯವಾಗಿ ಯಾವ ಟೀಕೆಯನ್ನೂ ಮಾಡದೆ, ಡಾ|| ಶಿರೂರರು “ಶ್ರೀಗೋವಿಂದ ಸ್ವಾಮಿ ಶ್ರವಣಬೆಳಗೊಳದಲ್ಲಿ ಚಾಮುಂಡರಾಯನು ಶ್ರೀ ಭುಜಬಲಿಯನ್ನು ಮಾಡಿಸಿ ಪ್ರತಿಷ್ಠಾಪಿಸಿದ್ದು ಕ್ರಿ. ಶ. ೯೮೧ನೆಯ ಮಾರ್ಚಿ ೧೩ನೆಯ ದಿನಾಂಕ ಆದಿತ್ಯವಾರ ವೆಂದು ನಿರ್ಧರಿಸಿದ್ದಾರೆ” ಎಂದು ಮಾತ್ರ ಹೇಳಿದಾರೆ. (ಪುಟ ೩೨೬)

ಎರಡು ಪದ್ಯಗಳಂತೆಯೂ ೬೦೦ನೆಯ ವಿಭವಸಂವತ್ಸರ ಚೈತ್ರಶುದ್ಧ ಪಂಚಮೀ ಭಾನುವಾರ ಸೌಭಾಗ್ಯಯೋಗ ಕುಂಭಲಗ್ನದಲ್ಲಿ ಪ್ರತಿಷ್ಠೆ ನಡೆಯಿತು. ಒಂದರ ಪ್ರಕಾರ ಕಲ್ಯಬ್ದ ಮೃಗಶಿರ ನಕ್ಷತ್ರವಾದರೆ, ಇನ್ನೊಂದರ ಪ್ರಕಾರ ಕಲ್ಕ್ಯಬ್ದ ಹಸ್ತನಕ್ಷತ್ರ.

ಡಾ|| ಶಿರೂರರು 'ಭುಜಬಲಿಚರಿತ' ಮತ್ತು 'ಬಾಹುಬಲಿ ಶತಕಂ' ಇವು ಬೇರೆ ಬೇರೆ ಗ್ರಂಥಗಳೆಂದು ಭಾವಿಸಿರುವಂತೆ ಕಾಣುತ್ತದೆ. ಆದರೆ ಒಬ್ಬನೇ ಕವಿ ಒಂದೇ ಭಾಷೆಯಲ್ಲಿ ಒಂದೇ ವಿಷಯವನ್ನುಳ್ಳ ಮತ್ತು ಸಮಾನಾರ್ಥಕ ಹೆಸರುಗಳಿರುವ ಎರಡು ಶತಕಗ್ರಂಥಗಳನ್ನು ಬರೆದಿರುವುದು ಅಸಂಭಾವ್ಯ. ಆದುದರಿಂದ ಇವು ಬಹುಶಃ ಭಿನ್ನಪಾಠಗಳನ್ನೊಳಗೊಂಡ ಒಂದೇ ಗ್ರಂಥದ ಬೇರೆ ಬೇರೆ ಹೆಸರಿನಲ್ಲಿರುವ ಪ್ರತಿ (Recensions)ಗಳಿರಬೇಕು. ಗೋವಿಂದ ಪೈಯವರು ಗ್ರಂಥವನ್ನು 'ಬಾಹುಬಲಿಚರಿತ್ರ' ಅಥವಾ 'ಭುಜಬಲಿಶತಕ' ವೆಂಬ ಹೆಸರಿನ ಸಂಸ್ಕೃತ ಕವಿತೆಯೆಂದು ಉಲ್ಲೇಖಿಸಿ, ಈ ಪದ್ಯದ ಸಂಖ್ಯೆಯನ್ನು ೫೫ ಎಂದೇ ಕೊಟ್ಟಿದ್ದಾರೆ. ಅವರ ಪಾಠ ಡಾ|| ಶಿರೂರರ ಗ್ರಂಥದ ೩೨೫ ನೆಯ ಪುಟದಲ್ಲಿನ ಪಾಠದಂತಿದ್ದು ಮೂರನೆಯ ಸಾಲಿನಲ್ಲಿ "ಹಸ್ತನಾಮ್ನಿ"ಗೆ ಬದಲು "ಮಸ್ತನಾಮ್ನಿ" ಎಂದಿದೆ. ಗೋವಿಂದ ಪೈಯವರು ಅಡಿಟಿಪ್ಪಣಿಯಲ್ಲಿ "ಕುಂಭಲಗ್ನೇ ಮನೋಜ್ಞೇ ಸೌಭಾಗ್ಯಾಖ್ಯಾನುಯೋಗೇ ಮೃಗಶಿರಭಗತೇ" ಎಂಬ ಪಾಠಾಂತರವನ್ನು ಕೊಟ್ಟಿದ್ದಾರೆ. "ಕಲ್ಯಬ್ದ" ಪಾಠಾಂತರವನ್ನು ಕೊಟ್ಟಿಲ್ಲ. ರಾಚಮಲ್ಲನ ಆಳಿಕೆಯಲ್ಲಿ (ಕ್ರಿ. ಶ. ೯೭೩–೯೮೬) ಚಾವುಂಡರಾಯನು ಜರುಗಿಸಿದ ಗೋಮಟೇಶ್ವರ ಪ್ರತಿಷ್ಠೆಯ ವಿಷಯವನ್ನು ಕ್ರಿ. ಶ. ೯೭೮ ರಲ್ಲಿ ರಚಿಸಿ ಮುಗಿಸಿದ ತನ್ನ 'ಚಾವುಂಡರಾಯ ಪುರಾಣ'ದಲಿ ಹೇಳಿಲ್ಲವಾದ ಕಾರಣ, ಪ್ರತಿಷ್ಠೆ ೯೭೮ರಿಂದ ೯೮೬ರೊಳಗೆ ನಡೆದಿರಬೇಕೆಂದೂ 'ಕಲ್ಕಿ ಸಂವತ್ಸರ ಎಂದರೆ ಏನೆಂದು ಕಂಡಿತವಾಗಿ ತಿಳಿಯದೆಂ'ದೂ ಹೇಳಿ, ಗೋವಿಂದ ಪೈಯವರು

> "ರಾಚಮಲ್ಲನ ಆಳಿಕೆಯ ಕ್ರಿ. ಶ. ೯೭೩ನೆಯ ಶ್ರೀಮುಖದಿಂದ ೯೮೬ನೆಯ ವ್ಯಯದ ವರೆಗಣ ದಕ್ಷಿಣ ಸಂಪ್ರದಾಯದ ಸಂವತ್ಸರಗಳಲ್ಲಿ15 ವಿಭವ ಸಂವತ್ಸರವು ಸರ್ವಥಾ ಬಾರದಾದರೂ, ಸಂವತ್ಸರದ ಹೆಸರನ್ನು ಬಿಟ್ಟು ಮಿಕ್ಕ ಮಟ್ಟಿಗೆ ದೊಡ್ಡಯ್ಯನ ಹೇಳಿಕೆಯನ್ನು ನಚ್ಚಬಹುದಾದರೆ, ಮತ್ತು ಹಾಗಾದರೆ ಮಾತ್ರ, ಕ್ರಿ. ಶ. ೯೭೮ರಿಂದ ೯೮೬ರೊಳಗಣ ಅವಷ್ಟೂ ವರ್ಷಗಳಲ್ಲಿ ಚೈತ್ರ ಶುಕ್ಲ ಪಂಚಮಿಯ ತಿಥಿ ಕ್ರಿ. ಶ. ೯೮೧ನೆಯ ವಿಷು (ವೃಷ) ಸಂವತ್ಸರದಲ್ಲಿ ಮಾತ್ರ ಮಾರ್ಚಿ ೧೩ನೆಯ ತಾರೀಕಿನಂದು ಆದಿತ್ಯವಾರ ಬಂದಿದ್ದು ಅಂದು ಮೃಗಶಿರಾ ನಕ್ಷತ್ರವೂ ಸೌಭಾಗ್ಯಯೋಗವೂ ಇದ್ದುದರಿಂದ, ಆ ಪ್ರತಿಷ್ಠೆ ಪ್ರಾಯಶಃ ಆ ೯೮೧ ಮಾರ್ಚಿ ೧೩ನೆಯ ತಾರೀಕು ರವಿವಾರದಂದು ನೆರವೇರಿರಬೇಕು"

ಎಂಬ ನಿಲುವಿಗೆ ಬಂದಿದ್ದಾರೆ.16

ಗ್ರಹಗಣಿತದಂತೆ,

(i) ಶನಿವಾರ ೭-೩-೯೮೮ ವಿಭವ ಸಂವತ್ಸರ ಚೈತ್ರ ಶುದ್ಧ ಪಂಚಮೀ ಸೂರ್ಯೋದಯಾದಿ ಘಳಿಗೆ ೨೩-೩೬ (Eph. ೨೪-೦) ರೋಹಿಣೀ ನಕ್ಷತ್ರ ದಿನಪೂರ್ತಿ (Eph. ನಸ್ಲಿೂ) ಪ್ರೀತಿಯೋಗ ೬೯-೩೫

(ii) ಭಾನುವಾರ ೧೩-೩-೯೮೧ ವಿಷು ಸಂವತ್ಸರ (ಗತಶಾಲಿವಾಹನಶಕ ೯೦೩ ಚೈತ್ರ ಶುದ್ಧ ಪಂಚಮೀ ಸೂರ್ಯೋದಯಾದಿ ಘಳಿಗೆ ೨೯-೩೮ (Eph. ೩೦-೩೬) ರೋಹಿಣೀ ನಕ್ಷತ್ರ ೪೦-೯ (Eph ೪೦-೪೮) ಆಯುಷ್ಮಾನ್‌ಯೋಗ ೨೨-೫೯. ಅನಂತರ ಸೌಭಾಗ್ಯಯೋಗ ಬರುತ್ತದೆ.

ವಿಭವ ಸಂವತ್ಸರದಲ್ಲಿ ಚೈತ್ರ ಶುದ್ಧ ಪಂಚಮಿಗೆ ವಾರ ನಕ್ಷತ್ರಯೋಗಗಳೊಂದೂ ಕೂಡುವುದಿಲ್ಲ; ಅಲ್ಲದೆ, ಗೋವಿಂದ ಪೈಯವರು ಹೇಳಿರುವಂತೆ, ಆ ಸಂವತ್ಸರ ರಾಜಮಲ್ಲನ ಆಳಿಕೆಯ ಅವಧಿಯಲ್ಲೂ ಇಲ್ಲ.

ವಿಷು ಸಂವತ್ಸರದಲ್ಲಿ ಚೈತ್ರ ಶುದ್ಧ ಪಂಚಮಿಗೆ ವಾರ ಯೋಗಗಳು ಹೊಂದುತ್ತವೆ; ಆದರೆ ಮೃಗಶಿರಾ ನಕ್ಷತ್ರವು ಪಂಚಮಿ ಮುಗಿದ ಮೇಲೆ ಬರುತ್ತದೆ. ಸೂರ್ಯೋದಯ ಕಾಲದಲ್ಲಿ ಮೀನಲಗ್ನವಾದುದರಿಂದ, ಕುಂಭಲಗ್ನ ಮಧ್ಯರಾತ್ರಿ ಯಾವ ವೇಳೆ ಮರುದಿನ ಬೆಳಗಾಗುವ ಮೊದಲು ಬರುತ್ತದೆ. ಆ ಹೊತ್ತಿಗೆ ನಕ್ಷತ್ರಯೋಗಗಳು ಸರಿಬರುತ್ತವೆ; ಆದರೆ ತಿಥಿ ಷಷ್ಠೀ. ರೂಢಿಯಲ್ಲಿ ಹೇಳುವಂತೆ ಉದಯಕಾಲದ ತಿಥಿವಾರಗಳನ್ನು ಹೇಳಿ, ಪ್ರತಿಷ್ಠಾಕಾಲದ ನಕ್ಷತ್ರ ಯೋಗಲಗ್ನಗಳನ್ನು ಹೇಳಿದ್ದಾನೆಂದು ಭಾವಿಸಿದರೆ, ಗೋವಿಂದ ಪೈಯವರು ಹೇಳಿರುವ ೧೩-೩-೯೮೧ ರಂದು ಮಾಸತಿಥ್ಯಾದಿಗಳಿಗೆಲ್ಲ ಸರಿಬರುತ್ತವೆ.

ಈಗ ಕಲ್ಯಬ್ದ ಅಥವಾ ಕಲ್ಯಬ್ದದ ಕಗ್ಗಂಟು ಮತ್ತು ವಿಭವ ಸಂವತ್ಸರಗಳ ವಿಷಯ.[17]

ಪಂಚಾಂಗಗಳಲ್ಲಿ "ಗತಕಲಿ" ಎನ್ನುವಂತೆ "ಗತಶಾಲಿ" ಎಂದು ಶಾಲಿವಾಹನ ಶಕ ವರ್ಷಗಳನ್ನು ಸೂಚಿಸುವುದುಂಟು. ಪದ್ಯಗಳ ಶಿಥಿಲಬಂಧವನ್ನೂ "ವಿನುತ ವಿಭವ ಸಂವತ್ಸರೇ", "ಸೌಭಾಗ್ಯಾಖ್ಯಾನುಯೋಗೇ ಮೃಗಶಿರ ಭಗಣೇ" ಇತ್ಯಾದಿ ಪ್ರಯೋಗಗಳನ್ನೂ ನೋಡಿದರೆ, ಕವಿ ಶಾಲಿವಾಹನ ಶಕವನ್ನು ಸೂಚಿಸಲು "ಶಾಲ್ಯಬ್ದೇ" ಎಂಬ ಪದವನ್ನೂ, ಸಂವತ್ಸರದ ಹೆಸರನ್ನು ಹೇಳುವಾಗ ಛಂದಸ್ಸಿಗೆ ಹೊಂದಿಸಲು, "ವೃಷ"ಕ್ಕೆ ಬದಲು ಪರ್ಯಾಯ ಪದ "ವೃಷಭ"ವನ್ನೋ ಅಥವಾ "ವಿಷು"ಗೆ ಬದಲು "ವಿಷುವ"ವನ್ನೋ ಪ್ರಯೋಗಿಸಿರಬಹುದೆಂದು ತೋರುತ್ತದೆ. ಬಹುಶಃ ಮೂಲಪಾಠ "ಶಾಲ್ಯಬ್ದೇ ನೋದಶಾಖ್ಯೇ ವಿನುತ ವೃಷಭ (ವಿಷುವ) ಸಂವತ್ಸರೇ" ಎಂದು ಇದ್ದಿತು.[18] ಈ ಊಹಿತ ಪಾಠಕ್ಕೆ "ಶಾಲಿವಾಹನ ಶಕೆಯಲ್ಲಿ

೧೬ ನೆಯ (ವೃಷ) ವಿಷು ಸಂವತ್ಸರ"ವೆಂದು ಅರ್ಥವಾಗುವುದು. ಶಾಲಿವಾಹನ ಶಕದ ಆರಂಭ ವರ್ಷ ಬಹುಧಾನ್ಯ ಸಂವತ್ಸರವಾದಕಾರಣ ಈ ಶಕದಲ್ಲಿ ಮೊದಲ ವಿಷುಸಂವತ್ಸರಕ್ಕೆ ಗತಶಕವರ್ಷಗಳು ೩. ಆದುದರಿಂದ ೧೬ನೆಯ ವಿಷುಸಂವತ್ಸರಕ್ಕೆ ಗತಶಕವರ್ಷಗಳು ೩ + (೧೫ × ೬೦) = ೯೦೩. ಈಗ ಪದ್ಯದಲ್ಲಿನ ಎಲ್ಲ ವಿವರಗಳೂ ಪರಸ್ಪರ ಹೊಂದುತ್ತವೆ.

ಕನ್ನಡ ನಾಡಿನ ಗ್ರಂಥಗಳನ್ನು ಗಮನದಲ್ಲಿಟ್ಟುಕೊಂಡು ಈ ಲೇಖನವನ್ನು ಬರೆದಿರುವುದರಿಂದ, ಉತ್ತರ ದೇಶದಲ್ಲಿ ರೂಢಿಯಲ್ಲಿರುವ ಪೂರ್ಣಿಮಾಂತ (ಕೃಷ್ಣಾದಿ) ಮಾಸ, ಔತ್ತರೇಯ ಬಾರ್ಹಸ್ಪತ್ಯಮಾನ, ವಿಕ್ರಮ ಶಕೆಯಲ್ಲಿ ವರ್ಷಾರಂಭ ದಿನಗಳಲ್ಲೂ ಸೌರಮಾಸಾರಂಭ ದಿನದಲ್ಲೂ ಕಂಡುಬರುವ ಪ್ರಾಂತೀಯ ವ್ಯತ್ಯಾಸಗಳು ಮೊದಲಾದ ವಿಷಯಗಳನ್ನು ಇಲ್ಲಿ ವಿವರಿಸಹೋಗಿಲ್ಲ.

## ಟಿಪ್ಪಣಿಗಳು

1. ಅಜಿತತೀರ್ಥಕರ ಪುರಾಣ ತಿಲಕಂ (ಜೈನ ಸಾಹಿತ್ಯ ಪ್ರಚಾರ ಸಂಘ ಮತ್ತು ಜೈನ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು, ೧೯೫೯)—ದ್ವಾದಶಾಶ್ವಾಸದ ೫೪ ನೆಯ ಪದ್ಯ.
2. ಎರಡನೆಯ ನಾಗವರ್ಮ ವಿರಚಿತ ವರ್ಧಮಾನ ಪುರಾಣಂ (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೪)—ಷೋಡಶಾಶ್ವಾಸದ ೪೭ ನೆಯ ಪದ್ಯ.
3. ಜನ್ನ ಕವಿಯ ಯಶೋಧರ ಚರಿತೆ (ಕನ್ನಡ ಸಾಹಿತ್ಯ ಪರಿಷತ್ತು, ೧೯೭೭) ನಾಲ್ಕನೆಯ ಅವತಾರದಲ್ಲಿ ೮೬ ನೆಯ ಪದ್ಯ.
4. "According to the Śwētāmbara sect this event took place 470 years before Vikrama, or in B. C. 527. The Digambaras, however, make it 605 years before Vikrama, As the difference between the two dates is exactly 135 years, it seems probable that the Digambara date of 605 years before Vikrama should be altered to 605 years before Śaka, which would agree with that of the other sect."—*Book of Indian Eras* (Cunningham); Section VII : **Nirvāṇa of Mahāvīra**.
5. ಇಲ್ಲಿ ದಾಕ್ಷಿಣಾತ್ಯ ಬಾರ್ಹಸ್ಪತ್ಯಮಾನ ಪದ್ಧತಿಯನ್ನು ಗಣನೆಗೆ ತೆಗೆದುಕೊಂಡಿದೆ. ಔತ್ತರೇಯ ಪದ್ಧತಿಯ ವಿಷಯವನ್ನು ಮುಂದೆ ಪ್ರಸ್ತಾಪಿಸಿದೆ.
6. Ephemeries ಗ್ರಂಥದ ಕ್ರಿ. ಶ. ೧೮೦೦–೨೦೦೦ ದ ಸಂಪುಟ ೧೯೧೫ ರಲ್ಲೂ ಉಳಿದ ಸಂಪುಟಗಳು ೧೯೨೨ ರಲ್ಲೂ ಅಚ್ಚಾಗಿದ್ದು ಈಗ ದುರ್ಲಭವಾಗಿವೆ. ನನಗೆ ತಿಳಿದ ಮಟ್ಟಿಗೆ, ಬೆಂಗಳೂರಿನಲ್ಲಿ Public Library ಯಲ್ಲಿ ಮಾತ್ರ ಈ ಗ್ರಂಥ

ನೋಡಸಿಗುತ್ತದೆ. ಅಲ್ಲೂ 1800–2000ದ ಸಂಪುಟವಿಲ್ಲ. ಭಾರತದ ಕೇಂದ್ರ ಅಥವಾ ರಾಜ್ಯ ಸರಕಾರಗಳಾಗಲಿ ಯಾವುದಾದರೂ ವಿದ್ವತ್‌ಸಂಸ್ಥೆಯಾಗಲಿ ಈ ಗ್ರಂಥವನ್ನು ಪುನಃ ಮುದ್ರಣ ಮಾಡಿಸಿ ಆದಷ್ಟು ಕಡಿಮೆ ಬೆಲೆಗೆ ಸಿಗುವಂತೆ ಮಾಡಿದರೆ ಸಂಶೋಧಕರಿಗೆ ಬಹಳ ಉಪಕಾರವಾಗುತ್ತದೆ. 8 ಸಂಪುಟಗಳನ್ನೂ ಮುದ್ರಿಸಲು ಸಾಧ್ಯವಾಗದಿದ್ದರೂ ಉಪೋದ್ಘಾತ ಸಂಪುಟ(vol.I–part I)ವನ್ನಾದರೂ ಶೀಘ್ರದಲ್ಲಿ ಮುದ್ರಿಸಿದರೆ ಅದರಲ್ಲಿರುವ ಕೋಷ್ಟಕಗಳ ಸಹಾಯದಿಂದ ಕೆಲವೇ ನಿಮಿಷಗಳಲ್ಲಿ ಬೇಕಾದ ದಿನದ ತಿಥಿ ನಕ್ಷತ್ರಾದಿಗಳನ್ನೇ ಅಲ್ಲದೆ ಸೂರ್ಯಚಂದ್ರಾದಿ ಗ್ರಹಗಳ ಸ್ಥಾನವನ್ನೂ ತಿಳಿಯಬಹುದು. ಅಕ್ಷರ ಜೋಡಣೆಯಲ್ಲಿ ತಪ್ಪುಗಳಾಗದಂತೆ ಇರಲು, Photo-offset ಮುದ್ರಣವಾಗಬೇಕು.

7. ನೋಡಿ : 'ಅಧ್ಯಯನ' (ಶಂ. ಬಾ. ಜೋಶಿ ಅಭಿನಂದನ ಗ್ರಂಥ 1980) ನನ್ನ ಲೇಖನ, "ನಾಗವರ್ಮರು (ಒಂದು ಸಮೀಕ್ಷೆ)", ಪುಟ 537.

8. (i) ದಾಕ್ಷಿಣಾತ್ಯ ಸಂಪ್ರದಾಯದಂತೆ ಪ್ರತಿ ಚಂದ್ರಮಾನ/ಸೌರಮಾನ ಸಂವತ್ಸರಕ್ಕೊಂದರಂತೆ ಪ್ರಭವಾದಿ ಸಂವತ್ಸರಗಳು ಬರುತ್ತವೆ. ಆದರೆ ಔತ್ತರೇಯ ಸಂಪ್ರದಾಯದಂತೆ–ಇದೇ ನಿಜವಾದ ಬಾರ್ಹಸ್ಪತ್ಯಮಾನ—ಬೃಹಸ್ಪತಿ ಒಂದು ರಾಶಿಯಲ್ಲಿರುವ ಕಾಲವೇ ಒಂದು ವರ್ಷ. ಇದರ ಸರಾಸರಿ ಮಾನ ಸುಮಾರು 361 ದಿನಗಳು. ಈ ವರ್ಷಗಳಿಗೆ ಪ್ರಭವ, ವಿಭವ ಇತ್ಯಾದಿ ಹೆಸರುಗಳಿದ್ದು, ಈ ಮಾನವನ್ನು ಸೌರಮಾನಕ್ಕೆ ಹೊಂದಿಸಿರುವುದರಿಂದ, 85/86 ವರ್ಷಗಳಿಗೊಮ್ಮೆ ಪ್ರಭವಾದಿ ಸಂವತ್ಸರಗಳಲ್ಲಿ ಒಂದರ ಹೆಸರನ್ನು ಬಿಟ್ಟುಬಿಡುತ್ತಾರೆ. ವಿವರಗಳಿಗೆ Book of Indian Eras ಗ್ರಂಥದ IIನೆಯ ಖಂಡ—Bārhaspatyamāna ನೋಡಿ. ಈ ಗ್ರಂಥದ XVIIನೆಯ ಕೋಷ್ಟಕದಲ್ಲಿ, S. Sid. ಎಂಬ ಶಿರೋನಾಮದ (heading) ಕೆಳಗೆ ಔತ್ತರೇಯ ಪದ್ಧತಿಯ ಪ್ರಭವಾದಿ ಸಂವತ್ಸರ ಸಂಖ್ಯೆಯನ್ನೂ, 'Tel.' ಎಂಬ ಶಿರೋನಾಮದ ಕೆಳಗೆ ದಾಕ್ಷಿಣಾತ್ಯ ಸಂವತ್ಸರ ಸಂಖ್ಯೆಯನ್ನೂ ಕೊಟ್ಟಿದೆ. ಕೋಷ್ಟಕವನ್ನು ನೋಡುವಾಗ ಇದನ್ನು ಗಮನದಲ್ಲಿಡಬೇಕು.

(ii) ಜಗಜೀವನ ಗಣೇಶಜಿ ಜೇತಾಭಾಯಿಯವರಿಂದ 1932ರಲ್ಲಿ (ಮೂರನೆಯ ಆವೃತ್ತಿ) ಪ್ರಕಟವಾದ 100 years' Indian Calendar (1845 to 1944 A. D.) ಎಂಬ ಕೋಷ್ಟಕ ಸಂಪುಟಕ್ಕೆ, ಸೆಪ್ಟೆಂಬರ್ 1912ರಲ್ಲಿ, M. P. Khareghat, I. C.S. (Retd.) ಅವರು ಬರೆದ 'The Hindu Calendar' ಎಂಬ ಹೆಸರಿನ ಉಪೋದ್ಘಾತದಲ್ಲಿಯೂ ಬಾರ್ಹಸ್ಪತ್ಯಮಾನದ ವಿವರ ಮತ್ತು ಗ್ರಂಥ ಸಂಪಾದಕರಿಗೆ ಉಪಯುಕ್ತವಾದ ಅನೇಕ ವಿಷಯಗಳಿವೆ.

9. ಆರ್. ನರಸಿಂಹಾಚಾರ್ಯ ವಿರಚಿತ 'ಕರ್ಣಾಟಕ ಕವಿಚರಿತೆ', ಪ್ರಥಮ ಸಂಪುಟ (ಪರಿಶೋಧಿತ ಮುದ್ರಣ, ಕನ್ನಡ ಸಾಹಿತ್ಯ ಪರಿಷತ್ತು, 1961) ಪುಟಗಳು 139–40.

10. 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ', ಸಂಪುಟ 2 (ಬೆಂಗಳೂರು ವಿಶ್ವವಿದ್ಯಾಲಯ, 1975), ಪುಟಗಳು 261–2.

11. ಕನ್ನಡ ಅಧ್ಯಯನ ಸಂಸ್ಥೆಯ 'ಕನ್ನಡ ಸಾಹಿತ್ಯ ಚರಿತ್ರೆ', ಮೂರನೆಯ ಸಂಪುಟ (ಮೈಸೂರು ವಿಶ್ವವಿದ್ಯಾನಿಲಯ 1976), ಪುಟ 835.

12. 'ಜೈನ ಪರಿಭಾಷಾ ರತ್ನಕೋಶ' (ಕನ್ನಡ ಸಾಹಿತ್ಯ ಪರಿಷತ್ತು 1981) – 'ಕುಲಪರ್ವತ' ನೋಡಿ.

13. "ಅಧ್ಯಯನ"ದ ಪುಟ 534ರಲ್ಲಿ ಈ ವಿಷಯವನ್ನು ಚರ್ಚಿಸಿದ್ದೇನೆ. ಪುಟ 535ರಲ್ಲಿನ (6)ನೆಯ ಉದಾಹರಣೆಯ "ಶಾಕೇಷ್ವಾದ್ರಿ ಮನೂನ್ಮಿತೇ (ಶಕ 1478ರಲ್ಲಿ)" ಎಂಬ ಭಾಗದಲ್ಲಿ, 7ನ್ನು ಸೂಚಿಸಲು 'ಅದ್ರಿ' ಪದದ ಪ್ರಯೋಗವಿದೆ.

14. ಪ್ರಕಾಶಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (1976)

15. ಉತ್ತರ ಸಂಪ್ರದಾಯದಂತೆಯೂ ಈ ಅವಧಿಯಲ್ಲಿ ವಿಭವ ಸಂವತ್ಸರ ಬರುವುದಿಲ್ಲ. ಈ ಅವಧಿಗೆ ಸಮೀಪದ ವಿಭವ ಸಂವತ್ಸರ ದಕ್ಷಿಣ ಸಂಪ್ರದಾಯದಂತೆ ಕ್ರಿ. ಶ. 968–909 ; ಉತ್ತರ ಸಂಪ್ರದಾಯದಂತೆ 967–968.

16. 'ಮೂರು ಉಪನ್ಯಾಸಗಳು' (ಕನ್ನಡ ರಿಸರ್ಚ ಇನ್‌ಸ್ಟಿಟ್ಯೂಟ್, ಕರ್ನಾಟಕ ಯುನಿವರ್ಸಿಟಿ, ಧಾರವಾಡ-1960) ಪುಟಗಳು 25–26. ಇದರ ಮೊದಲನೆಯ ಮುದ್ರಣ 1940ರಲ್ಲಿ ಆಗಿತ್ತು.

17. ಫಾಲ್ಗುಣದ ಅಮಾವಾಸ್ಯೆಯ ಕಾಲದಲ್ಲಿ ಶತಭಿಷದಿಂದ ರೇವತಿಯವರೆಗಿನ ನಕ್ಷತ್ರ ಮಾತ್ರ ಬರಬಹುದಾದ ಕಾರಣ (ಈ ಲೇಖನದಲ್ಲಿನ ಕೋಷ್ಟಕವನ್ನು ನೋಡಿ), ಚೈತ್ರ ಶುದ್ಧ ಪಂಚಮಿಯಂದು ಹಸ್ತ ನಕ್ಷತ್ರ ಬರುವುದು ಅಸಾಧ್ಯ. ಆದುದರಿಂದ "ಹಸ್ತ ನಾಮ್ನಿ" ಎಂಬ ಪಾಠ ಸ್ವೀಕಾರಾರ್ಹವಲ್ಲ. "ಮುಸ್ತನಾಮ್ನಿ" ಅರ್ಥಹೀನವಾದ ಅಪಪಾಠ.

18. ಹಸ್ತಪ್ರತಿಯ ಅಥವಾ ಬೇರಾವ ಆಧಾರದ ಮೇಲೆ ನಾನು ಈ ಪಾಠ ಪರಿಷ್ಕರಣವನ್ನು ಸೂಚಿಸಿಲ್ಲ. "ಸ್ಥಿತೇರ್ಗತಿಶ್ಚಿಂತನೀಯಾ" ಎಂಬ ನ್ಯಾಯದಂತೆ, ಪದ್ಯದ ಉಳಿದ ಭಾಗಕ್ಕೆ ಹೊಂದುವ ಸಂಭಾವ್ಯವಾದ ಪಾಠವನ್ನು ಊಹಿಸಿದ್ದೇನೆ. ಇದರ ಸರಿತಪ್ಪುಗಳು ಈ ಶತಕ ಗ್ರಂಥದ ಹಸ್ತಪ್ರತಿಗಳ ಪಾಠಸಂಕಲನವಾದರೆ ಗೊತ್ತಾಗಬಹುದು. ಈ ಪದ್ಯಭಾಗವನ್ನು ಅರ್ಥಮಾಡಿಕೊಳ್ಳಲಾರದ ಪ್ರತಿಕಾರರು ಯಾರೋ 'ಶಾಲ್ಯಬ್ದ'ವನ್ನು 'ಕಲ್ಯಬ್ದ/ಕಲ್ಕ್ಯಬ್ದ'ವನ್ನಾಗಿಯೂ, 'ಷೋಡಶ'ವನ್ನು 'ಷಟ್ಟಿತ'ವನ್ನಾಗಿಯೂ ಸಂವತ್ಸರದ ಹೆಸರನ್ನು ವಿಭವವನ್ನಾಗಿಯೂ ಮಾರ್ಪಡಿಸಿರಬೇಕು.

—o—

## ಶ್ರೀ ಗೋಮಟೇಶ್ವರ ಪ್ರತಿಷ್ಠೆಯ ಕಾಲದ ವಿಚಾರ
### (ಒಂದು ಟಿಪ್ಪಣಿ)

['ಬಾಹುಬಲಿಚರಿತ'ದಲ್ಲಿಯ ಶ್ಲೋಕದಲ್ಲಿ ಶ್ರೀ ಗೊಮಟೇಶ್ವರ ಪ್ರತಿಮೆಯ ಪ್ರತಿಷ್ಠಾಪನೆಯ ಬಗೆಗೆ ಉಕ್ತವಾಗಿರುವ ದಿನಾಂಕದ ಯಥಾರ್ಥತೆಯ ವಿಚಾರವಾಗಿ ಜ್ಯೋತಿಷ ವಿದ್ವಾನ್ ಶ್ರೀ. ನ. ಕೃಷ್ಣಜೋಯಿಸರು ತಮ್ಮ ಅಭಿಪ್ರಾಯವನ್ನು ತಿಳಿಸಿ ಪ್ರೊ॥ ಎಂ. ವಿ. ಸೀತಾರಾಮಯ್ಯನವರಿಗೆ ಬರೆದ 20–3–1981ರ ಪತ್ರವನ್ನು ಪ್ರೊ॥ ನರ್ಗೀಶ್ವರಿ ವೆಂಕಟಸುಬ್ಬಯ್ಯನವರು ತಮ್ಮ ಲೇಖನದಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಕ್ಕೆ ಪೂರಕವಾಗಿ, ಪ್ರಕಟಿಸುತ್ತಿದ್ದೇವೆ.—ಸಂ.]

'ಬಾಹುಬಲಿಚರಿತೆ'ಯ ಶ್ಲೋಕವನ್ನು ಪರಿಶೀಲಿಸಲಾಗಿ ಆ ಶ್ಲೋಕದಲ್ಲಿ ಕಂಡು ಬರುವ ವಿಚಾರಗಳ ಬಗ್ಗೆ ನನಗೆ ಕಂಡುಬಂದ ಸಂಶಯಗಳನ್ನು ಈ ಕೆಳಗೆ ನಿರೂಪಿಸಿರುತ್ತೇನೆ.

ಮೊದಲಿನಲ್ಲಿ 'ಕಲ್ಕ್ಯಬ್ದೇ ಷಟ್‌ಶತಾಖ್ಯೆ' ಎನ್ನುವುದಕ್ಕೆ ಅರ್ಥಮಾಡುವುದು ಸ್ವಲ್ಪ ಕ್ಲೇಶಕರವಾಗಿದೆ. 'ಕಲ್ಕ್ಯಬ್ದ' ಎನ್ನುವುದು ಯಾವುದು? ಎನ್ನುವುದು ತಿಳಿದುಬರುವುದಿಲ್ಲ. ಅದು 'ಕಲ್ಯಬ್ದ' ಎಂದಿರಬಹುದೇ ಎಂದು ಸಂಶಯಪಡುವುದೂ ಸಾಧ್ಯವಿಲ್ಲ. ಕಾರಣ ಕಲ್ಯಬ್ದ ೬೦೦ ಎಂದರೆ ೪೪೮೩ ವರ್ಷಗಳ ಹಿಂದೆ ಎಂದರ್ಥ ವಾಗುತ್ತದೆ, ಇದು ಸರಿಯಲ್ಲ, ವಿಕ್ರಮಶಕೆ ಎಂದು ಭಾವಿಸಿದರೆ ೧೬೩೮ ವರ್ಷಗಳ ಹಿಂದೆ ಎಂದಾಗುತ್ತದೆ. ಇದೂ ಸಾಧ್ಯವಿಲ್ಲ. ಶಕಾಬ್ದ ಎಂದು ಭಾವಿಸಿದರೆ ೧೩೦೩ ವರ್ಷಗಳ ಹಿಂದೆ ಎಂದಾಗುತ್ತದೆ. ಇದೂ ಸರಿಯಾಗುವುದಿಲ್ಲ. ಆದಕಾರಣ ಈ ಕಲ್ಕ್ಯಬ್ದ ಎನ್ನುವುದು ಪ್ರಸಿದ್ಧವಾಗಿರುವ ಶಕಾಬ್ದವಲ್ಲ, ಕಲ್ಯಬ್ದವಲ್ಲ, ವಿಕ್ರಮ ಶಕಾಬ್ದವಲ್ಲ. ಇದು ಯಾವ ಶಕೆ ಎನ್ನುವುದು ಸ್ಪಷ್ಟವಾಗುವುದಿಲ್ಲ. ಇದರಂತೆ ಕ್ರಿ. ಶ. ೯೮೧ ರಲ್ಲಿ ಈ ಶಕೆ ಪ್ರಾರಂಭವಾದರೆ ಆಗ ಇಂದು ನಡೆಯುತ್ತಿರುವ ಸಹಸ್ರಾಬ್ದ ಕಾರ್ಯಕ್ರಮ ಸರಿಹೋಗುತ್ತದೆ. ಆದರೆ ಈ ಶ್ಲೋಕದಲ್ಲಿ ತಿಳಿಸಿರುವಂತೆ ೬೦೦ ವರ್ಷಗಳು ಕಳೆದರೆ ಎಂದರೆ ಕ್ರಿ. ಶ. ೧೫೮೧ ಆಗುತ್ತದೆ. ಆದರೆ 'ಬಾಹುಬಲಿ ಚರಿತೆ'ಯ ಕಾಲ ೧೫೫೦ ಎಂದರೆ ಈ ಶಕಕಾಲಕ್ಕೆ ೬೦೦ ವರ್ಷಗಳಿಗಿಂತ ಕಡಿಮೆ ಆಗುವುದರಿಂದ ಇದೂ ಸರಿಹೊಂದುವುದಿಲ್ಲ. ಆದಕಾರಣ ಈ ಗ್ರಂಥಭಾಗದಲ್ಲಿ ಸ್ವಲ್ಪ ತಪ್ಪುಪಾಠವಿರಬಹುದೆಂದು ಕಾಣುತ್ತೆ. ಸಾಮಾನ್ಯವಾಗಿ ಗ್ರಂಥಗಳಲ್ಲಿ ಕಾಲವನ್ನು ಸೂಚಿಸುವುದು ಶಕವರ್ಷಗಳಲ್ಲಿ. ಆದಕಾರಣ 'ಶತಾಖ್ಯೆ' ಎನ್ನುವುದನ್ನು 'ಶಕಾಬ್ದೆ' ಎಂದು ಸರಿಪಡಿಸಿಕೊಂಡು, ಕಲ್ಕ್ಯಬ್ದೇ ಷಟ್' ಎನ್ನುವುದನ್ನು ಸಂದರ್ಭಕ್ಕೆ ತಕ್ಕಂತೆ ಸಂಖ್ಯಾವಾಚಕವಾಗಿ ಸರಿಪಡಿಸಿ ಕಾಲವನ್ನು ತಿಳಿದುಕೊಳ್ಳಬಹುದು. ಇರುವಂತೆ ಅರ್ಥವಾಗುವುದಿಲ್ಲ. ಇದಕ್ಕೆ ಪೂರ್ವಭಾವಿಯಾಗಿ 'ಎಫಿಮೆರಿಸ್' ಸಹಾಯದಿಂದ ಶ್ಲೋಕದಲ್ಲಿರುವ ವಿವರ ಯಾವ ವಿಭವ ವರ್ಷಕ್ಕೆ ಸರಿಹೊಂದುತ್ತ ದೆಂಬುವನ್ನು ನೋಡಿದಾಗ ಸ್ಪಷ್ಟಪಡುತ್ತದೆ. ಮತ್ತೊಂದು ಸಂಶಯವೆಂದರೆ, ಸಾಮಾನ್ಯವಾಗಿ ಚೈತ್ರ ಶುಕ್ಲ ಪ್ರತಿಪತ್ ದಿವಸ ಉತ್ತರಾಭಾದ್ರ ರೇವತಿ ಅಶ್ವಿನಿ ನಕ್ಷತ್ರಗಳು ಬರುತ್ತವೆ. ಶುಕ್ಲಪಂಚಮಿಗೆ ರೋಹಿಣಿ–ಮೃಗಶಿರ–ಆರ್ದ್ರಾ ನಕ್ಷತ್ರಗಳ ಸಂಭವವಿದೆಯೇ ಪರಂತು ಶ್ಲೋಕದಲ್ಲಿರುವಂತೆ ಹಸ್ತನಕ್ಷತ್ರ ಬರಲು ಸಾಧ್ಯವಿಲ್ಲ. ಹಸ್ತನಕ್ಷತ್ರ ಚೈತ್ರಶುಕ್ಲ ತ್ರಯೋದಶಿಯಿಂದ ಮುಂದಕ್ಕೆ ಬರುವುದು. ಆದಕಾರಣ ಚೈತ್ರಶುಕ್ಲ ಪಂಚಮಿ ದಿವಸ ಹಸ್ತನಕ್ಷತ್ರ ಬರದಿರುವ ಕಾರಣ ಶ್ಲೋಕದಲ್ಲಿರುವುದು ತಪ್ಪಾಗುತ್ತದೆ. ಸೌಭಾಗ್ಯಯೋಗ ಕೂಡಬಹುದು. ಚೈತ್ರಶುಕ್ಲಪಕ್ಷದಲ್ಲಿ ಕುಂಭ ಲಗ್ನ ಬರಬೇಕಾದರೆ ಬೆಳಗಿನ ಜಾವ ೩ ೧/೨ ಗಂಟೆ ವೇಳೆಯಲ್ಲಿ ಎಂದರೆ ಪ್ರತಿಷ್ಠೆ ಕಾಲ ಅರ್ಧರಾತ್ರಾನಂತರ ಆಗುತ್ತದೆ. ಇದನ್ನು ಇತರ ಲಭ್ಯ ಪ್ರಮಾಣಗಳಿಂದ ಸ್ಥಿರ

ಪಡಿಸಬೇಕಾಗುತ್ತದೆ. ಈಗಿನ ಸಂವತ್ಸರ ಗಣನೆಯಂತೆ ೧೦೦೦ ವರ್ಷಗಳ ಹಿಂದೆ ವಿಭವ ಸಂವತ್ಸರ ಬರುವುದಿಲ್ಲ. ಅದರ ಹಿಂದು ಮುಂದು ಸಂವತ್ಸರಗಳೂ ಬರುವುದಿಲ್ಲ. ಆದಕಾರಣ ಈ ಶ್ಲೋಕದಲ್ಲಿ ಉಕ್ತವಾಗಿರುವ ಯಾವ ವಿಚಾರವೂ ಈ ಸಹಸ್ರಾಬ್ದಕ್ಕೆ ಅನುಕೂಲಿಸುವ ಪ್ರಮಾಣವನ್ನು ಒದಗಿಸುವುದಿಲ್ಲ. ಇಷ್ಟು ಮಾತ್ರವಲ್ಲದೆ ಶ್ಲೋಕದಲ್ಲಿ ತಿಳಿಸಿರುವ ವಿಚಾರಗಳಲ್ಲೇ ಪರಸ್ಪರ ವಿರೋಧ ಕಂಡು ಬರುತ್ತದೆ. ಆದಕಾರಣ ಈ ಶ್ಲೋಕದ ಬಗ್ಗೆ ವಿಮರ್ಶಿಸಿದಲ್ಲಿ ತನಗೆ ತೋರಿದ್ದನ್ನು ಕವಿ ಬರೆದಿದ್ದಾನೆ ಅಥವಾ ಇನ್ನಾವುದೋ ಶ್ಲೋಕವನ್ನು ಕೆಲವು ಮಾರ್ಪಾಡು ಮಾಡಿ ಯಾರೋ ಈ ಗ್ರಂಥದಲ್ಲಿ ಸೇರಿಸಿರಬಹುದು. ಇದು ಗ್ರಂಥಭಾಗವೇ ಅಲ್ಲವೇ ಎನ್ನುವುದನ್ನು ಹಲವಾರು ಪ್ರತಿಗಳನ್ನು ನೋಡಿ ನಿಷ್ಕರ್ಷಿಸಬೇಕಾಗುತ್ತದೆ. ಈಗಿರುವಂತೆ ಈ ಶ್ಲೋಕ ಒಪ್ಪುವುದಕ್ಕೆ ಯೋಗ್ಯವಾಗಿಲ್ಲ.

**— ನ. ಕೃಷ್ಣಜೋಯಿಸ್.**

—o—

## ಕಡಿತ: ಕಿರುಟಿಪ್ಪಣಿ

'ಮೋಹನ ತರಂಗಿಣಿ'ಯ ಪೀಠಿಕಾ ಭಾಗದಲ್ಲಿ ಕನಕದಾಸರು ತಮ್ಮ ಮತ್ತು ತಮ್ಮ ಕೃತಿಯ ಬಗ್ಗೆ ತಿಳಿಸುತ್ತಾ—

ಬರಹವ ತಿಳಯಬೇಡೆನ್ನುತೆನ್ನ ನೊಸಲೊಳು
ಬರೆದು ನಿರ್ಮಿಸಲದಱಿಂದ
ಬರಹವನಱಿಯೆ ನಾ ಪದವಿಟ್ಟು **ಕಡಿತ**ದೊಳ್
ಬರೆದು ಮಾಡಿದ ಕೃತಿಯಲ್ಲ—ಎಂಬುದಾಗಿ ಹೇಳಿದ್ದಾರೆ.

(ಕನಕದಾಸರ 'ಮೋಹನ ತರಂಗಿಣೀ' ಸಂಗ್ರಹ. ಸಂಪಾದಕ ಬಿ. ಎಸ್. ಸಣ್ಣಯ್ಯ, ಗೀತಾಬುಕ್ ಹೌಸ್, ಮೈಸೂರು, 1970, ಪು. 3)

ಕನಕದಾಸರ ಈ ಪದ್ಯದ ಉತ್ತರಭಾಗವು ಸ್ವಾರಸ್ಯವಾದ ವಿಷಯವನ್ನು ತಿಳಿಸುತ್ತದೆ. ತಾನು ಹುಟ್ಟುವಾಗಲೇ ಹೀನ ಜಾತಿಯಲ್ಲಿ ಹುಟ್ಟಿದುದರಿಂದ ನೀನು ಬರಹವನ್ನೆ ತಿಳಯಬೇಡ ಎಂದು ಬ್ರಹ್ಮ ಹಣೆಯಬರಹವನ್ನು ಬರೆದ. ಆದಕಾರಣ ನನಗೆ ಬರಹವೇ ತಿಳಿಯದು. ಈ ಕೃತಿಯು ಮೊದಲು 'ಕಡಿತ'ದಲ್ಲಿ ಬರೆದು ತಿದ್ದಿ ಮತ್ತೆ ಬರೆದುದಲ್ಲ—ಎಂಬುದು ಈ ಪದ್ಯದ ಭಾವಾರ್ಥ. ಅಂದರೆ ಕವಿಗಳು ತಮ್ಮ ಕಾವ್ಯದ ಮೊದಲ ಪ್ರತಿಯನ್ನು ಕಡಿತದಲ್ಲಿ ಬರೆದು ಅನಂತರ ಪರಿಷ್ಕರಿಸಿ ತಿದ್ದಿದ ಪ್ರತಿಯನ್ನು ಓಲೆಗರಿಗಳಿಗೆ ಬರೆಯಲು ಅನುವು ಮಾಡುತ್ತಿದ್ದರೆಂದು ನಾವು ಊಹಿಸಬಹುದು. ಇದೇ ಸಂದರ್ಭದಲ್ಲಿ ಹಲಗೆ ಬಳಪದ ಪಿಡಿಯದೊಂದಗ್ಗಳಿಕೆ ಎಂಬ ಕುಮಾರವ್ಯಾಸನ ಮಾತಿನಿಂದ ಫಲಕದ ಮೇಲೆ ಕಾವ್ಯವನ್ನು ಮೊದಲು ಬರೆದು ಬರೆದ ಬರಹವನ್ನು ಪರಿಷ್ಕಾರಮಾಡುವುದಿದ್ದರೆ ಪರಿಷ್ಕರಿಸಿ ಓಲೆಯಲ್ಲಿ ಪ್ರತಿಮಾಡುತ್ತಿದ್ದರು ಎಂದು ವಿದಿತವಾಗುತ್ತದೆ.—ಸಂ.

# ಸರಸ್ವತೀ ಪೂಜೆ*

**ಡಾ॥ ಕುವೆಂಪು**

ಎಲ್ಲಕ್ಕಿಂತಲೂ ಹೆಚ್ಚಾಗಿ, ನನ್ನ ನೆನಪಿನಲ್ಲಿ ಇಂದಿಗೂ ಪೂಜ್ಯವಾಗಿ ಉಳಿದಿರುವ ಚಿತ್ರವೆಂದರೆ ಅಜ್ಜಯ್ಯನ ನೇತೃತ್ವದಲ್ಲಿ ನವರಾತ್ರಿಯ ಒಂಬತ್ತು ದಿನಗಳೂ ಅಖಂಡ ವೆಂಬಂತೆ ನಡೆಯುತ್ತಿದ್ದ ಸರಸ್ವತೀ ಪೂಜೆ. ಅದು ನಡೆಯುತ್ತಿದ್ದುದು ನಮ್ಮ ಮನೆಯ ಉಪ್ಪರಿಗೆಯ ಮೇಲಣ ಮಳಿಗೆಕೋಣೆಯಲ್ಲಿ. ಯಾವ ಚಿತ್ರಪಟವಾಗಲಿ, ವಿಗ್ರಹವಾಗಲಿ ವಾಗ್ದೇವಿಯನ್ನು ಪ್ರತಿಮಿಸುತ್ತಿರಲಿಲ್ಲ: ಪುಸ್ತಕಗಳು! ಪುಸ್ತಕಗಳು ಮತ್ತೂ ಪುಸ್ತಕಗಳು! ಮತ್ತು, ನಾವು ಓದುಬರೆಯಲು ಪ್ರಾರಂಭಿಸಿದ ಮೇಲೆ ನಮ್ಮ ಸ್ಲೇಟು, ಬಳಪ, ಸೀಸದ ಕಡ್ಡಿ, ಲೇಖನಿ, ಕಾಪಿ ಪುಸ್ತಕ, ಕೊನೆಗೆ ಮಸಿದೌತಿ! ಪುಸ್ತಕಗಳೆಂದರೆ ನಮ್ಮ ಮನೆಯಲ್ಲಿ ಆಗ ಅಚ್ಚಾದ ಪುಸ್ತಕಗಳ ಲೈಬ್ರರಿ ಇತ್ತು ಎಂದು ಯಾರಾದರೂ ಭಾವಿಸಿಯಾರು? ಅವೆಲ್ಲ ಓಲೆಗರಿ ಪುಸ್ತಕಗಳು! ಎರಡೋ ಮೂರೋ ದೊಡ್ಡ ದೊಡ್ಡ ಬೆತ್ತದ ಪೆಟ್ಟಿಗೆಗಳಲ್ಲಿ ತುಂಬಿ ಇಡುತ್ತಿದ್ದ ಓಲೆಗರಿ ಪುಸ್ತಕಗಳು—ರಾಮಾಯಣ, ಭಾರತ, ಜೈಮಿನಿ, ಸಹ್ಯಾದ್ರಿ ಕಾಂಡ, ಇತ್ಯಾದಿ, ಇತ್ಯಾದಿ. ಬಹುಶಃ ಅವುಗಳೆಲ್ಲ ಕನ್ನಡ ಜಿಲ್ಲೆಯಿಂದ ಬಂದ ಐಗಳ ಕೈಲಿ ಬಹಳ ಹಿಂದಿನಿಂದಲೂ ಬರೆಯಿಸಿದ್ದವಿರಬೇಕು. ಒಂದೊಂದು ಗ್ರಂಥಕ್ಕೂ ವರುಷವೆಲ್ಲ, ಅವನ್ನು ಬರೆದು ಮುಗಿಸುವ ತನಕ, ಮನೆಯಲ್ಲಿಯೇ ಊಟ, ಬಟ್ಟೆ, ತಿಂಡಿ ಎಲ್ಲವನ್ನೂ ನೀಡಿ, ಅದು ಮುಕ್ತಾಯವಾದಂದು ವಿಶೇಷಪೂಜೆ ನಡೆಸಿ ಲಿಪಿಕಾರನಿಗೆ ಕೊಡಬೇಕಾಗಿದ್ದ ಆಗಿನ ಕಾಲಕ್ಕೆ ತುಂಬ ದುಬಾರಿಯಾದ, ನೂರೊ ಇನ್ನೂರೊ ರೂಪಾಯಿಗಳನ್ನು ಸಂತೋಷದಿಂದ ಸಂಭಾವನೆಯಾಗಿ ಕೊಟ್ಟಿರಬೇಕು. ಅಂತೂ ಅಜ್ಜಯ್ಯ ಅವುಗಳೊಡನೆ ವ್ಯವಹರಿಸುತ್ತಿದ್ದ ರೀತಿಯನ್ನು ನೋಡಿಯೇ ನಮಗೆ ಅವು ಅತ್ಯಂತ ಅಮೂಲ್ಯವೂ, ಪವಿತ್ರವೂ ಆದ ವಸ್ತುಗಳು ಎಂಬ ಭಾವನೆ ಮೂಡುತ್ತಿತ್ತು.

ಆ ಬೆತ್ತದ ಪೆಟ್ಟಿಗೆಗಳು ಕರಿಹಿಡಿದು ಕರ್‍ರಗಾಗಿರುತ್ತಿದ್ದವು. ಏಕೆಂದರ, ಮಲೆನಾಡಿನ ಮಳೆಗಾಲದಲ್ಲಿ ತೇವವಾಗಿ ಬೂಸಲು ಬಂದು ಹಾಳಾಗದಂತೆ ಅವುಗಳನ್ನು 'ಹೊಗ್ಗಂಡಿ'ಯಲ್ಲಿ ಇಟ್ಟಿರುತ್ತಿದ್ದುದರಿಂದ: (ಹೊಗ್ಗಂಡಿ ಎಂದರೆ ಹೊಗೆಯ ಕಂಡಿ, ಅಡುಗೆ ಮಾಡುವ ಜಾಗದಲ್ಲಿ ನೇರವಾಗಿ ಮೇಲಕ್ಕೆ ಹೊಗೆ ಹೋಗುವಂತೆ ಕಂಡಿ

* ಈ ಬರಹವನ್ನು 'ನೆನಪಿನ ದೋಣಿಯಲ್ಲಿ' (ಪು. ೧೭-೨೧) ಗ್ರಂಥದಿಂದ ಉದ್ಧರಿಸಿ ಪ್ರಕಟಿಸಲು ಒಪ್ಪಿಗೆ ನೀಡಿದ ಡಾ॥ ಕುವೆಂಪು ಅವರಿಗೆ ನಾವು ಕೃತಜ್ಞರು.—ಸಂ.

ಬಿಟ್ಟಿರುತ್ತಾರೆ. ಸುಮಾರು ೮–೧೦ ಅಡಿಯಷ್ಟು ಚೌಕವಾಗಿ, ಅದಕ್ಕೆ ತೊಲೆಗಳನ್ನು ಚೌಕಟ್ಟಾಗಿ ಜೋಡಿಸಿ, ದಪ್ಪ ರೀಪುಗಳನ್ನು ಜಾಲಂದ್ರವಾಗುವಂತೆ ಹೊಡೆದುಕೂರಿಸಿ ಅದರ ಮೇಲೆ, ಅದು ಒಳ ಉಪ್ಪರಿಗೆಯ ಒಂದು ಮೂಲೆಯಾಗಿ ಬೆಳಕು ಮಳೆ ಗಾಳಿ ಥಂಡಿಗಳಿಗೆ ದೂರವಾಗುವುದರಿಂದ, ಥಂಡಿ ತಗಲಿ ಹಾಳಾಗಬಾರದಂತಹ ಸಾಮಾನುಗಳನ್ನೆಲ್ಲ ಇಟ್ಟಿರುತ್ತಾರೆ, ಹರಿಗಳಲ್ಲಿ, ಪೆಟ್ಟಿಗೆಗಳಲ್ಲಿ, ಮೆತ್ತು ಹಾಕಿದ ಮಡಕೆಗಳಲ್ಲಿ, ಚೀಲಗಳಲ್ಲಿ, ಉಗ್ಗಗಳಲ್ಲಿ, ಸಿಕ್ಕುಗಳಲ್ಲಿ!) ಅಜ್ಜಯ್ಯ ಆ ಪೆಟ್ಟಿಗೆಗಳಿಂದ ಆ ಓಲೆಗರಿ ಗ್ರಂಥಗಳನ್ನು ನವರಾತ್ರಿ, ಉಗಾದಿ, ದೀಪಾವಳಿಯಂತಹ ಹಬ್ಬಗಳಲ್ಲಿ ಹೊರತೆಗೆದು, ಅವನ್ನು ಯಾವುದೋ ಒಂದು ವಿಶೇಷ ರೀತಿಯ ತೈಲದಿಂದ ಉಜ್ಜಿ ಶುಚಿ ಮಾಡುತ್ತಿದ್ದರು. ಓದುತ್ತಲೂ ಇದ್ದರೆಂದು ತೋರುತ್ತದೆ. ಆದರೆ ನಮ್ಮೊಡನೆ ಅವರು ಅವುಗಳ ವಿಚಾರವಾಗಿ ಮಾತನಾಡಿದುದನ್ನಾಗಲಿ, ಕಥೆ ಹೇಳಿದುದನ್ನಾಗಲಿ, ರಾಗವಾಗಿ ಓದಿ ಮನರಂಜಿಸಿದುದನ್ನಾಗಲಿ ನಾನು ನೆನೆಯಲಾರದವನಾಗಿದ್ದೇನೆ.

ಅಂತೂ ನವರಾತ್ರಿ ಬಂದಿತೆಂದರೆ ಉಪ್ಪರಿಗೆಯ ನೆಲ ಸೆಗಣಿ ಬಳಿದು ಶುಚಿಯಾಗುತ್ತಿತ್ತು. ಕಸ ಕರಿಬಲೆ ಹೊಡೆದು ಹಸನಾಗುತ್ತಿತ್ತು. ಊರುಹೆಂಚು ಹೊದಿಸಿದ್ದ ಮಾಡು, ಮಳಿಗೆಕೋಣೆ ದೇವಾಲಯವಾಗುತ್ತಿತ್ತು. ಓಲೆಗರಿ ಗ್ರಂಥಗಳೆಲ್ಲ ಮಣೆಗಳ ಮೇಲೆ ಒಪ್ಪವಾಗಿ ಜೋಡಿಸಲ್ಪಟ್ಟು ಪೂಜ್ಯವಾಗುತ್ತಿದ್ದವು. ನಮಗೂ ಓದುವ ಬರೆಯುವ ಪೀಡೆಯಿಂದ ಎಂಟುಹತ್ತು ದಿನಗಳ ಮಟ್ಟಿಗಾದರೂ ತಪ್ಪಿಸಿಕೊಳ್ಳುವ ಸುಯೋಗ ದೊರೆಯುತ್ತಿತ್ತು. ಏಕೆಂದರೆ, ಆಗ ಒಂದು ಕಾಗದದ ಚೂರು ಕೂಡ ಸರಸ್ವತಿಯ ಶರೀರವಾಗಿರುತ್ತಿದ್ದ ಕಾಲ! ನಮ್ಮ ಕಾಲೆಲ್ಲಿಯಾದರೂ ಒಂದಿನಿತು ಸೋಕಿದರೂ ಅದಕ್ಕೆ ನಮ್ಮ ಕೈ ಮುಟ್ಟಿಸಿ, ಹಣೆಮುಟ್ಟಿಕೊಂಡು, ನಮಸ್ಕರಿಸಿ, ವಿದ್ಯಾಮಾತೆಯ ಕ್ಷಮಾಪಣೆ ಕೇಳಿಕೊಳ್ಳುವಂತೆ ನಮ್ಮ ಹಿರಿಯರು ಕಲಿಸಿದ್ದರು. ಆ ಪಾಠವನ್ನೆ ಕಟುವಾಗಿ ಅನುಷ್ಠಾನಕ್ಕೆ ತರುತ್ತಿದ್ದೆವು ನಾವು. ಓಲೆಗರಿ ಪುಸ್ತಕಗಳು, ಮನೆಯ ಲೇವಾದೇವಿಯ ಲೆಕ್ಕದ ಪುಸ್ತಕಗಳೂ ಪವಿತ್ರವೂ ಪೂಜ್ಯವೂ ಆಗಿ ಸರಸ್ವತಿಯ ಪೀಠಕ್ಕೇರಿದರೆ, ನಾವು ಓದುವ ಬರೆಯುವ ಸ್ಲೇಟು ಪುಸ್ತಕಗಳೇನು ಕಡಮೆ ಪವಿತ್ರವೇ? ಅವೂ ಪೂಜ್ಯವಲ್ಲವೆ? ಅವೂ ಸರಸ್ವತಿಯ ಅಂಗಭಾಗ ತಾನೇ? ಆದ್ದರಿಂದ ನಾವೂ ನಮ್ಮ ಸ್ಲೇಟುಪುಸ್ತಕಗಳನ್ನೆಲ್ಲ ಒಂದು ಸಣ್ಣ ಮಣೆಯ ಮೇಲೆ ಓಲೆಗರಿಯ ಹೊತ್ತಗೆಗಳ ಅಡಿಯಲ್ಲಿ ಇಟ್ಟು ಗೆದ್ದೆವಪ್ಪಾ ಎಂದು ಹೊರೆಯಿಳಿಸಿ ದಣಿವಾರಿಸಿಕೊಳ್ಳುವವರಂತಾಗುತ್ತಿದ್ದೆವು. 'ಸಿಲೇಟು', 'ಪ್ರೊಸ್ತಕ' ಎರಡೇ ಏಕೆ ಪವಿತ್ರ? ಸರಸ್ವತಿಯ ಉಪಕರಣಗಳಾದ ಸಿಲೇಟು ಕಡ್ಡಿ, ಸೀಸದ ಕಡ್ಡಿ, ಲೇಖನಿ, ಮಸಿದೌತಿ ಇವು ಮಾಡಿದ ಪಾಪ ಏನು? ಎಂದು ಅವುಗಳನ್ನು ಸಹ ಪವಿತ್ರಗೊಳಿಸಿ ಪೀಠಕ್ಕೆ ಜೋಡಿಸಿ, ಪೂಜಾರ್ಹವಾಗಿಸುತ್ತಿದ್ದೆವು!

ಮಳಿಗೆಕೋಣೆಯ ಪುಸ್ತಕರೂಪದ ಸರಸ್ವತಿದೇವಿ ತರತರದ ಸುವಾಸನೆಯ ಹೂವುಗಳಿಂದ ಸಿಂಗರಗೊಳ್ಳುತ್ತಿದ್ದಳು. ಎತ್ತರವಾದ ದೊಡ್ಡ ನೀಲಾಂಜನಗಳಲ್ಲಿ,

(ಅವುಗಳನ್ನು ನಾವು ದೀಪದಕಂಬವೆಂದೇ ಕರೆಯುತ್ತಿದ್ದುದು) ಉದ್ದವಾಗಿ ಹೊಸೆದ ಬತ್ತಿಗಳು, ಎಣ್ಣೆಯಲ್ಲಿ ಮುಳುಗಿದ ಹಾವುಗಳಂತೆ ಸೊಡರುಗಳ ಹೆಡೆಯೆತ್ತಿ ರಮಣೀಯವಾಗುತ್ತಿದ್ದವು. ಮಿಂದು ಮಡಿಯುಟ್ಟ ನಮ್ಮನ್ನೆಲ್ಲ ಅಜ್ಜಯ್ಯ ಸಾಲಾಗಿ ನಿಲ್ಲಿಸಿ ತಮ್ಮ ಗಂಭೀರ ಶೀವಿಯಿಂದ ಭಾವಪೂರ್ವಕವಾಗಿ ತರತರದ ಆಕಾರದ ಆರತಿಗಳನ್ನೆತ್ತಿ ಪೂಜೆಮಾಡುತ್ತಿದ್ದರು, ಘಂಟೆ ಬಾರಿಸುತ್ತಾ. ಆಮೇಲೆ "ಬೆನಕಾ, ಬೆನಕಾ! ಏಕದಂತಾ! ಪಚ್ಚೆಕಲ್ಲು! ಪಾಣೀಪೀಠ! ಮುತ್ತಿನುಂಡೆ! ಹೊನ್ನ ಘಂಟೆ! ಇಂತೀ ಒಪ್ಪುವ ಸಿರಿ ಸಿದ್ಧಿವಿನಾಯಕ ದೇವರ ಪಾದಕ್ಕೆ ಇಪ್ಪತ್ತೊಂದು ನಮಸ್ಕಾರಗಳು" ಎಂದು ಅಜ್ಜಯ್ಯ ಹೇಳಿಕೊಟ್ಟಂತೆ ತುಸು ರಾಗವಾಗಿ ನಮ್ಮ ಕೈಯಲ್ಲಿ ಕೊಟ್ಟಿರುತ್ತಿದ್ದ ಗಂಧಾಕ್ಷತೆ ಎರಚಿ, ಎಲ್ಲರೂ ಸಾಷ್ಟಾಂಗ ಪ್ರಣಾಮ ಮಾಡುತ್ತಿದ್ದೆವು. ಅಂದರೆ ಆಗ ನಾವು ಆಗ ಹೇಳುತ್ತಿದ್ದಂತೆ 'ಅಡ್ಡ ಬೀಳುತ್ತಿದ್ದೆವು'.

ಆ ನವರಾತ್ರಿಯ ಸರಸ್ವತೀಪೂಜೆಗೆ ಸಂಬಂಧಪಟ್ಟು ಪ್ರಭಾವಶಾಲಿಯಾಗಿದ್ದ ಮತ್ತೊಂದು ವಿಷಯವೆಂದರೆ ಅವಿಚ್ಛಿನ್ನ ನಂದಾದೀಪದ ಅನವರತ ರಕ್ಷೆಯ ಜಾಗರಣೆ ಸೇವೆ! ಅದರಲ್ಲಿ ಏನೋ ಒಂದು 'ಅನುಭಾವದ' ಸಂಪತ್ತು ನಮ್ಮ ಬುದ್ಧಿಗೆ ಅಗೋಚರವಾಗಿ ಅಂತಃಪ್ರಜ್ಞೆಗೆ ಸೋಂಕುತ್ತಿತ್ತೆಂದು ತೋರುತ್ತದೆ. ಏಕೆಂದರೆ ಈಗಲೂ ಅದನ್ನು ನೆನೆದಾಗಲೆಲ್ಲ ನನ್ನ ಮನಸ್ಸು ಯಾವುದೋ ಅನಂತ ಕಾಲದ ಗರ್ಭಗುಡಿಯ ಪವಿತ್ರತೆಯನ್ನು ಪ್ರವೇಶಿಸಿದಂತೆ ಪುಲಕಿತವಾಗುತ್ತದೆ, ಅಹೇತುಕವಾಗಿ! ಮಳಿಗೆಕೋಣೆಯಲ್ಲಿ ದೊಡ್ಡ ದೀಪದ ಕಂಬದ ಮೇಲೆ ಹೊತ್ತಿಸಿದ ಹೆಬ್ಬತ್ತಿಯ ಸೊಡರು ನವರಾತ್ರಿ ಪೂರೈಸುವ ತನಕ ಕೆಡದೆ ಉರಿಯಲೆಬೇಕಾಗಿತ್ತು, ಹಗಲೂ ರಾತ್ರಿಯೂ! ಹಗಲೇನೋ ಸರಿ; ಯಾರಾದರೂ ಉಪ್ಪರಿಗೆಯಲ್ಲಿ ಇದ್ದೇ ಇರುತ್ತಿದ್ದರು ಅಥವಾ ಯಾವುದಾದರೂ ಕೆಲಸಕ್ಕಾದರೂ ಬಂದು ಬಂದು ಹೋಗಿಯೇ ಹೋಗುತ್ತಿದ್ದರು. ಅವರು ಆಗಾಗ ಕೋಣೆಯಲ್ಲಿ ಇಣುಕಿ, ಬತ್ತಿ ಉರಿದಿದ್ದರೆ ಮುಂದಕ್ಕೆ ಹಾಕಿ, ಎಣ್ಣೆ ಬತ್ತಿದ್ದರೆ ಎಣ್ಣೆಹಾಕಿ ಸೊಡರು ಕೆಡದಂತೆ ನೋಡಿಕೊಳ್ಳುವುದು ಸುಲಭವಾಗಿತ್ತು. ಆದರೆ, ರಾತ್ರಿ ಆ ಕೆಲಸಕ್ಕೆ ನಿಯೋಜಿತವಾಗುತ್ತಿದ್ದುದು, ಸಾಮಾನ್ಯವಾಗಿ ಹುಡುಗರೆ, ನಮ್ಮ ಮನೆಯಲ್ಲಿ ಓದಲು ಬಂದು ಇರುತ್ತಿದ್ದವರು. ಅವರಲ್ಲಿ ಕೆಲವರು ದೊಡ್ಡವರು, ಅಂದರೆ ಮನೆಯವರಾಗಿದ್ದ ನಮಗಿಂತಲೂ ನಾಲ್ಕಾರು ವರ್ಷಕ್ಕೆ ಹಿರಿಯರು. ಅವರಲ್ಲಿ ಯಾರಾದರೂ ಆ ಮಳಿಗೆಕೋಣೆಯಲ್ಲಿ ಮಡಿಯಾಗಿ ಮಲಗಿ, ರಾತ್ರೆಯೂ ದೀಪ ಆರದಂತೆ ನೋಡಿಕೊಳ್ಳುತ್ತಿದ್ದರು. ಚಿಕ್ಕವರಾದ ನಮಗೆ ಕರುಬು! ನಾವೂ ಮಲಗುತ್ತೇವೆ ಎಂದು ನಮ್ಮ ಹಟ. ಆದರೆ ನಮ್ಮನ್ನೆ ಮಲಗಲು ಬಿಟ್ಟರೆ ನಮ್ಮಂತೆಯೆ ದೀಪವೂ ನಿದ್ದೆಹೋಗಬಹುದೆಂದು ಹಿರಿಯರ ಆಕ್ಷೇಪಣೆ. ಕಡೆಗೆ ಒಂದು ರಾಜಿಯಾಗಿ ನಮಗೆಲ್ಲ ಆನಂದ: ಒಬ್ಬ ದೊಡ್ಡವನ ಜೊತೆಯಲ್ಲಿ ಯಾರಾದರೂ ಒಬ್ಬ ಚಿಕ್ಕವ ಮಲಗುವುದು ಎಂದು.

ಹೂವು, ಗಂಧ, ಲೋಬಾನ, ಕರ್ಪೂರ ಇತ್ಯಾದಿಗಳ ಸಂಮಿಶ್ರಿತ ಸುವಾಸನೆ ಈ ನಮ್ಮ ಉಪ್ಪರಿಗೆಯ ಮಳಿಗೆಕೋಣೆಯನ್ನು ಭೂಮಿಯಿಂದೆತ್ತಿ ದಿವ್ಯ ನಂದನದ ಅಂಗವನ್ನಾಗಿ ಪರಿವರ್ತಿಸುತ್ತಿತ್ತು. ರಾತ್ರಿ ಸುತ್ತಲೂ ನಿಶ್ಶಬ್ದ, ನಿಬಿಡ ಘೋರಾಂಧಕಾರ! ಸಹ್ಯಾದ್ರಿಯ ಸಾಂದ್ರರುಂದ್ರ ಉನ್ನತ ಅರಣ್ಯಮಯ ಪರ್ವತಶ್ರೇಣಿಯ ಉಗ್ರ ಗಂಭೀರ ಸಾನ್ನಿಧ್ಯದ ಪ್ರಭಾವದ ಮಧ್ಯೆ ಆ ದೀಪದ ಕಂಬದ ಸೊಡರು ಎಂತಹ ಪ್ರಶಾಂತ ಶೀತಲ ಜ್ಯೋತಿಯಾಗಿ ತಾನು ಬೆಳಗುತ್ತಿದ್ದ ಅತ್ಯಂತ ಅಲ್ಪವಾದ ವಲಯಕ್ಕೆ ಒಂದು—ನಿರಾಶೆಯ ನಡುವೆ ಆಶೆಯಂತೆ, ಭೀತಿಯ ಹೃದಯದಲ್ಲಿಯೆ ಹೊಮ್ಮುವ ಧೈರ್ಯದಂತೆ—ಒಂದು ಆಧ್ಯಾತ್ಮಿಕ ಪರಿವೇಶವನ್ನುಂಟುಮಾಡುತ್ತಿತ್ತು! ಅದನ್ನು ರಕ್ಷಿಸುವ ನಮಗೆ ಅದೆಂತಹ ಹೆಮ್ಮೆಯ ಜವಾಬುದಾರಿ! ಅದನ್ನು ರಕ್ಷಿಸುವ ಒಂದು ಉಪಾಯವೂ ಎನ್ನುವಂತೆ—ಕಣ್ಣು ಮುಚ್ಚಿದರೆ ಅದೆಲ್ಲ ಕೆಟ್ಟುಹೋಗುತ್ತದೆಯೋ ಎಂದು—ನಾವು ನಿದ್ದೆಹೋಗಬಾರದು ಎಂಬ ಸಂಕಲ್ಪದಿಂದ ಕಣ್ಣು ತೆರೆದುಕೊಂಡು ಅದನ್ನೆ ನೋಡುತ್ತಾ ಮಲಗುತ್ತಿದ್ದೆವು. ಆದರೆ ಕಣ್ಣು ಕುಗುರುತ್ತಿತ್ತು. ದಣಿದ ಮಕ್ಕಳ ಮನಸ್ಸಿನ ಮೇಲೆ ನಿದ್ರಾದೇವಿ ತನ್ನ ತಾಯಿಸೆರಗನ್ನು ಬೀಸುತ್ತಿದ್ದಳು. ಎಲ್ಲವೂ ಮಬ್ಬುಮಬ್ಬು ಮಂಜುಮಂಜು ಆಗಿ, ಪ್ರಜ್ಞೆಯಿಂದ ಜಾರಿಹೋಗುವಂತಾಗುತ್ತಿತ್ತು. ಆಗ ಇದ್ದಕ್ಕಿದ್ದಂತೆ ಫಕ್ಕನೆ, ಜಾಗರಣೆಯ ಸಂಕಲ್ಪದ ಪ್ರಜ್ಞೆ ಬಹಿರ್ಗೊಂಡು ಕಣ್ಣುಗಳನ್ನು ಬಲಾತ್ಕಾರವಾಗಿ ತೆರೆಯಿಸುತ್ತಿತ್ತು. ಅಯ್ಯೊ ಮಲಗಿಬಿಟ್ಟಿದ್ದೆವಲ್ಲಾ! ಇನ್ನು ಖಂಡಿತ ಮಲಗಬಾರದು; ಕಣ್ಣುಬಿಟ್ಟುಕೊಂಡೇ ಇರಬೇಕು; ಎಂಬ ಸಂಕಲ್ಪ ತುಸ ಹೊತ್ತಿನಲ್ಲಿಯೆ ನಿದ್ದೆಯ ವೈತರಣಿಗೆ ಅದ್ದಿ ಹೋಗುತ್ತಿತ್ತು. ಬೆಳಗೆ ಬೆಳಗಾದ ಮೇಲೆಯೆ ಪಕ್ಕದಲ್ಲಿರುವ ದೊಡ್ಡವನು—ಅವನು ರಾತ್ರಿಯಲ್ಲಿ ನಡುನಡುವೆ ಎದ್ದು ತನ್ನ ಕರ್ತವ್ಯಪಾಲನೆಮಾಡಿ ಕೃತಕೃತ್ಯನಾದವನು—ನೂಕಿ ಎಬ್ಬಿಸಿದ ಮೇಲೆಯೆ ಕಣ್ಣುಜ್ಜಿಕೊಂಡು ಏಳುತ್ತಿದುದು ನಾವು!

ಅಜ್ಜಯ್ಯನ ನೆನಪಿನೊಡನೆ ಅವಿಭಕ್ತವಾಗಿ ಹೊಂದಿಕೊಂಡಿರುವ ಇಂತಹದೇ ಮತ್ತೊಂದು ಎಂದರೆ ಆಕಾಶದೀಪ: ಕಾರ್ತಿಕ ಮಾಸದಲ್ಲಿ ದಿನವೂ ಕತ್ತಲಾಗುವ ಹೊತ್ತು ಅವರು ಸಂಪಿಗೆ ಮರದ ಬುಡದಲ್ಲಿ ಮನೆಯ ಬಳಿಯ ಅಡಕೆ ತೋಟದ ಪಕ್ಕದಲ್ಲಿ ನೆಟ್ಟಿರುತ್ತಿದ್ದ ಉದ್ದ ಗಳುವಿನ ತುದಿಗೆ ಹಗ್ಗದ ಮೂಲಕ ಏರಿಸಿ ಕಟ್ಟಿ ರಾತ್ರಿಯೆಲ್ಲ ಉರಿಯುವಂತೆ ಮಾಡಿಡುತ್ತಿದ್ದ ನಾಲ್ಕೂ ಕಡೆಯೂ ಗಾಳಿಗೆ ಆರದಂತೆ ಗಾಜಿನಿಂದ ಭದ್ರಪಡಿಸಿರುತ್ತಿದ್ದ ಲಾಂದ್ರದ ದೀಪ! ಎರಡೂವರೆಯೊ ಮೂರೊ ಅಡಿಗಳೆತ್ತರದ ನಾವು ಬಾನೆತ್ತರಕ್ಕೇರುತ್ತಿದ್ದ ಆ ದೀಪವನ್ನು ನೋಡುತ್ತಾ ಒಂದು ಅಸೀಮ ಅನಂತತೆಯನ್ನೇ ಅನುಭವಿಸುತ್ತಿದ್ದೆವು. ನಮ್ಮ ಮರ್ತ್ಯಸ್ಥ ಕಲ್ಪನೆಗೆ ಆ ದೀಪ ಏರುತ್ತೇರುತ್ತಾ ಅಮರ್ತ್ಯಲೋಕೋನ್ನತವಾಗಿ ತೋರುತ್ತಿತ್ತು. ಆಕಾಶಕ್ಕೆ ಮುಟ್ಟಿಮುಟ್ಟಿ, ಇನ್ನೇನು ನಕ್ಷತ್ರಕ್ಕೆ ತಗುಲಿಯೆಬಿಡುತ್ತದೆ ಎಂಬಂತೆ ಭಾಸವಾಗಿ ಹಿಗ್ಗುತ್ತಿತ್ತು ನಮ್ಮ ಪುಟ್ಟ ಹೃದಯ. ಒಂದು ಏಣಿ ಹಾಕಿದರೆ ಸಾಕು, ಆ ದೀಪದ

ನೆತ್ತಿಯಿಂದ ಮೇಲಕ್ಕೆ. ಆಕಾಶ ನಮ್ಮ ಕೈಗೆ ಎಟುಕುತ್ತಿತ್ತು ! ಆಗ ನಮಗೆ ಆಕಾಶ ಅಭಾವಸ್ವರೂಪದ್ದಾಗಿರಲಿಲ್ಲ ; ಮುಷ್ಟಿಗ್ರಾಹ್ಯವಾಗಬಹುದಾದ ಘನವಸ್ತುವಾಗಿತ್ತು. ಅಜ್ಜಯ್ಯನ ಆ ಕಾರ್ತಿಕ ದೀಪದ ಆರೋಹಣ ನಮಗೆ, ಒಂದು ಆಧ್ಯಾತ್ಮಿಕ ಸ್ವರ್ಗಾರೋಹಣದಂತೆ ನಮ್ಮ ಚೇತನದ ಅಭೀಪ್ಸೆಯ ಊರ್ಧ್ವಗಮನ ಸಾಹಸಕ್ಕೆ ಸಂಕೇತವಾಗಿತ್ತೊ ಏನೊ ?

ಕಲಾತ್ಮಕವಾದ ಇಂತಹ ಪದ್ಧತಿಗಳು ವಸ್ತುನಿಷ್ಠವಾದ ಬಾಹ್ಯದೃಷ್ಟಿಗೆ ಅಲ್ಪವೂ ಸಾಧಾರಣವೂ ಬರಿಯ ಕಂದಾಚಾರಮಾತ್ರವೂ ಆಗಿತೋರಬಹುದಾದರೂ ಭಾವನಿಷ್ಠ ಅಂತರ್‌ದೃಷ್ಟಿಗೆ, ಅದರಲ್ಲಿಯೂ ಭೂಮಿಯನ್ನೆಲ್ಲಾ ಸ್ವರ್ಲೋಕವೇ ವ್ಯಾಪಿಸಿಕೊಂಡಂತಿರುವ ಬಾಲಕರ ಸಹೃದಯ ದೃಷ್ಟಿಗೆ, ಅದೊಂದು ಅಮೃತಮಯ ಚಿರಂತನ ಆಧ್ಯಾತ್ಮಿಕ ಅನುಭವದಂತೆ ನಿಗೂಢವೂ ಅಂತಃಸ್ಥಾಯಿಯೂ ಆಗಿರುವ ಸ್ಮೃತಿಮಂದಿರದ ನಂದಾದೀಪವಾಗಿ ಜೀವಮಾನವನ್ನೆಲ್ಲ ತನ್ನ ಗುಪ್ತದೀಪ್ತಿಯಿಂದ ಬೆಳಗುತ್ತಿರುತ್ತದೆ.

—o—

## ಸರಸ್ವತಿ

ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ-
ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ-
ಕೆಱೆದಪೆನಾ ಸರಸ್ವತಿಯೆ ಮಾೞ್ಕೆಮಗಿಲ್ಲಿಯೆ ವಾಗ್ವಿಳಾಸಮಂ.

# ಪುರಾಣಗಳಲ್ಲಿ ಗ್ರಂಥಲೇಖನ ವಿಚಾರ

ಶ್ರೀ ಯದುಗಿರಿ ಯತಿರಾಜ ಸಂಪತ್ಕುಮಾರ ರಾಮಾನುಜಜೀಯರ್

ಅಷ್ಟಾದಶ ಪುರಾಣಗಳು ನಮ್ಮ ನಾಡಿನ ಗತ ಜೀವನದ ಬಗ್ಗೆ ಮಾಹಿತಿಯನ್ನು ಒದಗಿಸುವ ಮೂಲ ಸಾಮಗ್ರಿಗಳಾಗಿವೆ. ಇವು ಒದಗಿಸುವ ಮಾಹಿತಿಯು ಸಾಮಾನ್ಯವಾಗಿ ಇಡೀ ಭರತ ಖಂಡಕ್ಕೇ ಅನ್ವಯಿಸುವಂಥದಾಗಿದೆ, ಎಂದರೆ ಅಡ್ಡಿಯಿಲ್ಲ. ಪುರಾಣಗಳನ್ನು ಕುರಿತು ಹಲವಾರು 'ಅಧ್ಯಯನ'ಗಳು ಈಗಾಗಲೇ ಹೊರಬಂದಿವೆ. ಬರವಣಿಗೆಯ ಬಗ್ಗೆ ನಮ್ಮ ಪ್ರಾಚೀನರಿಗೆ ಯಾವ ಒಂದು ಕಲ್ಪನೆಯಿತ್ತು ಎಂಬುದನ್ನು ಭವಿಷ್ಯ ಪುರಾಣದಲ್ಲಿ ದೊರೆಯುವ ಮಾಹಿತಿಯ ಹಿನ್ನೆಲೆಯಲ್ಲಿ ನಿರೂಪಿಸುವುದು ಪ್ರಸ್ತುತ ಲೇಖನದ ಉದ್ದೇಶವಾಗಿದೆ. ಈ ಬಗ್ಗೆ ಉಳಿದ ಪುರಾಣಗಳಲ್ಲಿ ದೊರೆಯುವ ಮಾಹಿತಿಗಳ ಬಗ್ಗೆ ಇತರರು ಕೆಲಸ ಮಾಡಿದರೆ ಒಳ್ಳೆಯದೆಂದು ಇಲ್ಲಿ ನಮ್ಮ ಸಲಹೆಯನ್ನು ಮುಂದಿಡುತ್ತೇವೆ.

ಭವಿಷ್ಯ ಪುರಾಣದಲ್ಲಿ ದೊರೆಯುವ ಮಾಹಿತಿಯನ್ನು ನಾವು ಪುಸ್ತಕ, ಅದರ ರಚನೆ, ಪುಸ್ತಕದ ಬಗ್ಗೆ ಅವರಿಗಿದ್ದ ಕಲ್ಪನೆ ಮತ್ತು ಲೇಖಕ, ಅವನ ಗುಣಗಳು ಎಂದು ಮುಖ್ಯವಾಗಿ ಎರಡು ಭಾಗಗಳಲ್ಲಿ ಗುರುತಿಸಬಹುದಾಗಿದೆ. ವಿಷಯ ಪ್ರವೇಶಕ್ಕೆ ಮುನ್ನ ಒಂದು ಮಾತು : ನಾವು ಮುಂದೆ ನೋಡುವ ಮಾಹಿತಿಗಳೆಲ್ಲವೂ ಪುರಾಣ ಕಾಲದ ಜನರಿಗಿದ್ದ ಧಾರ್ಮಿಕ ಭಾವನೆ ಪುಸ್ತಕರಚನೆಯ ವಿಷಯದಲ್ಲಿಯೂ ಸೇರಿಕೊಂಡಿರುವುದನ್ನು ಗಮನಿಸಬಹುದು. ಈ ಧಾರ್ಮಿಕ ಭಾವನೆ ಪುಸ್ತಕ ರಚನೆಯಲ್ಲಿ, ರಕ್ಷಣೆಯಲ್ಲಿ ವಹಿಸಿದ ಮಹತ್ವದ ಪಾತ್ರವನ್ನು ಗುರುತಿಸಬೇಕೆಂದು ಸೂಚಿಸುತ್ತವೆ.

ಪುಸ್ತಕವನ್ನು ತ್ರಿಮೂರ್ತಿ ಸ್ವರೂಪವೆಂದು ಭಾವಿಸಿ—

ತ್ರಿದೇವಂ ಪುಸ್ತಕಂ ವಿದ್ಯಾತ್ಸೂತ್ರಂ ವಾಸುಕಿರುಚ್ಯತೇ ।
ಅಮಾನಕರಣೇ ದೋಷಃ ತಸ್ಮಾತ್ತಚ್ಚ ನ ಹಾಪಯೇತ್ ॥೭-೫೪॥

ಪುಸ್ತಕವನ್ನು ತ್ರಿಮೂರ್ತಿ ಸ್ವರೂಪವೆಂದೂ ಅದಕ್ಕೆ ಸುತ್ತುವ ದಾರವನ್ನು ವಾಸುಕೀ ಸ್ವರೂಪವೆಂದೂ ಹೇಳುತ್ತಾರೆ. ಆ ದಾರವು ನಿರ್ದಿಷ್ಟವಾದ ಅಳತೆಯುಳ್ಳದ್ದಾಗಿರಬೇಕು. ಹಾಗಿಲ್ಲದ ಪಕ್ಷದಲ್ಲಿ ದೋಷಕರವೆನ್ನಿಸಿಕೊಳ್ಳುತ್ತದೆ. ಆದಕಾರಣ ಅಳತೆ ಮಾಡಿಟ್ಟುಕೊಳ್ಳುವ ಸಂಪ್ರದಾಯವನ್ನು ಬಿಡಬಾರದು.

ಇದೇ ಕಲ್ಪನೆ ಮುಂದುವರಿಯುತ್ತಾ—

ಪತ್ರಾಣಿ ಭಗವಾನ್ ಬ್ರಹ್ಮ ಊರ್ಧ್ವ ದೀರ್ಘಾಣಿ ಯಾನಿಚ ।
ಜನಾರ್ದನಶ್ಚಾಕ್ಷರಾಣಿ ಮಾತ್ರಾ ಪ್ರಕೃತಿರವ್ಯಯಾ ॥೭–೫೫॥

ಪುಸ್ತಕದ ಊರ್ಧ್ವ (ಅಗಲ) ಪ್ರಮಾಣ, ದೀರ್ಘ (ಉದ್ದ) ಪ್ರಮಾಣಗಳನ್ನು ಬ್ರಹ್ಮನೆಂದೂ, ಅಕ್ಷರಗಳನ್ನು ಮಹಾವಿಷ್ಣುವೆಂದೂ, ಹ್ರಸ್ವದೀರ್ಘಾದಿ ಮಾತ್ರೆಗಳನ್ನು ನಾಶರಹಿತವಾದ ಮೂಲಪ್ರಕೃತಿಯೆಂದೂ ತಿಳಿಯಬೇಕು.

ಲಿಪೀ ಭಂಗೀ ಮಹೇಶಃ ಸ್ಯಾತ್ತಸ್ಯಾ ಮಾತ್ರಾ ಸರಸ್ವತೀ
ಏಕ ರೇಖಾಚ್ಚ ಏಕಾತ್ರ ಪಾದಾಚ್ಚ ಪಾದ ವಿಚ್ಯುತಿಃ ॥೭–೫೬॥

ಲಿಪಿಗಳ ನಿಲುವಿನ ರೀತಿಯನ್ನು ಮಹೇಶ್ವರನೆಂದೂ, ಆ ಅಕ್ಷರಗಳ ಮಾತ್ರೆಯನ್ನು ಸರಸ್ವತಿ ಎಂಬುದಾಗಿಯೂ ಭಾವಿಸಬೇಕು. ಶ್ಲೋಕದಲ್ಲಿ ಒಂದು ರೇಖೆ ಬಿಟ್ಟು ಹೋದರೆ ಏಕಾತ್ರಚ್ಯುತಿಯೆಂದೂ ಒಂದು ಪಾದವೇ ಬಿಟ್ಟುಹೋದರೆ ಪಾದವಿಚ್ಯುತಿಯೆಂದೂ ತಿಳಿಯತಕ್ಕದ್ದು.

ಪುಸ್ತಕದ ಅಳತೆಯ ಬಗ್ಗೆ ಹೇಳುತ್ತಾ—

ದ್ವಾತ್ರಿಂಶದಂಗುಲೈರ್ಯುಕ್ತಂ ಕರ್ತವ್ಯಂ ಪುಸ್ತಕೋತ್ತಮಂ ।
ಸ ವೈ ನಾರಾಯಣಃ ಖ್ಯಾತೋ ಧಾರಣಚ್ಚ ಕುಶೋಪ್ಯಲಮ್ ॥೭–೧೦೨॥

ಮೂವತ್ತೆರಡು ಅಂಗುಲ ಉದ್ದವಿರುವುದು ಉತ್ತಮವಾದ ಪುಸ್ತಕ. ಅದು ಮಹಾವಿಷ್ಣುವಿನ ಸ್ವರೂಪವೆಂದು ಪ್ರಸಿದ್ಧವಾಗಿದೆ.

ಚತುರ್ವಿಂಶಾಂಗುಲಂ ಯಚ್ಚ ತದ್ವೈ ಸ್ವಧನಮುಚ್ಯತೇ ।
ಶಂಕರಃ ಸ ತು ವಿಜ್ಞೇಯೋ ಧರ್ಮಕಾಮ ಫಲಪ್ರದಃ ॥೭–೧೦೩॥

ಇಪ್ಪತ್ತು ನಾಲ್ಕು ಅಂಗುಲವುಳ್ಳದ್ದು ಸ್ವಧನವೆನಿಸುವುದು. ಧರ್ಮ, ಕಾಮ ಫಲಗಳನ್ನು ನೀಡುವ ಅದನ್ನು ಶಂಕರಸ್ವರೂಪವೆಂದು ತಿಳಿಯಬೇಕು.

ಅಷ್ಟಾಙ್ಗುಲಂ ಭವೇದ್ಯಚ್ಚ ತತ್ಕನಿಷ್ಠಮಿಹೋಚ್ಯತೇ ।
ತಸ್ಮಾದ್ಬ್ರಹ್ಮಮಯಂ ಜ್ಞೇಯಂ ತ್ರಿವರ್ಗಫಲದಾಯಕಂ ॥೭–೧೦೪॥

ಎಂಟು ಅಂಗುಲವುಳ್ಳದ್ದು ಕನಿಷ್ಠ ಪುಸ್ತಕವೆನ್ನಿಸಿಕೊಳ್ಳುತ್ತದೆ. ಅದನ್ನು ತ್ರಿವರ್ಗ ಫಲಕೊಡುವ ಬ್ರಹ್ಮಸ್ವರೂಪವೆಂದು ತಿಳಿಯಬೇಕು.

ಮೇಲೆ ಹೇಳಿದ ಈ ಪ್ರಮಾಣವು ತಾಳೀಗರಿಗಳಿಗೆ ಮಾತ್ರ, ಭೂರ್ಜ ಪತ್ರಕ್ಕಲ್ಲ ಎಂಬ ಅಭಿಪ್ರಾಯವನ್ನು ತಿಳಿಸುವ ಶ್ಲೋಕ ಈ ರೀತಿ ಇದೆ—

ತಾಡಿತಾ ಜಲಪತ್ರೇಚ ಅಥವಾ ಚಾಗುರುತ್ವ ಚ ।
ಏತ್ಯಾಃ ಪತ್ರಕೃತೇ ಮಾನಂ ಭೂರ್ಜೇ ಮಾನಂ ನ ವಿದ್ಯತೇ ॥೭–೧೦೫॥

ಮೇಲೆ ಹೇಳಿದ ಪ್ರಮಾಣಗಳು ತಾಳಪತ್ರ, ಜಲಪತ್ರ, ಅಗುರುವೃಕ್ಷದ ತೊಗಟೆ ಮುಂತಾದುವುಗಳಿಂದ ಮಾಡಿದ ಪುಸ್ತಕಗಳಿಗೆ ಮಾತ್ರ ಅನ್ವಯಿಸುತ್ತದೆ. ಭೂರ್ಜ ಪತ್ರದಲ್ಲಿಯಾದರೆ ಪ್ರಮಾಣ ನಿಷ್ಕರ್ಷೆಯಿಲ್ಲ.

ದ್ವಾದಶಾಂಗುಲಿಕಂ ಯಚ್ಚ ಭೂರ್ಜಕೈಡಾದಿ ನಿರ್ಮಿತಂ |
ಅಂಗುಲಸಾಂ ಪ್ರಮಾಣಂ ತತ್ತ್ರೇನಾಪಿ ಜ್ಞಾನ ಪುಸ್ತಕಂ ||೭-೧೦೬||

ಭೂರ್ಜಕ, ಏಡ, ಮೊದಲಾದವುಗಳ ಪತ್ರವನ್ನು ಹನ್ನೆರಡು ಅಂಗುಲ ಪ್ರಮಾಣವಾಗಿ ಮಾಡಿಕೊಂಡು ಪುಸ್ತಕವನ್ನು ಮಾಡಿದರೆ ಅದು ಜ್ಞಾನಪ್ರದವೆನ್ನಿಸುವುದು.

ತಾಳ ಪತ್ರಗಳನ್ನು ಪೋಣಿಸಲು ಅನುವಾಗುವಂತೆ ಅವುಗಳಿಗೆ ರಂಧ್ರಗಳು :

ಪತ್ರಾಣಾಮುಗ್ರಭಾಗೇತು ವೇಧಂ ಕುರ್ಯಾತ್ಸುವರ್ತುಲಮ್ |
ಶ್ರವಣಾತ್ತತ್ರ ಸೂತ್ರೇಣ ತತ್ರ ಪದ್ಮಂ ಚ ವರ್ತುಲಂ ||೭-೭೧||

ತಾಳ ಪತ್ರಗಳ ಎರಡೂ ತುದಿಗಳಲ್ಲಿ ದುಂಡನೆಯ ರಂಧ್ರವನ್ನು ಕೊರೆಯಬೇಕು. ಪಠನೀಯವಾದ ಭಾಗವು ಪೂರ್ತಿಯಾಯಿತು ಎಂಬುದನ್ನು ಸೂಚಿಸಲು ವರ್ತುಲ ಅಥವಾ ಪದ್ಮಾಕೃತಿಯನ್ನು ಸೂತ್ರದಿಂದ ರಚಿಸಿ ಅಲ್ಲಿಗೆ ಸೇರಿಸಬೇಕು.

ಸಂಹಿತಾಗಮ ತಂತ್ರೇಷು ಪ್ರತಿವೇಧೇ ಚ ಸಂಕುಲಂ |
ಪ್ರಕುರ್ಯಾಚ್ಚಿತ್ತತಾಪೇನ ತತಃ ಶಕ್ರಪುರ ವ್ರಜೇತ್ ||೭-೭೨

ಸಂಹಿತಾ, ಆಗಮ ತಂತ್ರಗಳನ್ನೇ ಬರೆದ ಓಲೆಯ ಪುಸ್ತಕದ ಪ್ರತಿಯೊಂದು ಪತ್ರದಲ್ಲಿಯೂ ರಂಧ್ರ ಮಾಡುವಾಗ ಅದನ್ನು ಮಾಡುವವನ ಮನಸ್ಸು ತಾಪಯುಕ್ತವಾಗಿರಬೇಕು. ತಾಪಯುಕ್ತನಾಗಿ ವೇಧಮಾಡಬೇಕು. ಹೀಗೆ ಮಾಡುವುದರಿಂದ ಇಂದ್ರಲೋಕ ಪ್ರಾಪ್ತವಾಗುವುದು.

ಮಧ್ಯಂ ತಸ್ಯ ಹರೇದಾಯುಃ ಪಾರ್ಶ್ವವೇಧಃ ಶಿವಹರೇತ್ |
ಯುಗ್ಮವೇಧೇ ಜಯಂ ದದ್ಯಾದೇಕವೇಧೇ ಬಲಿರ್ಭವೇತ್ ||೭-೭೩||

ರಂಧ್ರವನ್ನು ಮಧ್ಯದಲ್ಲಿ ಮಾಡಿದರೆ ಆಯುಸ್ಸು ಕುಗ್ಗುವುದು. ತೀರಾ ಕೊನೆಯಲ್ಲಿ ಮಾಡಿದರೆ ಸೌಖ್ಯನಾಶ. ಒಂದು ರಂಧ್ರ ಮಾಡಿದರೆ ಬಲಿಯಾಗುವುದು. ಎರಡು ರಂಧ್ರ ಮಾಡಿದರೆ ಜಯ ಲಭಿಸುವುದು.

ಪುಸ್ತಕದ ರಕ್ಷಾಕವಚದ ಬಗ್ಗೆ ಹೇಳುತ್ತಾ—

ಪರಮಾ ಪ್ರಕೃತೇರ್ಗುಹ್ಯಂ ಸ್ಥಾನಂ ದೇವೈರ್ವಿನಿರ್ಮಿತಂ |
ಪೂರಯೇತ್ತಾಮ್ರಲಿಂಗೇನ ಅಥ ರೈತ ಮಯೇನ ವಾ ||೭-೭೪||
ಅಶಕ್ತೋ ವಾ ಬಿಲ್ವಕಾಷ್ಟ ತಥಾ ಶ್ರೀಪರ್ಣಿಕಸ್ಯ ಚ
ನ ಕಾಷ್ಠ ನ ವಂಶಸ್ಯ ನ ಲೋಹಂ ಯೋಜಯೇತ್ಕ್ವಚಿತ್ ||೭-೭೫||

ರಹಸ್ಯವೂ ದೇವನಿರ್ಮಿತವೂ ಶ್ರೇಷ್ಠವೂ ಆದ ಪ್ರಕೃತಿಸ್ಥಾನವನ್ನು ತಾಮ್ರದಿಂದಾಗಲೀ ಹಿತ್ತಾಳೆಯಿಂದಾಗಲೀ ಮಾಡಿದ ಲಿಂಗ*ದಿಂದ ತುಂಬಬೇಕು. ಅನುಕೂಲವಿಲ್ಲದವನು ಬಿಲ್ವಪತ್ರ ಮರದಿಂದಾಗಲಿ ಶ್ರೀಪರ್ಣಿ(ತೇಗದ)ಮರದಿಂದಲಾಗಲೀ

* ಇಲ್ಲಿ ಲಿಂಗವೆಂದರೆ ಹಸ್ತಪ್ರತಿಗೆ ಹಾಕುವ ರಕ್ಷಾಕವಚ–ಸಂ.

ಮಾಡಬಹುದು. ಇವುಗಳನ್ನಲ್ಲದೆ ಇತರ ಮರ, ಲೋಹಗಳಿಂದಾಗಲೀ ಬಿದಿರಿನ ಮರದಿಂದಾಗಲೀ ಮಾಡಿ ಸೇರಿಸಬಾರದು.*

ಮುಂದೆ ನಾವು ಪತ್ರಗಳಲ್ಲಿ ಕೊರೆಯಲ್ಪಟ್ಟ ಅಕ್ಷರಗಳು ಸ್ಪಷ್ಟವಾಗಿ ಕಾಣಲು ಅವರು ನಡೆಸಿದ ಪ್ರಯತ್ನಗಳ ಬಗೆಗೆ ತಿಳಿಯೋಣ.

ತಚ್ಚ ಪತ್ರ್ರಪ್ರಾವಸ್ ಕರ್ತವ್ಯಂ ಸುವರ್ಣ ರಜತಸ್ಯ ಚ |
ಕಜ್ಜಲೈರ್ಮಲಿನಂ ಕುರ್ಯಾನ್ಮಂತ್ರಿ ನಿರ್ಯ್ಯಾಸ ಮಂತ್ರಿತೈಃ ||೭-೮೪||

ಗೋಂದು ಮಿಶ್ರಿತವಾದ ಕಾಡಿಗೆಯನ್ನು ಬೆಳ್ಳಿಯ ಕಡ್ಡಿಯಿಂದಲೋ, ಚಿನ್ನದ ಕಡ್ಡಿಯಿಂದಲೋ ಸವರಿ ಅಕ್ಷರಗಳನ್ನು ಕಪ್ಪಗೆ ಮಾಡಬೇಕು.

ಜೀವಂತ್ಯಾಶ್ಚ ರಸೈರ್ಯುಕ್ತೈರ್ಮಣಿ ಕರ್ದಮ ಲೋಲುಪೈಃ |
ವಂಗುನ್ಯಾದ್ಯಾ ಯುತೈರ್ವಾಪಿ ಪೀತಯೋಗೈರಥಾಪಿ ವಾ ||೭-೮೫||

ಮಣಿಯ ಆಕೃತಿಯುಳ್ಳ ಕರ್ದಮದೊಡನೆ ಬೆರೆಕೆಯಾದ ಜೀವಂತಿ ಮೂಲಿಕೆಯ ರಸದಿಂದಲೋ ವಂಗುನೀ ಮೊದಲಾದುದರಿಂದಲೋ ಹಳದಿಬಣ್ಣದ ಮಿಶ್ರಣವನ್ನು ಸವರಬೇಕು.

ಕೃಷ್ಣೇ ವಾಯು ಪ್ರದಂ ವಿದ್ಯಾತ್ಪೀತೇ ವಾಯುಕ್ಷಯೋ ಭವೇತ್ |
ರಕ್ತೇ ಪುಷ್ಟಿಮವಾಪ್ನೋತಿ ಕೃಷ್ಣೇ ಚ ಸಂಪದಾಗಮಃ ||೭-೮೬||

ಲಿಪಿಗಳಿಗೆ ಕರಿಯ ಬಣ್ಣವನ್ನು ಹಾಕುವುದರಿಂದ ಕರ್ತೃವಿಗೆ ವಾಯುರೋಗ ಉಂಟಾಗುವುದು ಎಂದೂ ಹಳದಿಯ ಬಣ್ಣವನ್ನು ಹಾಕುವುದರಿಂದ ವಾಯುರೋಗವು ಪರಿಹಾರವಾಗುವುದೆಂದೂ ತಿಳಿಯಬೇಕು. ಮತ್ತೆ ಕೆಲವರು ಕೆಂಪುಬಣ್ಣವನ್ನು ಹಾಕುವುದರಿಂದ ಪುಷ್ಟಿಯುಂಟಾಗುತ್ತದೆಯೆಂದೂ, ಕೃಷ್ಣವರ್ಣವನ್ನು ಹಾಕಿದರೆ ಸಂಪತ್ತು ಲಭಿಸುವುದೆಂದೂ ತಿಳಿಸುತ್ತಾರೆ.

ಅನಾಮತ್ವೇ ಹೇಮಯುತಾಂ ಬಲಾಕಂ ಶಕ್ತ ಮೇವ ಚ |
ನಲಿಖೇತ್ತಿಲಭಾಗಂಚ ಹರಿವಂಶಸ್ಯ ಸತ್ತಮಾಃ ||೭-೭೮||

ಬರೆಯುವಗ್ರಂಥ ಅಪ್ರಸಿದ್ಧ ನಾಮವುಳ್ಳದ್ದಾಗಿದ್ದರೆ ಅವನ್ನು ಬರೆಯಲು ಸುವರ್ಣದ ಬಣ್ಣವನ್ನು ಉಪಯೋಗಿಸಬೇಕು. ದಟ್ಟವಾದ ಬಲಾಕ ವರ್ಣವನ್ನು ಲೇಪಿಸಬೇಕು. ಹರಿವಂಶದಲ್ಲಿ ರೂಢಿ ಇಲ್ಲದ ಭಾಗವನ್ನು ಬರೆಯಬಾರದು.

ಪುಸ್ತಕದ ಉಪಯೋಗವನ್ನು ಕುರಿತು "ನ ಶಸ್ಯಃ ಪೂಜನೀಯಶ್ಚ ಗೃಹೇ ಸ್ಥಾಪ್ಯೇತಿ ಮಾನವಃ" ಅಂದರೆ ಪೂಜನಿಯವಾದ ಪುಸ್ತಕವನ್ನು ಮನುಷ್ಯನು ಮನೆಯಲ್ಲಿ ಇಟ್ಟುಕೊಳ್ಳುವುದು ಒಳ್ಳೆಯದಲ್ಲ. ತನ್ನಿಂದ ಓದಲು ಆಗದಿದ್ದರೆ ಅದನ್ನು ದಾನ ಮಾಡಬೇಕು ಇಲ್ಲವೆ ಸಾರ್ವಜನಿಕ ಸ್ಥಳದಲ್ಲಿ ಇಡಬೇಕು ಎಂಬುದಾಗಿ ತಿಳಿಸುತ್ತದೆ.

* ಇತರೆ ಲೋಹಗಳು ತುಕ್ಕು ಹಿಡಿಯುತ್ತವೆ. ಹಾಗೆಯೇ ಬಿದಿರು ಮುಂತಾದ ಮರಗಳಿಗೆ ಬೇಗ ಹುಳುಹುಪ್ಪಟೆ ಅವರ ಮೂಲ 'ಪ್ರಕೃತಿ'ಯೇ ನಾಶವಾಗುತ್ತದೆ.-ಸಂ.

ಸಂಪೂಜಿಯಿತ್ವಾ ತಚ್ಛಾಸ್ತ್ರಂ ದೇಯಂ ಗುಣವತೇ ತದಾ ।
ಶಾಸ್ತ್ರ ಸದ್ಭಾವ ವಿದುಷೇ ವಾಚಕೇ ಚ ಪ್ರಿಯಂವದೇ ॥೧೦॥

ಗ್ರಂಥವನ್ನು ಪೂಜೆಮಾಡಿ ಆ ಪುಸ್ತಕವನ್ನು ಗುಣವಂತನೂ ಪ್ರೀತಿಯಿಂದ ಓದು ವವನೂ ಶಾಸ್ತ್ರದಲ್ಲಿ ನಂಬಿಕೆಯಿರುವವನೂ ಆದ ವಿದ್ವಾಂಸನಿಗೆ ದಾನಮಾಡಬೇಕು.

ವಸ್ತ್ರಯುಗ್ಮೇನ ಸಂವೀತಂ ಪುಸ್ತಕಂ ಪ್ರತಿಪಾದಯೇತ್ ।
ಸಾಮಾನ್ಯಂ ಸರ್ವಲೋಕಾನಾಂ ಸ್ಥಾಪಯೇದಥ ವಾ ಮಠೇ ॥೧೦॥

ಪುಸ್ತಕವನ್ನು ದಾನಮಾಡುವಾಗ ಎರಡು ವಸ್ತ್ರಗಳಿಂದ ಸುತ್ತಿ ದಾನಮಾಡಬೇಕು. ಸಮಸ್ತರಿಗೂ ಉಪಯೋಗವಾಗಬೇಕೆಂಬ ಅಭಿಲಾಷೆಯಿದ್ದರೆ ಮಠವಲ್ಲಿಯೋ, ಪುಸ್ತಕ ಭಂಡಾರವಲ್ಲಿಯೋ ಇಡಬೇಕು. ಪ್ರಾಚೀನ ಕರ್ನಾಟಕದ ವಿದ್ಯಾಕೇಂದ್ರ ಗಳಾಗಿದ್ದ ಮಠಗಳಲ್ಲಿ ಇಂದಿಗೂ ಹಸ್ತಪ್ರತಿ ಭಂಡಾರಗಳಿರುವುದು ಇಲ್ಲಿ ನಾವು ಸ್ಮರಿಸಬಹುದು. ಹಾಗೆಯೇ ಹಸ್ತಪ್ರತಿಗಳು ವಿವಿಧ ರೀತಿಯ ವಸ್ತ್ರಗಳಿಂದ ಸುತ್ತಲ್ಪಟ್ಟಿರುವುದನ್ನು ನಾವು ಗಮನಿಸಬಹುದಾಗಿದೆ.

ಯಾವುದೇ ಶುಭಕಾರ್ಯವನ್ನು ಆರಂಭಿಸಲು ನಮ್ಮ ಜನ ಶುಭದಿನ, ಲಗ್ನವನ್ನು ನೋಡುತ್ತಿದ್ದರು. ಹಾಗೆಯೇ ಪುಸ್ತಕವನ್ನು ಬರೆಯುವುದಕ್ಕೂ ಶುಭಲಗ್ನವನ್ನು ನೋಡುತ್ತಿದ್ದರು. ನಿರ್ದಿಷ್ಟವಾದ ಶುಭದಿನ ಲೇಖಕನು—

ವಿನೀತಶ್ಚಾಪ್ರಮತ್ತಶ್ಚ ತತಃ ಪ್ರಭೃತಿ ಲೇಖಕಃ ।
ಮಾತ್ರಾನುಸ್ವಾರ ಸಂಯುಕ್ತಂ ಪದಚ್ಛೇದ ಸಮನ್ವಿತಂ ॥೭॥
ಸಮಾನಿ ಸಮಶೀರ್ಷಾಣಿ ವರ್ತುಲಾನಿ ಘನಾನಿ ಚ ।
ಲೇಖಯೇದಕ್ಷರಾಣೀಹ ತದ್ಗತೇನಾಂತರಾತ್ಮನಾ ॥೮॥

ಲೇಖಕನು ವಿನೀತನೂ, ಸರಿಯಾದ ಎಚ್ಚರಿಕೆಯುಳ್ಳವನೂ ಆಗಿ ಮಾತ್ರೆ, ಅನು ಸ್ವಾರಗಳ ಸಹಿತವಾಗಿರುವಂತೆಯೂ, ಸರಿಯಾದ ಪದವಿಭಾಗಗಳನ್ನೊಳಗೊಂಡಿರು ವಂತೆಯೂ, ಅಕ್ಷರಗಳ ತಲೆಕಟ್ಟುಗಳೆಲ್ಲವೂ ಒಂದೇ ಪಂಕ್ತಿಯಾಗಿಯೂ, ಲಿಪಿಗಳು ದುಂಡಾಗಿಯೂ ಇರುವಂತೆ ಮನಸ್ಸಿಟ್ಟು ಸರಿಯಾಗಿ ಬರೆಯಬೇಕು.

ದ್ರುತ ಲೇಖಿ ಚ ತೇಜಸ್ವೀ ಯೋ ಲೇಖಯತಿ ಲೇಖಕಃ ।
ಅಸಂವಲಿತಭಾವೇನ ಊರ್ಧ್ವೋರ್ಧ್ವೇ ಸ್ಯಾತ್ಸಮಾಕ್ಷರಂ ॥೭-೯೧॥

ಲೇಖಕನಾದವನು ಶೀಘ್ರವಾಗಿ ಬರೆಯತಕ್ಕವನೂ, ತೇಜಶ್ಶಾಲಿಯೂ ಆದವನಿರ ಬೇಕು. ಈ ಗುಣಗಳ ಜೊತೆಗೆ ಬರೆಯುವ ಅಕ್ಷರಗಳು ಕಲಸಿಕೊಳ್ಳದೆ ಇರುವಂತೆಯೂ ಮೇಲುಮೇಲಕ್ಕೆ ಎದ್ದುಕೊಂಡ ಸಮನಾದ ಬರವಣಿಗೆಯನ್ನು ಬರೆಯುವ ಅಭ್ಯಾಸ ವುಳ್ಳವನೂ ಆಗಿರಬೇಕು.

ಆಶೌಚೇಽಪಿ ದರಿದ್ರಃ ಸ್ಯಾಜ್ಜನ್ಮಾಹೇ ಚಾಯುಷಃ ಕ್ಷಯಃ
ಲಿಪಿಜ್ಞಃ ಪದಜ್ಞಶ್ಚ ಯುವಾ ಧೀಮಾನ್ ಜಿತಾಸನಃ ॥೭-೯೨॥

ಆಶೌಚ ಪ್ರಾಪ್ತವಾದ ಕಾಲದಲ್ಲಿ ಯಾವುದೇ ಗ್ರಂಥವನ್ನು ಬರೆದರೆ ದರಿದ್ರನಾಗುವನು. ಜನ್ಮದಿನತಿಥ್ಯಾದಿಗಳಲ್ಲಿ ಬರೆದರೆ ಆಯುಸ್ಸು ಕ್ಷೀಣವಾಗುವುದು. ಲೇಖಕನಾದವನು ಲಿಪಿ, ಛಂದಸ್ಸು, ವ್ಯಾಕರಣಗಳನ್ನು ತಿಳಿದವನೂ, ಪ್ರಾಯದವನೂ, ಬುದ್ಧಿಶಾಲಿಯೂ, ದೃಢನಾಗಿ ಕುಳಿತು ಕೆಲಸಮಾಡುವ ಸ್ವಭಾವದವನೂ ಆಗಿರಬೇಕು.

ಲಿಪಿಯುಕ್ತಃ ಸಮಾಯುಕ್ತಃ ಸ ಏವಾಗಮಲೇಖಕಃ ।
ನಾಂದೀನಾಗರಕೈರ್ವರ್ಣೈಃ ಶುದ್ಧನಾಗರಕೈರಪಿ ॥೭-೯೪॥

ಮನಸ್ಥೈರ್ಯವುಳವನು ಶಾಸ್ತ್ರವನ್ನು ಬರೆಯಲು ಅರ್ಹನು. ಶಾಸ್ತ್ರಗಂಥವನ್ನು ನಾಂದೀನಾಗರಾಕ್ಷರಗಳಿಂದಲೋ, ದೇವನಾಗರಕ್ಷರಗಳಿಂದಲೋ, ಕಾಮರೂಪಾಕ್ಷರಗಳಿಂದಲೋ ಬರೆಯಬೇಕು.

ಕಾಮರೂಪಾಕ್ಷರೈರ್ವಾಪಿ ಯಾವಚ್ಚ ಸಂಹಿತಾಗಣಃ
ಅಚೇತನೇನಾಲಿಖಿತಂ ಯಾವತ್ಕಾಲಂ ಪ್ರವರ್ತತೇ ॥ ೭-೯೫ ॥

ಪುರಾಣಸಂಹಿತಾಸಮೂಹವು ಎಷ್ಟು ದೀರ್ಘವಾಗಿದೆಯೋ ಅಲ್ಲಿಯವರೆಗೂ ಬರೆಯಲು ಇನ್ನೂ ಎಷ್ಟು ಉಳಿದಿದೆ ಎಂಬುದರ ಕಡೆಗೆ ಗಮನವಿಲ್ಲದೆ ಶ್ರದ್ಧೆಯಿಂದ ಬರೆಯಬೇಕು. ಹೀಗೆ ಬರೆದ ಬರವಣಿಗೆ ಎಲ್ಲಿಯವರೆಗೆ ಉಳಿದಿರುತ್ತದೆಯೋ ಅಲ್ಲಿಯವರೆಗೆ ಅವನ್ನು ಬರೆದ ಲೇಖಕನಿಗೆ ಸ್ವರ್ಗದಲ್ಲಿ ಸ್ಥಳ ದೊರೆಯುತ್ತದೆ ಎಂಬ ವಿಷಯವನ್ನು ಪುರಾಣಕಾರ ಈ ರೀತಿ ತಿಳಿಸುತ್ತಾನೆ:

ಯಾವದಕ್ಷರ ಸಂಸ್ಥಾನಂ ತಾವತ್ಸ್ವರ್ಗೇ ಮಹೀಯತೇ ।
ಅನುಕ್ತೋ ವಾಚಯೇದಸ್ತು ಧರ್ಮಶಾಸ್ತ್ರಸ್ಯ ವೇತನಂ ॥ ೭-೯೬ ॥

ಇವನು ಬರೆದ ಅಕ್ಷರಗಳು ಎಷ್ಟು ಕಾಲವಿರುವುದೋ ಅಷ್ಟುಕಾಲದ ಪರ್ಯಂತ ಸ್ವರ್ಗದಲ್ಲಿ ಪೂಜಿತನಾಗುವನು. ವೇತನವನ್ನು ನಿಗದಿಮಾಡಿ ಹೇಳಿ ತೆಗೆದುಕೊಳ್ಳದೆ ಯಾವನು ದೊರೆತಷ್ಟು ಲಾಭಕ್ಕಾಗಿ ಧರ್ಮಶಾಸ್ತ್ರವನ್ನು ವಾಚನ ಮಾಡುತ್ತಾನೆಯೋ ಅವನು ಸ್ವರ್ಗದಲ್ಲಿ ಪೂಜಿತನಾಗುತ್ತಾನೆ.

ಲಿಖಿತ್ವಾ ಯಸ್ತು ಪಾಪಾತ್ಮಾ ಯಾವದಕ್ಷರಸಂಖ್ಯಯಾ ।
ತಾವತ್ಕಾಲಂ ತು ನರಕೇ ಪಚ್ಯತೇ ನಾತ್ರ ಸಂಶಯಃ ॥ ೭-೯೭ ॥

ಉಕ್ತವಾದ ಈ ವಿಧಿಗೆ ವಿರುದ್ಧವಾಗಿ ಪುರಾಣವನ್ನು ಬರೆದರೆ ಅವನು ಪಾಪಾತ್ಮನೆನಿಸುವನು. ಅವನು ಬರೆದ ಅಕ್ಷರಗಳ ಸಂಖ್ಯೆಯಷ್ಟು ಕಾಲ ಅವನು ರೌರವ ನರಕದಲ್ಲಿ ಬೇಯುತ್ತಾನೆ

ಕುಟುಂಬಭರಣಾರ್ಥಂ ತು ಗೃಹ್ಣೀಯಾದ್ವಾಪಿ ವೇತನಂ ।
ನ ಜೀವತಿ ಸ ದುಷ್ಟಾತ್ಮಾ ಧನ ವಸ್ತ್ರ ಫಲಾನ್ವಿತಃ ॥ ೭–೯೮ ॥

ಕುಟುಂಬ ಪೋಷಣೆಗಾಗಿ ಬರೆಯುವವನು, ವೇತನವನ್ನು ತೆಗೆದುಕೊಂಡು ಬರೆಯುವವನು, ಇಂಥ ದುಷ್ಟಾತ್ಮರಿಗೆ ಅವರ ಜೀವಮಾನದಲ್ಲಿ ಧನ ವಸ್ತ್ರ ಮುಂತಾದ ಅನುಕೂಲವು ಉಂಟಾಗುವುದಿಲ್ಲ.

ಮೇಲಿನ ಮಾಹಿತಿಯು ನಮ್ಮ ಪ್ರಾಚೀನರು ಹಸ್ತಪ್ರತಿಗಳ ಬಗ್ಗೆ ಹೊಂದಿದ್ದ ಮನೋಧರ್ಮವನ್ನು ತಿಳಿಯಲು ನೆರವಾಗುತ್ತದೆ ಎಂದು ನಂಬಿದ್ದೇನೆ.

---

ನೆರವು : ಭವಿಷ್ಯ ಮಹಾಪುರಾಣಂ, ಮಧ್ಯಮ ಪರ್ವ ಭಾಗ–೫, ಉತ್ತರ ಪರ್ವ ಭಾಗ–೧೪.

—o—



# ಶಿಲ್ಪದಲ್ಲಿ ತಾಳೆಗರಿ ಗ್ರಂಥಗಳು

---

**ಡಾ|| ಜ್ಯೋತ್ಸ್ನಾ ಕಾಮತ**

ಆದಿಮಾನವ ಕಾಡುಮೃಗಗಳು, ಅಗೋಚರ ಶಕ್ತಿಗಳು ಮುಂತಾದುವುಗಳಿಗೆ ಹೆದರಿ ಸ್ವಂತದ ಸಂರಕ್ಷಣೆಗೆ ಗುಹಾಲಯಗಳನ್ನು ಹೊಕ್ಕ. ಮೊದಲು ಚಿತ್ರಕಲೆ ಅಲ್ಲಿಯೇ ಹುಟ್ಟಿಕೊಂಡಿತು. ತನಗೆ ಗೊತ್ತಿದ್ದ ಮಣ್ಣು ಪರ್ಣವರ್ಣಗಳನ್ನೇ ಬಳಸಿ ತನ್ನ ವಾಸಸ್ಥಳದಲ್ಲಿಯೇ ಚಿತ್ರಗಳನ್ನು ಆತ ಬಿಡಿಸಿದ. ತನ್ನ ಯಾವತ್ತೂ ಅನಿಸಿಕೆಗಳನ್ನು ಚಿತ್ರಮಾಧ್ಯಮದಿಂದ ವ್ಯಕ್ತಗೊಳಿಸಲು ಸಾಧ್ಯವಾಗದಾಗ ಕೆಲ ಸಂಕೇತಗಳನ್ನು ಮಾನವ ಹುಡುಕಿದ. ಕ್ರಮೇಣ ಅಕ್ಷರಗಳು ಹುಟ್ಟಿಕೊಂಡವು. ಲಿಪಿಗಳು ಉದಯಿಸಿದವು. ಐದು ಸಾವಿರ ವರ್ಷಕ್ಕೂ ಪೂರ್ವದಿಂದಲೇ ಭಾರತದಲ್ಲಿ ಲೇಖನ ಪದ್ಧತಿ ರೂಢಿಯಲ್ಲಿತ್ತು ಎಂಬುದು ಸಿಂಧೂ ಲಿಪಿಯಿಂದ ಸಿದ್ಧವಾಗಿದೆ. ಪಾಣಿನಿಯ ಗ್ರಂಥದಲ್ಲಿ ಕ್ರಿ. ಶ. ಪೂರ್ವ ೫ನೇ ಶತಕದಲ್ಲಿ ದೈನಂದಿನ ವ್ಯವಹಾರದಲ್ಲಿ ಬರವಣಿಗೆ ಸಾಕಷ್ಟು ಬಳಕೆಯಲ್ಲಿತ್ತು ಎಂಬುದಕ್ಕೆ ಆಧಾರಗಳಿವೆ. ಗ್ರಂಥ, ಲಿಪಿಕಾರ, ಯವನಾನಿ ಲಿಪಿ ಮುಂತಾದ ಉಲ್ಲೇಖಗಳು ಅದರಲ್ಲಿವೆ. ಶಿಲೆಯಲ್ಲಿ, ತಾಮ್ರ ಫಲಕಗಳಲ್ಲಿ ಬರವಣಿಗೆ ತುಂಬ ಪುರಾತನ ಕಾಲದಿಂದ ಪ್ರಚಲಿತವಿದೆ. ಆಳರಸರ ಸಂದೇಶವನ್ನು, ಶಾಸನಾಂಶಗಳನ್ನು, ಪ್ರಜೆಗಳಿಗೆ ಸಾರಲು ಬಹಳ ಕಾಲದವರೆಗೆ ಇವುಗಳನ್ನು ಬಳಸಲಾಯಿತು. ಪಂಡಿತರು, ಇತರರು ತಾಳೆಗರಿ ಭೂರ್ಜಪತ್ರಗಳನ್ನು ಬಳಕೆಯಲ್ಲಿ ತಂದರು. ಇದರಿಂದಾಗಿ ಗ್ರಂಥಗಳ ಸಂಗ್ರಹ, ಸಾಗಾಣಿಕೆ, ವಿನಿಮಯಗಳಿಗೆ ತುಂಬ ಸಹಾಯವಾಯಿತು. ತಾಳೆಯೋಲೆ ಗ್ರಂಥಗಳ ಉಪಯೋಗ ವ್ಯಾಪಕವಾಯಿತು.

'ಮಹಾವಸ್ತು'ವಿನಲ್ಲಿ (ಕ್ರಿ. ಶ. ಪೂ ಎರಡನೆಯ ಶತಕ) ಪುಷ್ಕರಸಾಲಿ, ಖರೋಷ್ಠೀ, ಯವನಾನಿ, ಬ್ರಾಹ್ಮೀ, ಕೂಟಲಿಪಿ, ಪುಷ್ಪಲಿಪಿ, ಸಕ್ತುಲಿಪಿ, ವ್ಯತ್ಯಸಲಿಪಿ, ರೇಖಾಲಿಪಿ, ಮುದ್ರಾಲಿಪಿ ಎಂಬ ಹತ್ತು ಲಿಪಿಗಳನ್ನೂ, ಭೂರ್ಜಪತ್ರದ ಉಪಯೋಗವನ್ನೂ ನಮೂದಿಸಲಾಗಿದೆ. ಪ್ರಥಮ ಬೌದ್ಧ ಸಮ್ಮೇಲನದಲ್ಲಿ ತ್ರಿಪಿಟಕವನ್ನು ತಾಳೆಗರಿಗಳ ಮೇಲೆ ಬರೆದರೆಂಬ ಉಲ್ಲೇಖವಿದೆ. ತಾಳೆಗರಿಗಳ ಗಂಟು ಅಥವಾ ಕಟ್ಟಿಗೆ ಗ್ರಂಥವೆಂದು ಕರೆಯುವ ಪರಿಪಾಠವಿದೆ. ಗರಿ(ಓಲೆ)ಗಳು ಮುನ್ನೂರು ವರ್ಷಕ್ಕಿಂತ ಹೆಚ್ಚು ಬಾಳಿಕೆ ಬರುವುದು ಕಷ್ಟ. ಒಳ್ಳೆಯ ಸಂರಕ್ಷಣೆ ಹೊಂದಿ ಪಂಡಿತರ ಆಶ್ರಯದಲ್ಲಿದ್ದವು, ಐದು ಶತಕಗಳ ವರೆಗಿನವು ಲಭ್ಯವಿರಬಹುದು.

ಅಪರೂಪಕ್ಕೆ ಇದಕ್ಕೂ ಹೆಚ್ಚುಕಾಲ ಅಸ್ತಿತ್ವದಲ್ಲಿರುವ ಗ್ರಂಥಗಳು ಬೆಳಕಿಗೆ ಬರುತ್ತವೆ. ಎರಡನೇ ಶತಕದಲ್ಲಿ ಅಶ್ವಘೋಷನು ರಚಿಸಿದ ನಾಟಕ ಹೊತ್ತ ತಾಳೆಗರಿ ತುಣುಕುಗಳು ಮಧ್ಯ ಏಶಿಯಾದಲ್ಲಿ ದೊರೆತಿವೆ. ನಮ್ಮ ರಾಜ್ಯದ ಮೂಡಬಿದಿರೆಯ 'ಧವಲ' ಹಸ್ತಪ್ರತಿ ಸುಮಾರು ಹನ್ನೊಂದನೇ ಶತಕದ್ದು ಎಂದು ಅಂದಾಜು ಮಾಡಲಾಗಿದೆ. ಕ್ರಿ ಶ. ೧೩೭೯ರ 'ಆದಿಪುರಾಣ'ದ ತಾಳೆಪ್ರತಿ ಲಭ್ಯವಿದೆ.

ಗ್ರಂಥರಚನೆಗಾಗಿ ತಾಲ ಮತ್ತು ಶ್ರೀತಾಲಗಳನ್ನು ಹೆಚ್ಚಾಗಿ ಬಳಸಲಾಗುತ್ತಿತ್ತು. ಮೊದಲನೆಯದು ದಪ್ಪವಾಗಿ ಅರಿಶಿಣ ಬಣ್ಣದ್ದು ಇದ್ದು ಕೇವಲ ಒಂದಂಗಲ ಅಗಲವಿದ್ದು ಮಣಿದರೆ ಮುರಿಯದಂತಹದು ಇದ್ದರೆ ಎರಡನೆಯದು ತಳುವಾಗಿ, ಮೃದುವಾಗಿ, ನಸುಗೆಂಪು ಇದ್ದು ಮೂರು ನಾಲ್ಕು ಅಂಗುಲ ಅಗಲವಿರುತ್ತದೆ. ಗ್ರಂಥಕಾರರು ಎರಡನೆಯದನ್ನೇ ಅಪೇಕ್ಷಿಸುತ್ತಿದ್ದರು ಎಂದು ಬೇರೆ ಹೇಳಬೇಕಿಲ್ಲ.

ನಮ್ಮ ಶಿಲ್ಪಗಳಲ್ಲಿ ದೇವತೆಗಳಿಗೆ, ಪುರಾಣ ಕಥಾನಾಯಕರಿಗೆ, ಕ್ವಚಿತ್ತಾಗಿ ರಾಜರಾಣಿಯರಿಗೆ ಪ್ರಾಧಾನ್ಯ ಕೊಡುವುದರಿಂದ ಜನಸಾಮಾನ್ಯರ ನಿತ್ಯಜೀವನವನ್ನು ಪ್ರತಿನಿಧಿಸುವದು ವಿರಳ. ಆದ್ದರಿಂದ ಅಸಂಖ್ಯಾತ ತಾಳೆಗ್ರಂಥಗಳು ಇಂದಿಗೂ ಲಭ್ಯವಿದ್ದರೂ ಅವುಗಳನ್ನು ಶಿಲ್ಪರೂಪದಲ್ಲಿ ಕಾಣುವುದು ಅಪರೂಪ. ಕೋಲಾರ ಜಿಲ್ಲೆಯ ಬಂಗಾರುಪೇಟೆ ತಾಲ್ಲೂಕಿನ ಕಾರುಬೆಲೆ ಗ್ರಾಮದ ಹೊಲವೊಂದರಲ್ಲಿ ಹುಣಿಸೆಮರದ ಆಶ್ರಯದಲ್ಲಿ ಓದುವ ಮಹಿಳೆಯೊಬ್ಬಳ ಭವ್ಯವಾದ ಸ್ಮಾರಕವಿದೆ. ಮೇಲುಗಡೆ ಎರಡು ಸಾಲುಗಳಲ್ಲಿ "ಸ್ವಸ್ತಿ ಶ್ರೀ ನಾಗಾರ್ಜುನಯ್ಯ ನನ್ದಿಗಬ್ಬೆಯ ಮಗಳು ಸಾವಿನಿರ್ಮಡಿ ಸರ್ವಶಾಸ್ತ್ರ ಪ್ರಸಿದ್ಧಿ" ಎಂದು ಸ್ಫುಟವಾಗಿ ಕೊರೆಯಲಾಗಿದೆ. ಬರವಣಿಗೆಯ ಶೈಲಿಯಿಂದ ಇದು ಸುಮಾರು ಹತ್ತನೆಯ ಶತಕದ್ದೆಂದು ಊಹಿಸಬಹುದಾಗಿದೆ. ನಾಲ್ಕು ಅಡಿ ಎತ್ತರ, ಎರಡುವರೆ ಅಡಿ ಅಗಲವಿರುವ ಬಿಳಿ ಶಿಲೆಯ ಮಧ್ಯದಲ್ಲಿ ಪೀಠವೊಂದರ ಮೇಲೆ ಸಾವಿನಿರ್ಮಡಿ ವಿರಾಜಿಸುತ್ತಿದ್ದಾಳೆ. (ಆಕೃತಿ ೧). ಹತ್ತು ಶತಕಗಳ ಮಳೆ, ಗಾಳಿ, ಬಿಸಿಲುಗಳನ್ನು ಉಂಡರೂ ಇದೀಗ ರಚಿಸಿದಷ್ಟು ಹೊಚ್ಚ ಹೊಸದಾಗಿದೆ ಈ ಶಿಲ್ಪ. ಲೋಡಿಗೆ ಒರಗಿ ಬಲಗಾಲನ್ನು ಪಾದಪೀಠದ ಮೇಲಿಟ್ಟು ಎಡಗಾಲನ್ನು ಆಸನದ ಮೇಲೆ ಮಡಿಸಿಟ್ಟು ಆಸೀನಳಾಗಿದ್ದಾಳೆ. ಕಿರು ನಿರಿಗೆಗಳನ್ನು ಕಲಾತ್ಮಕವಾಗಿ ನಡುವಿನಲ್ಲಿ ಜೋಡಿಸಿಟ್ಟು, ಇಳಿಬಿಟ್ಟ ನೆರಿಗೆಗಳು ಕಾಲವರೆಗೆ ಬಂದಿವೆ. ವಿಪುಲವಾದ ಕೇಶರಾಶಿಯನ್ನು ಒಪ್ಪವಾಗಿ ಕಟ್ಟಿ ಬಲಬದಿಗೆ ಇಳಿಬಿಟ್ಟರೂ, ಥಕ್ಕನೆ ಜಡೆಗಟ್ಟಿದ ಕೂದಲಿನಂತೆ ಭಾಸವಾಗುತ್ತದೆ. ಈಕೆ ಸಕಲ ಶಾಸ್ತ್ರಗಳಲ್ಲಿ ಸಿದ್ಧಿ ಪಡೆದವಳೆಂದು ತೋರಿಸಲು ಎಡಗೈಯಲ್ಲಿ ತಾಳೆಗರಿ ಗ್ರಂಥ ಮತ್ತು ಪಕ್ಕದಲ್ಲಿಯೇ ಅದನ್ನಿಡಲು ವ್ಯಾಸಪೀಠವೊಂದನ್ನು ಕೊರೆಯಲಾಗಿದೆ. ಗ್ರಂಥದ ಹೆಸರು ಐದಕ್ಷರದ್ದು ಇದ್ದರೂ ಕೈ ಬೆರಳಿನಿಂದಾಗಿ ಒಂದು ಅಕ್ಷರ ಓದಲಾಗುವುದಿಲ್ಲ. ಮೊದಲ ಎರಡಕ್ಷರಗಳು 'ಶ್ರೀ' 'ಹ' ಎಂದಿದ್ದರೆ ಕೊನೆಯವು 'ಸಿದ್ಧಿ'

ಎಂಬಿವೆ. ಅವಳು ವೈಷ್ಣವಳಾಗಿದ್ದರೆ ಅಕ್ಷರಗಳು 'ಶ್ರೀಹರಿಸಿದ್ಧಿ', ಎಂದೂ ಶೈವಳಾಗಿದ್ದರೆ 'ಶ್ರೀಹರಸಿದ್ಧಿ' ಎಂದು ಇದ್ದೀತು ಎಂದು ಊಹಿಸಬಹುದಾಗಿದೆ.

ಉತ್ತರ ಕನ್ನಡ ಜಿಲ್ಲೆಯ ಭಟಕಳದಲ್ಲಿ ವಿಜಯನಗರ ಕಾಲಕ್ಕೆ ಸೇರಿರಬಹುದಾದ ಸುಮಾರು ಹದಿನಾರನೆಯ ಶತಕದ ದೇವಾಲಯಗಳಿವೆ. ಇವುಗಳಲ್ಲಿ ಕೇತಪ್ಪಯ್ಯ ದೇವಾಲಯದ ಹೊರಪೌಳಿಯಲ್ಲಿ ತಾಳೆಯ ಗ್ರಂಥಗಳನ್ನು ಮೂಡಿಸಿದ ಮೂರು ಅಪೂರ್ವ ಉಬ್ಬುಚಿತ್ರಗಳಿವೆ. ಮೊದಲನೆಯದರಲ್ಲಿ ಕುಲಾವಿ ಧರಿಸಿ, ಕರ್ಣಾಭರಣ ತೊಟ್ಟು, ಶಾಲೊಂದನ್ನು ಹೊದ್ದು ಚಕ್ರಾಸನ ಹಾಕಿ ಪೀಠವೊಂದರ ಮೇಲೆ ಕುಳಿತ ಪಂಡಿತನು (ಆಕೃತಿ–೨) ಎಡಗೈಯಲ್ಲಿ ತಾಳೆಗ್ರಂಥ ಹಿಡಿದು, ಬಲಗೈಯಿಂದ ಬರೆದದ್ದನ್ನು ವಿವರಿಸುವಂತೆ ಹಿಡಿಯಲಾಗಿದೆ. ಈ ಗುರುವಿನ ಎದುರಿಗೆ ಕುಳಿತು, ಗುರೂಪದೇಶ ಕೇಳಿ ವಿಸ್ಮಯ ಪಡುತ್ತಿರುವವನು ಊರ ಪ್ರತಿಷ್ಠಿತ ನಾಗರಿಕನೆಂದು ಅವನ ವೇಷಭೂಷಣಗಳಿಂದ ಹೇಳಬಹುದಾಗಿದೆ. ಈತನೂ ತಲೆಗೆ ಆಗ ಪ್ರಚಲಿತ ಫ್ಯಾಶನ್ ಆಗಿದ್ದ ಕುಲಾವಿ ಧರಿಸಿ, ಶಾಲು ಹೊದ್ದಿದ್ದಾನೆ. ಅವರ ನಡುವೆ ಗ್ರಂಥವನ್ನು ಒರಗಿಸಲು ಕಿರುಪೀಠವೊಂದಿದೆ. ಗ್ರಂಥಪಠನ ಮಾಡುವವನು ಬ್ರಾಹ್ಮಣನೆಂದು ಊಹಿಸಬಹುದಾಗಿದೆ. ಮೂರನೆಯ ಚಿತ್ರದಲ್ಲಿ ಗುರುವಿನ್ನ ಉಡುಪಿನಿಂದ ಆತ ಜೈನ ಯತಿಯೆಂಬ ಊಹೆಗೆ ಆಸ್ಪದವಿದೆ (ಚಿತ್ರ–೩). ಈ ಪ್ರದೇಶದಲ್ಲಿ ಜೈನ ಪ್ರಭಾವ ಸಾಕಷ್ಟಿತ್ತು ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಗುರುವು ಎತ್ತರದ ಪೀಠದಲ್ಲಿ ಎಡಗಾಲನ್ನು ಮಡಚಿ, ಬಲಗಾಲನ್ನು ಇಳಿಬಿಟ್ಟಿದ್ದು, ಎಡಗೈಯಲ್ಲಿ ತಾಳೆಗರಿ ಗ್ರಂಥವಿದೆ, ಬಲಗೈ ಬೋಧನಮುದ್ರೆ ತಾಳಿದೆ. ಎದುರುಗಡೆಯೇ ಅಠವಣೆಗೋಲು ಇಡಲಾಗಿದೆ. ಬಲಗಡೆಯಲ್ಲಿ ಭಕ್ತನೋರ್ವ ತಲೆಗೆ ರುಮಾಲು ಸುತ್ತಿಕೊಂಡು ಕಿವಿಗೆ 'ಒಂಟಿ' ಧರಿಸಿ, ಪಂಚೆಯನ್ನು ನಡುವಿಗೆ ಸುತ್ತಿಕೊಂಡು, ಭಯಭಕ್ತಿಯಿಂದ ಕೈಮುಗಿದು ಪುರಾಣಶ್ರವಣದಲ್ಲಿ ಮೈಮರೆತ್ತಿದ್ದಾನೆ. ಈತನೊಬ್ಬ ಜನಸಾಮಾನ್ಯನೆಂಬುದು ಉಡುಗೆಯಿಂದ ಸ್ಪಷ್ಟ. ನಾಲ್ಕನೆಯ ಶಿಲ್ಪದಲ್ಲಿ ಮುನಿಯ ಕಿವಿಗಳು ಅಗಲವಾಗಿವೆ. ಉಬ್ಬಿದ ಹೊಟ್ಟೆ, ಮೈಗಟ್ಟು, ಇಳಿವಯಸ್ಸು ತೋರಿಸುತ್ತವೆ. ಶಾಲು ಭುಜದ ಮೇಲಿಂದ ಇಳಿಬಿದ್ದುದನ್ನು ತೋರಿಸಲಾಗಿದೆ. ಎಡಕಂಕುಳಲ್ಲಿ ತಾಳೆಗರಿಗ್ರಂಥ ಸೇರಿಸಿ ಬಲಗೈಯನ್ನು ಹಸ್ತಲಾಘವ ಮಾಡುವಂತೆ ಮುಂದೆ ಚಾಚಿದಂತೆ ಬಿಡಿಸಲಾಗಿದೆ. ಎದುರಿಗೆ ನಿಂತ ಅಧಿಕಾರಿಯಿಂದ ದಾನ/ಗುರುದಕ್ಷಿಣೆ ಸ್ವೀಕರಿಸುವಂತೆ ಇದೆ. ಈ ಅಧಿಕಾರಿ ತಲೆಗೆ ಓರಣವಾಗಿ ರುಮಾಲು ಸುತ್ತಿಕೊಂಡು ಕಿವಿ, ಕೈ, ಕಾಲುಗಳಿಗೆ ಆಭರಣಗಳನ್ನು ತೊಟ್ಟಿದ್ದಾನೆ. ಎಡಗೈಯಲ್ಲಿ ಕಠಾರಿ ಹಿಡಿದು, ಬಲಗೈಯಿಂದ ದಕ್ಷಿಣೆ ನೀಡುತ್ತಿದ್ದಾನೆ (ಚಿತ್ರ–೪). ಕುಬ್ಜ ಸೇವಕನೋರ್ವ ಧನಿಗೆ ಸೇವೆ ಸಲ್ಲಿಸುವದಕ್ಕೆ ಸದಾ ಸಿದ್ಧನಾಗಿ ನಿಂತಿದ್ದಾನೆ.

ತಾಳೆಗರಿ ಗ್ರಂಥಗಳನ್ನು ಧರಲೆ, ಬೆಂಕಿ, ನೀರುಗಳಿಂದ ರಕ್ಷಿಸಲು ಬಟ್ಟೆ, ಪೆಟ್ಟಿಗೆಗಳಲ್ಲಿ ಇಡಲಾಗುತ್ತಿತ್ತು.* ಕಾಲಕ್ರಮೇಣ ಇಂಥ ಪೆಟ್ಟಿಗೆಗಳನ್ನು ಸುಂದರವಾಗಿ ಅಲಂಕರಿಸುವ ಕಲಾಕಾರರೂ ರೂಪಗೊಂಡರು. ಶಿಕಾರಿಪುರ ತಾಲ್ಲೂಕಿನ ಬಂದಳಿಕೆಯಲ್ಲಿ ಕ್ರಿ. ಶ. ೧೨೧೩ರ, ಜೈನಮುನಿ ಶುಭಚಂದ್ರನ ಸೊಗಸಾದ ಉಬ್ಬುಚಿತ್ರ ಒಂದಿದೆ (ಚಿತ್ರ-೫). ಮುನಿ ಎತ್ತರವಿಲ್ಲದ ಆಸನದ ಮೇಲೆ ಕುಳಿತು ಎಡಗೈಯಲ್ಲಿ ಗ್ರಂಥ ಹಿಡಿದು, ಬಲಗೈಯಲ್ಲಿ ಬೋಧಿಸುವ ಮುದ್ರೆ ತಾಳಿದ್ದಾನೆ. ಹತ್ತಿರದಲ್ಲಿಯೇ ಅಡವಣಿ ಕೋಲ ಮೇಲೆ ತಾಳೆಗರಿಗಳನ್ನು ಜೋಡಿಸಿಟ್ಟಿರಬಹುದಾದ ಪೆಟ್ಟಿಗೆಯಿದೆ. ಪೆಟ್ಟಿಗೆಯ ಮೈಯನ್ನು ಕಲಾತ್ಮಕವಾಗಿ ಅಲಂಕರಿಸಲಾಗಿದೆ.

ಒಂಬತ್ತು ಮತ್ತು ಹತ್ತನೆಯ ಶತಕಗಳಲ್ಲಿ, ಬುಂದೇಲಖಂಡದ ಚಂದೇಲ ಅರಸರು ಕಟ್ಟಿಸಿದ, ಖಜುರಾಹೋದ (ಮಧ್ಯಪ್ರದೇಶ) ದೇವಾಲಯಗಳಲ್ಲಿ ತಾಳೆಯೋಲೆಯ ಮೇಲೆ ಬರೆಯುವ (ಕೊರೆಯುವ?) ಕ್ರಮ ತೋರಿಸುವ ಹಲವಾರು ಉತ್ತಮ ಶಿಲ್ಪಗಳಿವೆ. ಈ ದೇವಾಲಯಗಳಿಗೆ ಕಿರೀಟಪ್ರಾಯವಾಗಿರುವ ಖಂಡೇಮಹಾದೇವ ದೇವಾಲಯದಲ್ಲಿರುವ ಸುರಸುಂದರಿಯರವು ಮಿಗಿಲಾದವು. ಒಂದರಲ್ಲಿ ಸಾಲಂಕೃತ ಯುವತಿ, ಇಳಬಿಟ್ಟ ಎಡಗೈಯಲ್ಲಿ ತಾಳೆಗರಿಯನ್ನು ಎತ್ತರಿಸಿ ಹಿಡಿದು, ಬಲಗೈಯಲ್ಲಿ ಲೇಖನಿಯನ್ನು ಹಿಡಿದು, ಏನು ಬರೆಯಲಿ? ಎಂದು ವಿಚಾರದಲ್ಲಿ ಮೈಮರೆತಂತೆ ನಿಂತಿದ್ದಾಳೆ (ಚಿತ್ರ–೬). ಇನ್ನೊಬ್ಬ ಸುರಸುಂದರಿ, ಎಡಗೈಯಲ್ಲಿ ತಾಳೆಗರಿ ಹಿಡಿದು, ಬಲಗೈಯಿಂದ ಬರೆಯುವದರಲ್ಲಿ ತೊಡಗಿದ್ದಾಳೆ (ಚಿತ್ರ–೭). ಚೂಪಾದ ಲೇಖನಿ (ಕಂಟ) ಅಥವಾ ಬರೆಯುವ ಸಾಧನವನ್ನು ಒತ್ತಿ ಬರೆಯುವ ಚಿತ್ರಣ ಸ್ಪಷ್ಟವಾಗಿದೆ. ಮೂರನೆಯ ಸುರಸುಂದರಿ, ತಾನು ಆದಾಗಲೇ ಬರೆದು ಮುಗಿಸಿದ ತಾಳೆಗರಿಯನ್ನು ಎಡಗೈಯಲ್ಲಿ ಎತ್ತಿ ಹಿಡಿದಿದ್ದಾಳೆ. ಅದರ ಮೇಲೆ ಬರೆಯಲಾದ ದೇವನಾಗರಿ ಅಕ್ಷರಗಳನ್ನು ಸುಲಭವಾಗಿ ಓದುವಂತಿದೆ.

ಹಲವೆಡೆ ಶಿಲ್ಪದಲ್ಲಿ ಮೂಡಿಸಿದ ದೇವಾಧಿದೇವತೆಗಳ ಕೈಯಲ್ಲಿ ತಾಳೆಗರಿಗ್ರಂಥಗಳನ್ನು ತೋರಿಸಲಾಗಿದೆ. ಬಾದಾಮಿಯ ಬ್ರಹ್ಮ, ಗದಗಿನ ಸರಸ್ವತಿ, ಎಲಿಫಂಟಾದ ವಿಷ್ಣು, ಶಿವ ಮುಂತಾದವರೆಲ್ಲ ಪುಸ್ತಕಪಾಣಿಗಳಾಗಿರುವವರು.

— ೦—

ಸಾಮಗ್ರಿಯ ಸಂಗ್ರಹಕ್ಕಾಗಿ ಸಕ್ರಿಯ ಸಹಾಯ ಒದಗಿಸಿದ ಡಾ|| ಜಿ. ಎಸ್. ದೀಕ್ಷಿತ್ ಮತ್ತು ಡಾ|| ಆರ್. ಎಸ್. ಶಿವಗಣೇಶ ಮೂರ್ತಿಯವರಿಗೆ, ಛಾಯಾಗ್ರಹಣಕ್ಕೆ (ಸಂ. ೧ ಮತ್ತು ೫) ನೆರವು ನೀಡಿದ ಡಾ|| ಆರ್. ಶೇಷಶಾಸ್ತ್ರಿಗಳಿಗೆ ಕೃತಜ್ಞತೆಗಳು. ಇನ್ನುಳಿದ ಛಾಯಾಚಿತ್ರಗಳು : ಡಾ|| ಕೃಷ್ಣಾನಂದ ಕಾಮತ್.

೧ ರಿಂದ ೭ ಚಿತ್ರಗಳನ್ನು ಮುಂದೆ ಬೇರೆಯಾಗಿ ಕೊಟ್ಟಿದೆ.

* ಈ ತೆರನ ಬಟ್ಟೆಗಳನ್ನು ಇಂದಿಗೂ ಜೈನ ಮುನಿಗಳು ಹಸ್ತಪ್ರತಿಗಳು ಮತ್ತು ಪಿಂಛಗಳನ್ನಿಡಲು ಉಪಯೋಗಿಸುತ್ತಾರೆ.—ಸಂ.

# ತಮಿಳು ಹಸ್ತಪ್ರತಿಗಳು ಮತ್ತು ಅವುಗಳ ಮುದ್ರಣ

ಮೂಲ ಲೇಖನ: **ಪ್ರೊ|| ಕು. ಪೂಂಗಾವನಂ**
ಅನುವಾದ: **ಎಂ. ಗೋವಿಂದರಾಜು.**

**ಮೊದಲ ಮಾತು:** ಓಲೆಗರಿಯಲ್ಲಿ ಮರೆಯಾಗಿದ್ದ ಅರಿವಿನ ಆಸ್ತಿ ಇಂದು ಪುಸ್ತಕರೂಪ ಪಡೆದು ಮೆರೆಯುತ್ತಿದೆ. ಅಚ್ಚುಮಾಡುವ ಕಲೆಯನ್ನು ಕಂಡುಹಿಡಿಯದೆ ಇದ್ದಿದ್ದರೆ ಕಲಿವಿನ ಬೆಳವಣಿಗೆ ಮತ್ತು ಪುಸ್ತಕಗಳ ಬೆಳವಣಿಗೆ ಹಿಂದೆ ಬೀಳುತ್ತಿತ್ತು. ಹಳೆಯ ತಮಿಳು ಸಾಹಿತ್ಯ ಮತ್ತು ವ್ಯಾಕರಣಗಳು ಅಚ್ಚು ಆಗದೆಯಿದ್ದಿದ್ದರೆ ಅವು ಇಷ್ಟರೊಳಗೆ ಹಾಳಾಗಿಹೋಗಿರುತ್ತಿದ್ದವು. ಓಲೆಗರಿಗಳ ರೂಪದಲ್ಲೇ ಮರೆಯಾಗಿ ಹೋದವು ಹಲವು. ಅಚ್ಚಾಗಿರುವವು ಕೆಲವೆ. ಬಹಳ ಕೆಲವೆ. ತಮಿಳಿನಲ್ಲಿ ಈ ತನಕ ನಡೆದಿರುವ ಮುದ್ರಣ ಕಲೆಯ ಬೆಳವಣಿಗೆಯನ್ನು ಸ್ಥೂಲವಾಗಿ ತೋರಿಸುವುದೆ ಈ ಬರವಣಿಗೆಯ ಗುರಿ.

**ತಾಳೆಗರಿಯಲ್ಲಿ ಬರೆಯಲ್ಪಟ್ಟ ಬಗೆ:** ತಾಳೆಗರಿಗಳನ್ನು ಒಂದೇ ಅಳತೆಯ ತುಂಡುಗಳಾಗಿ ಕತ್ತರಿಸಿಕೊಳ್ಳುತ್ತಿದ್ದರು. ಆದರೆ ತಾಳೆಗರಿಯ ಸೂಡು (ಕಟ್ಟು)ಗಳನ್ನು ತುಂಡುಮಾಡಲು ಇಷ್ಟೇ ಅಳತೆಯೆಂಬು ನಿರ್ಣಯವು ಇರಲಿಲ್ಲ. ಅಕ್ಷರಗಳು ಸರಿಯಾಗಿ ಒತ್ತಿ ಬೀಳುವ ಹಾಗೆ ಗರಿಯನ್ನು ಹದಗೊಳಿಸುತ್ತಿದ್ದರು. ಹೆಚ್ಚುಕಡಿಮೆ ೪೦೦ ಗರಿಗಳನ್ನು ಸೇರಿಸಿ ಕಟ್ಟುವುದಕ್ಕೆ ತಕ್ಕಂತೆ ತೂತು ಕೊರೆದು ಇಟ್ಟುಕೊಳುತ್ತಿದ್ದರು. ಓಲೆಯಲ್ಲಿ ಬರೆಯಲು 'ಗುಂಡೆಳುತ್ತಾಣಿ', 'ವಾರೆಳುತ್ತಾಣಿ', 'ಮಡಕ್ಕೆಳುತ್ತಾಣಿ', ಎಂಬುದಾಗಿ ಹಲವು ಬಗೆಯದ ಆಣಿಗಳು (ಕಂಟಗಳು) ಇದ್ದವು. ಬರೆಯುವ ಮೊನೆ ಕಬ್ಬಿಣದಲ್ಲಿಯೂ ಹಿಡಿಯುವ ಭಾಗ ಮರದಲ್ಲಿಯೂ ಇರುತ್ತಿತ್ತು. ಓಲೆಯಲ್ಲಿ ಬರೆಯುವುದಕ್ಕೆ ಅಭ್ಯಾಸ ಬೇಕಾಗಿತ್ತು. ಬರೆಯುವವನು ಎಡಕೈಯಲ್ಲಿ ಓಲೆಗರಿಯನ್ನು, ಬಲ ಕೈಯಲ್ಲಿ ಕಂಟವನ್ನು ಹಿಡಿದುಕೊಳ್ಳುತ್ತಿದ್ದನು. ಕಂಟ ಹಿಡಿದ ಕೈಯನ್ನು ನೆಲೆಯಾಗಿ ಇಟ್ಟುಕೊಂಡು ಓಲೆ ಹಿಡಿದ ಕೈಯನ್ನು ಬರೆಯುವುದಕ್ಕೆ ತಕ್ಕಂತೆ ಎಳೆಯುತ್ತಿದ್ದನು. ಓಲೆಯ ಹದ ತಿಳಿಯಲು ಬರೆದು ಪರೀಕ್ಷಿಸಿ ನೋಡುತ್ತಿದ್ದ ಬರಹವನ್ನೇ ಈಗ ತಮಿಳಿನಲ್ಲಿ 'ಪಿಳ್ಳೈಯಾರ್ ಸುಳಿ' (ವಿನಾಯಕನ ಸುತ್ತಕ್ಷರ) ಎಂದು ಕರೆಯುತ್ತಾರೆ. ಓಲೆಗರಿಯಲ್ಲಿ ಚಿಕ್ಕ ಚಿಕ್ಕ ತೂತು ಬಿದ್ದು ಹೋದರೆ ಅವು ನಾಶವಾಗುವುದಕ್ಕೆ ಅವಕಾಶ ಇರುವುದರಿಂದ ವ್ಯಂಜನಗಳ ಮೇಲೆ ಹಾಕುವ ಬಿಂದುವನ್ನು ಹಾಕದೆಯೆ ಬರೆಯುತ್ತಿದ್ದರು.

ಮೊದಲು ಅಚ್ಚಾದ ಪುಸ್ತಕಗಳು ಇದೇ ರೀತಿಯಲ್ಲಿ ಅಚ್ಚಾಗುತ್ತಿದ್ದುವು. ಆದ್ದರಿಂದ ಅದನ್ನು ಓದುವುದಕ್ಕೆ ಒಂದಷ್ಟು ಅಭ್ಯಾಸ ಬೇಕಾಗುತ್ತಿತ್ತು. ಓಲೆಗರಿಗಳನ್ನು 'ಮೂಲದಗರಿ', ಮತ್ತು 'ಪಡಿಗರಿ' (ಪ್ರತಿಯ ಗರಿ) ಎಂದು ಎರಡು ಬಗೆಯಾಗಿ ಗುರುತಿಸುತ್ತಿದ್ದರು. ಪಡಿಯೋಲೆ ಬರೆದವರು ಕೊನೆಯಲ್ಲಿ ತಮ್ಮ ಹೆಸರನ್ನು ಬರೆಯುತ್ತಿದ್ದರು. ಓಲೆಯ ಎರಡು ಪಕ್ಕಗಳಲ್ಲಿಯೂ ಗರಿಯ ಅಂಕಿಯನ್ನು ಬರೆಯುತ್ತಿದ್ದರು. ಒಂದು ಪುಸ್ತಕದ ಪ್ರತಿ ತಮಗೆ ಬೇಕೆಂಬವರು ಮೂಲವನ್ನು ನೋಡಿ ಬರೆದುಕೊಂಡು ಪ್ರತಿಯನ್ನು ತಮ್ಮಲ್ಲಿ ಇಟ್ಟುಕೊಳ್ಳುತ್ತಿದ್ದರು.

**ಓಲೆಯ ಕಟ್ಟುಗಳು ಮತ್ತು ಪಾಠಭೇದಗಳು:** ಗ್ರಂಥವನ್ನು ಪ್ರತಿ ಮಾಡಿಕೊಟ್ಟವನನ್ನು 'ಎಟುತ್ತಾಳರ್' (ಬರೆಯುವವನು) ಎಂದು ಕರೆಯುತ್ತಿದ್ದರು. ಬರಹಗಾರನು ಅಂದವಾದ ಬರವಣಿಗೆಯನ್ನು ಬರೆಯುವವನಾಗಿಯೂ ತಪ್ಪಿಲ್ಲದೆ ಬರೆಯುವವನಾಗಿಯೂ ಇರುತ್ತಿದ್ದನು. ಈ ಬರೆಯುವವರೆಲ್ಲರೂ ವಿದ್ವಾಂಸರಾಗಿದ್ದರು ಎಂದು ಹೇಳಲಾಗುವುದಿಲ್ಲ. ಪ್ರತಿ ಮಾಡಿದವನು ತಪ್ಪು ಬರೆದರೆ ಮೂಲ ಪ್ರತಿಯನ್ನು ಬರೆದವನು ಆ ತಪ್ಪು ಮಾಡಿದ್ದಾನೆ ಎಂದು ಹೇಳುವ ಹಾಗಿಲ್ಲ. ಈ ರೀತಿ ಬರಹಗಾರನು ಮಾಡಿದ ತಪ್ಪುಗಳಿಂದ ಪಾಠಭೇದಗಳು ಉಂಟಾಗುತ್ತಿದ್ದುವು. ಅಲ್ಲದೆ ಆಶಿರಿಯರ್ (ಆಚಾರ್ಯರು) ಮಾಣಿಗಳಿಗೆ (ಶಿಷ್ಯರಿಗೆ) ಒಂದು ಗ್ರಂಥವನ್ನು ಕಲಿಸುವಾಗ ಹಲವು ಸಾರಿ ಹೇಳಿಸಿಯೂ, ಅವರು ಮತ್ತೆ ಹೇಳುವಂತೆ ಮಾಡಿಯೂ, ಕಂಠಪಾಠ ಮಾಡಿಸುತ್ತಿದ್ದರು. ಆ ರೀತಿ ಕಂಠಪಾಠ ಮಾಡಿದ್ದನ್ನು ಆ ಶಿಷ್ಯರು ಬರೆದಿಟ್ಟುಕೊಳ್ಳುವಾಗ ಪಾಠಭೇದಗಳು ಉಂಟಾಗುತ್ತಿದ್ದುವು. ಗ್ರಂಥವನ್ನು ಒಬ್ಬ ಹೇಳಿ ಇನ್ನೊಬ್ಬ ಬರೆದುಕೊಳ್ಳುವಾಗಲೂ, ಬರೆದುಕೊಳ್ಳುವವನ ಜ್ಞಾಪಕಶಕ್ತಿ ಕಡಿಮೆಯಾಗಿರುತ್ತಿದುದರಿಂದಲೂ ಪಾಠಭೇದಗಳು ಉಂಟಾಗುತ್ತಿದ್ದುವು. ಈ ರೀತಿ ಪಾಠಭೇದಗಳು ಬಂದರೆ ಗ್ರಂಥವನ್ನು ಅಚ್ಚುಹಾಕಿಸುವವನಿಗೆ ಎಷ್ಟು ಕಷ್ಟ ಒದಗುವುದು ಎಂಬುದನ್ನು ಅರಿಯಬಹುದು. ಅಚ್ಚುಹಾಕಿಸುವವರು ಬಹಳ ತಾಳ್ಮೆಯುಳ್ಳವರೂ, ತುಂಬಾ ಪರಿಶ್ರಮಪಡತಕ್ಕವರೂ ಆಗಿದ್ದು, ನಿಜವನ್ನು ಕಾಣುವ ಒಲವು ಹೊಂದಿದ್ದು, ವ್ಯಾಕರಣ ಮುಂತಾದ ಹಲವು ಸಾಹಿತ್ಯಗ್ರಂಥಗಳ ತಿಳಿವಳಿಕೆಯನ್ನು ಹೊಂದಿರಬೇಕಾದದ್ದು ಅತ್ಯಗತ್ಯ. ಅಚ್ಚುಮಾಡಿಸುವವನು ಸರಿಯಾದ ಒಂದು ಪಾಠವನ್ನು ನಿರ್ಣಯ ಮಾಡಿಕೊಂಡಮೇಲೆಯೂ ಉಳಿದ ಎಲ್ಲ ಪಾಠಭೇದಗಳನ್ನು ಕಾಣಿಸಬೇಕು.

**ಅಚ್ಚುಮಾಡುವ ಕಲೆ:** ಕ್ರಿ. ಶ. ೧೧ನೆಯ ಶತಮಾನದಲ್ಲಿ ಚೀನಾದೇಶದಲ್ಲಿ ಮೊಟ್ಟಮೊದಲು ಅಚ್ಚಿನ ಕಲೆ ಹುಟ್ಟಿತು ಎಂದು ತಿಳಿದುಬರುತ್ತದೆ. ಅಚ್ಚಿನ ಕಲೆ ಬೆಳೆದ ರೀತಿ ಹಲವಾರು ದೇಶಗಳಲ್ಲಿ ಈ ರೀತಿ ಇದೆ: ಜರ್ಮನಿ ೧೪೫೪, ಇಟಲಿ ೧೪೬೫, ಫ್ರಾನ್ಸ್ ೧೪೭೦, ಸ್ಪೈನ್ ೧೪೭೪, ಇಂಗ್ಲೆಂಡ್ ೧೪೭೭, ಡೆನ್ಮಾರ್ಕ್ ೧೪೮೨, ಸ್ವೀಡನ್ ೧೪೮೩, ಪೋರ್ಚುಗಲ್ ೧೪೯೫, ರಷ್ಯ ೧೫೫೩,

ಕ್ರೈಸ್ತ ಪಾದ್ರಿಗಳಿಂವ ಪೋರ್ಚುಗಲ್ ದೇಶದಿಂದ ಅಬಿಸೀನಿಯಾ ದೇಶಕ್ಕೆ 'ಅಚ್ಚುಗಳು', "ಅಚ್ಚುಪ್ರೊಜಿತಿ" (ಮುದ್ರಣ ಯಂತ್ರ)ಗಳನ್ನು ಹಡಗಿನಲ್ಲಿ ಕಳುಹಿಸಿ ವರು. ಆವರೆ ಅವು ಭಾರತಕ್ಕೆ ಬಂದು ಸೇರಿದವು. ಈ ರೀತಿ ಅಚ್ಚುಕಲೆ ೬-೯-೧೫೫೬ ರಲ್ಲಿ ಗೋವಾದಲ್ಲಿ ಭಾರತಕ್ಕೆ ಬಂದಿತು. ಆದರೆ ಅದಕ್ಕೆ ಮುಂಚೆಯೆ ೧೫೫೪ನೇ ಇಸ್ವಿಯಲ್ಲಿ ಲಿಸ್ಬನಿನಲ್ಲಿ (Lisbon) ರೋಮನ್ ಲಿಪಿಯಲ್ಲಿ ೩೮ ಪುಟಗಳ ತಮಿಳು ಪುಸ್ತಕ ಅಚ್ಚಾಗಿತ್ತು ಎಂಬುದು ತಿಳಿದಿರಬೇಕಾದ ಸಂಗತಿ. ೧೫೭೭ನೆಯ ಇಸ್ವಿಯಲ್ಲಿ ತಿರುಚ್ಚೂರಿಂವ ದಕ್ಷಿಣಕ್ಕೆ ೨೦ ಮೈಲಿ ದೂರದಲ್ಲಿರುವ ಅಂಬಲಕ್ಕಾಡು ಎಂಬ ಊರಲ್ಲಿ ಕ್ರೈಸ್ತ ಪಾದ್ರಿಗಳಿಂದ ಒಂದು 'ಅಚ್ಚಗಂ' (ಅಚ್ಚುಕೂಟ) ನಿರ್ಮಾಣವಾಯಿತು. ಮರದಲ್ಲಿ ಕೆತ್ತಿದ ತಮಿಳು ಅಕ್ಷರಗಳು 'ಮಲಬಾರ್ ಎಜುತ್ತು' (Malabar Types) ಎಂದು ಹೆಸರಾದವು. ಈ ಅಕ್ಷರಗಳಿಂದ ಆದ ಮೊದಲ ತಮಿಳು ಪುಸ್ತಕ ೧೫೭೮ ನೇ ಇಸ್ವಿಯಲ್ಲಿ ಬಿಡುಗಡೆಯಾಯಿತು. ಭಾರತ ಭಾಷೆಗಳಲ್ಲಿ ಮೊತ್ತಮೊದಲು ಬಿಡುಗಡೆಯಾದ ಪುಸ್ತಕವು ಇದೇ ಆಗಿರುತ್ತದೆ. ಈ ಮುದ್ರಣಕಲೆ ಕ್ರೈಸ್ತಮತಪ್ರಚಾರಕ್ಕಾಗಿಯೇ ಕ್ರಿ. ಶ. ೧೯ನೆಯ ಶತಮಾನದ ಪ್ರಾರಂಭ ಕಾಲದಲ್ಲಿ ಒದಗಿಬಂದರೂ ೧೮೧೨ನೆಯ ಇಸ್ವಿಯ ಅನಂತರವೆ ಓಲೆಸೂಡುಗಳನ್ನು ಮುದ್ರಿಸಲು ಅದರಿಂದ ಪ್ರಯೋಜನವಾಯಿತು.

**ತಮಿಳು ಗ್ರಂಥಗಳ ಮುದ್ರಣ ಕಾರ್ಯ :** ತಂಜಾವೂರಿನ ಮಲೈಯಪ್ಪ ಪಿಳ್ಳೈಯವರ ಮಕ್ಕಳಾದ ಜ್ಞಾನಪ್ರಕಾಶರ್ ಎಂಬವರಿಂದ ೧೮೧೨ನೆಯ ಇಸ್ವಿಯಲ್ಲಿ ತಿರುಕ್ಕುಱಳ್ ಮತ್ತು 'ನಾಲಡಿಯಾರ್' ಎಂಬ 'ಏಟ್ಟು ಸುವಡಿ' (ಹಸ್ತಪ್ರತಿ) ಅಚ್ಚಾಯಿತು. ಇನ್ನೂ ಉಳಿದ ತಮಿಳು ಗ್ರಂಥಗಳ ಅಚ್ಚುಗಾರರು ಮತ್ತು ಅವರು ಅಚ್ಚುಮಾಡಿದ ಗ್ರಂಥಗಳು, ಅಚ್ಚಾದ ವರುಷ ಮುಂತಾದ ವಿವರಗಳನ್ನು ಕೆಳಗೆ ತೋರಿಸಲಾಗಿದೆ :

1. ಅ. ಮುತ್ತುಸ್ವಾಮಿ ಪಿಳ್ಳೈ ( ? –೧೮೪೦) : ನನ್ನೂಲ್ ; ಅಗಪ್ಪೊರುಳ್ ವೆಣ್ಬಾಮಾಲೈ (೧೮೩೫). 2. ಪುದುವೈ ನಯನಪ್ಪ ಮುದಲಿಯಾರ್ (೧೭೭೯–೧೮೪೫) : ತಂಜೈವಾಣನ್ ಕೋವೈ ; ನೇಮಿನಾಥಂ (೧೮೩೬) ; ನಾಲಡಿಯಾರ್ (೧೮೪೪) ; ದಿವಾಕರ ನಿಗಂಡು ೯, ೧೦ ಭಾಗಗಳು ; ಚೂಡಾಮಣಿ ನಿಗಂಡು (೧೮೩೯). 3. ಮುಗವೈ ರಾಮಾನುಜ ಕವಿರಾಯರ್ (?–೧೮೫೨): ತಿರುಕ್ಕುಱಳ್ (ಹೊಸ ವ್ಯಾಖ್ಯಾನ ಸಮೇತ) ; ಆತ್ತಿಚ್ಚೂಡಿ (೧೮೪೦) ; ಕೊನ್ರೈ ವೇಂದನ್, ವೆಟ್ರಿ ವೇರ್ಕೈ ; ನರುಂತೊಗೈ ಕಾಂಡಿಗೈ (ಅರ್ಥ) (೧೮೪೭) ; ಇನಿಯವೈನಾರ್ಪದು, ನನ್ನೂಲ್ ವಿರುತ್ತಿ (೧೮೪೫). 4. ಕಳತ್ತೂರ್ ವೇದಗಿರಿ ಮುದಲಿಯಾರ್ : (?) ಸೂಡಾಮಣಿ ನಿಗಂಡು (೧೧ನೇ ಭಾಗದ ವರೆಗೆ) (೧೮೪೩) ; ತಿರುಕ್ಕುಱಳ್ (ಅರ್ಥ ಸಮೇತ) (೧೮೪೯); ಯಾಪ್ಪರುಂಗಲಕ್ಕಾರಿಗೈ (೧೮೫೧); ನಾಲಡಿಯಾರ್ (೧೮೫೫) ; ನೈಡದಂ (೧೮೫೯). 5. ತಾಂಡವರಾಯ ಮುದಲಿಯಾರ್ : ಚದುರ್

ಅಗರಾಧಿ (೧೮೨೪) ; ಚೂಡಾಮಣಿ ನಿಗಂಡು (ಮೊದಲ ಹತ್ತು ಭಾಗಗಳು) (೧೮೫೬) ; ಸೇಂದನ್ ದಿವಾಗರಂ (೧೮೮೫). 6. ಮಳವೈ ಮಹಾಲಿಂಗೈಯರ್ : ತಿರುಕ್ಕುರಳ್ (೧೮೪೦) ; ಪೆರಿಯ ಪುರಾಣಂ (ಅರ್ಥಬೋಧನೆ) ; ತೊಲ್‌ಕಾಪ್ಪಿಯಂ –ಎಳುತ್ತದಿಗಾರಂ–ನಚ್ಚಿನಾರ್ಕ್ಕಿ–ನಿಯರ್ (ಅರ್ಥ) (೧೮೪೮). 7. ತಿರುತ್ತಣಿಗೈ ವಿಸಾಗಪ್ಪೆರುಮಾಳೈಯರ್ : ತಿರುಕ್ಕೋವೈಯಾರ್ (ಅರ್ಥ ಸಮೇತ) (೧೮೯೭) ; ನನ್ನೂಲ್ ಕಾಂಡಿಗೈ ಅರ್ಥ (೧೮೪೦). ೮. ಶರವಣ ಪೆರುಮಾಳೈಯರ್ : ತಿರುಕ್ಕುರಳ್ ಪರಿಮೇಲಳಗರ್ ಉರೈ (ಅರ್ಥ) (೧೮೩೦) ; ಅರುಣಗಿರಿ ಅಂದಾದಿ (೧೮೩೦) ; ಪಳಮಲೈ ಅಂದಾದಿ (೧೮೩೨) ; ತಿರುಕ್ಕರುವೈ ಪದಿರ್‌ಟ್ರು ಪತ್ತಂದಾದಿ (೧೮೩೫); ಕಂದರ್ ಅಲಂಗಾರಂ (೧೮೩೬); ನಮಂತೊಗೈ ಉರೈ ; ಪ್ರಭುಲಿಂಗ ಲೀಲೈ ಉರೈ, ಇವೇ ಮೊದಲಾಗಿ ಸು. ೨೦ ಗ್ರಂಥಗಳು. 9. ವೇಂಕಟಾಚಲ ಮುದಲಿಯಾರ್ : ನೂಟ್ರೆಟ್ಟು ತಿರುಪ್ಪದಿ ಅಂದಾದಿ (೧೮೩೦), ಕಿರುಟ್ಟಿಣ ಭಗವಾನ್ ತೂದು (೧೮೬೯); ರಾಮನಾಟಗಂ (೧೮೫೦); ಪ್ರಗಲಾದನ್ ವಿಲಾಸಂ (೧೮೬೦); ಹರಿಚಂದ್ರ ಪುರಾಣಂ (ಮೂಲ ಮತ್ತು ಉರೈ) (೧೮೬೯); ಕಂಬ ರಾಮಾಯಣಂ (ಬಾಲ ಕಾಂಡಂ, ಆರಣಿಯ ಕಾಂಡಂ: ೬೦೦ ಪಾಡುಗಳು) (೧೮೪೪) ಇವೇ ಮೊದಲಾದ ಸು. ೧೨ ಗ್ರಂಥಗಳು. 10. ಚಂದ್ರಶೇಖರ ಕವಿರಾಜ ಪಂಡಿದರ್ : ನನ್ನೂಲ್ ಕಾಂಡಿಗೈ ಉರೈ, ನನ್ನೂಲ್ ವಿರುತ್ತಿ, ಯಾಪ್ಪೆರುಂಕಲಕಾರಿಗೈ ಉರೈ, ಪೆಣ್ಪಾಪಾಟ್ಟಿಯಲ್ ಉರೈ, ತಿಯ್ಯುಟ್ಟೋವೈ; ಪಳಮೊಳಿ ತಿರಟ್ಟು, ಭರತನೂಲ್, ತಂಡಿಯಲಂಗಾರಂ (ಇವು ಅಚ್ಚಾದ ಇಸ್ವಿಗಳು ಗೊತ್ತಿಲ್ಲ). 11. ವಿ. ಗೋವಿಂದ ಪಿಳ್ಳೈ : ಕಂಬರಾಮಾಯಣಂ (ಇಸ್ವಿ ?). 12. ತ. ಶಿವಕೊಳುಂದು ದೇಶಿಗರ್ : ತಿರುವಾಚಗಂ (೧೮೫೭). 13. ಕಾಂಜಿಪುರಂ ಶಭಾಪತಿ ಮುದಲಿಯಾರ್ : ತಿರುಜ್ಞಾನ ಶಂಬಂದರ್ ದೇವಾರಂ (೧೮೬೪); ತಿರುಕ್ಕರುವೈ ಪದಿಟ್ರು ಪತ್ತಂದಾದಿ (೧೮೩೭); ಪೆರಿಯ ಪುರಾಣಂ (೧೮೭೦). 14. ಅಂಬಲವಾಣ ಪಂಡಿದರ್ (೧೮೧೪ – ೧೮೭೯): ನಲ್ಲೈ ವೆಣ್ಬಾ, ನಿರಾವಿಕಲಿ ವೆಣ್ಬಾ (೧೮೭೮). 15. ಅರುಣಾಚಲ ಸದಾಶಿವಂ ಪಿಳ್ಳೈ (೧೮೨೦–೧೮೯೬) : ಉರಿಚೊಲ್ ನಿಗಂಡು. 16. ಮಹಾವಿದ್ವಾನ್ ಮಿನಾಟ್ಚಿ ಸುಂದರಂಪಿಳ್ಳೈ (೧೮೧೫–೧೮೭೬) ; ಶೆವ್ವಂದಿ ಪುರಾಣಂ (೧೮೫೧), ಕಾಂಜಿಪ್ಪುರಾಣಂ ಮೊದಲ ಭಾಗ, ತಿರುವಾನೈಕಾಪ್ಪುರಾಣಂ, ಕಲ್ಲಾಡಂ (೧೮೬೮). 17. ಯಾಳ್ಪ್ಪಾಣಂ ಆರುಮುಗ ನಾವಲರ್ : ಸೌಂದರಿಯಲ ಕರಿಶನ್ (೧೮೪೯), ನನ್ನೂಲ್ ವಿರುತ್ತಿ, ತಿರುಚ್ಚೆಂದೂರ್ ನೀರೋಟ್ಟಯ ಮಗ ಪಂದಾದಿ, ತಿರುಮುರುಗಾಟ್ರು ಪಡೈ (೧೮೫೧) ; ತಿರುವಾಚಗಂ; ತಿರುಕ್ಕೋವೈಯಾರ್ (೧೮೬೦); ಇಲಕ್ಕಣ ಕೊತ್ತು, ಇಲಕ್ಕಣ ವಿಳಕ್ಕಂ (೧೮೬೧); ತೊಲ್ಕಾಪ್ಪಿಯ ಸೂತ್ತಿರ ವಿರುತ್ತಿ, ಕೋಯಿಲ್ ಪುರಾಣಂ ; ಸೊಲ್‌ಶೇಣಾವರೈಯಂ (೧೮೬೮), ಇತ್ಯಾದಿ ೧೪ ಗ್ರಂಥಗಳು. [ಇವರು ನೋಡಿ ಪರಿಶೀಲನೆ ಮಾಡಿದ

ಪೆರಿಯ ಪುರಾಣಂ. ತಿರುವಿಳೈಯಾಡಲ್ ಪುರಾಣಂ, ಇವು ಇವರು ನಿಧನರಾದ ಮೇಲೆ ೧೮೮೫, ೧೯೦೭ನೇ ಇಸ್ವಿಗಳಲ್ಲಿ ಅಚ್ಚೇರಿದವು]. 18. ಸೋಡಾವಧನಂ ಸುಬ್ಬರಾಯ ಶೆಟ್ಟಿಯಾರ್ : ಪದಿನೋರಾಂತಿರುಮುರೈ (೧೮೬೯); ಶಿಲಪ್ಪದಿಗಾರಂ (ಪುಗಾರ್ ಕಾಂಡಂ); ಕಾಂಗೇಯನ್ ಉರಿಚ್ಚೊಲ್ ನಿಗಂಡು ; ತಿರುಪ್ಪೋರೂರ್ ಸನ್ನಿದಿ ಮುರೈ (೧೮೭೬). 19. ಕೋಮಳಪುರಂ ರಾಜಗೋಪಾಲ್ ಪಿಳ್ಳೈ: ತಿರುವಾಯ್ ಮೊಳಿ (೧೮೫೯); ನಳವೆಣ್ಬಾ (೧೮೭೯); ನಾಲಡಿಯಾರ್ (೧೯೦೩); ತೆನ್‌ತಿರುಪ್ಪದಿ ಪುರಾಣಂ (೧೮೯೦); ತಿರುನೀಲಗಂಠ ನಾಯಿನಾರ್ ವಿಲಾಸಂ ; ವಿಲ್ಲಿಭಾರದಂ (೧೮೭೫) ; ತೊಲ್ಕಾಪ್ಪಿಯಂ-ಸೊಲ್-ಶೇಣಾವರೈಯಂ (೧೮೬೮). 20. ಕು. ಕದಿರೈವೇಲ್ ಪಿಳ್ಳೈ: ತರ್ಕ ಚೂಡಾಮಣಿ (೧೮೬೨). 21. ಪೊನ್ನಂಬಲ ದೇಶಿಗರ್: ಪ್ರಬೋಧ ಚಂದ್ರೋದಯಂ (೧೮೮೯). 22. ತೊಳುವೂರ್ ಶೆ. ವೇಲಾಯುಧ ಮುದಲಿಯಾರ್: ತಿರುಅರುಟ್ಪಾ (ಇಸ್ವಿ ?). 23. ಶೆಯ್ಕು ಅಬ್ದುಲ್ ಕಾದಿರು ನಯಿನಾರ್ ಲಬ್ಬೈ ಆಲಿಂ (?-೧೮೪೮) : ಶೀರಾಪ್ಪುರಾಣಂ (೧೮೪೨). 24. ಶಭಾಪದಿ ನಾವಲರ್: ಚಿದಂಬರ ಪುರಾಣಂ, ತಿರುಚ್ಚಿಟ್ರಂಬಲಯಮಗ ವಂದಾದಿ ; ತಿರುವಿಡೈ ಮರುದೂರ್ ಪದಿಟ್ರು ಪತ್ತಂದಾದಿ ; ಮಾವೈಯಂದಾದಿ ; ನಲ್ಲೈ ಸುಬ್ರಮಣಿ ಕಡವುಳ್ ಪದಿಗಂ (೧೮೮೫). 25. ಕುಮಾರಸ್ವಾಮಿ ಪುಲವರ್ (೧೮೫೪-೧೯೨೨): ಪಳಮೊಳಿ ವಿಳಕ್ಕಂ ; ಆಚಾರ ಕೋವೈ; ಮರೈಶೈಯಂದಾದಿ ; ನಾನ್ಮಣಿ ಕಡಿಗೈ (೧೯೦೦); ತಿರುವಾದವೂರ್ ಪುರಾಣಂ (ಮೂಲ); ಮುತ್ತಗ ಪಂಜ ವಿಂಜದಿ (೧೯೦೭); ನಗುಲ ಮಲೈ ಕುರವಂಜಿ ನಾಡಗಂ ; ಚೂಡಾಮಣಿ ನಿಗಂಡು ; ಉರಿಚ್ಚೊಲ್ ನಿಗಂಡು ; ಸದಾಸಾರ ಕವಿತಿರಟ್ಟು ಜ್ಞಾನಗುಮ್ಮಿ (೧೮೯೫). 26. ವಲವೈ ವೈತ್ತಿಯಲಿಂಗ ಪಿಳ್ಳೈ: ಅಗಪ್ಪೊರುಳ್ ವಿಳಕ್ಕಂ ; ಶಿವರಾತ್ರಿ ಪುರಾಣಂ ; ನಾಸ್ತಿಕನಿರಾಸ ನಂಬಿಯಗಪ್ಪೊರುಳ್ (ವ್ಯಾಖ್ಯಾನ ಸಮೇತ) (೧೮೭೮); ಚೂಡಾಮಣಿ ನಿಗಂಡು (೧೮೭೫); ಕಂದಪುರಾಣ ಕೆಲವು ಪಡಲಂ (೧೮೮೬); ಕಲ್ವಳೈಯಂದಾದಿ ; ಕಂಬರ್ ಅಲಂಗಾರಂ (೧೮೮೮). 27. ತ. ಕನಗ ಸುಂದರಂ ಪಿಳ್ಳೈ (೧೮೫೨-೧೯೦೧): ಶಿವಜ್ಞಾನ ಮಾಪಾಡಿಯಂ ತಿರುಮಂದಿರಂ (೧೯೦೧). 28. ತಿರುಮಯಿಲೈ ಸಂಮುಗಂ ಪಿಳ್ಳೈ (೧೮೫೬-೧೯೦೫): ಕಂಬರಾಮಾಯಣಂ (ಅಯೋತ್ತಿ ಕಾಂಡಂ ಉರೈ), ಪೊನ್‌ವಣ್ಣತ್ತಂದಾದಿ; ತಿರುಕಯಿಲಾಯ ಜ್ಞಾನ ಉಲಾ ; ತಿರುವಾರೂರ್ ಮುಮ್ಮಣಿಕೋವೈ; ಪಿಚ್ಚಾಡನ ನವಮಣಿ ಮಾಲೈ (೧೮೯೧); ನನ್ನೂಲ್ ವಿರುತ್ತಿ ಉರೈ; ತಂಜೈವಾಣನ್ ಕೋವೈ ಉರೈ; ಮಚ್ಚ ಪುರಾಣಂ ; ಮಾಯಾಪ್ರಲಾಬಂ ; ಶಿವವಾಕ್ಕಿಯಾರ್ ಪಾಡಲ್; ಮಣಿಮೇಗಲೈ (೧೮೯೪). 29. ತಿರುನಾರಾಯಣೈಯಂಗಾರ್ (೧೮೬೧-೧೯೪೭): ನಾರಸಿಂಗಾರಂ, ಪಳಮೊಳಿ (೪೦೦ ಪಾಡುಗಳು, ಉರೈ ಸಮೇತ) (ಇಸ್ವಿ ?) 30. ಪಿನ್ನತ್ತೂರ್ ನಾರಾಯಣಸ್ವಾಮಿ ಐಯರ್ (೧೮೬೨-೧೯೧೯): ನಟ್ರಿಣೈ

(೧೮೯೯). 31. ಕಾಂಜಿನಾಗಲಿಂಗ ಮುನಿವರ್ (೧೮೬೫–೧೯೫೦): ಕಾಂಜಿ ಪುರಾಣಂ, ತಾಯುಮಾನವರ್ ಪಾಡಲು, ಪನ್ನಿರು ತಿರುಮುರೈ. 32. ರಾ. ರಾಗವೈಯಂಗಾರ್ (೧೮೭೦–೧೯೪೬): ತೊಲ್ಕಾಪ್ಪಿಯಂ–ಶೆಯ್ಯುಳಿಯಲ್–ನಚ್ಚಿನಾರ್ ಗಿನಿಯರ್ ಉರೈ, ನೇಮಿನಾಥಂ, ಪನ್ನಿರುಪಾಟ್ಟಿಯಲ್, ಐಂತಿಣೈ ಐಂಬುದು, ನಾನ್ಮಣಿಕಡಿಗೈ, ತಿಣೈಮಾಲೈ ನೂಟ್ರೈಂಬದು (೧೯೦೩); ತಿರುನೂಟ್ರಂದಾದಿ, ಮುತ್ತೊಳ್ಳಾಯಿರಂ. 33. ವಿ. ಕೋ. ಸೂರಿಯನಾರಾಯಣ ಶಾಸ್ತ್ರಿಯಾರ್ (೧೮೭೦–೧೯೦೩): ಕಲಿಂಗತ್ತು ಭರಣಿ (೧೮೯೮) ; ನಳವೆಣ್ಬಾ (೧೮೯೯). 34. ಮು. ಸಿ. ಪೂರ್ಣಲಿಂಗಂ ಪಿಳ್ಳೈ (೧೮೮೬–೧೯೪೭): ಔವೈಕುಱಳ್–ಮೂಲ ಶೆಯ್ಯುಟ್ಕೋವೈ, ವಿವೇಗ ವಿಳಕ್ಕಂ (೧೮೯೯). 35. ಕೋ. ವಡಿವೇಲು ಶೆಟ್ಟಿಯಾರ್ (೧೮೬೩–೧೯೩೫): ತಿರುಕ್ಕುಱಳ್–ಮಣ ಕಡವರ್ ಉರೈಯೊಡನೆ, ಕಂದರ್ ಕಲಿವೆಣ್ಬಾ. 36. ತಿ. ಶೆಲ್ವ ಕೇಶವರಾಯ ಮುದಲಿಯಾರ್ (೧೮೬೪–೧೯೨೧): ಆಚಾರಕೋವೈ (೧೮೯೩); ಮುದುಮೊಳಿ ಕಾಂಜಿ (೧೯೧೯); ಅರನೆರಿಚ್ಚಾರಂ (೧೯೦೫); ಪಳಮೊಳಿ ನಾನೂರು. 37. ಸಿ. ವೈ. ದಾಮೋದರಂ ಪಿಳ್ಳೈ (೧೮೩೨–೧೯೦೧): ನೀದಿನೆರಿವಿಳಕ್ಕಂ ; ತಣಿಗೈ ಪುರಾಣಂ; ಇರೈಯನಾರ್ ಅಗಪ್ಪೊರುಳ್ ಉರೈ (೧೮೮೩); ತೊಲ್ಕಾಪ್ಪಿಯಂ-ಪೊರುಳ್–ಪೇರಾಸಿರಿಯಂ (೧೮೮೭); ಕಲಿತ್ತೊಗೈ (೧೮೮೭); ಇಲಕ್ಕಣವಿಳಕ್ಕಂ; ಸೂಳಾಮಣಿ (೧೮೮೯); ತೊಲ್ಕಾಪ್ಪಿಯಂ–ಎಟಿತ್ತು–ನಚ್ಚಿನಾರ್ ಗಿನಿಯಂ (೧೮೯೧); ವೀರ ಶೋಳಿಯಂ (೧೮೮೧). 38. ವ. ತ. ಸುಬ್ರಮಣಿಯ ಪಿಳ್ಳೈ (೧೮೪೬–೧೯೦೯): ತಿರುಪ್ಪುಗಳ್ (೧೮೯೧); ತಿರುತ್ತಣಿ ತಿರುಪ್ಪುಗಳ್ (೧೮೯೭). 39. ಕಾ. ನಮುಚ್ಚಿವಾಯನಾರ್ (೧೮೭೬–೧೯೩೧) : ವಾಕ್ಕುಂಡಾಂ ; ನನ್ನೆರಿ ; ನೀಧಿಚಾರಂ : ಆತ್ತಿಚೂಡಿ ; ಕೊಂರೈವೇಂದನ್ (೧೯೩೧) ; ಇರೈಯನಾರ್ ಕಳವಿಯಲ್ (೧೯೩೨) ; ತೊಲ್ಕಾಪ್ಪಿಯಂ ಪೊರುಳ್ (೧೯೨೦) ; ತೊಲ್ಕಾಪ್ಪಿಯಂ ಪಾಯಿರಂಗಳ್ (೧೯೨೨); ತೊಲ್ಕಾಪ್ಪಿಯಂ–ಎಟುತ್ತು–ಸೊಲ್ (೧೯೨೨) ; ತೊಲ್ಕಾಪ್ಪಿಯಂ–ಸೊಲ್ ಶೇನಾವರೈಯಂ (೧೯೨೭) 40. ಉ. ವೆ. ಸ್ವಾಮಿನಾಥ ಐಯರ್(೧೮೫೫–೧೯೪೨) : ಶಿವಗಚಿಂತಾಮಣಿ (೧೮೮೭) ; ಪತ್ತುಪಾಟ್ಟು (೧೮೮೯) ; ಶಿಲಪ್ಪದಿಗಾರಂ(೧೮೯೨); ಪುರನಾನೂರು (೧೮೯೪) : ಮಣಿಮೇಗಲೈ (೧೮೯೮) ; ಐಂಕುರುನೂರು (೧೯೦೩); ಪದಿಟ್ರುಪತ್ತು (೧೯೦೪) ; ಪರಿಪಾಡಲ್.(೧೯೧೮) ; ಪೆರುಂಕದೈ (೧೯೨೪) ; ಕುರುಂತೊಗೈ (೧೯೩೫). 41. ವ. ಉ. ಚಿದಂಬರಂ ಪಿಳ್ಳೈ (೧೮೭೨-೧೯೩೬): ತಿರುಕ್ಕುಱಳ್ ಮಣಕ್ಕುಡವರ್ ಉರೈ ; ತೊಲ್ಕಾಪ್ಪಿಯಂ–ಪೊರುಳ್ ; ಇಳಂ ಪುರಾಣಂ; (ಇನ್ನಿಲೈ)೧೯೩೬. 42.ಈಕ್ಕಾಡು ರತ್ನವೇಲು ಮೊದಲಿಯಾರ್: ತಿರುವಿಳೈಯಾಡಲ್ ಪುರಾಣಂ ; ಕಾಶಿಕಾಂಡಂ ; ವಿನಾಯಗ ಪುರಾಣಂ(ಇಸ್ವಿ ?). 43. ಪೂವೈ ಕಲಿಯಾನ ಸುಂದರ ಮುದಲಿಯಾರ್ (೧೮೫೪–೧೯೧೮) : ತಿರುವರುಟ್ಪಾ ತಿರುವೇರ್

ಕಾಟ್ಟು ಪುರಾಣಂ (ಇಸ್ವಿ ?). 44. ಮು. ರಾಘವ ಐಯಂಗಾರ್ (೧೮೭೮–೧೯೬೦): ನರಿವಿರುತ್ತಂ; ಚಂದ್ರಲೋಕಂ; ತಿರುಕ್ಕಲಂಬಗಂ; ಚಿದಂಬರ ಪಾಟ್ಟಿಯಲ್ ; ವಿಕ್ಕ್ರಮ ಶೋಳನ್ ಉಲಾ. 45. ವೆ. ರಾಜಗೋಪಾಲೈಂಗಾರ್: ಅಗನಾನೂರು (೧೯೨೩) ; ನಾಲಡಿಯಾರ್ (ಪನುಮನಾರ್ ಉರೈ ಸಮೇತ) ; ನಾನ್ ಮಣಿಕ್ಕಡಿಗೈ (ಹಳೆ ಉರೈ). 46. ಇ. ವೈ. ಅನಂತರಾಮೈಯರ್ (೧೮೭೨–೧೯೩೭) : ಕಲಿತ್ತೊಗೈ. (ಆಯ್ವು ಕುರಿಪುಗಳೊಡನೆ) ; ಐಂತಿಣೈ ಎಳುಬದು ; ಕೈನ್ನಿಲೈ ; ಕಳವಳಿನಾರ್ಪದು. 47. ಅ. ಚಕ್ರವರ್ತಿ ನಯಿನಾರ್ (೧೮೬೦–೧೯೬೦) : ಮೇರು ಮಂದರ ಪುರಾಣಂ (ಉರೈ ಸಮೇತ) ; ನೀಲಕೇಶಿ ಸಮಯ ದಿವಾಕರ ವಿರುತ್ತಿ ಉರೈ ; ತಿರುಕ್ಕುರಳ್ (ಕವಿರಾಯ ಪಡಿಂದರ್ ಉರೈ). 48. ಸ. ವೈಯಾಪುರಿ ಪಿಳ್ಳೈ (೧೮೯೧–೧೯೬೬) : ತುಗಿಲ್ ವಿಡುತೂದು(೧೯೨೯); ನವನೀದ ಪಾಟ್ಟಿಯಲ್ (೧೯೩೦) ; ಕಳವಿಯರ್ ಕಾರಿಗೈ (೧೯೩೧) ; ಅರುಂ ಪೊರುಳ್ ವಿಳಕ್ಕ ನಿಗಂಡು (೧೯೩೧) ; ಕುರುಗೂರ್ ಪಳ್ಳು (೧೯೩೨) ; ಯುದ್ಧ ಕಾಂಡಂ ೧–೩ ಪಡಲಂ (೧೯೩೨) ; ತಿರುಕ್ಕರುಂ ಕುಡಿ ಅಳಗಿಯ ನಂಬಿಯುಲಾ (೧೯೩೭) ; ದಿನಕರ ವೆಣ್ಬಾ (೧೯೩೨) ; ಭೂಗೋಳ ವಿಲಾಸಂ (೧೯೩೩) ; ನೆಲ್ ವಿಡು ತೂದು (೧೯೩೩) ; ತಿರುಮುರುಗಾಟ್ರು ಪಡೈ (೧೯೩೩) ; ಕಂಬ ರಾಮಾಯಣಂ (ಬಾಲ ಕಾಂಡ : ೧-೭ ಪಡಲಂ) (೧೯೩೩) ; ರಾಶರಾಶ ದೇವರುಲಾ (೧೯೩೪) ; ತೊಲ್ಕಾಪ್ಪಿಯಂ – ಪೊರುಳ್ – ನಚ್ಚಿನಾರ್ಗಿನಿಯಂ (೧೯೩೪) ; ಪಣವಿಡುತೂದು (೧೯೩೪) ; ಪೊದಿಗೈ ನಿಗಂಡು (೧೯೩೪) ; ಮದುರೈ ಕೋವೈ (೧೯೩೪) ; ಮುಪ್ಪನ್ ತೊಟ್ಟಿಯುಲಾ (೧೯೩೪) ; ತೊಲ್ಕಾಪ್ಪಿಯಂ-ಇಳಂಪೂರಣಂ (೧೯೩೫) ; ತೊಲ್ಕಾಪ್ಪಿಯಂ–ದೆವ್ವಶಿಲೈಯಾರ್ ಉರೈ (೧೯೩೬); ವಿರಲಿವಿಡು ತೂದು (೧೯೩೬) ; ಗಯಾಧರ ನಿಗಂಡು (೧೯೩೯) ; ನವನೀದ ಪಾಟ್ಟಿಯಲ್ (೧೯೪೩) ; ದಿವ್ಯಪ್ರಬಂದಂ ; ಶಿರುಪಂಜಮೂಲಂ ; ಶೀಪುರಾಣಂ (೧೯೪೩). 49. ಮಹಾವಿದ್ವಾನ್ ಮೆ. ವಿ. ವೇಣುಗೋಪಾಲ್ ಪಿಳ್ಳೈ (೧೮೯೬) ಇರೈಯನಾರ್ ಅಗಪ್ಪೊರುಳ್–ಕಳವಿಯಲ್ ; ತೊಲ್ಕಾಪ್ಪಿಯಂ-ಸೊಲ್-ನಚ್ಚಿನಾರ್ಗಿನಿಯಂ ವೀರ ಶೋಳಿಯಂ ; ತಂಜೈವಾಣನ್ ಕೋವೈ ; ಅಟ್ಟಪ್ರಬಂದಂ ; ಸಿದ್ದರ್ ಜ್ಞಾನ ಕೋವೈ ; ಯಶೋಧರ ಕಾವಿಯಂ. 50. ಸ. ಭವಾನಂದಂ ಪಿಳ್ಳೈ ; ಅಲ್ಲಿ ಅರಸಾಳ ಮಾಲೈ ; ಪುಲಂದಿರನ್ ಕನವು ; ಪವಳಕ್ಕೊಡಿ ಮಾಲೈ ; ಏಣಿ ಏಟ್ರಂ. 51. ತಮಿಳ್ಕಡಲ್. ರಾಯ. ಚೊಕ್ಕಲಿಂಗಂ (೧೮೯೮): ವರುಣ ಕುಲತ್ತಿನ್

ಮದಲ್ ಕೊಳಪ್ಪ ನಾಯಕ್ಕನ್ ಕಾದಲ್, ವಿರಲಿವಿಡುತೂದು, ಪಾಪ್ಪೈಪಾಟ್ಟು ತಿರುವಾಚಗ ತೇನ್.*

**ಓಲೆಸೂಡುಗಳು ಇರುವ ಸ್ಥಳಗಳು:** ಮೇಲೆ ತೋರಿಸಿದಂತೆ ಐವತ್ತಕ್ಕೂ ಮೇಲಾದ ವ್ಯಕ್ತಿಗಳು ತಮಿಳು ಓಲೆಸೂಡುಗಳನ್ನು ಮುದ್ರಿಸಿದ್ದಾರೆಂದರೂ ಈ ಕೆಲಸ ಇಷ್ಟಕ್ಕೇ ಮುಗಿಯಲಿಲ್ಲ. ಇನ್ನೂ ಮುದ್ರಿಸಿರದ–ಮುದ್ರಿಸಬೇಕಾದ ನೂರಾರು ಹಸ್ತಪ್ರತಿಗಳನ್ನು ಹಲವು ಬೇರೆ ಬೇರೆ ಜಾಗಗಳಲ್ಲಿ ಕಾಪಾಡಿ ಇಟ್ಟಿದ್ದಾರೆ. ಈ ರೀತಿ ಕಾಪಾಡಿ ಇಡದೆ ಅಳಿವಿಗೆ ಈಡಾದ ಓಲೆಸೂಡುಗಳು ಲೆಕ್ಕಕ್ಕೆ ಬಾರವು. ಅಳವುಗೊಂಡದ್ದು ಹೋಗಿ ಉಳಿದಿರುವುದನ್ನು ಕೆಲವು ಸ್ಥಳಗಳಲ್ಲಿ ಕಾಪಾಡಿ ಇಟ್ಟಿದ್ದಾರೆ. ಅವುಗಳ ವಿವರಗಳು ಈ ರೀತಿ ಇವೆ:

1. ತಮಿಳುನಾಡು ಸರ್ಕಾರದ ಕೀಳ್ತಿಸೈ ಕೈಯೆಟ್ಟು ಪಡಿನೂಲಗಂ (Tamil nadu Oriental Manuscript Library, Madras) ನಲ್ಲಿ ನೂರಾರು ಓಲೆಸೂಡುಗಳು ಇವೆ. ಅವುಗಳನ್ನು ಸ್ವಲ್ಪಸ್ವಲ್ಪ ಅಚ್ಚುಮಾಡುತ್ತಾ ಇದ್ದಾರೆ. ಇದುವರೆಗೆ ೨೫ ಮಡಲಂ (volume) ಅಚ್ಚಾಗಿವೆ. 2. ತಂಜಾವೂರು ಸರಸ್ವತಿ ಮಹಾಲ್ ಗ್ರಂಥಾಲಯದಲ್ಲಿ ಸಾವಿರಾರು ಹಸ್ತಪ್ರತಿಗಳು ಇವೆ. ಅವನ್ನು ಬೇಗನೆ ಅಚ್ಚುಮಾಡುವ ಪ್ರಯತ್ನ ಯಾವುದನ್ನೂ ಕೈಕೊಂಡದ್ದಾಗಿ ತಿಳಿದುಬಂದಿಲ್ಲ. 3. ಮಧುರೈ ತಮಿಳು ಸಂಘಂ, ಕರಂದೈ ತಮಿಳು ಸಂಘಂ ಮುಂತಾದ ಸಂಸ್ಥೆಗಳಲ್ಲಿ ಕೆಲವು ಹಸ್ತಪ್ರತಿಗಳು ಇವೆ. ಕೆಲವು ಮುದ್ರಿತವಾಗಿಯೂ ಮತ್ತೆ ಕೆಲವು ಮುದ್ರಿತವಾಗದೆಯೂ ಇವೆ. ಮಧುರೈ ತಮಿಳು ಸಂಘದಲ್ಲಿ ಹಲವು ವಿಶೇಷವಾದ ಓಲೆಸೂಡುಗಳು ಬೆಂಕಿಪಾಲಾದವು ಎಂದು ತಿಳಿಯುತ್ತದೆ. 4. ಉ. ವೆ. ಸ್ವಾಮಿನಾಥ ಐಯರ್ ಊರೂರಾಗಿ ಅಲೆದು ತಿರುಗಿ ಸಂಗ್ರಹಿಸಿದ ಹಸ್ತಪ್ರತಿಗಳು ಅಚ್ಚಾದವು. ಅಚ್ಚಾಗದೆ ಉಳಿದವು ಸಾವಿರದ ಮುನ್ನೂರಕ್ಕೂ ಹೆಚ್ಚಾದವು. ಇವು ಮದರಾಸು ಉ. ವೆ. ಸ್ವಾಮಿನಾಥ ಐಯರ್ ಸ್ಮಾರಕ ಪ್ರತಿಷ್ಠಾನದಲ್ಲಿ ಇವೆ. 5. ಕಲ್ಕತ್ತಾದಲ್ಲಿ ಇರುವ ಭಾರತ ಕೇಂದ್ರೀಯ ಗ್ರಂಥಾಲಯದಲ್ಲಿ (National Library) ೩೪೦ ಹಸ್ತಪ್ರತಿಗಳು ಇವೆ. ಅವು ಪ್ರೊ. ಸ. ವೈಯಾಪುರಿ ಪಿಳ್ಳೆ ಅವರು ಬಹಳ ಪ್ರಯತ್ನದಿಂದ ಸಂಗ್ರಹಿಸಿದವು. ಅವರ ನಿಧನಕ್ಕೆ ಹಿಂದೆ ಅವರ ಕುಟುಂಬದವರಿಂದ ಈ ಈ ಗ್ರಂಥಾಲಯಕ್ಕೆ ಉಚಿತವಾಗಿ ನೀಡಲ್ಪಟ್ಟವು. 6. ಪ್ಯಾರಿಸ್, ಲಂಡನ್, ರೋಂ, ಲಿಸ್ಬನ್, ಕೋಪೆನ್‌ಹೇಗನ್, ಮುಂತಾದ ದೊಡ್ಡ ಪಟ್ಟಣಗಳಲ್ಲಿ ಇರುವ ಗ್ರಂಥಾಲಯಗಳಲ್ಲಿ, ಮ್ಯೂಸಿಯಂಗಳಲ್ಲಿ, ಹಲವು ಹಸ್ತಪ್ರತಿಗಳು ಇವೆ.

* ಈ ಮೇಲ್ಕಂಡ ಪಟ್ಟಿಯಲ್ಲಿನ ಯಾವಯಾವ ಗ್ರಂಥಗಳ ಹಸ್ತಪ್ರತಿಗಳು ಮೊದಲಬಾರಿಗೆ ಪರಿಶೋಧಿತವಾಗಿ ಅಚ್ಚಾಗಿದವು, ಯಾವವು ಪುನಃ ಪರಿಷ್ಕೃತವಾಗಿ ಅಚ್ಚಾದವು, ಅಂಥಾ ಸಂದರ್ಭದಲ್ಲಿ ಅನುಸರಿಸಿದ ಪರಿಷ್ಕರಣ ವಿಧಾನಗಳಾವುವು – ಈ ವಿವರಗಳು ತಿಳಿಯಬರುವುದಿಲ್ಲ.—ಸಂ.

ಇವು ಅಲ್ಲದೆ, ತಿಳಿಯದೆ ಅಲ್ಲಲ್ಲಿ ಮರೆಯಾಗಿರುವವು ಎಷ್ಟೋ ಗೊತ್ತಿಲ್ಲ.

ಆಗಾಗ್ಗೆ ಸರ್ಕಾರದವರು ಅಚ್ಚುಮಾಡಿಸಿ ಬಿಡುಗಡೆ ಮಾಡುವ ಕೆಲಸವನ್ನು ಬಿಟ್ಟರೆ, ಈ ಹಸ್ತಪ್ರತಿಗಳನ್ನು ದೊಡ್ಡ ರೀತಿಯಲಿ ಅಚ್ಚಿಸುವ ಪ್ರಯತ್ನ ಯಾವುದೂ ಆಗಿಲ್ಲ. ಉ. ವೆ. ಸ್ವಾಮಿನಾಥ ಐಯರ್ ಅನಂತರ ಓಲೆಸೂಡುಗಳನ್ನು ಅಚ್ಚು ಮಾಡುವ ಕೆಲಸ ನಿಂತುಹೋಯಿತು ಎಂದೇ ಹೇಳಬಹುದು. ಶ್ರೇಷ್ಠವಾದ ಅರಿವು ಕಳಂಜಿಯಂ (ಅರಿವಿನ ಕಣಜ ; ಜ್ಞಾನಭಂಡಾರ) ಇನ್ನೂ ಎಷ್ಟು ವರ್ಷಗಳು ಓಲೆ ಸೂಡುಗಳಲ್ಲಿ ಮರೆಯಾಗಿ ಅಡಗಿ ಇರಬೇಕೋ ಗೊತ್ತಿಲ್ಲ.*

* ಶ್ರೀ. ಮಾ. ಸು. ಸಂಬಂಧನ್ ಅವರು ಬರೆದ 'ಅಚ್ಚುಂ ಪದಿಪ್ಪುಂ' ಎಂಬ ಪುಸ್ತಕ ಈ ಬರಹವನ್ನು ಬರೆಯಲು ತುಂಬಾ ಉಪಕಾರವಾಗಿತ್ತು. ಅದಕ್ಕಾಗಿ ಅವರಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.—ಲೇಖಕ, ಅನುವಾದಕ.

—o—



# ತೆಲುಗು ಹಸ್ತಪ್ರತಿಗಳು

ಡಾ॥ ಜಿ. ಎಸ್. ಮೋಹನ್

ಇಂದಿನ ಮುದ್ರಣ ಅನುಕೂಲಗಳು ಇಲ್ಲದ ಹಿಂದಿನ ಕಾಲದಲ್ಲಿ ತಾಳೆಗರಿಗಳ ಮೇಲೆ ಕಂಟದಿಂದ ಬರೆಯುವದೆ ಕೊರೆಯುವುದೆ ಒಂದು ಕಲೆಯಾಗಿತ್ತು. ಈ ರೀತಿ ಬರೆಯುವುದನ್ನು 'ವ್ರಾಯಟ' (ಬರವಣಿಗೆ) ಎಂದೂ, ಬರೆಯುವವರನ್ನು 'ವ್ರಾಯಸ ಕಾಂಡ್ರು' (ಬರೆಯುವವರು*) ಎಂದೂ ಕರೆಯಲಾಗಿದೆ. ಇಂದು ನಮ್ಮ ವ್ಯವಹಾರದಲ್ಲಿ ಕಾಗದವು ವಹಿಸಿರುವಂಥ ಒಂದು ಮಹತ್ವದ ಪಾತ್ರವನ್ನು 'ತಾಟಕಮ್ಮು' (ತಾಳೆಗರಿ) ವಹಿಸಿತ್ತು. ಸಹಜವಾಗಿ ಪತ್ರವ್ಯವಹಾರವೆಲ್ಲವೂ ಇದರಲ್ಲೇ ನಡೆಯುತ್ತಿತ್ತು. ಇಂದಿಗೂ ಸಹ 'ಕಮ್ಮ' ಎಂಬ ಪದವು ಆಂಧ್ರದಲ್ಲಿ 'ಪತ್ರ' ಎಂಬ ಅರ್ಥದಲ್ಲಿಯೇ ಬಳಕೆಯಾಗಿರುವುದನ್ನು ನಾವು ಗಮನಿಸಬಹುದು.

ಕೈಯಿಂದ ಬರೆದ ಯಾವುದೇ ಲೇಖವನ್ನು ನಾವು ಹಸ್ತಪ್ರತಿ ಎಂಬುದಾಗಿ ಪರಿಭಾಷಿಸುತ್ತೇವೆ. ಈ ತೆರನ ತೆಲುಗು ಭಾಷೆಯ ಹಸ್ತಪ್ರತಿಗಳು ನಮಗೆ ತಾಳೆಗರಿ, ಕಾಗದಗಳ ಮೇಲೆ ದೊರೆಯುತ್ತವೆ. ತೆಲುಗಿನಲ್ಲಿ ಶಿಷ್ಟ, ಜಾನಪದ ಸಾಹಿತ್ಯ ಪರವಾದ ಹಸ್ತಪ್ರತಿಗಳೇ ಇದುವರೆಗೆ ವಿಶೇಷವಾಗಿ ಸಂಗ್ರಹಿತವಾಗಿದ್ದರೂ ವೈದ್ಯಶಾಸ್ತ್ರ, ಕಾಮಶಾಸ್ತ್ರ, ಜ್ಯೋತಿಷ, ಹಸ್ತಸಾಮುದ್ರಿಕ, ವೇದಾಂತ, ಛಂದಸ್ಸು, ವ್ಯಾಕರಣ, ಅಲಂಕಾರ ಮುಂತಾದ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಹಲವಾರು ಹಸ್ತಪ್ರತಿಗಳು ಸಂಗ್ರಹಿತವಾಗಿವೆ. ಈ ಸಂಗ್ರಹ ಕಾರ್ಯ ಇಂದಿಗೆ ಸುಮಾರು ಐವತ್ತು ಅರುವತ್ತು ವರ್ಷಗಳ ಹಿಂದೆ ವಿಶೇಷವಾಗಿ ಮತ್ತು ವ್ಯಾಪಕವಾಗಿ ನಡೆಯಿತು. ಆದರೆ ಇತ್ತೀಚೆಗೆ ಹಸ್ತಪ್ರತಿಗಳ ಸಂಗ್ರಹಣ ಕಾರ್ಯ ಕಡಿಮೆಯಾಗಿದೆ ಯೆಂದು ಹೇಳಬೇಕಾಗಿದೆ. ಸಂಗ್ರಹಕಾರ್ಯದಲ್ಲಿ ಆಸಕ್ತರಾದ ಶೋಧಕರೇ ಕಡಿಮೆ ಯಾಗಿರುವುದು ಇದಕ್ಕೆ ಮುಖ್ಯಕಾರಣವಾಗಿದೆ.

ಇದುವರೆಗೆ ತೆಲುಗು ಹಸ್ತಪ್ರತಿಗಳನ್ನು ಸಂಗ್ರಹಿಸಿದ ವ್ಯಕ್ತಿಗಳ ಮತ್ತು ಸಂಸ್ಥೆಗಳ ಸ್ಥೂಲಪರಿಚಯವನ್ನು ನಾವು ಇಲ್ಲಿ ಮಾಡಿಕೊಳ್ಳುವುದು ಸೂಕ್ತವೆಂದು ತೋರುತ್ತದೆ.

ಸುಮಾರು ಹದಿನಾರನೆಯ ಶತಮಾನದಲ್ಲಿಯೇ ತಂಜಾವೂರು ಅರಸರುಗಳು ದೊಡ್ಡ ದೊಡ್ಡ ಗ್ರಂಥಭಂಡಾರಗಳನ್ನು ಸ್ಥಾಪಿಸಿದರೆಂದು ಇತಿಹಾಸದಿಂದ ನಮಗೆ

* ಕನ್ನಡದಲ್ಲಿ : 'ರಾಯಸದವರು'—ಸಂ.

ತಿಳಿನುಬರುತ್ತದೆ. ಅಂತಹ ಒಂದು ಭಂಡಾರವೇ ಇಂದಿನ ತಂಜಾವೂರು ಮಹಾರಾಜ ಸರ್ಫೋಜಿ ಸರಸ್ವತೀ ಭಂಡಾರವೆಂದು ಪ್ರಸಿದ್ಧವಾದ ಗ್ರಂಥಾಲಯ. ಇದು ತಂಜಾವೂರನ್ನು ಆಳಿದ ಮರಾಠ ಅರಸನಾದ ಎರಡನೆಯ ಶರಭೋಜಿಯು ಸ್ಥಾಪಿಸಿದನು. ಆದರೆ ಇವನಿಗಿಂತಲೂ ಮೊದಲೇ ಈ ಕಾರ್ಯ ಆರಂಭವಾಗಿತ್ತು. ಇದೇ ಅರಸು ಮನೆತನದ ಎರಡನೆಯ ಶಹಜೀಯು (ಕ್ರಿ. ಶ. ೧೬೮೪ ರಿಂದ ೧೭೧೨) ಮೊಟ್ಟಮೊದಲಿಗೆ ತೆಲುಗು ಗ್ರಂಥಗಳನ್ನು ಶೇಖರಿಸಿ ಭದ್ರಪಡಿಸಿದನು. ಅತ್ಯುತ್ತಮ ಗ್ರಂಥಗಳನ್ನು ಇವನು ಪ್ರತಿಮಾಡಿಸಿ ಭದ್ರಪಡಿಸಿದನು. ಇದಕ್ಕಾಗಿ ಇವನಿಗೆ ತೆಲುಗು ದೇಶವವರು ಚಿರಕಾಲವೂ ಋಣಿಯಾಗಿರಬೇಕಾಗಿದೆ ಎಂಬುದಾಗಿ ಶ್ರೀ ಯುಂಡಮೂರಿ ಸತ್ಯನಾರಾಯಣರಾವು ಅವರು ಅಭಿಪ್ರಾಯ ಪಡುತ್ತಾರೆ.[1]

ಶರಭೋಜಿಯು ಕ್ರಿ. ಶ ೧೭೯೮ ರಿಂದ ೧೮೩೨ ರ ವರೆಗೆ ತಂಜಾವೂರನ್ನು ಪಾಲಿಸಿದನು. ಈ ಅವಧಿಯಲ್ಲಿ ಅವನು ಶತ ಸಹಸ್ರ ಗ್ರಂಥಗಳನ್ನು ಶೇಖರಿಸಿ ಈ ಗ್ರಂಥಾಲಯದಲ್ಲಿ ಭದ್ರಪಡಿಸಿದನು. ಶರಭೋಜಿಯು ತನ್ನ ಸಂಗ್ರಹ ಕಾರ್ಯದಲ್ಲಿ ಯಾವ ರೀತಿಯ ತಾರತಮ್ಯವನ್ನೂ ತೋರಲಿಲ್ಲ. ದೇಶಿಯವಾದ ತಾಳೆಯೋಲೆ ಗ್ರಂಥಗಳನ್ನೂ ವಿದೇಶಿಯವಾದ, ಅಂದು ಮುದ್ರಿತವಾಗಿದ್ದ ಗ್ರಂಥಗಳನ್ನು ಇವನು ಸಂಗ್ರಹಿಸಿದನು. ಭಾರತೀಯ ಭಾಷೆಗಳ ಗ್ರಂಥಗಳಲ್ಲದೆ, ಗ್ರೀಕ್, ಫ್ರೆಂಚ್, ಇಂಗ್ಲಿಷ್, ಲ್ಯಾಟಿನ್, ಇಟಾಲಿಯನ್ ಮುಂತಾದ ವಿದೇಶಿಯ ಗ್ರಂಥಗಳನ್ನೂ ಶೇಖರಿಸಿದನು. ಹಾಗೆಯೇ ಇವುಗಳ ವಿಷಯವೂ ವೈವಿಧ್ಯಮಯವಾಗಿವೆ. ಈ ಗ್ರಂಥಾಲಯದಲ್ಲಿ ದಕ್ಷಿಣಭಾರತದ ಭಾಷೆಗಳಾದ ಕನ್ನಡ, ತೆಲುಗು, ತಮಿಳು, ಮಲೆಯಾಳಂ ಭಾಷೆಗಳ ಹಸ್ತಪ್ರತಿಗಳು ಅಮೂಲ್ಯವಾದುವುಗಳು ಅನೇಕವಿವೆ. ತೆಲುಗಿನ ಸುಮಾರು ಮೂರು ಸಾವಿರಕ್ಕೂ ಮಿಗಿಲಾಗಿ ಹಸ್ತಪ್ರತಿಗಳು ಇಲ್ಲಿ ಶೇಖರಿಸಲ್ಪಟ್ಟಿವೆ. ಇವುಗಳಲ್ಲಿ ಕೆಲವು ತೆಲುಗು ಲಿಪಿಯಲ್ಲಿಯೂ, ದೇವನಾಗರಿ, ಗ್ರಂಥ ತಮಿಳುಲಿಪಿಗಳಲ್ಲಿಯೂ ಇವೆ. ಹಲವಾರು ತಮಿಳು ಸಂಸ್ಕೃತ ಹಸ್ತಪ್ರತಿಗಳು ತೆಲುಗು ಲಿಪಿಯಲ್ಲಿರುವುದನ್ನು ನಾವು ಕಾಣುತ್ತೇವೆ. ಹಾಗೆಯೇ ಕನ್ನಡ ಹಸ್ತಪ್ರತಿಗಳು ತೆಲುಗು ಲಿಪಿಯಲ್ಲಿಯೂ, ತೆಲಗು ಹಸ್ತಪ್ರತಿಗಳು ಕನ್ನಡ ಲಿಪಿಯಲ್ಲಿಯೂ ಇರುವುದು ಕಂಡುಬರುತ್ತದೆ. ಇಲ್ಲಿರುವ ತೆಲುಗು ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಯನ್ನು (Descriptue Catalogue of the Telugu Manuscripts in the Tanjore Maharaja Saraboji's Saraswati Mahal Library) ಮೂರು ಸಂಪುಟಗಳಲ್ಲಿ ಆಂಧ್ರ ವಿಶ್ವಕಲಾ ಪರಿಷತ್ತು, ವಾಲ್ತೇರು, ಅವರು ಪ್ರಕಟಿಸಿದ್ದಾರೆ.

ತೆಲುಗು ಹಸ್ತಪ್ರತಿಗಳ ಸಂಗ್ರಹಕಾರ್ಯದಲ್ಲಿ ಕರ್ನಲ್ ಮೆಕೆಂಜಿಯುವರು ವಹಿಸಿದ ವಿಶೇಷವಾದ ಆಸ್ಥೆಯನ್ನು ಸ್ಮರಿಸಲೇಬೇಕು. ಇವರು ಹಲವಾರು ಹಸ್ತಪ್ರತಿಗಳನ್ನು ಶೇಖರಿಸಿ ೧೮೨೮ ಕ್ರಿ. ಶ.ದಲ್ಲಿ ಫೋರ್ಟ್ ಸೈಂಟ್ ಜಾರ್ಜ್ ಕಾಲೇಜ್

ನಲ್ಲಿ ಭದ್ರಪಡಿಸಿದರು. ಆಮೇಲೆ ಇವುಗಳನ್ನು ಮದ್ರಾಸ್‌ನಲ್ಲಿರುವ ಪ್ರಾಚ್ಯ ಪುಸ್ತಕ ಭಂಡಾರಕ್ಕೆ ಬದಲಾಯಿಸಿದರು. ಸರ್ ಸಿ. ಪಿ. ಬ್ರೌನ್ ಅವರು ಮೆಕೆಂಜಿಯವರು ಸಂಗ್ರಹಿಸಿದ ಹಸ್ತಪ್ರತಿಗಳನ್ನು ಮತ್ತೆ ಪ್ರತಿಮಾಡಿಸಿದ್ದಲ್ಲದೆ ಅವುಗಳಿಗೆ ಒಂದು ಸೂಚಿಯನ್ನೂ ಸಿದ್ಧಪಡಿಸಿದರು. ಇಂದು ಮೆಕಂಜಿಯವರು ಸಂಗ್ರಹಿಸಿದ ಕೈಫಿಯತ್ತುಗಳ ನಕಲುಗಳು ತಿರುಪತಿಯ ವೆಂಕಟೇಶ್ವರ ವಿಶ್ವವಿದ್ಯಾಲಯ ಪ್ರಾಚ್ಯ ಲಿಖಿತ ಪುಸ್ತಕ ಭಂಡಾರ ಮತ್ತು ಹೈದರಾಬಾದ್‌ನ ಸಾಹಿತ್ಯ ಅಕಾಡೆಮಿಗಳಲ್ಲಿ ಭದ್ರವಾಗಿವೆ. ಇವುಗಳಿಗೆ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸಲಾಗುತ್ತಿದೆ ಎಂದು ತಿಳಿದು ಬಂದಿದೆ.

ಕ್ರಿ. ಶ. ೧೮೩೭ರಲ್ಲಿ ಬ್ರೌನ್ ಮಹಾಶಯನು ಹಲವಾರು ಹಸ್ತಪ್ರತಿಗಳನ್ನು ಸಂಗ್ರಹಿಸಿದನು. ಈತನು ಐವತ್ತುಸಾವಿರ ರೂಪಾಯಿಗಳವರೆಗೆ ಖರ್ಚುಮಾಡಿ ಸಾವಿರಾರು ತೆಲುಗು ತಾಳೆಯೋಲೆ ಗ್ರಂಥಗಳನ್ನು ಶೇಖರಿಸಿದನು. ಅಷ್ಟೇ ಅಲ್ಲ; ಹಲವಾರು ಕೃತಿಗಳನ್ನು ಪರಿಷ್ಕರಿಸಿ ಪ್ರಕಟಿಸಿದನು. ಈತನು ಸಂಗ್ರಹಿಸಿದ ಹಸ್ತಪ್ರತಿಗಳೆಲ್ಲವೂ ಇಂದು ಮದ್ರಾಸ್ ಪ್ರಾಚ್ಯಲಿಖಿತ ಭಂಡಾರದಲ್ಲಿವೆಯೆಂದು ತಿಳಿದುಬರುತ್ತದೆ.

ಮಾನವಲ್ಲಿ ರಾಮಕೃಷ್ಣಕವಿ ಅವರು ಬೇರೆ ವಿದ್ವಾಂಸರ ನೆರವಿನಿಂದ ಆಂಧ್ರ, ತಮಿಳುನಾಡು, ಕರ್ನಾಟಕ ಮತ್ತು ಕೇರಳ ಪ್ರಾಂತಗಳಲ್ಲಿ ಪರ್ಯಟನಮಾಡಿ ಭರತನ ನಾಟ್ಯಶಾಸ್ತ್ರ, ಅಭಿನವಗುಪ್ತನ 'ಅಭಿನವ ಭಾರತಿ', ಭೋಜನ 'ಶೃಂಗಾರ ಪ್ರಕಾಶ', 'ಯೋಗ ಭಾಷ್ಯ ವಿವರಣೆ' ಮುಂತಾದ ಅನೇಕ ಸಂಸ್ಕೃತ ಕೃತಿಗಳ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಇವರು ಸಂಗ್ರಹಕಾರ್ಯವನ್ನಷ್ಟೇ ಅಲ್ಲ, ಅವುಗಳ ಸಂಪಾದನ ಕಾರ್ಯವನ್ನೂ ಮಾಡಿದ್ದಾರೆ.

ಕಲಾಪ್ರಪೂರ್ಣ, ಮಹಾಮಹೋಪಧ್ಯಾಯ ಡಾ|| ಚಿಲಕೂರಿ ನಾರಾಯಣರಾವ್ ಅವರು ಸ್ವಪ್ರಯತ್ನದಿಂದ ಸುಮಾರು ಎರಡು ಸಾವಿರ ಹಸ್ತಪ್ರತಿಗಳನ್ನು ಸಂಗ್ರಹ ಮಾಡಿದ್ದರು. ತಮ್ಮ ಈ ಸಂಗ್ರಹವನ್ನು ಅವರು ರಾಜಮಂಡ್ರಿಯಲ್ಲಿರುವ ಆಂಧ್ರ ಹಿಸ್ಟಾರಿಕಲ್ ಸೊಸೈಟಿ ಇವರಿಗೆ ನೀಡಿದ್ದಾರೆ.

ಸರ್ವಶ್ರೀ ವೇಟೂರಿ ಪ್ರಭಾಕರ ಶಾಸ್ತ್ರಿ, ವೇದಂ ವೆಂಕಟರಾಯ ಶಾಸ್ತ್ರಿ, ಜಯಂತಿ ರಾಮಯ್ಯ ಪಂತುಲು, ಗಿಡುಗು ರಾಮಮೂರ್ತಿ ಪಂತುಲು, ಕುಂದುಕೂರಿ ವೀರೇಶಲಿಂಗಂ ಪಂತುಲು, ಕೊಮರ್‍ರಾಜು ಲಕ್ಷ್ಮಣರಾವ್, ಕಾಶೀನಾಥುನಿ ನಾಗೇಶ್ವರರಾವ್, ನಿಡದವೋಲು ವೆಂಕಟರಾವ್, ನೇಲಟೂರಿ ವೆಂಕಟರಾಮಯ್ಯ ಮುಂತಾದ ವಿದ್ವಾಂಸರು ಹಲವಾರು ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಾರೆ. ಕರ್ನಾಟಕ ಆಂಧ್ರ ತಮಿಳುನಾಡು ಗಡಿ ಪ್ರದೇಶದಲ್ಲಿನ ಹಸ್ತಪ್ರತಿಗಳನ್ನು ಶ್ರೀ ಕೆ. ಎಸ್. ಕೋದಂಡರಾಮಯ್ಯ (ಇವರು ಹೊಸೂರಿನವರು) ಮತ್ತು ಶ್ರೀ ರತ್ನಾಕರಂ ಶಂಕರನಾರಾಯಣ ರಾಜು ಅವರು ಸಂಗ್ರಹಮಾಡಿದ್ದಾರೆ.

ಜಾನಪದ ವೀರಗೀತೆಗಳೂ ಸಹ ತಾಳೆಯೋಲೆಗಳ ಮೇಲೆ ಬರೆಯಲ್ಪಟ್ಟಿರುವುದು ಒಂದು ವಿಶೇಷ. ಈ ಬಗ್ಗೆ ವಿಶೇಷವಾದ ಕೆಲಸವನ್ನು ಮಾಡಿರುವ ಡಾ|| ತಂಗಿರಾಲ ವೆಂಕಟಸುಬ್ಬಾರಾವು ಅವರು ಪಲ್ನಾಟಿ ವೀರಗಾಥೆಗಳಿಗೆ ಸಂಬಂಧಪಟ್ಟ ಬೃಹತ್‌ಗಾತ್ರದ ಇಪ್ಪತ್ತಕ್ಕೆ ಮಿಗಿಲಾದ ಹಸ್ತಪ್ರತಿಗಳನ್ನು ಮತ್ತು ಕಾಟಮರಾಜು ವೀರಗಾಥೆಗೆ ಸಂಬಂಧಪಟ್ಟ ಇಪ್ಪತ್ತು ಹಸ್ತಪ್ರತಿಗಳನ್ನು ಸಂಗ್ರಹ ಮಾಡಿದ್ದಾರೆ. ಈ ಹಸ್ತಪ್ರತಿಗಳ ಆಧಾರದ ಮೇಲೆ ಸಂಪಾದನೆ ಮಾಡಿದ 'ಕಾಟಮರಾಜು ಕಥಲು' ಎಂಬ ಎರಡು ಸಂಪುಟಗಳನ್ನು ಆಂಧ್ರ ಪ್ರದೇಶ ಸಾಹಿತ್ಯ ಅಕಾಡೆಮಿಯು ಪ್ರಕಟಿಸಿದೆ. ಇದೇ ಕಾಟಮರಾಜು ಕಥೆಯನ್ನು ಶ್ರೀ ವೇಟೂರಿ ಪ್ರಭಾಕರ ಶಾಸ್ತ್ರಿಯವರೂ ಸಂಪಾದಿಸಿ ಪ್ರಕಟಿಸಿದ್ದಾರೆ. ಇದೇ ಕಾಟಮರಾಜು ಕಥೆಯ ಹಸ್ತಪ್ರತಿಗಳನ್ನು ದಿವಂಗತ ಡಾ|| ತಿಮ್ಮಾವಜಲಿ ಕೋದಂಡರಾಮಯ್ಯನವರೂ ಸಂಗ್ರಹಿಸಿದ್ದಾರೆ. ತೆಲುಗು ಜಾನಪದ ಸಾಹಿತ್ಯದ ಬಗ್ಗೆ ದುಡಿದಿರುವ ಡಾ|| ಬಿ. ರಾಮರಾಜು ಅವರು ಹಲವಾರು ಜಾನಪದ ಲಾವಣಿಗಳು, ಗೀತೆಗಳು ಇರುವ ಹಸ್ತಪ್ರತಿಗಳನ್ನು ಸಂಗ್ರಹ ಮಾಡಿದ್ದಾರೆ.

### ತೆಲುಗು ಹಸ್ತಪ್ರತಿಗಳಿರುವ ಭಂಡಾರಗಳು

(೧) ಮದ್ರಾಸಿನ ಸರಕಾರಿ ಪ್ರಾಚ್ಯಲಿಖಿತ ಗ್ರಂಥಭಂಡಾರದಲ್ಲಿ ಸು ೩೮೭೦ ತೆಲುಗು ಹಸ್ತಪ್ರತಿಗಳವೆಯೆಂದು ನಮಗೆ ತಿಳಿಯುತ್ತದೆ. ಈ ಹಸ್ತಪ್ರತಿಗಳಿಗೆ ಇಪ್ಪತ್ತೆರಡು ಸಂಪುಟಗಳಲ್ಲಿ ವರ್ಣನಾತ್ಮಕ ಸೂಚಿಯನ್ನು ಆ ಸಂಸ್ಥೆಯು ಹೊರತಂದಿದೆ. ಬ್ರೌನ್, ಮೆಕೆಂಜಿ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಸಂಗ್ರಹ ಮಾಡಿದ ಹಸ್ತಪ್ರತಿಗಳು ಈ ಗ್ರಂಥಾಲಯದಲ್ಲಿವೆ.

(೨) ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯ ಪ್ರಾಚ್ಯ ಸಂಶೋಧನಾ ಕೇಂದ್ರ, ತಿರುಪತಿ, ಇಲ್ಲಿ ಒಟ್ಟು ಸುಮಾರು ೧೪,೨೦೪ ಹಸ್ತಪ್ರತಿಗಳು (ತಾಳೆಗರಿ ಮತ್ತು ಕಾಗದ) ಶೇಖರಿಸಲ್ಪಟ್ಟಿವೆ. ಇವುಗಳಲ್ಲಿ ೯೦೯೮ ಸಂಸ್ಕೃತ, ೩೯೨೫ ತೆಲುಗು ಮತ್ತು ೧೧೮೧ ತಮಿಳು ಹಸ್ತಪ್ರತಿಗಳು ಸೇರಿವೆ.

(೩) ಸರಕಾರಿ ಪ್ರಾಚ್ಯ ಹಸ್ತಪ್ರತಿ ಭಂಡಾರ ಹಾಗೂ ಸಂಶೋಧನಾ ಕೇಂದ್ರ, ಹೈದರಾಬಾದ್ ಇಲ್ಲಿ ತೆಲುಗು, ಸಂಸ್ಕೃತ, ಹಿಂದಿ, ಅರಾಬಿಕ್, ಉರ್ದು, ಪರ್ಷಿಯನ್, ಟರ್ಕಿಷ್, ಸಿಂಧಿ, ತಮಿಳು, ಮರಾಠಿ, ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳ ಒಟ್ಟು ೨೧,೦೦೦ ಹಸ್ತಪ್ರತಿಗಳವೆ. ಹಲವಾರು ಹಸ್ತಪ್ರತಿಗಳ ಪ್ರಕಟನ ಕಾರ್ಯವು ನಡೆದಿದೆ.

ಆಂಧ್ರದಲ್ಲಿರುವ ಇತರ ಹಸ್ತಪ್ರತಿಗಳ ಭಂಡಾರಗಳನ್ನು ಕೇವಲ ಹೆಸರಿಸುತ್ತೇನೆ: ಆಂಧ್ರ ಸಾಹಿತ್ಯ ಪರಿಷತ್ತು ಮತ್ತು ಸರಕಾರಿ ವಸ್ತು ಪ್ರದರ್ಶನಾಲಯ, ಕಾಕಿನಾಡ; ರಾಳ್ಳಬಂಡಿ ಸುಬ್ಬಾರಾವ್ ಸರ್ಕಾರಿ ವಸ್ತು ಪ್ರದರ್ಶನಾಲಯ,

ರಾಜಮಂಡ್ರಿ; ಶಾರದಾನಿಕೇತ, ಮುಗುಂಟೂರು; ರಾಮಮೋಹನ ಗ್ರಂಥಾಲಯಮು, ವಿಜಯವಾಡ ; ಗೌತಮೀ ಗ್ರಂಥಾಲಯಮು, ರಾಜಮಂಡ್ರಿ ; ಆಂಧ್ರ ಹಿಸ್ಟಾರಿಕಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ರಾಜಮಂಡ್ರಿ; ಆಂಧ್ರ ವಿಶ್ವಕಲಾ ಪರಿಷತ್ತು, ವಾಲ್ತೇರು; ಆಂಧ್ರ ಪ್ರದೇಶ್ ಸ್ಟೇಟ್ ಗೌರ್ನಮೆಂಟ್ ಆರ್ಕಿವ್ಸ್, ಹೈದರಾಬಾದ್, ಹಾಗೂ ಉಸ್ಮಾನಿಯಾ ವಿಶ್ವವಿದ್ಯಾಲಯ ಗ್ರಂಥಾಲಯಮು, ಹೈದರಾಬಾದ್.

ಇವುಗಳಲ್ಲದೆ ಕರ್ನಾಟಕ ಮತ್ತು ತಮಿಳುನಾಡಿನ ಹಸ್ತಪ್ರತಿ ಭಂಡಾರಗಳಲ್ಲಿಯೂ ತೆಲುಗು ಹಸ್ತಪ್ರತಿಗಳು ಶೇಖರವಾಗಿವೆ. ಪ್ರಾಚ್ಯವಿದ್ಯಾಸಂಶೋಧನಾಲಯ ಮೈಸೂರು, ಇಲ್ಲಿ ಸುಮಾರು ಇಪ್ಪತ್ತು ತೆಲುಗು ಹಸ್ತಪ್ರತಿಗಳು ಇವೆ. ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಸುಮಾರು ಐವತ್ತು ಹಸ್ತಪ್ರತಿಗಳಿವೆಯೆಂದು ಶ್ರೀ ಎಸ್. ಶಿವಣ್ಣನವರು ತಿಳಿಸಿದ್ದಾರೆ. ಹಾಗೆಯೇ ಕೆಳದಿಯ ವಸ್ತುಸಂಗ್ರಹಾಲಯದಲ್ಲಿಯೂ ಹಲವಾರು ತೆಲುಗು ಹಸ್ತಪ್ರತಿಗಳು ಇವೆಯೆಂದು ಶ್ರೀ ಕೆಳದಿ ಗುಂಡಾಜೋಯಿಸ್ ಅವರು ತಿಳಿಸಿದ್ದಾರೆ. ಕನ್ನಡ ಅಧ್ಯಯನ ಕೇಂದ್ರದಲ್ಲಿರುವ ತೆಲುಗು ಹಸ್ತಪ್ರತಿಗಳ ಲಿಪಿಯು ಕನ್ನಡ ಲಿಪಿಯಾಗಿರುವುದು ಒಂದು ವೈಶಿಷ್ಟ್ಯ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಇಲ್ಲಿಯೂ ಹಲವಾರು ತೆಲುಗು ಹಸ್ತಪ್ರತಿಗಳಿರುವುದಾಗಿ ತಿಳಿದುಬರುತ್ತದೆ.*

ನಾವು ಈಗಾಗಲೇ ಪರಿಶೀಲಿಸಿರುವಂತೆ ತಂಜಾವೂರು ಮತ್ತು ತಮಿಳುನಾಡು ಪ್ರಾಚ್ಯ ಲಿಖಿತ ಭಂಡಾರಗಳಲ್ಲಿ ತೆಲುಗು ಹಸ್ತಪ್ರತಿಗಳಿವೆ. ಇವುಗಳಲ್ಲದೆ ಮದ್ರಾಸಿನಲ್ಲಿರುವ ಅಡಿಯಾರ್ ಗ್ರಂಥಭಂಡಾರದಲ್ಲಿಯೂ ಹಲವಾರು ತೆಲುಗು ಹಸ್ತಪ್ರತಿಗಳನ್ನು ಸಂಗ್ರಹಿಸಿ ಜೋಪಾನವಾಗಿಡಲಾಗಿದೆ. ನನಗೆ ತಿಳಿದ ಮಟ್ಟಿಗೆ ಹೊರದೇಶಗಳಲ್ಲಿ ಲಂಡನ್ನಿನ BRITISH LIBRARY REFERENCE DIVISION, LANGUAGEನಲ್ಲಿ ಸುಮಾರು ಅರುವತ್ತು ತೆಲುಗು ಹಸ್ತಪ್ರತಿಗಳನ್ನು ಸಂಗ್ರಹಿಸಿಡಲಾಗಿದೆ.

ತೆಲುಗಿನಲ್ಲಿ ಹಲವಾರು ಪರಿಷ್ಕೃತ ಕೃತಿಗಳು ಹೊರಬಂದಿವೆ. ಈ ತೆರನಾಗಿ ಪರಿಷ್ಕರಿಸಿ ಸಂಪಾದಿಸಿದ ಕೃತಿಗಳನ್ನು ಆಂಧ್ರ ಸಾರಸ್ವತ ಪರಿಷತ್ತು ; ಆಂಧ್ರ ರಚಯಿತಲ ಸಂಘಂ, ಹೈದರಾಬಾದ್ ; ರಾಯಲು ಅಂಡ್ ಕೋ, ವಾವಿಳ್ಳ ; ವಿಶಾಲಾಂಧ್ರ ಪ್ರಚುರಣಾಲಯಂ ; ವೆಂಕಟ್ರಾಮ್ ಅಂಡ್ ಕೋ, ಮುಂತಾದ ಪ್ರಕಾಶನ ಸಂಸ್ಥೆಗಳು ಪ್ರಕಟಿಸಿವೆ. ನಿಡದವೋಲು, ಚಿಲಕೂರಿ, ವೆಂಕರಾಲ, ವೇಟೂರಿ, ರಾವೂರಿ ದೊರೆಸ್ವಾಮಿ ಶರ್ಮ, ವೇಲೂರಿ ಶಿವರಾಮಶಾಸ್ತ್ರಿ, ಡಾ|| ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ, ಡಾ|| ಬಿ. ರಾಮರಾಜು, ಡಾ|| ಕೇತವರಪು ರಾಮಕೋಟಿ

* ಬಿ. ಎಂ. ಶ್ರೀ. ಪ್ರತಿಷ್ಠಾನದಲ್ಲಿಯೂ ತೆಲುಗು ಭಾಷೆಯ ಹಸ್ತಪ್ರತಿಗಳು ಕೆಲವು ಇವೆ. ತಿಮ್ಮಪ್ಪದಾಸರ ಕನ್ನಡ ಕೀರ್ತನೆಗಳ ಹಸ್ತಪ್ರತಿಯಲ್ಲಿ ಅವರೇ ರಚಿಸಿರುವ ತೆಲುಗು ಕೀರ್ತನೆಗಳಿವೆ.–ಸಂ.

ಶಾಸ್ತ್ರಿ, ಪ್ರೊ. ಖಂಡವಲ್ಲಿ ಲಕ್ಷ್ಮೀರಂಜನಂ, ಡಾ|| ಪಿ. ಯಶೋಧಾ ರೆಡ್ಡಿ, ಪಿಂಗಳಿ ಲಕ್ಷ್ಮೀಕಾಂತಂ, ಬಿ. ವಿ. ಶಿಂಗರಾಚಾರ್ಯ, ಬಿ. ನಳಿನೀಕಾಂತರಾವ್, ಜಯಂತಿ ರಾಮಯ್ಯ ಪಂತುಲು, ಅಕ್ಕಿರಾಜು ರಮಾಕಾಂತಂ, ಮಾನವಲ್ಲಿ ರಾಮಕೃಷ್ಣ ಕವಿ ಇವರುಗಳು ತೆಲುಗು ಗ್ರಂಥಸಂಪಾದನೆಗೆ ಅಮೂಲ್ಯ ಸೇವೆಯನ್ನು ಸಲ್ಲಿಸಿದ ಹಿರಿಯರು.

ಹಲವಾರು ಹಸ್ತಪ್ರತಿಗಳು ಆಂಧ್ರ ದೇಶದಲ್ಲಿಯೂ ಹಾಗೂ ಹೊರ ಪ್ರಾಂತಗಳಲ್ಲಿಯೂ ಅನೇಕರ ಮನೆಗಳಲ್ಲಿ ಶಿಥಿಲವಾಗುತ್ತಿವೆ. ಅವುಗಳ ಸಂಗ್ರಹಕಾರ್ಯ ಇನ್ನೂ ತೀವ್ರಗತಿಯಲ್ಲಿ ನಡೆಯಬೇಕಾಗಿದೆ. ಇತ್ತೀಚೆಗೆ (೧೭–೩–೮೧) ಹೈದರಾಬಾದ್‌ನಲ್ಲಿ ನಡೆದ ಜಾನಪದ ಗೋಷ್ಠಿಯ ಸಮಾರೋಪ ಸಂದರ್ಭದಲ್ಲಿ ಹಾಜರಿದ್ದ ಮಾನ್ಯ ಶಿಕ್ಷಣ ಸಚಿವರನ್ನುದ್ದೇಶಿಸಿ ಉಸ್ಮಾನಿಯಾ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ|| ಬಿ. ರಾಮರಾಜು ಅವರು, "ನನಗೆ ಒಂದು ಲಾರಿಯನ್ನು ಏರ್ಪಾಡು ಮಾಡಿಕೊಟ್ಟರೆ, ಅದರ ತುಂಬಾ ಹಸ್ತಪ್ರತಿಗಳನ್ನು ತರುತ್ತೇನೆ" ಎಂಬುದಾಗಿ ಬಿನ್ನವಿಸಿಕೊಂಡರು. ರಾಮರಾಜು ಅವರ ಈ ಮಾತು ತೆಲುಗು ಹಸ್ತಪ್ರತಿಗಳು ದೊರೆಯುವ ಬಗ್ಗೆಯೂ ಮತ್ತು ಆ ಬಗ್ಗೆ ಸರಕಾರ ವಹಿಸಿರುವ ಅವಜ್ಞತೆಯ ಬಗ್ಗೆಯೂ ನಮ್ಮ ಗಮನ ಸೆಳೆಯುತ್ತದೆ. ನಮ್ಮ ಸರಕಾರ ಮಾತ್ರವಲ್ಲ, ಜನರೂ ಈ ಬಗ್ಗೆ ಆಸ್ಥೆವಹಿಸಿ ನಮ್ಮ ಪ್ರಾಚೀನ ಜ್ಞಾನಭಂಡಾರವನ್ನು ಕಾಪಾಡಿಕೊಂಡು ಬರುತ್ತಾರೆಂದು ಆಶಿಸುತ್ತೇನೆ.*

* ಈ ಮಾತುಗಳು ಕನ್ನಡ ಹಸ್ತಪ್ರತಿಗಳ ಬಗೆಗೂ ನೂರಕ್ಕೆ ನೂರು ಸತ್ಯವಾಗಿ ಅನ್ವಯಿಸುತ್ತವೆ.—ಸಂ.

**ಗ್ರಂಥಋಣ :**

S. V. University Oriental Journal, Tirupati, Vol. XIX, part 1 and 2.

Andhra Pradesh Oriental Conference Souvenir, May, 1977.

Guide to the Dept. of Oriental Manuscripts and Printed Books: Compiled by H. J. Goodacre and A.P. Pritchard.

ಶಾರದಾಧ್ವಜಮು.

ಆಂಧ್ರಸರ್ವಸ್ವಮು. ಸಂ. ಮಾಗಂಟಿ ಬಾಪಿನಾಡು.

ಬ್ರೌನ್‌ಲೇಖಲು

ಆರವ ಅಖಿಲ ಭಾರತ ರಚಯಿತಲ ಮಹಾಸಭಲ ಸಾವನೀರ್, ಬೆಂಗಳೂರು, ೧೯೭೪.

ಕರ್ನಾಟಕಾಂಧ್ರ ಸಾಹಿತ್ಯಚರಿತ್ರ ; ಆರ್ ಶಂಕರನಾರಾಯಣರಾಜು.

ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ.

ಕನ್ನಡ ಹಸ್ತಪ್ರತಿಗಳ ಇತಿಹಾಸ, ಎಚ್. ದೇವಿರಪ್ಪ, ಬೆಂಗಳೂರು,

—೦—

# ಕನ್ನಡ ಕೈಫಿಯತ್ತುಗಳು

ಡಾ॥ ಜಿ. ವರದರಾಜರಾವ್

ನಮ್ಮ ದೇಶದ ಚರಿತ್ರೆಯನ್ನು ಬರೆಯುವುದಕ್ಕೆ ಇತಿಹಾಸಕಾರನಿಗೆ ಲಭ್ಯವಾಗಿರುವ ಹಲವಾರು ತೆರನಾದ ಪ್ರಮಾಣಗಳಲ್ಲಿ ಕೈಫಿಯತ್ತುಗಳೂ ಒಂದು. ಇವುಗಳು ಶಾಸನಗಳಷ್ಟು ಪ್ರಬಲವಾದ ಆಧಾರಗಳೆನ್ನಿಸದಿದ್ದರೂ, ಸಾಹಿತ್ಯದಲ್ಲಿ ಉಕ್ತವಾಗಿರುವ ಸಂಗತಿಗಳನ್ನು ಪರಿಗಣಿಸುವಂತೆ ಪೋಷಕ ಪ್ರಮಾಣಗಳನ್ನಾಗಿ ಸ್ವೀಕರಿಸಬಹುದು. ಕನ್ನಡದಲ್ಲಿ ಈ ತೆರನಾದ ಲಿಖಿತಗಳನ್ನು 'ಬಖೈರು' ಮತ್ತು 'ನಾಮಾ' ಎಂದೂ ಕರೆಯುವುದುಂಟು. 'ಕೈಫಿಯತ್ತು' ಎಂಬ ಶಬ್ದವು ಅರಬ್ಬೀ ಭಾಷೆಗೆ ಸೇರಿದುದೆಂದೂ, ಹಿಂದಿ ಮತ್ತು ಮರಾಠಿಯಲ್ಲಿ 'ಕೈಫಿಯತ್', 'ಕೈಫತ್', 'ಕೈಫಿಯೆತ್', 'ಕೈಫೇತ್' ಎಂಬ ಪರ್ಯಾಯ ರೂಪಗಳು ದೊರೆಯುವುದಾಗಿಯೂ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಉಲ್ಲೇಖಿಸಿದೆ (ಕನ್ನಡ ನಿಘಂಟು, ಸಂ. II, ಪು. ೨೧೩೨). 'ಬಖೈರು' ಮತ್ತು 'ನಾಮಾ' ಎಂಬ ಕಟ್ಟುಗಳೂ ಹೀಗೆಯೇ ಅನ್ಯದೇಶ್ಯಗಳೆನ್ನುವುದರಲ್ಲಿ ಸಂಶಯವಿಲ್ಲ. ಯಾವುದಾದರೂ ಒಂದು ಸ್ಥಳಕ್ಕೆ ಸಂಬಂಧಿಸಿದಂತೆಯೋ, ವ್ಯಕ್ತಿಯನ್ನು ಕುರಿತಂತೆಯೋ, ಜಾತಿ ಪಂಗಡಗಳನ್ನು ನಿರ್ದೇಶಿಸಿಯೋ ರಚಿತವಾಗಿರುವ ಇಂಥ ಬರಹಗಳು ಕನ್ನಡದಲ್ಲಿ ಎಂದಿನಿಂದ ಪ್ರಾರಂಭವಾಯಿತೆನ್ನುವುದನ್ನು ಸಂಶೋಧನೆ ಮಾಡಿ ತಿಳಿಯಬೇಕಾಗಿದೆ. ಈಗ ದೊರೆತಿರುವ 'ಹೈದರ್‌ನಾಮಾ' ಎಂಬ ಬರಹದಲ್ಲಿ ಹೈದರನ ವಿಷಯಗಳು ಅಡಕವಾಗಿದ್ದರೆ, 'ರಾಜೇಂದ್ರ ನಾಮಾ' ಎಂಬ ಬರಹದಲ್ಲಿ ಕೊಡಗಿನ ರಾಜರಿಗೆ ಸಂಬಂಧಿಸಿದ ಅನೇಕ ಸಂಗತಿಗಳು ತಿಳಿದುಬರುತ್ತವೆ. ಈ ತೆರನಾದ ಬರಹಗಳು ಒಮ್ಮೊಮ್ಮೆ ಸಮಕಾಲೀನವೂ ಆಗಿರುವುದರಿಂದ ಇಲ್ಲಿನ ನಿರೂಪಣೆಯಲ್ಲಿ ಸಾಕಷ್ಟು ನಿಜವಾದ ಘಟನೆಗಳು ಇರಬಹುದೆಂದು ನಿರೀಕ್ಷಿಸಬಹುದು. 'ಚಿತ್ರದುರ್ಗದ ಬಖೈರು' ಎಂಬ ರಚನೆ ಪೂನಾದ ಪೇಷ್ವೆ ಮಹಾರಾಜೇ ಶ್ರೀ ಮಾಧವರಾವ್ ಪಂತ್ ಅವನಿಂದ ನೇಮಿತನಾದ ಭೀಮಾಜಿ ಪಂತ್ ಎಂಬವನಿಂದ ಬರೆಯಲಾಯಿತೆಂದು ವಿಶದವಾಗುತ್ತದೆ. ಕರ್ನಲ್ ಮೆಕೆಂಜಿ ಎಂಬ ಆಂಗ್ಲ ಅಧಿಕಾರಿಯು, ಭರತ ಖಂಡದ ಪರಿವೀಕ್ಷಣೆಯ ಕೆಲಸಕ್ಕೆ ನೇಮಕಗೊಂಡಾಗ, ಅವನು ತನ್ನ ಪರಿವಾರದೊಂದಿಗೆ ಊರೂರನ್ನು ಅಲೆದಾಡಬೇಕಾಗಿ ಬಂದಿತು. ಆಗ ಆತನು, ಆಯಾ ಸ್ಥಳದಲ್ಲಿದ್ದ ಶಾನುಭೋಗರನ್ನೋ ಇಲ್ಲವೇ ಓದುಬರಹ ಬಲ್ಲವರನ್ನೋ ಕಂಡು, ಆಯಾ ಪ್ರದೇಶದ

ವಿಚಾರಗಳನ್ನೆಲ್ಲ ಕುರಿತು ಇಂಥ ಲಿಖಿತಗಳನ್ನು ಬರೆಸಿರುತ್ತಾನೆ. ಆತನು ಸಂಗ್ರಹಿಸಿರುವ ಈ ದಾಖಲೆಗಳಲ್ಲಿ ಸ್ಥಳದ ಐತಿಹ್ಯ, ಆಡಳಿತ ನಡೆಸಿದವರ ಸಂಗತಿ, ಅಲ್ಲಿ ನೆಲಸಿದ್ದ ಜನಗಳ ಜಾತಿ, ಕಸಬು ಮೊದಲಾದುವುಗಳ ವಿವರಗಳೆಲ್ಲವೂ ಕಂಡು ಬರುತ್ತವೆ. ಕನ್ನಡಕ್ಕೆ ಸಂಬಂಧಿಸಿದ ಅವನ ಸಂಗ್ರಹದಲ್ಲಿನ ವಿವರಗಳನ್ನು ಪರಿಶೀಲಿಸಿದರೆ ಅವು ಎಷ್ಟು ವೈವಿಧ್ಯಪೂರ್ಣವಾಗಿವೆಯೆನ್ನುವುದು ವಿಶದವಾಗುತ್ತದೆ.

ಈ ಬಗೆಯಾದ ಅಪೂರ್ವ ದಾಖಲೆಗಳ ಮಹತ್ವವನ್ನು ಮನಗಂಡ ಕೆಲವು ಕನ್ನಡ ವಿದ್ವಾಂಸರು ತಾವಾಗಿ ಆಸಕ್ತಿ ವಹಿಸಿ, ಕೆಲವನ್ನು ಪತ್ರಿಕೆಗಳಲ್ಲಿ ಪ್ರಕಟಿಸಿರುವುದೂ ಉಂಟು. ಬೆನಗಲ್ ರಾಮರಾಯರು ಕರ್ನಾಟಕ ಸಾಹಿತ್ಯ ಪರಿಷತ್ತಿನ ಪತ್ರಿಕೆಗಳಲ್ಲಿ 'ಬುಕ್ಕರಾಯ ಚರಿತೆ' (ಸಂ. VII, ಸಂ. ೨ (?) ಮತ್ತು ೪, ಪು. ?), 'ಆರ್ಕಾಡ ಸಂಸ್ಥಾನದ ಕೈಫಿಯತ್ತು' (ಸಂ. IX, ಸಂ. ೨, ಪು. ೧೩೩-೧೪೬), 'ಬಳ್ಳಾರಿಯ ಕೈಫಿಯತ್ತು' (ಸಂ. XI, ಸಂ. ೪, ಪು. ೨೨೨-೨೪೫) ಎಂಬವುಗಳನ್ನೂ ಮೈಸೂರು ಸರ್ಕಾರದ ಪ್ರಾಕ್ತನ ಸಂಶೋಧನ ಇಲಾಖೆಯಲ್ಲಿ ಹುದ್ದೆಯಲ್ಲಿದ್ದ ಬಿ. ರಾಮರಾಯರು 'ಶೃಂಗೇರಿಯ ಕೈಫಿಯತ್ತು' (ಸಂ. XIII, ಸಂ. ೧, ಪು. ೫೯-೭೨ ಮತ್ತು ಸಂ. XV, ಸಂ. ೨, ಪು. ೧೧೦-೧೨೧) 'ಕಣಕುಪ್ಪೆ ಕೋಟೆ ಕಟ್ಟಿದ ಕೈಫಿಯತ್ತು' (ಸಂ. XVI, ಸಂ.೨, ಪು. ೧೨೮-೧೩೬) ಮೊದಲಾದವುಗಳನ್ನು ಬೆಳಕಿಗೆ ತಂದರು. ಅದೇ ಮೇರೆಗೆ, ಚಿತ್ರದುರ್ಗದ ಹುಲ್ಲೂರು ಶ್ರೀನಿವಾಸ ಜೋಯಿಸರು 'ಚಿತ್ರದುರ್ಗದ ಬಖೈರು' ಎಂಬುದನ್ನು ಮೊದಲು 'ತಾಯಿನಾಡು' ಪತ್ರಿಕೆಯಲ್ಲಿ ಬಿಡಿಬಿಡಿಯಾಗಿ ಪ್ರಕಟಿಸಿದರು. ಇದೀಗ ಈ ಕೃತಿ ಪುಸ್ತಕರೂಪದಲ್ಲಿ ಪ್ರಕಟವಾಗಿದೆ (ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು). ತಿರುಮಲೆ ತಾತಾಚಾರ್ಯ ಶರ್ಮರು 'ಚಾರಿತ್ರಿಕ ದಾಖಲೆಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿರುವ ತಮ್ಮ ಪುಸ್ತಕದಲ್ಲಿ "ರಾಮರಾಯನ ಬಖೈರು", "ಹೈದರನಾಮೆ" ಮತ್ತು "ವೀರರಾಜೇಂದ್ರನ ಪತ್ರ" ಎಂಬ ಮೂರು ಬರಹಗಳನ್ನು ಒಂದೆಡೆ ಕೂಡಿಸಿ, ಅವುಗಳ ಮಹತ್ವನ್ನು ಕುರಿತು ಪ್ರಸ್ತಾವಿಸಿರುತ್ತಾರೆ, (ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ೧೯೭೧).

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇತಿಹಾಸದ ಪ್ರಾಧ್ಯಾಪಕರಾಗಿದ್ದ ಡಾ|| ಎಂ.ಎಚ್. ಕೃಷ್ಣ ಅವರು, ತಮಗೆ ದೊರೆತ "ಹೈದರ್‌ನಾಮಾ" ಎಂಬ ಹಸ್ತಪ್ರತಿಯ ಸಾರವನ್ನು ಈ ಮುಂಚೆಯೇ ಕೊಟ್ಟಿರುವುದಲ್ಲದೆ, ಅದರ ಐತಿಹಾಸಿಕ ಮೌಲ್ಯವನ್ನು ಕುರಿತು ಪ್ರಾಕ್ತನ ಸಂಶೋಧನ ಇಲಾಖೆಯ ವರದಿಯಲ್ಲಿ ಸಾಕಷ್ಟು ವಿಶದವಾಗಿ ಪ್ರಸ್ತಾವಿಸಿರುತ್ತಾರೆ (MAR, 1930. p.p. 79-106). ಕರ್ನಲ್ ಮೆಕೆನ್‌ಜಿ ಸಂಗ್ರಹಿಸಿರುವ ಕನ್ನಡ ಕೈಫಿಯತ್ತುಗಳ ಅಕಾರಾದಿ ಪಟ್ಟಿಯನ್ನು ಮದರಾಸು ಸರ್ಕಾರದ ಪ್ರಾಚ್ಯವಿದ್ಯಾ ಪುಸ್ತಕಭಂಡಾರದವರು ಬಲು ಹಿಂದೆಯೇ ಪ್ರಕಟಿಸಿರುತ್ತಾರೆ.

(An Alphabetical Index of Kannada Mss. Mackenzie's Collection, The Govt. Oriental Mss. Library, Madras)

ಚಿತ್ರದುರ್ಗದ ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿಯವರು ಇತ್ತೀಚೆಗೆ ಪ್ರಕಟಿಸಿರುವ 'ಚಂದ್ರವಳ್ಳಿ' ಎಂಬ ಲೇಖನ ಸಂಗ್ರಹದಲ್ಲಿರುವ 'ನಾಯಕನ ಜಟ್ಟಿ ಬಖೈರ್' (ಸಂ. ಎಂ. ಎಸ್. ಪ್ರಭಾಕರ್), 'ಜರಿಮಲೆ ಸಂಸ್ಥಾನದ ವಂಶಾವಳಿ' (ಸಂ. ಲಕ್ಷ್ಮಣ್ ತೆಲಗಾವಿ) ಮತ್ತು 'ಚಿತ್ರದುರ್ಗದ ದಫೇದಾರ್ ಬಸಪ್ಪನ ವಂಶಾವಳಿ' (ಸಂ. ತಿಪ್ಪೇಸ್ವಾಮಿ) ಎಂಬವು ಗಮನಾರ್ಹವಾದುವು.

ಚಿತ್ರದುರ್ಗದ ಪಾಳೆಯಗಾರರನ್ನು ಕುರಿತು ಪುಸ್ತಕ ಬರೆದಿರುವ ಎಂ. ಎಸ್. ಪುಟ್ಟಣ್ಣನವರು, ಈ ತೆರನಾದ ದಾಖಲೆಗಳನ್ನು ಉಚಿತವರಿತು ತಮ್ಮ ಪುಸ್ತಕದಲ್ಲಿ ಬಳಸಿಕೊಂಡಿರುವುದನ್ನು ಪೀಠಿಕೆಯಲ್ಲಿ ವ್ಯಕ್ತಪಡಿಸಿರುತ್ತಾರೆ. (ಚಿತ್ರದುರ್ಗದ ಪಾಳೆಯಗಾರರು, ೧೯೨೪, ಪು. ೪). ಇದೇ ಲೇಖಕರು ಬರೆದಿರುವ 'ಪಾಳೆಯಗಾರರು' (೧೯೨೩), 'ಗುಮ್ಮನಾಯಕನ ಪಾಳೆಯದ ಪಾಳೆಯಗಾರರು' (೧೯೩೬) ಎಂಬ ಇತರ ಕೃತಿಗಳಲ್ಲಿಯೂ ಈ ತೆರನಾದ ಸ್ಥಳೀಯ ದಾಖಲೆಗಳಿಂದ ಅವರು ಎಷ್ಟು ಉಪಕೃತರಾಗಿರುವರೆಂಬುದನ್ನು ಆಯಾ ಗ್ರಂಥಗಳನ್ನು ಓದಿದರೆ ಸ್ಪಷ್ಟವಾಗುವುದು.

ಈಗ ತಿಳಿದುಬಂದಿರುವಮಟ್ಟಿಗೆ ಹೈದರನ ಕಾಲದಿಂದಲೂ ಈ ತೆರನಾದ ಬರಹಗಳು ಸಿಕ್ಕುತ್ತವೆಯೆಂದ ಬಳಿಕ, ಈ ಕ್ಷೇತ್ರದಲ್ಲಿ ಸಂಗ್ರಹ ಕಾರ್ಯವನ್ನು ಕೈಕೊಂಡರೆ ಇನ್ನೂ ಅಪೂರ್ವವಾದ ರಚನೆಗಳು ದೊರಕಬಹುದು. ಕನ್ನಡದಲ್ಲಿ ಈ ವರೆಗೆ ಲಭಿಸಿರುವ ಕೈಫಿಯತ್ತುಗಳ ಸ್ವರೂಪವನ್ನು ಪರಿಶೀಲಿಸಿದಾಗ ಇವುಗಳನ್ನು ನಾನಾ ದೃಷ್ಟಿಗಳಿಂದ ವ್ಯಾಸಂಗಮಾಡಬಹುದೆಂದು ಹೇಳಬಹುದು. ಆಯಾ ಬರಹದಲ್ಲಿ ಅಡಕವಾಗಿರುವ ಐತಿಹ್ಯ ಮತ್ತು ಐತಿಹಾಸಿಕ ಸಂಗತಿಗಳನ್ನು ಹೆಕ್ಕಿ ಆಯುವುದು ಬಹಳ ಮುಖ್ಯವಾದ ಕೆಲಸ. ಇವುಗಳೆಲ್ಲವೂ ಬಹುಮಟ್ಟಿಗೆ ಗದ್ಯದಲ್ಲಿಯೇ ಲಿಖಿತವಾಗಿರುವುದರಿಂದ ಈ ಗದ್ಯದ ಶೈಲಿಯ ವೈಶಿಷ್ಟ್ಯಗಳನ್ನು ಕುರಿತು ವಿಶ್ಲೇಷಿಸಬಹುದು. ಈ ನಿರೂಪಣೆಯಲ್ಲಿ ಆ ದಿನಗಳಲ್ಲಿ ಬಳಕೆಯಲ್ಲಿದ್ದ ಆಡಳಿತಕ್ಕೆ ಸಂಬಂಧಿಸಿದ ಹಲವಾರು ಪಾರಿಭಾಷಿಕ ಶಬ್ದಗಳು ತಿಳಿದುಬರುತ್ತವೆ. ಇವುಗಳಲ್ಲಿ ಬಹುಪಾಲು ಉರ್ದು ಶಬ್ದಗಳಾಗಿರುವುದನ್ನು ಲಕ್ಷಿಸಬೇಕಾದ ಸಂಗತಿ. ಇವುಗಳಲ್ಲದೆ, ಕೋಟೆ ಕೊತ್ತಲಗಳ ನಿರ್ಮಾಣ, ಅಂದಿನ ರಾಜಸಭೆಯ ವೈಭವ ವೈಖರಿಗಳು, ರಾಜಕಾರ್ಯ ಪ್ರಸಂಗಗಳು, ಸಮರಗಳ ನಿಡಿದಾದ ವಿವರಣೆಗಳು, ವಿದಿತವಾಗುತ್ತವೆ. ಕರ್ನಲ್ ಮೆರ್ಕೆಂಜಿಯ ಸಂಗ್ರಹದಲ್ಲಿರುವ ಕೈಫಿಯತ್ತುಗಳು ಸಂಸ್ಕೃತಿಯ ದೃಷ್ಟಿಯಿಂದಲೂ ಅಭ್ಯಾಸಾರ್ಹವಾಗಿವೆ. ಜಾತಿ, ಮತ, ಕುಲಗಳ ಕಟ್ಟಳೆಗಳು, ಮಠಾಧಿಪತಿಗಳ ಹಿರಿಮೆ ಗರಿಮೆಗಳು, ಸ್ಥಳದ ಐತಿಹ್ಯಗಳು, ರಾಜಾಧಿರಾಜರ ಸಂಗತಿಗಳು, ಪ್ರಮುಖ ಪುರುಷರ ಕಥಾನಕಗಳು ಇವೇ ಮೊದಲಾದವು ತಿಳಿದುಬರುತ್ತವೆ. ಈ ಕೈಫಿಯತ್ತುಗಳನ್ನು ಸಾಹಿತ್ಯ ಮತ್ತು ಭಾಷೆಗಳ ದೃಷ್ಟಿಯಿಂದ ಅಧ್ಯಯನಮಾಡಿದ್ದೇ

ಆದರೆ ಸಾಕಷ್ಟು ಸಾರಸ್ಯವಾಗಿರುತ್ತದೆ. ಇತಿಹಾಸಜ್ಞರು ಇಲ್ಲಿನ ಘಟನೆಗಳ ಸತ್ಯಾಂಶಗಳನ್ನು ವಿಶ್ಲೇಷಿಸುವುದರ ಮೂಲಕ, ನಮ್ಮ ನಾಡಿನ ಚರಿತ್ರೆಯನ್ನು ಬರೆಯುವಲ್ಲಿ ತಮ್ಮ ನಿರ್ಣಯವನ್ನು ಬಳಸಿಕೊಳ್ಳಬಹುದು. ಈ ರಚನೆಗಳನ್ನು ವ್ಯವಸ್ಥಿತವಾಗಿ ವ್ಯಾಸಂಗಮಾಡುವ ಕಾರ್ಯವನ್ನು, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಡಾ|| ಎಂ. ಎಂ. ಕಲ್ಬುರ್ಗಿ ಅವರು ಕೈಕೊಂಡಿರುವುದು ಆಶಾದಾಯಕವಾದ ಸಂಗತಿ. ಸದ್ಯಕ್ಕೆ ಕೆಲವು ಕೈಫಿಯತ್ತುಗಳನ್ನು ಮಾತ್ರವೇ ಗಮನದಲ್ಲಿಟ್ಟುಕೊಂಡು, ಅವುಗಳ ಮಹತ್ವವೇನೆಂಬುದನ್ನು ಇಲ್ಲಿ ಸಂಗ್ರಹವಾಗಿ ಸಮಾಲೋಚಿಸಲಾಗಿದೆ.

ಕರ್ನಲ್ ಮೆರ್ಕೆಂಜಿಯವರ ಸಂಗ್ರಹದಲ್ಲಿ ಸ್ಥಳಪುರಾಣಕ್ಕೆ ಸಂಬಂಧಿಸಿದಂತೆ ಅನೇಕ ಕೈಫಿಯತ್ತುಗಳಿವೆ. ಆಯಾ ಸ್ಥಳದ ಅಳತೆಯ ಕೆಲಸ ಮುಗಿದ ಬಳಿಕ, ಅವರು ಅಲ್ಲಿನ ಸ್ಥಳವಂದಿಗರ ಮೂಲ ಇಂಥ ಮಾಹಿತಿಯನ್ನು ಬರೆಸುತ್ತಿದ್ದರೆಂದು ತೋರುತ್ತದೆ. ಕುಮಾರರಾಮನನ್ನು ಕುರಿತ ಒಂದು ಕೈಫಿಯತ್ತಿನ ಕಡೆಯಲ್ಲಿ "ಯಿ ಪ್ರಕಾರ ಕೈಫಿಯತ್ತು ಬರಸಿದವರ ಭಟ್ಟರ ಹೆಸರು ೧ ಕಾಟಪ್ಪ ೧ ಹೊಸಪುರಪ್ಪ ೧ ನರಸಪ್ಪ ೧ ರಾಮಯ್ಯ|| ಬ. ತಾರೀಖು ೧೭ ಅಕಟೆಂಬರು ೧೮೦೯ನೇ ಸಂವತ್ಸರ ಬರಸ್ತೂರು ನಾರಾಯಣರಾವು ಮುತ್ಸದ್ದಿ ಮುತ್ತೈನು ಮೆಸ್ತರ್ ವಾರ್ಡು ಸಾಹೇಬ ಕರವಿಯವರ ಅಶಿಷ್ಟೆಂಟು ಯಿಲಾಖಾ ಮೇಜರ್ ಕಾರ್ಲ್ ಮೆಕ್ಕಂಜೀ ಸಾಹೇಬರು" ಎಂದಿದೆ. (D. 1798, ಭಟ್ಟರ ಹಳ್ಳಿಯ ಕೈಫಿಯತ್ತು—ಕುಮಾರರಾಮನ ಕಥೆ–ಪುಟ ೧೭೯)

ಕುಮಾರರಾಮನ ಕಥೆಯಲ್ಲಿ ಉಕ್ತವಾಗಿರುವ ಎಷ್ಟೋ ಸ್ಥಳಗಳನ್ನು ಗುರುತಿಸಲು ವಿದ್ವಾಂಸರು ಬಹಳ ಪ್ರಯಾಸಪಡಬೇಕಾಯಿತು. ಕುಮಾರರಾಮನ ಕಥೆ ಪ್ರಚಲಿತವಾಗಿರುವ ಕೆಲವು ಸ್ಥಳಗಳ ಕೈಫಿಯತ್ತುಗಳನ್ನು ಒಮ್ಮೆ ಪರಿಶೀಲಿಸಿದ್ದರೆ ಈ ವಿದ್ವಾಂಸರ ಶ್ರಮ ಬಹುಮಟ್ಟಿಗೆ ಕಡಿಮೆಯಾಗುತ್ತಿತ್ತು. ಕುಮ್ಮಟದ ಬಗ್ಗೆ ನಡೆದಿರುವ ಚರ್ಚೆಯನ್ನು ಕಂಡರೆ ಯಾರಿಗಾದರೂ ಬೆರಗಾಗದಿರದು (ನೋಡಿ: 'ಕುಮಾರರಾಮನ ಸಾಂಗತ್ಯಗಳು' : ಜಿ. ವರದರಾಜರಾವ್ : ಪು. ೨೭೦–೨೭೧) ಹೀಗೆಯೇ ಸಂಡೂರಿನ ಸಮೀಪದಲ್ಲಿರುವ ಹೊಸಮಲೆ ದುರ್ಗವನ್ನು ಖಚಿತವಾಗಿ ಗುರುತಿಸುವುದೂ ಸಹ ಬಹು ಪ್ರಯಾಸವೆನ್ನಿಸಿತ್ತು. ಕರ್ನಲ್ ಮೆರ್ಕೆಂಜಿಯವರ ಸಂಗ್ರಹದಲ್ಲಿರುವ ಸಂಡೂರಿನ ಕೈಫಿಯತ್ತನ್ನು ನೋಡಿದ್ದರೆ ಈ ಐತಿಹಾಸಿಕ ಸ್ಥಳದ ಪೂರ್ವಚರಿತ್ರೆಯೆಲ್ಲ ಸ್ವತಃ ವಿಶದವಾಗುತ್ತಿತ್ತು. ಸುಮಾರು ಮೂವತ್ತೊಂದು ಪುಟಗಳಷ್ಟು ವಿಸ್ತೃತವಾಗಿರುವ ಈ ಕೈಫಿಯತ್ತಿನಲ್ಲಿ (M. 110, pp. 75–105) ಹೊಸಮಲೆ ದುರ್ಗಕ್ಕೆ ಸಂಬಂಧಿಸಿದ ಸಂಗತಿ ಇಂತಿದೆ:

" ತರುವಾಯ ಕುಮಾರರಾಮನು ವಂದಾನವಂದು ದಿವಸ ಬೇಟೆನಾಡಿ ಕೊಳುತ್ತಾ ಹೋಗಲಾಗಿ ಕುಮಾರ ಕ್ಷೇತ್ರಕ್ಕೆ ಪಶ್ಚಿಮ ಭಾಗದಲ್ಲಿ ಮೂರು ಹರದಾರಿ

ಮೇಲೆ ಹೊಸಮಲೆ ದುರ್ಗವನ್ನು ನೋಡಿ ಅಲ್ಲಿರುವಂಥಾ ದೇವತೆಗಳು(ಳನ್ನು?) ಕಂಡು ನಾವು ಯಿರಲಿಕ್ಕೆ ಯೋಗ್ಯವಾಗಿಸೆಯೆಂದು ಪ್ರಧಾನಿ ಬೈಚಪ್ಪನ ಕರದೂ 'ಯಿಾ ದುರ್ಗವನ್ನು ಕೋಟಿ ಕೊತ್ತಳ ಹುಲಿಮುಖ ಆಳವೇರಿ ಖಂವಕ ಮೊದಲು ಮಾಡಿ ಕೋಟೆ ನಿರ್ಮಾಣಮಾಡು' ಯಂದು ಹೇಳಿ ಮಾಡಿಸಿದನು (ಪು. ೮೧) ಆ ಪರ್ವತಕ್ಕೆ ರಾಮನ ಬೆಟ್ಟ ಯಂಬು ಹೆಸರು. ಹೊಸತಾಗಿ ಕೊಮಾರರಾಮನು ಕಟ್ಟಿಸಿದರಿಂದ್ದಾ ಹೊಸಮಲೆದುರ್ಗ ಯಂದು ಜನರು ಆಡುತ್ತಾ ಯಿಧಾರೆ" ಪು. ೮೧) (ಹಸ್ತಪ್ರತಿಯಲ್ಲಿ ಹಲವಾರು ಲಿಪಿ ಸ್ಖಾಲಿತ್ಯಗಳವೆ.)

ಈ ರೀತಿ ಹೊಸಮಲೆದುರ್ಗದ ಬಗ್ಗೆ ಖಚಿತವಾದ ಮಾಹಿತಿ ದೊರೆಯುವುದಲ್ಲದೆ, ಅವರ ಅಕ್ಕಪಕ್ಕಗಳಲ್ಲಿರುವ ಇತರ ಪ್ರದೇಶಗಳ ಹಸರುಗಳೂ ಉಲ್ಲೇಖವಾಗಿವೆ. "ಈ ಪರ್ವತಕ್ಕೆ ಪೂರ್ವಭಾಗದಲ್ಲೂ ಸೊಂಡೂರು ಗ್ರಾಮ" (೮೧a) ಎಂಬ ಮುಖ್ಯಾಂಶವೂ ಇವೆ. ಸಂಡೂರಿನಲ್ಲಿ ಇಂದಿಗೂ ಹೆಸರುವಾಸಿಯಾದ ಪವಿತ್ರ ಕ್ಷೇತ್ರವಾದ ಕುಮಾರಸ್ವಾಮಿಯ ಬೆಟ್ಟ ಒಂದು ಕಡೆ ಕಂಡುಬಂದರೆ, ಇನ್ನೊಂದು ಕಡೆ 'ರಾಮಘಡ್' ಎಂಬ ಹೆಸರಿನ ಹೊಸಮಲೆದುರ್ಗವೂ ಇದೆ. ಕುಮಾರರಾಮನನ್ನು ಕುರಿತ ವಿಸ್ತೃತವಾದ ಒಂದು ಶಿಲಾಶಾಸನವೂ ಇಲ್ಲಿಯೇ ಗೋಚರವಾಗುವುದು ಬಹಳ ಮುಖ್ಯವಾದ ಸಂಗತಿ. ಈ ಸುತ್ತಮುತ್ತಲಿನ ಯಾವ ಸ್ಥಳದ ಕೈಫಿಯತ್ತನ್ನೇ ತೆಗೆದುಕೊಂಡರೂ, ಆ ಎಡೆಯ ಐತಿಹ್ಯದೊಂದಿಗೆ ಕುಮಾರರಾಮನ ಕಥೆಯೂ ಹಾಸುಹೊಕ್ಕಾಗಿ ಹೆಣೆದುಕೊಂಡು ಬರುತ್ತದೆ.

ಕೆಲವು ಕೈಫಿಯತ್ತುಗಳು ಸಮಕಾಲೀನ ಲಿಖಿತಗಳಾಗಿರುವುದರಿಂದ, ಅವುಗಳಲ್ಲಿ ಉಲ್ಲೆಖಿತವಾಗಿರುವ ಕೆಲವು ಸಂಗತಿಗಳಾದರೂ ನಮ್ಮ ಚರಿತ್ರಕಾರರಿಗೆ ವಿಶ್ವಸನೀಯವಾದ ಸಾಕ್ಷ್ಯವಾಗಬಲ್ಲುವು. ವಿಜಯನಗರದ ಅಂತಿಮ ಯುದ್ಧವು ನಡೆದದ್ದು ತಾಳೀಕೋಟೆಯಲ್ಲಿ ಅಲ್ಲವೆಂದೂ, ಆ ಪ್ರದೇಶದ ಹೆಸರು ರಾಕ್ಷಸತಂಗಡಿ ಎಂದೂ ಇತಿಹಾಸಜ್ಞರು ಈಗ ನಿರ್ಣಯಿಸಿರುವರಷ್ಟೆ. ಈ ರೀತಿ ಭ್ರಮೆಯುಂಟಾಗಲು ಕಾರಣವೇನೆಂಬುದನ್ನು 'ರಾಮರಾಯನ ಬಖೈರು' ಎಂಬಲ್ಲಿ ದೊರೆಯುವ ವಿವರಣೆಯಿಂದ ತಿಳಿಯಬಹುದು.

> "ಇತ್ತಲಾಗಿ ರಾಜಭೂವರರು (ರಾಮರಾಜ) ಸಕಲ ಸೈನ್ಯ ಸಮೇತನಾಗಿ **ರಾಕ್ಷಸ ತಂಗಡಿಯ** ಬಳಿಯ ಮೈದಾನದಲ್ಲಿ ಇಳಿದು ಅಲ್ಲಿ ರಣಗಂಟೆಗಳನ್ನು ಹೊಡೆಸಿ **ರಣಸ್ತಂಭ**ವನ್ನು ಕಟ್ಟಿಸಿದರು. ರಣಸ್ತಂಭದ ಬಳಿ ಸೈನ್ಯವ್ಯೂಹಗಳು ಸಿದ್ಧವಾದುವು. ಶತ್ರು ಸೈನ್ಯವು ಬಂತು, ಯುದ್ಧವು ಮೊದಲಾಯಿತು. ಹೀಗೆ ೨೭ ದಿವಸಗಳು ಲಡಾಯಿ ಆಯಿತು. ಮಹಮ್ಮದೀಯರೂ ಪಠಾಣರೂ, ರಾಜಪುತ್ರರೂ, ಮರಾಠೆಯವರೂ ಮೊದಲಾದ ಸಮಸ್ತರೂ **ತಾಳೀಕೋಟೆ** ನಾಲ್ವತ್ತು ವಾಡೆಗಳ ಮಧ್ಯದಲ್ಲಿ ಇಳಿದರು.

ಈ ಯುದ್ಧದಲ್ಲಿ ಉಭಯಪಕ್ಷದವರೂ ಚೆನ್ನಾಗಿ ಯುದ್ಧಮಾಡಿದರು ; ಬಹು ಮಂದಿ ಸತ್ತರು, ಅನೇಕರು ಗಾಯ ಹೊಂದಿದರು. ಕಡೆಯ ದಿನ ಪ್ರಾತಃಕಾಲ ಮೊದಲ್ಗೊಂಡು ರಾತ್ರಿ ಒಂಬತ್ತು ತಾಸುವರೆಗೆ ಹೋರಾಡಿದರು..." (ಚಾರಿತ್ರಿಕ ದಾಖಲೆಗಳು, ಪು. ೧೭)

ಮೇಲ್ಕಂಡ ಹೇಳಿಕೆಯ ಮೂಲಕ ರಾಕ್ಷಸತಂಗಡಿ ಮತ್ತು ತಾಳಿಕೋಟೆಗಳು ಬೇರೆ ಬೇರೆ ಪ್ರದೇಶಗಳೆನ್ನುವುದು ಸ್ಪಷ್ಟವಾಗುತ್ತದೆ. ಮೊದಲನೆಯದು ವಿಜಯನಗರದವರ ಬೀಡುದಾಣವಾದರೆ, ಎರಡನೆಯದು ಮುಸಲ್ಮಾನರ ಬೀಡುದಾಣವಾಗುತ್ತದೆ. ರಣಸ್ತಂಭವನ್ನು ರಾಕ್ಷಸತಂಗಡಿಯಲ್ಲಿ ನೆಟ್ಟಿದ್ದರೆಂಬ ಉಲ್ಲೇಖ ಬಹಳ ಮುಖ್ಯವಾದುದು. ಈ ಅಂಶಗಳು ಎಷ್ಟರಮಟ್ಟಿಗೆ ಇತರ ಐತಿಹಾಸಿಕ ಸಾಕ್ಷ್ಯಗಳಿಗೆ ಅನುಸಾರವಾಗಿವೆ ಎನ್ನುವುದನ್ನು ಒರೆಯಿಟ್ಟು ನೋಡಬೇಕಾದುದು ಚರಿತ್ರಕಾರರ ಕರ್ತವ್ಯ. 'ರಾಮರಾಯನ ಬಖೈರ್'ನ್ನು ಪರಿಶೀಲಿಸುತ್ತ, ತಿರುಮಲೆ ತಾತಾಚಾರ್ಯಶರ್ಮರು, ರಾಮರಾಯನು ಯುದ್ಧಕ್ಕೆ ಹೊರಟಾಗ ಆತನ ತಾಯಿ ಬದುಕಿದ್ದಳೆಂಬ ವೃತ್ತಾಂತವೂ, ಬಿಜಾಪುರದ ಅದಿಲ್‌ಷಾ ರಾಮರಾಯನೆಂಬ ಮಗನೆಂಬ ವಿಚಾರವೂ ಹೊಸ ಸಂಗತಿಗಳೆಂದು ಅಭಿಪ್ರಾಯಪಡುವರು. ಇವುಗಳ ಸತ್ಯಾಂಶವೇನೆಂಬುವನ್ನು ಇತರ ಸಾಕ್ಷ್ಯಾಧಾರಗಳಿಂದ ಸಮಾಲೋಚಿಸತಕ್ಕದು. ('ಚಾರಿತ್ರಿಕ ದಾಖಲೆಗಳು', ಸಂಪಾದಕರ ಮಾತು, ಪುಟ VIII)

'ಹೈದರ್‌ನಾಮಾ', 'ರಾಜೇಂದ್ರನಾಮಾ' ಎಂಬ ಎರಡು ಕೈಫಿಯತ್ತುಗಳೂ ಸಾಕಷ್ಟು ದೀರ್ಘವಾಗಿವೆ. ಅನೇಕ ಐತಿಹಾಸಿಕ ಅಂಶಗಳು ಈ ಮೂಲಕ ಬೆಳಕಿಗೆ ಬರುವುದರಲ್ಲಿ ಸಂಶಯವಿಲ್ಲ. ಇತಿಹಾಸಜ್ಞರು ಇವುಗಳನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಇವುಗಳ ಐತಿಹಾಸಿಕ ಮೌಲ್ಯವೇನೆಂಬುದನ್ನು ನಿರ್ಣಯಿಸಬೇಕಾದುದು ಅಗತ್ಯ. 'ಹೈದರ್‌ನಾಮಾ'ವನ್ನು ಬರೆದ ನಲ್ಲಪ್ಪನ ಬಗ್ಗೆ ಡಾ. ಎಂ. ಎಚ್. ಕೃಷ್ಣ ಅವರು ಬಹಳ ಪ್ರಶಂಸಾತ್ಮಕವಾದ ಮಾತುಗಳನ್ನು ಆಡಿರುತ್ತಾರೆ. "ಆತನು ಸೈಜವಾಗಿ ಒಬ್ಬ ಚರಿತ್ರಕಾರನೇ ಹೊರತು, ಕೇವಲ ಯಾವ ದೃಷ್ಟಿಯಿಂದಲೂ ಅಪ್ರಾಮಾಣಿಕನಲ್ಲ ಅಥವಾ ಹೊಗಳುಭಟ್ಟನೂ ಅಲ್ಲ. ಸದ್ಯದಲ್ಲಿ ಹೈದರನ ಶತ್ರುಗಳಾಗಲಿ, ಇಲ್ಲವೇ ಆತನ ಮುಸಲ್ಮಾನ ಅಧಿಕಾರಿಗಳೇ ಆಗಲಿ ಬರೆದ ಆತನ ಜೀವನದ ಪ್ರಕೃತ ಸಂಗತಿಗಳನ್ನು ಒರೆಯಿಟ್ಟು ನೋಡಲು ಇದು ಸಹಾಯಕವಾಗಬಲ್ಲದು" ಎಂದು ಹೃತ್ಪೂರ್ವಕವಾಗಿ ಮೆಚ್ಚಿಕೊಂಡಿರುತ್ತಾರೆ. (MAR, 1930)

ಸಮಕಾಲೀನವಾದ ಈ ಲಿಖಿತಗಳಲ್ಲಿ ಇತಿಹಾಸದಲ್ಲಿ ನಾವು ನಿರೀಕ್ಷಿಸಲಾಗದ ಹಲವಾರು ವಿವರಗಳು ದೊರೆಯುತ್ತವೆ. ಚಿತ್ರದುರ್ಗದ ಮದಕರಿ ನಾಯ್ಕನ ದರ್ಬಾರಿನ ವೈಭವವೇನೆಂಬುವನ್ನು ಚಿತ್ರದುರ್ಗದ ಬಖೈರಿನಲ್ಲಿ ಹೀಗೆ ವಿವರಿಸಿವೆ ;

"ಬೆಳಗ್ಗೆ ಎದ್ದು ಸ್ನಾನಮಾಡಿ ಭಗವದಾರಾಧನೆಮಾಡಿ, ಭೋಜನ ಮಾಡಿ ಐದು ಘಳಿಗೆ ದರಬಾರಿಗೆ ಬಂದು, ಮದಕರಿ ನಾಯ್ಕರು ಸಿಂಹಾಸನಾರೂಢರಾದರು. ಮಹಾರಾಜಾ ರಾಜಾಸಾಹೇಬರಿಗೆ ಶ್ವೇತಛತ್ರ ಹಿಡಿದು ಇದ್ದಾರೆ. ಮೊಹರ್ ಚಲ್ಲು ಹಾಕುತ್ತಾರೆ. ದೋತರಫಿನಲ್ಲಿ ಸಮಘೇರು ಹಿಡಿದು ಇದ್ದಾರೆ. ಧನುರ್ಬಾಣ, ಗಂಡುಗೊಡಲಿ ವಗ್ಯೆರೆ ಆಯುಧ ಹಿಡಿದು ಇದ್ದಾರೆ. ಎಂಟು ಜನ ಭಟ್ಟರು "ಮಹಾರಾಜಾ! ರಾಜಾಧಿರಾಜ! ಜೀಯ್ಯಾ! ಜೀಯ್ಯಾ!" ಎಂದು ಭಟ್ಟಂಗಿ ಮಾಡುತ್ತಾರೆ. ನಕೀಬು ಚೋಪದಾರರು 'ಗರೀಬ್ ಪರವಾನಿಗಾ' ಎಂದು ಕೇಕು ಹೊಡೆಯುತ್ತಾರೆ. ಹೀಗೆ ಸಭಾಮಧ್ಯೆ ಕೂತಿರುವಾಗ್ಗೆ, ಅಣ್ಣ ಪರಶುರಾಮಪ್ಪನಾಯಕ ಅರ್ಧಾಸನದ ಮೇಲೆ, ಸಾಹೇಬ್‌ಜಾದೆ ಭರಮಪ್ಪನಾಯಕ ಬಂದಿದ್ದು ಎದುರಿಗೆ ಕುಳಿತುಕೊಂಡರು. ಅಳಿಯ ಹುಚ್ಚಪ್ಪನಾಯಕನು ಸಾಹೇಬ್‌ಜಾದೇರ ಬಳಿ ಕುಳಿತು ಚುಲ್ತಿ ಭಾವು ದೊಡ್ಡ ಮದಕರಿನಾಯಕರು ಸಹ..... ಪಾಳೆಯಗಾರರು ಹಟ್ಟಿ ಮಲ್ಲಪ್ಪನಾಯಕ, ಜರಮಲೆ ಬೊಮ್ಮಣ್ಣನಾಯಕ ಈ ರಾಜರುಗಳು ಕಫಾವಾತದಿಂದ ಎದುರಿಗೆ ಕುಳಿತುಕೊಂಡರು. ಮನ್ಸಬಾದಾರರು ಸರ್ವೋತ್ತಮರಾಯರು, ನೀಲಕಂಠರಾಯರು ಬರಾಬರೀ ಬಾಜಿನಲ್ಲಿ ಕುಳಿತರು." (ಪು. ೧೦–೧೧)

ಈವರೆಗೆ ಕೈಫಿಯತ್ತುಗಳಲ್ಲಿ ಅಡಕವಾಗಿರುವ ವಿಷಯದ ಮಹತ್ವ, ವಿಷಯ ನಿರೂಪಣೆಯಲ್ಲಿನ ವಿವರಗಳನ್ನು ಕುರಿತು ಪರಿಚಯ ಮಾಡಿಕೊಂಡೆವು. ಈ ಮುಂದೆ ಈ ಕೈಫಿಯತ್ತುಗಳಲ್ಲಿ ಬಳಸಿರುವ ಭಾಷೆ ಮತ್ತು ಅವರ ಸ್ವರೂಪವನ್ನು ಕುರಿತು ಪರಿಶೀಲಿಸಿದೆ.

ಕೈಫಿಯತ್ತುಗಳಲ್ಲಿ ಬಳಸಿರುವ ಕನ್ನಡ ಗದ್ಯ ಬಹುಮಟ್ಟಿಗೆ ದೀರ್ಘ ವಾಕ್ಯಗಳಿಂದ ಕೂಡಿದುದಾಗಿರುತ್ತದೆ, ಅಲ್ಲದೆ, ಆಗಿನ ಕಾಲದ ಆಡಳಿತದಲ್ಲಿ ಬಳಕೆಯಲ್ಲಿದ್ದ ಉರ್ದು ಇಲ್ಲದೇ ಅರಬ್ಬೀ ಮೊದಲಾದ ಭಾಷೆಗಳ ಪಾರಿಭಾಷಿಕ ಶಬ್ದಗಳು ಕಂಡು ಬರುತ್ತವೆ. ಇತ್ತೀಚೆಗೆ ಲಿಖಿತವಾದ ಕೈಫಿಯತ್ತುಗಳಲ್ಲಿ ಇಂಗ್ಲಿಷ್ ಶಬ್ದಗಳ ವಿರೂಪಗಳೂ ತೋರಿಬರಬಹುದು. ಕೆಲವು ಸನ್ನಿವೇಶಗಳನ್ನು ವರ್ಣಿಸುವಲ್ಲಿ ನಮಗೆ ಈಗ ಅಪರಿಚಿತವಾಗಿರುವ ದೇಶ್ಯ ಶಬ್ದಗಳೂ ಸಹ ಇರುವುದುಂಟು.

ಹೈದರನಿಗೆ ಬೆನ್ನುಘಣಿ ಬಂದ ಸಂಗತಿಯನ್ನು ವಿವರಿಸುವ 'ಹೈದರ್‌ನಾಮೆ' ಯಲ್ಲಿನ ಈ ಕೆಳಗಿನ ವಾಕ್ಯ ಒಂದು ವಾಕ್ಯಖಂಡವೇ (Paragraph) ಆಗಿದೆ :

"ಸದರ ಹೂ ಶಕೆ. ೧೭೦೪ನೇ ಶುಭಕೃತು ಸಂವತ್ಸರದ ಕಾರ್ತೀಕ ಬಹುಳದಲ್ಲು ನವಾಬರಿಗೆ ಬೆಂನಮ್ಯಾಲೆ ಬೆಂನ್ನುಘಣೆ ಅರಸು ಹುಂಣ್ಣು ಯದ್ದು ಬಹಳ ವುಪದ್ರವಾಗಿ ಕೇವಲಾ ನಿಸ್ತೂಕವಾದ್ದರಿಂದ್ದಾ ನವಾಬರು

ಮೃತರಾದ್ದರೆಂಬ ನಂಡಿನಲ್ಲಿ ಪ್ರಕಾರಾಗಿ ಜನರು ಆ ವರ್ತಮಾನಾ ತಿಳಿದು ನವಾಬರು ಹೊರಗೆ ಬಂದು ಮುಸಲಂದಿನ ಮ್ಯಾಲೆ ಕುಳಿತು ಫಉಜು ಸರದಾರರನ್ನು ಕರಶಿ ಸಲಾಂ ಮುಜರೆ ತೆಗೆದುಕೊಂಡು ಫೌಜು ಭಟವಾಡೆಗೆ ಹುಕುಂ ಕೊಟ್ಟು ಕೆಟ್ಟ ಶುದ್ದಿ ಹುಟ್ಟಿಶಿದ್ದ ನಾಲ್ಕು ಜನ ಹರಿಕಾರಂನ್ನು ಹಿಡಿತರಿಸಿ ಯಿಬ್ಬರನ್ನು ಆನೆಕಾಲಿಗೆ ಕಟಿಶಿ ಯಳಶಿ ಮತ್ತೆ ಯಿಬ್ಬರನ್ನ ತೋಫಿನ ಬಾಯಿಗೆ ಕಟಿಸಿ ಉಡಾಯಿಸಿ ದಾಖು ಹಾಕಿ ಯದ್ದು ವಳಗೆ ಹೋದರು.” (‘ಚಾರಿತ್ರಿಕ ದಾಖಲೆಗಳು’, ಪು. ೧೨೮)

ಯುದ್ಧ ಮೊದಲಾದುವುಗಳನ್ನು ವರ್ಣಿಸುವಲ್ಲಿ ಕೈಫಿಯತ್ತಿನ ಗದ್ಯ ಶೈಲಿ ಎಷ್ಟು ಪ್ರಭಾವಶಾಲಿಯಾಗಿರುತ್ತದೆ ಎನ್ನುವುದಕ್ಕೆ ‘ಚಿತ್ರದುರ್ಗದ ಬಖೈರು’ ಎಂಬ ಲಿಖಿತವಲ್ಲಿ ನಿರೂಪಿತವಾಗಿರುವ ಒಂದು ಸನ್ನಿವೇಶವನ್ನು ಇಲ್ಲಿ ಉದಾಹರಿಸಬಹುದು:

“....ಉತ್ತರ ಭಾಗದಲ್ಲಿ ಚಿತ್ರದುರ್ಗದ ರೋಖಿಗೆ ಬಾಕಿ ಫಿಜು, ಹುಜೂರು ತೋಫಖಾನೆ, ಜಂಜಾಯಿ ಬಾಣದಾರರು, ಬರಕಂದಾಜು ವಗೈರೆ ಪುರಭಯಾ ಜನರು ಧನಸಿಂಗ್ ವಗೈರೇರನ್ನು ಇಟ್ಟುಕೊಂಡು ಶ್ವೇತಛತ್ರಿ ಭಾಟ ಭಟ್ಟಂಗಿ ಮಾಡಿಸುತ್ತಾ **ಖುದ್ದು ರಾಜಾ ಸಾಹೇಬರು ನಿಂತಿರುವಾಗ್ಗೆ** ಗೋಲಂದಾಜಿಗೆ ಹುಕ್ಕುಂ ಆದದ್ದು. ತೋಫಿಗೆ ಬತ್ತಿ ಕೊಡು ಎಂದು ಹುಕುಂ ಆಗುತ್ತಲೂ ಮೂರು ಕಡೆ ತೋಫಿನ ಆವಾಜು ಆಯ್ತು. ಬಂದೂಕು ಏಕಕಾಲದಲ್ಲಿ ಆವಾಜು ಆಗುತ್ತಲೂ ಶಿಂಗ್ ಕಷ್ಟಿ ವಗೈರೆ ಶಬ್ದ ಆಯ್ತು. ಜನರೂನೂ ಕೇಕೆ ಹೊಡೆದರು. ಆ ಆವಾಜಿಗೆ ಭೂಕಂಪವಾಯ್ತು. ಪರ್ವತ ಪ್ರತಿಧ್ವನಿ ಕೊಟ್ಟಿತು. ಒಬ್ಬರ ಮಾತು ಒಬ್ಬರಿಗೆ ಕೇಳಿಸಲಿಲ್ಲ. ಘನ ಘರ್ಜನೆ ಆಯ್ತು. ಈ ಮೇರೆಗೆ ಅದ್ಭುತವಾದ್ದರಿಂದ ದರೋಖಸ್ತು ದನಗಳು ಘಾಬರಿ ಆಗಿ ರಸ್ತೆ ಹಿಡಿದು ಓಡಿ ಹೋದುವು. ದನಗಳ ಕಾಲ ಧೂಳು ಆಕಾಶ ವ್ಯಾಪಿಸಿತು”. (ಪು. ೨೭/೨೮)

ಈ ಕೈಫಿಯತ್ತುಗಳಲ್ಲಿ ಪ್ರಯೋಗವಾಗಿರುವ ಅನ್ಯದೇಶ್ಯ ಪದಗಳ ಅಧ್ಯಯನವೂ ತುಂಬ ಅಗತ್ಯವಾದದ್ದು. ಈ ಲಿಖಿತಗಳಲ್ಲಿ ಅರಬ್ಬಿ, ಫಾರ್ಸಿ, ಮತ್ತು ಉರ್ದು ಶಬ್ದಗಳು ಹೇರಳವಾಗಿ ಕಂಡುಬರುತ್ತವೆ. ಈ ಮೊದಲೇ ತಿಳಿಸಿದಂತೆ ಈಚಿನ ಬರಹಗಳಲ್ಲಿ ಆಂಗ್ಲ ಶಬ್ದಗಳೂ ಇವೆ. ನಿದರ್ಶನಾರ್ಥವಾಗಿ ಕೆಲವನ್ನು ಇಲ್ಲಿ ಆರಿಸಿಕೊಟ್ಟಿದೆ.

ಅರ್ಜು (ವಿನಂತಿ), ಅತ್ತರದಾನಿ (ಪನ್ನೀರುದಾನಿ), ಅಟಕಾವು (ಎದುರಿಸಿ ಯುದ್ಧ ಮಾಡು), ಅಲ್ಲಾ ಹುತ್ತಲ್ (ದೇವರ ಕೃಪೆಯಿಂದ), ಅವದಾನಿ (ಪೂರೈಕೆ), ಆದಬ್ (ಗೌರವ ಸಲ್ಲಿಸಿ), ಆಗಾಡಿ (ಅಸ್ತವ್ಯಸ್ತ), ಇಷಾರೆ (ಸೂಚನೆ), ಉಡಾಣೆ (ಹಾರಿಸು), ಏಕಾನಾಂ (ಬಿರುದು), ಐಬು (ದೋಷ),

ಕಬೂಲು (ಒಪ್ಪಿಗೆ), ಕಿಲ್ಲೆ (ಕೋಟೆ), ಕೂಚು (ಪ್ರಯಾಣ), ಕಂಪಣಿ (ಗುಲ್ಮ), ಖಾವಂದರು (ಮಹಾಸ್ವಾಮಿ), ಖಾಮೂಷ್ (ಮೌನ), ಖಾಜಿ (ಪುರೋಹಿತ), ಡೋಲಿ (ಯುದ್ಧ), ಗೋಲಂದಾಜು (ಗುಂಡು ಹೊಡೆಯುವವರು), ಛಾವಣಿ (ಸೈನ್ಯದ ಬೀಡು), ಜಮಾಯತು (ಸೈನ್ಯ), ಜಂಗ್ (ಯುದ್ಧ), ಢಾಲ್ (ಗುರಾಣಿ), ಡಂಕಾ (ನಗಾರಿ), ತಲವಾರ್ (ಕತ್ತಿ), ದರಖಾಸ್ತು (ಪ್ರಾರ್ಥನೆ), ನಾಮರ್ದ್ (ಕಾಪುರುಷ), ಪರವಾನೆ (ಪ್ರಾರ್ಥನೆ), ಫಿರ್ಕಾ (ವಿಭಾಗ), ಬುರುಗು (ವಾದ್ಯ), ಮಸ್ಸಲತೆ (ಆಲೋಚನೆ), ಮಷಾಲು (ಮಂಜು), ಮೆಹನತ್ತು (ಪ್ರಯತ್ನ), ರೋಖು (ದಿಕ್ಕು), ಲಡಾಯಿ (ಯುದ್ಧ), ಶಿಕಸ್ತಾ (ನಾಶ), ಷಾಹಜಾದೆ (ಯುವರಾಜ), ಸಫೇರಿ (ಬುರುಜು), ಹವೇಲಿ (ದೊಡ್ಡ ಮನೆ), ಕುಂಪನಿ (Company), ಕಮಿಷನ್ (Commission) ಕೆಪ್ಟನ್ (Captain), ಇಂಜನೇರು (Engineer) ಇಂಗ್ರೇಜು (English), ಕಲಂ (Column).

ಅಪರಿಚಿತವಾದ ಎಷ್ಟೋ ದೇಶ್ಯ ಶಬ್ದಗಳೂ, ಸಂಸ್ಕೃತದ ತದ್ಭವಗಳೂ ಇರುವುದುಂಟು:

ಗುರಿಕಾರ, ಓಲೆಕಾರ, ಗಾರೆಬಾಗಿಲು, ಹಡಲಿಗೆ, ದೀವಟಿಗೆ. ಉಲುಪೆ, ಉಂಬಳಿ, ಲಂಚ, ದಿಡ್ಡಿ ಬಾಗಿಲು, ದೇವಳ, ಸ್ಥಾನಪತಿ, ವಣೆ, ಬಿಜಮಾಡು, ದಳವಾಯಿ, ನಿಯೋಗಿ, ತುರಾಯಿ, ಕೊತಲಿ ಕುದುರೆ, ಅನುಪಾನ, ಸೀಡಿ, ಪರಗೆಯವರು, ರಣಗಾಡಿ, ಸೀಮುಗಂಟೆ, ಕಾಲುಂಗಾರೆಯವರು, ಪಂಡಾರಿಯವರು, ರಾಮಬಾಣ, ಕುಮಾರಬಾಣ, ಚಡಿವಾಣ, ರಾಮಚಂಗಿ, ರಣಗಂಟೆ, ವಾಡೆ, ತಪ್ಪಟೆ.

ಕನ್ನಡ ಕೈಫಿಯತ್ತುಗಳನ್ನು ಕುರಿತ ಈ ಲೇಖನ ಕೇವಲ ಪರಿಚಯಾತ್ಮಕವಾದ ಒಂದು ಬರಹವೇ ಹೊರತು ಶಾಸ್ತ್ರೀಯವಾದ ವ್ಯಾಸಂಗವಲ್ಲ. ಈವರೆಗೆ ಕಡೆಗಣಿಸಲಾಗಿರುವ ಇಂಥ ಲಿಖಿತಗಳನ್ನು ಕ್ಷೇತ್ರಕಾರ್ಯವನ್ನು (field work) ಕೈಕೊಂಡು ಸಾಕಷ್ಟು ಸಂಗ್ರಹಿಸಬೇಕು. ನಮ್ಮ ಇತಿಹಾಸಜ್ಞರು ಇವುಗಳನ್ನು ಅಧ್ಯಯನ ಮಾಡಿ, ಇಲ್ಲಿ ವ್ಯಕ್ತವಾಗಿರುವ ಸಂಗತಿಗಳ ಸತ್ಯಾಂಶಗಳೇನು ಎಂಬುವನ್ನು ಸಾಧಾರವಾಗಿ ನಿರ್ಣಯಿಸಬೇಕು. ಕನ್ನಡ ಭಾಷೆಯ ಸ್ವರೂಪವನ್ನು ಕುರಿತು ಭಾಷಾವಿಜ್ಞಾನಿಗಳು ಕೂಲಂಕಷವಾಗಿ ಸಂಶೋಧಿಸಿ ತಮ್ಮ ಅಭಿಪ್ರಾಯಗಳನ್ನು ತಿಳಿಯಹೇಳಬೇಕು. ಸಮಾಜ ಶಾಸ್ತ್ರಜ್ಞರು ಈ ಕೈಫಿಯತ್ತುಗಳಲ್ಲಿ ಉಕ್ತವಾಗಿರುವ ಆಚಾರ ವಿಚಾರಗಳು, ಜಾತಿಪಂಗಡಗಳು ಮತ್ತು ಪದ್ಧತಿಗಳು, ಅಂದು ಬಳಕೆಯಲ್ಲಿದ್ದ ಕಸಬು ಕಲೆಗಾರಿಕೆಗಳು ಮೊದಲಾದವುಗಳನ್ನು ಪರಿಶೀಲಿಸಿ ಪ್ರಕಟಿಸಬೇಕು.

ಈ ಲೇಖನಕ್ಕೆ ಪರಿಶಿಷ್ಟವಾಗಿ ಕೊಟ್ಟಿರುವ ಕರ್ನಲ್ ಮೆಕೆಂಜಿಯವರ ಸಂಗ್ರಹದಲ್ಲಿರುವ ಕೈಫಿಯತ್ತುಗಳ ವರ್ಗೀಕರಣದ ಪಟ್ಟಿಯನ್ನು ಅವಲೋಕಿಸಿದರೆ ಇವುಗಳ ಮಹತ್ವದ ಕಲ್ಪನೆ ಬರುತ್ತದೆ.

## ಪರಿಶಿಷ್ಟ

ಕರ್ನಲ್ ಮೆಕೆಂಜಿ ಅವರು ಸಂಗ್ರಹಿಸಿರುವ ಕನ್ನಡ ಕೈಫಿಯತ್ತುಗಳ ವರ್ಗೀಕರಣ. (ಆಯಾ ಕೈಫಿಯತ್ತಿನ ಎದುರಿಗೆ ಸೂಚಿಸಿರುವ ಸಂಖ್ಯೆಗಳು ಮದರಾಸು ಸರಕಾರದ ಪ್ರಾಚ್ಯ ಹಸ್ತಪ್ರತಿಗಳ ಭಂಡಾರದವರು ನಿರ್ದೇಶಿಸಿರುವ ಸಂಖ್ಯೆಗಳು.)

### 1.
### ಸ್ಥಳಗಳಿಗೆ ಸಂಬಂಧಪಟ್ಟವು



1. ಅಜ್ಜಂಪುರದ ಕೈಫಿಯತ್ತು (M.161)
2. ಅಜಿಲದ ಕೈಫಿಯತ್ತು (M.351)
3. ಅತ್ತಿಕುಪ್ಪೆ ಗ್ರಾಮದ ಕೈಫಿಯತ್ತು (M.161)
4. ಅಂತಾಪುರದ ಕೈಫಿಯತ್ತು (M.351)
5. ಅನಂತಪುರದ ಕೈಫಿಯತ್ತು (M.164)
6. ಅರಕೇರಿ ಕೈಫಿಯತ್ತು (M.334)
7. ಅರಿಕುಠಾರದ ಕೈಫಿಯತ್ತು (M.283)
8. ಅಷ್ಟಗ್ರಾಮದ ಕೈಫಿಯತ್ತು (M.168/D.1850)
9. ಆದವಾನಿ ಕಾಮಿಲು ಪರಗಣೆ ಕೈಫಿಯತ್ತು (M.117)
10. ಆದವಾನಿ ಕೋಸಗಿ ಕೈಫಿಯತ್ತು (M.123)
11. ಆನೆಕನ್ನಂಬಾಡಿಯ ಕೈಫಿಯತ್ತು (M.162)
12. ಇಡೂರು ಕುಣ್ಣ್ಯಾಡಿ ಕೈಫಿಯತ್ತು (M.353)
13. ಉಡಗಣಿ ಕೈಫಿಯತ್ತು (M.164)
14. ಎಳಾರೆ ಮಾಗಣಿ ಕೈಫಿಯತ್ತು (M.353)
15. ಕದಿರಿ ಮಾಗಣೆ ಕೈಫಿಯತ್ತು (D.1838/D.1866)
16. ಕಣ್ಣುಕುಪ್ಪೆ ಕೈಫಿಯತ್ತು (D.1850)
17. ಕಣ್ಣುಕುಪ್ಪೆ ಕೋಟೆ ಕೈಫಿಯತ್ತು (M.160/D.1865)
18. ಕದರಿ ಮಾಗಣೆ ಕೈಫಿಯತ್ತು (M.353)
19. ಕಂಪಲಿ ಕೈಫಿಯತ್ತು (M.146)
20. ಕಂಪಲಿ ಗುತ್ತಿ ಮುಂತಾದ ಕೈಫಿಯತ್ತು (D.1838/D.1866)

21. ಕಟ್ಟಿನಾಡು ಮಾಗಣೆ ಕೈಫಿಯತ್ತು (M.146)
22. ಕಾಯಲಾಪುರದ ಕೈಫಿಯತ್ತು (M.146)
23. ಕಾಪು ಮಾಗಣೆ ಕೈಫಿಯತ್ತು (D.1838/D.1866)
24. ಕಾಳತೋಡ ಮಾಗಣೆ ಕೈಫಿಯತ್ತು (D.1886/D.1838/M.353)
25. ಕಿರುಮಕೂಡಲು (?) ಕೈಫಿಯತ್ತು (1833)
26. ಕುಕ್ಕಸಮುದ್ರದ ಕೈಫಿಯತ್ತು (M.161/D.1828)
27. ಕುಂಜಾರು ಕೈಫಿಯತ್ತು (M.353/D.1866/D.1838)
28. ಕುಪ್ಪಡಿಗ್ರಾಮದ ಕೈಫಿಯತ್ತು (D.1838)
29. ಕುಂದಾಪುರದ ಕೈಫಿಯತ್ತು (M.353/D.1838/D.1866)
30. ಕುಂಭಕಾಸಿ ಕೈಫಿಯತ್ತು (D.1866/D.1838)
31. ಕುದುಗೋಡು ಕೈಫಿಯತ್ತು (M.150/M.369/D.1797/D1798)
32. ಕೆರೆಬೆಳಗಲ್ಲು ಕೈಫಿಯತ್ತು (M. 126)
33. ಕೊಲ್ಲೂರು ಉತ್ತರ ಮಾಗಣೆ ಕೈಫಿಯತ್ತು (M.353/D.1838/D1866)
34. ಗೇರುಸೊಪ್ಪೆಯ ಕೈಫಿಯತ್ತು (M.353)
35. ಗೋಕರ್ಣದ ಕೈಫಿಯತ್ತು (M.353/D.1838/D.1866)
36. ಚಿಕ್ಕಮಗಳೂರು ಕೈಫಿಯತ್ತು (M.61/D.1828)
37. ಚಿಕ್ಕ ಹೋತೂರು ಕೈಫಿಯತ್ತು (M.126)
38. ಗಯಲಬಾಡು ಕೈಫಿಯತ್ತು (M.351/D.346/D.347)
39. ತಲಕಾಡು ಅಗ್ರಹಾರದ ಕೈಫಿಯತ್ತು (M.162/D.1833/D.1870)
40. ತಿರುಮಲಕೂಡ ಕೈಫಿಯತ್ತು (M.162/D.1870)
41. ತಿರುಮಲ ಸಾಗರದ ಕೈಫಿಯತ್ತುಗಳು (M.235/D.1881)
42. ತುಳುವದೇಶದ ಕಡಬಸಂಸ್ಥಾನದ ಕೈಫಿಯತ್ತು (M.353/D.1838/D.1866)
43. ತಕ್ಕಲಕೋಟೆ ಕೈಫಿಯತ್ತು (M.148)
44. ದತ್ತಾತ್ರೇಯ ಪರ್ವತದ ಕೈಫಿಯತ್ತು (M.164/D.1851)
45. ದರೋಜಿ ಗ್ರಾಮದ ಕೈಫಿಯತ್ತು (M.351)
46. ದೇವನಕಲ್ಲು ಕೈಫಿಯತ್ತು (M.117/M.351)
47. ದೇವಲಾಪುರದ (ಮಲ್ಲಿಕಾರ್ಜುನಪುರದ) ಕೈಫಿಯತ್ತು (M.369)
48. ದೇವೇಗೌಡನ ಹಳ್ಳಿ ಕೈಫಿಯತ್ತು (D.1659/D.1880)
49. ಧರ್ಮಸ್ಥಳದ ಕೈಫಿಯತ್ತು (M.338/M.353/D.1866)
50. ನಗರದಸೀಮೆ ಕೈಫಿಯತ್ತು (D.1826/D.1862)

51. ನಗರಪುರದ ಅಥವಾ ಎಡತಲೆಯ ಕೈಫಿಯತ್ತು (D.1242/D.2044/D.2048)
52. ನಂದವರಂ ಕೈಫಿಯತ್ತು (M123)
53. ನರಸಿಪುರದ ಕೈಫಿಯತ್ತು (D.1833)
54. ನಾಗಮಂಗಲದ ಕೈಫಿಯತ್ತು (M.162/D.1833/D.1870)
55. ನಾಗಲದಿನ್ನೆ ಕೈಫಿಯತ್ತು (M.253)
56. ಪೆರದೂರು ಮಾಗಣೆ ಕೈಫಿಯತ್ತು (M.353/D.1638/D.1866)
57. ಬನವಾಸಿ ಕೈಫಿಯತ್ತು (M.175/M.322/M.369/D.1822/D.1839)
58. ಬಸರೂರು ಮಾಗಣೆ ಕೈಫಿಯತ್ತು (M.353/D.1838/D.1866)
59. ಬಳ್ಳಾರಿ ಕಸಬ ಕೈಫಿಯತ್ತು (M.117/M.351)
60. ಬಾಗಡೆ ಕೈಫಿಯತ್ತು (D.1874/D2046)
61. ಬಾರಕೂರು ಸಂಸ್ಥಾನದ ಕೈಫಿಯತ್ತು (M.350/D1838/D.1866)
62. ಬೆಂಗಳೂರು ಕಾಳನಹಳ್ಳಿ ಕೈಫಿಯತ್ತು (D.1850)
63. ಬೇಡರ ಬೆಳಗಲ್ಲು ಕೈಫಿಯತ್ತು (M.126)
64. ಬೈಂದೂರು ಮಾಗಣೆ ಕೈಫಿಯತ್ತು (D.1838/D.1866)
65. ಬೈರೂರು ಮಾಗಣೆ ಕೃಫಿಯತ್ತು (M353)
66. ಭಟ್ಕಳದ ಕೈಫಿಯತ್ತು (M.353/D1838/D1866)
67. ಮುಂದಗದ್ದೆ ಕೈಫಿಯತ್ತು (M.160/M.161/D1828/D1865)
68. ಮಣಿಪುರದ ಕೈಫಿಯತ್ತು (D1878)
69. ಮಂಚಾಲೆ ಕೈಫಿಯತ್ತು (M.126)
70. ಮರದಾಳೆ ಕೈಫಿಯತ್ತು M.353/D1838/D1866/D1888)
71. ಮಿರ್ಲೆಯ ಕೈಫಿಯತ್ತು (D.1833/D.1870)
72. ಮುಗುವಿನ ಮಾಗಣೆ ಕೈಫಿಯತ್ತು (M.353/D.1838/D.1866)
73. ಮೂಡಂಗಾಡು ಮಾಗಣೆ ಕೈಫಿಯತ್ತು (M.353/D.1838/D.1866)
74. ವಸುಧಾರೆ ಗ್ರಾಮದ ಕೈಫಿಯತ್ತು (M.163/M.332/M.357/D.1872)
75. ವಿಜಯನಗರದ ಕೈಫಿಯತ್ತು (D.1889)
76. ಶಿರಸಿ ಮಾಗಣೆ ಕೈಫಿಯತ್ತು (M.175/M.369/D.1822)
77. ಶೃಂಗೇರಿ ಸೀಮೆ ಕೈಫಿಯತ್ತು (M.302/M.351/D.1873)
78. ಸಂತೆಬೆನ್ನೂರು ಕೈಫಿಯತ್ತು (M.160/D.1850/D.1865)
79. ಸ್ವರ್ಗಾಪತಿಪಟ್ಟಣದ ಕೈಫಿಯತ್ತು (M.163/D.1872)

80. ಸಾಗರದ ಕೈಫಿಯತ್ತು (M.160/D.1850/D.1865)
81. ಸಾಲಗ್ರಾಮದ ಕೈಫಿಯತ್ತು (D.1833)
82. ಸಾಸಿವೆಹಳ್ಳಿ ಕೈಫಿಯತ್ತು (M.332/M.357)
83. ಸೂಳೆಕೆರೆಸೀಮೆ ಕೈಫಿಯತ್ತು (M.160/D.1850)
84. ಸೋಗಣೆ ಅಗ್ರಹಾರದ ಕೈಫಿಯತ್ತು (M.168/D.1858/D.1850/D.1966)
85. ಸೊಂಡೂರು ಕೈಫಿಯತ್ತು (M.110)
86. ಸೋಮನಾಥಪುರದ ಅಗ್ರಹಾರದ ಕೈಫಿಯತ್ತು (M.162/D.1870)
87. ಸೋಸಲೆ ಅಗ್ರಹಾರದ ಕೈಫಿಯತ್ತು (M.162/D.1833/D.1870)
88. ಹಟ್ಟಿ ಬೆಳಗಲ್ಲು ಕೈಫಿಯತ್ತು (M.117/M.351)
89. ಹಲಸನಾಡು ಮಾಗಣೆ ಕೈಫಿಯತ್ತು (M.353/D.1838/D.1866)
90. ಹಳೇಬೀಡು ಕೈಫಿಯತ್ತು (D.1657/D.1863/D.1866/D.1879)
91. ಹಿರೇಮಗಳೂರು ಕೈಫಿಯತ್ತು (M.161/D.1828)
92. ಹಿರೇಹಾಳು ಕೈಫಿಯತ್ತು (M.369/M.150/D.1797/D.1798:
93. ಹಿರೇಹೊತೂರು ಕೈಫಿಯತ್ತು (M.126)
94. ಹೆಮ್ಮಾಡಿ ಮಾಗಣೆ ಕೈಫಿಯತ್ತು (M.353/D.1838/D.1866)
95. ಹೋದಿಗೆರೆಸೀಮೆ ಕೈಫಿಯತ್ತು (M.160/D.1850/D.1865)
96. ಹೊನ್ನಾಳಿ ಸೀಮೆಯ ಕೈಫಿಯತ್ತು (M.173/D.1867)
97. ಹೊಸಂಗಡಿ ಮಾಗಣೆ ಕೈಫಿಯತ್ತು (M.353/D.1838/D.1866)
98. ಹೊಸೂರು ಮುರವಣೆ ಕೈಫಿಯತ್ತು (M.126)
99. ಹೊಳೆಹೊನ್ನೂರು ಕೈಫಿಯತ್ತು (M.161/M.164/D.1828/D.1857)

## 2

## ವ್ಯಕ್ತಿಗಳು ಮತ್ತು ವಂಶಾವಳಿಗೆ ಸಂಬಂಧಪಟ್ಟವು

1. ಕಾರ್ಕಳದ ಅರಸರ ಕೈಫಿಯತ್ತು (M.351/D.346/D.347)
2. ಕುಮಾರರಾಮನ ಕೈಫಿಯತ್ತು. (M.150/D.1797/D.1798)
3. ಕೊಮರರಾಮನ ಕೈಫಿಯತ್ತು (ಭಟ್ಟರ ಹಳ್ಳಿ) (M.369)
4. ಚೌಟರಸರ ಕೈಫಿಯತ್ತು (M.351/D.346/D.347)
5. ಬಸವಲಿಂಗ ಜಂಗಮನ ಕೈಫಿಯತ್ತು (M.160/D.1865)
6. ಮರಾಠೆಯವರ ಕೈಫಿಯತ್ತು (M.174/D.1832/D.1842)
7. ಮೈಸೂರು ರಾಜವಂಶಾವಳಿ ಕೈಫಿಯತ್ತು (M.160/D.1865)

8. ರಾಜವಂಶಾವಳಿ ಕೈಫಿಯತ್ತು (M.174/M.354/D.1832/D.1842)
9. ರಾಜವೇಡು ಕೈಫಿಯತ್ತು (M.253)
10. ಸೋದೆ ರಾಜವಂಶಾವಳಿ ಕೈಫಿಯತ್ತು (M.175/M.177/D.1822/D.1839/D.1860)
11. ಹೈದರನ ಕೈಫಿಯತ್ತು (M.163/M.332/D.1882)

## 3
## ಜಾತಿಗಳು ಮತ್ತು ಬುಡಕಟ್ಟುಗಳಿಗೆ ಸಂಬಂಧಪಟ್ಟವು

1. ಆದವಾನಿ ಜೈನರ ಕೈಫಿಯತ್ತು (M.148)
2. ಉಪ್ಪಾಲಿಗರ ಕೈಫಿಯತ್ತು (M.235)
3. ಕುಂಚಿ ಒಕ್ಕಲು ಜಾತಿ ರಿವಾಜು ಕೈಫಿಯತ್ತು (M.175/D.1822/D.1839)
4. ಕುಡಿ ಕುಂಬಾರರ ಕೈಫಿಯತ್ತು. (M.174C/D.1832/D.1842)
5. ಕೊಂಕಣಿಜರ ಕೈಫಿಯತ್ತು (M.175/D.1822/D.1839)
6. ಕೊರಮರು ಜಾತಿಯವರ ಕೈಫಿಯತ್ತು (D.1832/M.174/D.1842)
7. ಕೋಮಟಿಗರ ಕೈಫಿಯತ್ತು (D.1838/D.1657/D.2004)
8. ಗಂಗಡಿಕಾರ ವೊಕ್ಕಲಿಗರ ಕೈಫಿಯತ್ತು (M.174/D.1832/D.1842)
9. ಚನ್ನಯ್ಯನ ಕುಲದ ಜಾತಿ ರಿವಾಜು ಕೈಫಿಯತ್ತು (M.175/M.369/D.1822)
10. ತೆಲುಗು ಬಣಜಿಗರ ಜಾತಿ ರಿವಾಜು ಕೈಫಿಯತ್ತು (M.174/D.1842)
11. ನವಾಯತರ ಕೈಫಿಯತ್ತು (D.1866/D.1838)
12. ಪದ್ಮಸಾಲೆಯವರ ಕೈಫಿಯತ್ತು (M.369/M.175/D.1822)
13. ಬಂಜಾರೆಯವರ ಕೈಫಿಯತ್ತು (M.161/D.1828)
14. ಬನವಳ್ಳಿ ಬಣಜಿಗರ ಕೈಫಿಯತ್ತು (M.177/M.332/D.1860)
15. ಮಣ್ಣು ವಡ್ಡ ಜಾತಿ ಕೈಫಿಯುತ್ತು (M.174/D.1832/D.1842)
16. ಮೇದರ ಕೈಫಿಯತ್ತು (M.175/M.369/D.1822/D.1839)
17. ಮೇಲು ಸಾಬರೆ ಜಾತಿ ರಿವಾಜು ಕೈಫಿಯತ್ತು (M.175/M.309/D.1822/D.1839)
18. ವೆಂಕಟಾಪುರದ ವೈಷ್ಣವರ ಕೈಫಿಯತ್ತು (D.1882/D.2006)
19. ಹಳೆಪೈಕದ ಜಾತಿ ರಿವಾಜು ಕೈಫಿಯತ್ತು (M.369/M.175/D.1832/D.1839)

## 4

## ದೇವಾಲಯಗಳು ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಸಂಬಂಧಪಟ್ಟವು

1. ಎಡತೊರೆ ಮಠದ ಕೈಫಿಯತ್ತು (M.163/M.332)
2. ಎಲ್ಲೂರ ವಿಶ್ವನಾಥದೇವರ ಕೈಫಿಯತ್ತು (M.353)
3. ಕಾಣೂರು ಮಠದ ಕೈಫಿಯತ್ತು (M.351/D.1827/D.1862)
4. ಕಾಪಿನ ದೇವಸ್ಥಾನದ ಕೈಫಿಯತ್ತು (M.353)
5. ಕೃಷ್ಣಾಪುರಮಠದ ಕೈಫಿಯತ್ತು (M.351/D.1827/D.1862)
6. ಗೇರುಸೊಪ್ಪೆಯ ಹಳೆಬಸ್ತಿಯ ಕೈಫಿಯತ್ತು (M.1866/D.1838)
7. ಚರಾತಿ ಮಠದ ಕೈಫಿಯತ್ತು (M.180/D.1850/D.1865)
8. ಪುತ್ತಿಗೆ ಮಠದ ಕೈಫಿಯತ್ತು (M.351/D.1827/D.1862)
9. ಪೇಜಾವರ ಮಠದ ಕೈಫಿಯತ್ತು (M.351/D.1827/D.1862)
10. ಫಲಿಮಾರು ಮಠದ ಕೈಫಿಯತ್ತು (M.235/M.351/D.1827/D.1862/D.1881)
11. ಪೇರೂರು ಮಠದ ಕೈಫಿಯತ್ತು (M.343/D.1827/D.1862)
12. ಸೋದೆಮಠದ ಕೈಫಿಯತ್ತು (M.351/D.1827/D.1862)

## 5

## ಇತರ ವಿಚಾರಗಳಿಗೆ ಸಂಬಂಧಪಟ್ಟವು

1. ತೊಣ್ಣೂರು ರಾಕ್ಷಸಿಯ ಕೈಫಿಯತ್ತು (M.161/D.1828)
2. ಪೈರುಮಾಡುವ ವಿವರ, ಪಶು, ಪಕ್ಷಿ, ಮೃಗಜಾತಿ ಕೈಫಿಯತ್ತು (M.163/M.332/D.1872)

—o—

## ಕಡತ*

**ದೇವರ ಕೊಂಡಾರೆಡ್ಡಿ**

ಪ್ರಾಚೀನ ಭಾರತದಲ್ಲಿ ಬರವಣಿಗೆಗೆ ಉಪಯೋಗಿಸಿರುವ ವಸ್ತುಗಳಲ್ಲಿ ಭೂರ್ಜ ಪತ್ರ ಮತ್ತು ತಾಡಪತ್ರಕ್ಕೆ ಪ್ರಮುಖ ಸ್ಥಾನ. ಲೋಹ, ಬಟ್ಟೆ, ಮಣ್ಣು ಮುಂತಾದುವನ್ನು ಬಳಸಿದ್ದರೂ ಕಾವ್ಯೇತರ ಬರವಣಿಗೆಗೇ ಹೆಚ್ಚಾಗಿ ಬಳಸಿರುವುದು. ಕ್ವಚಿತ್ತಾಗಿ ಒಂದು ಹಾಡನ್ನೋ ಅಥವಾ ಯಾವುದಾದರೂ ಕಾವ್ಯದ ಭಾಗವನ್ನೋ ಬರೆದಿರುವುದುಂಟು. ಆದರೆ ಅದಕ್ಕೆ ಈ ಮಾಧ್ಯಮದಲ್ಲಿ ಗೌಣಸ್ಥಾನ.

ಹೀಗೆ ಬಳಸಿರುವ ವಸ್ತುಗಳಲ್ಲಿ ಬಟ್ಟೆಯೂ ಒಂದು. ರಾಜನ ನಿರೂಪವನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಕಳುಹಿಸುವುದಕ್ಕೆ ಅದನ್ನು ಬಳಸುತ್ತಿದ್ದರು. ಬಟ್ಟೆಯ ಇನ್ನೊಂದು ರೂಪವೇ ಕಡತ ಅಥವಾ ಕಡಿತ. ನಿರೂಪ ಕೆಲವೇ ಸಾಲುಗಳಿಂದ ಕೂಡಿದ ಬಟ್ಟೆಯ ತುಂಡಾದರೆ ಕಡತದ ಉದ್ದಕ್ಕೆ ಇಷ್ಟೇ ಎಂಬ ಮಿತಿ ಇಲ್ಲ.

ಅನೇಕ ಜನ ಹಿಂದಿನ ಕಾಲದ 'ಕಡಿತ'ವನ್ನೇ ಕಂಡಿಲ್ಲದಿದ್ದರೂ ಆ ಪದವನ್ನು ಇಂದೂ ರೂಢಿಯಲ್ಲಿ ಬಳಸುತ್ತಾರೆ. ಕಡತ ಎಂಬ ಪದಕ್ಕೆ 'ಹಳೆಯ ದಾಖಲೆ' ಎಂಬ ಅರ್ಥವಿದ್ದರೂ ಅದರ ಅರ್ಥ ಈಗ ಇನ್ನೂ ವಿಶಾಲವಾಗಿದೆ. ಸರ್ಕಾರದ ಭಾಷೆಯಲ್ಲಿಯೂ ಈ ಪದ ಜೀವಂತವಾಗಿದೆ. ಉದಾ: "ಶಾಸಕರು ಬಳಸಿದ ಆ ಪದವನ್ನು ಕಡತದಿಂದ ತೆಗೆಸಿದರು." ಹಾಗೆಯೇ ಯಾರಾದರೂ ತಮ್ಮ ಹಿಂದಿನ ಘಟನೆಗಳನ್ನು ಮೆಲುಕು ಹಾಕಿ ಬೇಜಾರುಪಡಿಸುತ್ತಿದ್ದರೆ "ಬಿಚ್ಚಿದೆ ನಿನ್ನ ಕಡತ" ಎಂದು ಅನ್ನುವುದುಂಟು. ಗಾದೆಯಲ್ಲಿಯೂ ಬಳಸುತ್ತೇವೆ: "ಕೆಲಸವಿಲ್ಲದ ಶಾನುಭೋಗ ಹಳೇ ಕಡತ ಬಿಚ್ಚಿದ." ಕಡತ ಎಂಬುದು ಈ ಅರ್ಥದಲ್ಲಿ ಬಳಕೆಯಾಗಲು ಕಾರಣ ಅದರ ಆಕಾರ. ಮಡಿಕೆ ಮಡಿಕೆಯಾಗಿ ಮಡಿಚಿಟ್ಟದ್ದು, ಬಿಚ್ಚುತ್ತಿದ್ದರೆ ಉದ್ದಕ್ಕೆ ಬರುತ್ತಿರುತ್ತದೆ.

ಕಡತಗಳು ಕರ್ನಾಟಕದಲ್ಲಿ ಎಷ್ಟು ಕಾಲದಿಂದ ರೂಢಿಯಲ್ಲಿದ್ದುವೆಂದು ನಿಖರವಾಗಿ ಹೇಳಲು ಬರುವುದಿಲ್ಲ. ಭಾರತದಲ್ಲಿ ಕ್ರಿ.ಪೂ.ದಲ್ಲಿ ಬಟ್ಟೆಯ ಮೇಲೆ ಬರೆಯುತ್ತಿದ್ದರೆಂದು ನೀರ್‌ಖೋಸ್[1] ಹೇಳುತ್ತಾನೆ. ಕರ್ನಾಟಕದ ಶಾಸನಗಳಲ್ಲಿ 'ಕಡಿತಾಮಾತ್ಯ'ನ ಮತ್ತು 'ಕಡಿತ ವೆರ್ಗಡೆ'ಯ ಉಲ್ಲೇಖ ಬರುತ್ತದೆ.

---

* 'ಬರಹದ ಸಾಮಗ್ರಿ' ಎಂಬ ಅರ್ಥದಲ್ಲಿ ಕಡಿತ, ಕಡತ ಎಂಬ ಎರಡು ರೂಪಗಳೂ ಬಳಕೆಯಲ್ಲಿವೆ. ಹೆಚ್ಚು ರೂಢಿಯಲ್ಲಿರುವ 'ಕಡತ' ಶಬ್ದವನ್ನೇ ಇಲ್ಲಿ ಉದ್ದಕ್ಕೂ ಬಳಸಿದೆ.

ಹಳಗನ್ನಡ, ನಡುಗನ್ನಡ ಕಾವ್ಯಗಳಲ್ಲಿಯೂ 'ಕಡಿತ'ದ ಪ್ರಯೋಗ ಬರುತ್ತದೆ. 'ಪಡೆದ ಧನಕ್ಕೆ ಲೆಕ್ಕಮಿಡಲಿಂದ್ರನಗಂ ಬೞಿಪಂ ಧರಾತಳಂ ಕಡಿತಂ'[3], 'ಚೇರನ ಚೋೞನ ಪಾಂಡ್ಯನ ನಾಡೆ ಕೈಗೆವಂದುದು ಕಡಿತಕ್ಕಮುಂಡಿಗೆಗಮೋಗಮೀ ಶುಭತುಂಗ ದೇವನಾ',[4] 'ಪೊಳೆವ ಪೊನ್ನ ನೀರಾ ಸಾವಿರಮನುಜ್ಜ್ವಳ ಹರ್ಷದಿಂ ತರಿಸಿ ಕಡಿತಕ್ಕೆ ಬರೆಯಿಸಿ'[5], 'ಬರಹವನರಿಯನಾ ಪದವಿಟ್ಟು ಕಡಿತದೊಳ್ ಮಾಡಿದ ಕೃತಿಯಲ್ಲ'[6]—ಹೀಗೆ ಬೇರೆ ಬೇರೆ ಸಂದರ್ಭದಲ್ಲಿ ಬಳಸಿರುವ ಈ ಮೇಲಿನ ಕವಿಗಳ ಮಾತಿನಿಂದ ಅದರ ರಚನೆ ಮತ್ತು ಉಪಯೋಗದ ವಿವರವನ್ನು ತಿಳಿಯ ಬಹುದು.

ಒರಟಾಗಿರುವ ದಪ್ಪ ದಾರದಿಂದ ನೆಯ್ದಿರುವ ಬಟ್ಟೆಗೆ ಹುಣಿಸೆ ಬೀಜದಿಂದ ಮಾಡಿದ ಅಂಟಿಗಾಗಲೀ, ಅಕ್ಕಿಯ ಗಂಜಿಯಿಂದ ಮಾಡಿದ ಅಂಟಿಗಾಗಲೀ, ಗೋದಿಯ ಗಂಜಿಯಿಂದ ಮಾಡಿದ ಅಂಟಿಗಾಗಲೀ ಇದ್ದಲಿನ ಪುಡಿಯನ್ನು ಬೆರೆಸಿ ಬಟ್ಟೆಯ ಎರಡೂ ಕಡೆ ಲೇಪಿಸಬೇಕು. ಚೆನ್ನಾಗಿ ಒಣಗಿದ ಮೇಲೆ ಗಾರೆಯ ಕಲ್ಲಿನಿಂದಲೋ, ನುಣುಪಾಗಿರುವ ವಸ್ತುವಿನಿಂದಲೋ ಉಜ್ಜಿ ನಯ ಮಾಡಬೇಕು. ಅನಂತರ ಒಂದೇ ಅಳತೆಗೆ ಬರುವಂತೆ ಪದರಪದರವಾಗಿ ಮಡಿಚಬೇಕು. ಕಡತ ಭದ್ರವಾಗಿರು ವಂತೆ ಇಕ್ಕೆಲಗಳಲ್ಲಿಯೂ ಮರದ ಪಟ್ಟಿಯನ್ನು ಬಿಗಿಯುತ್ತಿದ್ದರು. ಕೆಲವು ಕಡತಗಳ ರಕ್ಷಾಕವಚಗಳನ್ನು ಬಣ್ಣದ ಚಿತ್ರಗಳಿಂದ ಅಲಂಕರಿಸಿರುವುದೂ ಉಂಟು. ಹೀಗೆ ಸಿದ್ಧಪಡಿಸಿದ ಕಡತದ ಬಟ್ಟೆಯ ಮೇಲೆ (ಬಳಪದ ಕಲ್ಲಿನಿಂದ ಮಾಡಿದ) ಬಳಪದಿಂದ ಬರೆಯುತ್ತಿದ್ದರು.

ಸಾಮಾನ್ಯವಾಗಿ ಮನೆಯ, ಅರಮನೆಯ, ಮಠದ ಲೆಕ್ಕಪತ್ರಗಳನ್ನಿಡಲು, ಪಂಚಾಂಗಗಳನ್ನು* ಬರೆಯಲು, ಇವನ್ನು ಹೆಚ್ಚಿಗೆ ಬಳಸಿರುವುದು. ಅಪರೂಪಕ್ಕೆ ಕಾವ್ಯಗಳನ್ನೂ ಬರೆದಿರುತ್ತಾರೆ. ದಾಸರ ಪದಗಳನ್ನು ಬರೆದಿರುವುದೂ ಉಂಟು. ಆದರೆ ಕಡತಗಳ ಮುಖ್ಯ ಉದ್ದೇಶ ಲೆಕ್ಕಪತ್ರಗಳನ್ನು ಬರೆದಿಡುವುದೇ ಆಗಿದೆ.**

ಲೆಕ್ಕಪತ್ರವನ್ನಿಡುವ ಉದ್ದೇಶದಿಂದ ತಯಾರಾದ ಮತ್ತು ಆ ಕಾರ್ಯಕ್ಕೆ ಉಪಯೋಗಿಸಿದ ಕಡತಗಳನ್ನು ಜನ ಇತರ ಕಾವ್ಯಗಳಂತೆ ರಕ್ಷಿಸಲು ಪ್ರಯತ್ನಿಸಿಲ್ಲ ಮತ್ತು ಪ್ರತಿಮಾಡಲೂ ಪ್ರಯತ್ನಿಸಿಲ್ಲ. ಉದ್ದೇಶ ನೆರವೇರಿದ ಮೇಲೆ ಲೆಕ್ಕಪತ್ರಗಳ ಪುಸ್ತಕವನ್ನು ಈಗ ನಾವು ಮೂಲೆಗೆಸೆಯುವಂತೆ ಕಡತಗಳನ್ನೂ ಮೂಲೆಗೆಸೆದರು. ಅನೇಕ ಮಠಗಳಲ್ಲಿ, ಮನೆಗಳಲ್ಲಿ ಕಡತಗಳು ವಿಪುಲವಾಗಿ ದೊರೆಯುತ್ತವೆ, ಇಂದಿಗೂ

---

* ತಾಳಪತ್ರಗಳ ಮೇಲೆ ಬರೆದ ಪಂಚಾಂಗಗಳು ಬಿ. ಎಂ. ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ಗಳ ಸಂಗ್ರಹದಲ್ಲಿ ಇವೆ.–ಸಂ.

** ಈ ತೆರನ ಲೆಕ್ಕಗಳನ್ನು ತಾಳಪತ್ರಗಳ ಮೇಲೆಯೂ ಬರೆಯುತ್ತಿದ್ದರು. ಲೆಕ್ಕಗಳನ್ನು ಬರೆಯಲಾಗಿರುವ ಬಲು ದೊಡ್ಡದಾದ ಹಸ್ತಪ್ರತಿಯೊಂದು ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿಗಳ ಸಂಗ್ರಹದಲ್ಲಿ ಇದೆ.–ಸಂ.

ಕೂಡ. ಕಡತಗಳನ್ನು ಸಂಗ್ರಹಿಸುವ, ಸಂಗ್ರಹಿಸಿದ ಕಡತಗಳನ್ನು ವ್ಯವಸ್ಥಿತವಾಗಿ ಅಭ್ಯಾಸ ಮಾಡುವ ಕಾರ್ಯ ನಡೆದಿಲ್ಲ. ಅವುಗಳ ಅಭ್ಯಾಸ ನಡೆಸಿದ್ದೇ ಆದರೆ ಹಿಂದಿನ ಕಾಲದ ಆರ್ಥಿಕ ಮತ್ತು ಆಡಳಿತ ವ್ಯವಸ್ಥೆಗಳ ಬಗ್ಗೆ ವಿಶೇಷ ಮಾಹಿತಿಯನ್ನು ಸಂಗ್ರಹಿಸಬಹುದು. ಈ ದಿಸೆಯಲ್ಲಿ ಹೆಚ್ಚಿನ ಪ್ರಯತ್ನಗಳು ನಡೆಯಬೇಕು.

**ಟಿಪ್ಪಣಿ :**

1. ಕಡಿತವೆಂದರೆ ಇನ್ನೊಂದು ಅರ್ಥ ಬರುತ್ತದೆ. ರುದ್ರಭಟ್ಟ, "ಭೂಮಿ ಪೆರ್ಗಡಿತದಂತಳ್ಳಾಡೆ" ಎಂಬ ವಾಕ್ಯದ ಪ್ರಯೋಗವನ್ನು ಮಾಡಿರುತ್ತಾನೆ. ಇಲ್ಲಿ ಪೆರ್ಗಡಿತವೆಂದರೆ ದೊಡ್ಡ ಕಡಿತವೆಂದು ಅರ್ಥ. ಆದರೆ ಸಂದರ್ಭಕ್ಕೆ ಇದು ಹೊಂದಿಕೊಳ್ಳುವುದಿಲ್ಲ. ಹೀಗಾಗಿ ಇಲ್ಲಿ ಪೆರ್ಗಡಿತವೆಂದರೆ ಅರಲು, ಉಸುಬು ಎಂದರ್ಥ. ಮೇಲ್ನೋಟಕ್ಕೆ ಒಂದು ಜಾತಿಯ ಹುಲ್ಲಿನಿಂದ ತುಂಬಿರುತ್ತದೆ. ಆದರೆ ಕಾಲಿಟ್ಟರೆ ಕೆಸರಲ್ಲಿ ಸೇರುತ್ತದೆ. ಇದರ ಇನ್ನೊಂದು ಸ್ವಭಾವವೆಂದರೆ ಒಂದು ಮೂಲೆಯಲ್ಲಿ ಭದ್ರವಾಗಿ ನಿಂತು ಅರಲನ್ನು ಅಲುಗಾಡಿಸಿದರೆ ಇಡೀ ಅರಲು ಅಲ್ಲಾಡುತ್ತದೆ. ಇದನ್ನೇ ರುದ್ರಭಟ್ಟ 'ಪೆರ್ಗಡಿತ'ವೆಂದು ಕರೆದಿರುವುದು.

2. ಕಡತದ ನಿರೂಪ ಹೇಗಿರುತ್ತಿತ್ತೆಂಬುದನ್ನು ಜಲಸಂಗಾವಿಯ ಶಿಲ್ಪದಲ್ಲಿ ಕಾಣಬಹುದು. ಸ್ತ್ರೀ ಶಾಸನ ಬರೆಯುತ್ತಿರುವಂತೆ ಚಿತ್ರಿತವಾಗಿದೆ. ಆದರೆ ಆಕೆ ಬರೆಯುತ್ತಿರುವುದು ಬಟ್ಟೆಯ ಮೇಲೆ ಎಂಬುದು ಶಿಲ್ಪನ್ನು ಗಮನಿಸಿದರೆ ಸ್ಪಷ್ಟವಾಗುತ್ತದೆ.

**ಆಧಾರಗ್ರಂಥಗಳು :**


1. ಎಪಿಗ್ರಫಿಕಲ್ ಗ್ಲೋಸರಿ – ಡಿ. ಸಿ. ಸರ್ಕಾರ
2. ಇಂಡಿಯನ್ ಎಪಿಗ್ರಫಿ – ,,
3. ಕನ್ನಡ ಹಸ್ತಪ್ರತಿಗಳ ಇತಿಹಾಸ – ಎಚ್. ದೇವೀರಪ್ಪ.
4. ಮತ್ತು ಸಂಬಂಧಿಸಿದ ಶಾಸನಗಳು


---

1. ಇ. ಐ. 23

2. (ಅ) ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾ ಪ್ರಧಾನ ಸೇನಾಪತಿ ಕಡಿತವೆರ್ಗಡೆ ಕನ್ನಡ ಸಂಧಿವಿಗ್ರಹಿ ಹಿರಿಯ ದಂಡನಾಯಕ ಯೋಗೀಶ್ವರ ದೇವ. ಕ. ಇ. ಸಂ. 4,22, ಕ್ರಿ. ಶ.1144.

(ಆ) ಶ್ರೀಮನ್ಮಹಾ ಪ್ರಧಾನ ಸೇನಾಪತಿ, ಕಡಿತವೆರ್ಗಡೆ ಕನ್ನಡ ಸಂಧಿವಿಗ್ರಹಿ ದಂಡನಾಯಕ ಬಮ್ಮಣ್ಣಯ್ಯಂಗಳ. ಸೌತ್ ಇಂಡಿಯನ್ ಇನ್‌ಸ್‌ಕ್ರಿಪ್‌ಷನ್ಸ್; ಸಂ. 15.31. 1146.

(ಇ) ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ 18. 149.

(ಈ) ಕರಿತುರಗ ಪಟ್ಟಸಾಹಣಿ ಕಡಿತವೆರ್ಗಡೆ ಸೇನಾಧಿಪತಿ ದಂಡನಾಯಕಂ ರೇಚರಸರ

(ಉ) ಕಡಿತವೆರ್ಗಡೆ ವೈಜನಾಥಯ್ಯನ ಸ್ಥಳದ ಮತ್ತರು ಸೂಜು

3. ಶಾಂತಿಪುರಾಣ, ಪುಟ 147

4. ಸೂಕ್ತಿ ಸುಧಾರ್ಣವ, 5–7

5. ಪದ್ಮರಾಜ ಪುರಾಣ, 5–50

6. ಕನಕದಾಸ ಪ್ರಶಸ್ತಿ, ಪುಟ 67

— o—




*yaṁ śaivāssamupāsatē Śiva iti Brahmēti Vēdāntinō*
*Bauddhā Buddha iti prāmāṇa-puṭavaḥ Kartēti Naiyāyikāḥ*
*Arhaścētiha Jaina-śāsana-miti Kurmēti Mīmāṁsakāḥ*
*Sōyaṁ vō vidadhātu vānchita-phalam Śrī Kēśavēśas sadā.*



# ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣ

ಪ್ರೊ|| ಎಂ. ವಿ. ಸೀತಾರಾಮಯ್ಯ

ನಮ್ಮ ನಾಡಿನ ಪ್ರಾಚೀನ ವಸ್ತುಗಳನ್ನು ಸ್ಥಾವರ (ಇದ್ದ ಕಡೆ ಇರುವವು) ಮತ್ತು ಜಂಗಮ (ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯಬಹುದಾದವು) ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಪುರಾತನ ದೇವಾಲಯಗಳು, ಮಸೀದಿಗಳು, ಚರ್ಚುಗಳು ಮುಂತಾದ ಧರ್ಮ ಮಂದಿರಗಳು; ಸಾಧುಸಂತರ ಸಮಾಧಿಗಳು ಮತ್ತು ಇತರ ಮಹಾಪುರುಷರ ಸ್ಮಾರಕಗಳು; ಶಿಲಾಶಾಸನಗಳು— ಇಂತಹ ಎಲ್ಲ ನಿರ್ಮಿತಿಗಳೂ ಸ್ಥಾವರಗಳು. ಇವುಗಳ ಸಂರಕ್ಷಣೆಗಾಗಿ ಭಾರತ ಸರಕಾರ ಬಹಳ ಹಿಂದೆಯೇ ಕಾನೂನು ಮಾಡಿದೆ. ಲೋಹ ಮತ್ತು ಮರಗಳಿಂದ ಮಾಡಿದ ವಿಗ್ರಹಗಳು, ಚಿತ್ರಪಟಗಳು, ಸಂಗೀತ ವಾದ್ಯಗಳು, ಆಯುಧಗಳು, ನಾಣ್ಯಗಳು, ತಾಮ್ರ ಫಲಕಗಳು, ಸಂಸ್ಕೃತಿ ಮತ್ತು ಕಲೆಯ ದೃಷ್ಟಿಯಿಂದ ಬೆಲೆಬಾಳುವ ಎಲ್ಲ ಸಣ್ಣ–ದೊಡ್ಡ ವಸ್ತುಗಳು ಮುಂತಾದವು ಜಂಗಮಗಳು. ಈ ಜಂಗಮ ವಸ್ತುಗಳ ಸಂರಕ್ಷಣೆಗೆ ಸರ್ಕಾರ ಕಾನೂನು ಮಾಡಿರಲಿಲ್ಲ. ಲೋಹದ ವಿಗ್ರಹಗಳು, ಮುಂತಾದ ಕಲಾವಸ್ತುಗಳು ಕಳ್ಳಸಾಗಾಣಿಕೆಯ ಮೂಲಕ ವಿದೇಶಗಳಲ್ಲಿ ವಿಕ್ರಯವಾಗುವ ದುರ್ವ್ಯಾಪಾರ ಹೆಚ್ಚಾದಾಗ ಭಾರತ ಸರ್ಕಾರ ಅದನ್ನು ತಡೆಗಟ್ಟುವ ಉದ್ದೇಶದಿಂದ ಈ ಬಗೆಯ ಪ್ರಾಚೀನ ವಸ್ತುಗಳ ಸಂಬಂಧವಾಗಿಯೂ ಕಾನೂನು ಮಾಡಿತು. ಕಾನೂನಿನ ಪ್ರಕಾರ ನೂರು ವರ್ಷಕ್ಕೆ ಹಿಂದಿನ ಪ್ರಾಚ್ಯವಸ್ತುಗಳನ್ನು ಹೊಂದಿರತಕ್ಕವರು ನಿರ್ದಿಷ್ಟ ಸರ್ಕಾರದ ಅಧಿಕಾರಿಗಳಲ್ಲಿ ಅವುಗಳ ವರ್ಣನಾತ್ಮಕ ವಿವರಗಳೊಂದಿಗೆ ಅವುಗಳನ್ನು ದಾಖಲಾತಿ ಮಾಡಿಸಬೇಕು. ಈ ಕಾನೂನಿನಂತೆ ಪ್ರಾಚ್ಯವಸ್ತು (Antiquity) ಎಂದರೆ ಒಂದು ನೂರು ವರ್ಷ ಹಿಂದಿನದು. (ಅಮೆರಿಕದ ಕಾನೂನಿನಲ್ಲಿಯೂ ನೂರು ವರ್ಷಗಳ ಹಿಂದಿನದು ಮಾತ್ರ ಪ್ರಾಚ್ಯವಸ್ತು.) ಭಾರತ ಸರ್ಕಾರ ಕಾನೂನು ಮಾಡಿದಾಗ, ಹಸ್ತಪ್ರತಿ ಎಂದರೆ ಕೈಬರಹದ ಪುಸ್ತಕವನ್ನೂ ಕಾನೂನಿನ ವ್ಯಾಪ್ತಿಗೆ ಒಳಪಡಿಸಿತ್ತು; ಆದರೆ, ಅನಂತರ ಕಾನೂನನ್ನು ತಿದ್ದುಪಡಿ ಮಾಡಿ ಹಸ್ತಪ್ರತಿಗಳನ್ನು ಕಾನೂನಿನ ವ್ಯಾಪ್ತಿಯಿಂದ ಹೊರಪಡಿಸಿತು. ಹಸ್ತಪ್ರತಿ ಪ್ರಾಚ್ಯವಸ್ತುವಲ್ಲ, ಅದಕ್ಕೆ ಬೆಲೆಯಿಲ್ಲ ಎಂದು ಅದರ ಅರ್ಥವಲ್ಲ. ಹಸ್ತಪ್ರತಿಗಳ ಸ್ವರೂಪನಿಷ್ಕರ್ಷೆ ತೊಡಕಿನ ಕೆಲಸವಾದ್ದರಿಂದ ತಿದ್ದುಪಡಿ ಮಾಡಲಾಯಿತೆಂದು ಕಾಣುತ್ತದೆ. ಹಸ್ತಪ್ರತಿಗಳು ದೇಶಬಿಟ್ಟು ಹೊರಗೆ ಹೋಗುವ ಸಂಭವ

ಕಡಮೆ ಎಂಬ ನಂಬಿಕೆ ಕಾನೂನನ್ನು ತಿದ್ದುಪಡಿಮಾಡಲು ಇನ್ನೊಂದು ಕಾರಣವಾಗಿರಬಹುದು. ಬ್ರಿಟಿಷರ ಆಡಳಿತ ಕಾಲದಲ್ಲಿ ಬ್ರಿಟಿಷ್ ಅಧಿಕಾರಿಗಳೂ ಪಾಶ್ಚಾತ್ಯ ವಿದ್ವಾಂಸರೂ ಭಾರತದಿಂದ ಸಾವಿರಾರು ಅಮೂಲ್ಯ ಪ್ರಾಚೀನ ಹಸ್ತಪ್ರತಿಗಳನ್ನು ತಂತಮ್ಮ ದೇಶಗಳಿಗೆ ಕೊಂಡೊಯ್ದಿರುವುದನ್ನು ಇಲ್ಲಿ ನೆನೆಯಬಹುದು. ಬ್ರಿಟಿಷ್ ಮ್ಯೂಸಿಯಮ್ಮಿನಲ್ಲಿ ಹಾಗೆ ಒಯ್ದ ನೂರಾರು ಹಸ್ತಪ್ರತಿಗಳಿವೆ. ಈಗ ಆ ಭಯವಿಲ್ಲ. ಈ ಹಿನ್ನೆಲೆಯಲ್ಲಿ ವಿಚಾರಮಾಡಿ ನೋಡಿದರೆ ಪ್ರಾಚೀನ ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣೆಗಳ ವಿಚಾರದಲ್ಲಿ ಸಾರ್ವಜನಿಕರಾದ ನಮ್ಮ ಹೊಣೆಗಾರಿಕೆ ಎಂದಿಗಿಂತ ಈಗ ಹೆಚ್ಚಾಗಿದೆ ಎನ್ನಬೇಕು. ಈಗ ನಾಡಿನ ಎಲ್ಲ ಕಡೆಯೂ ಅಡಗಿಕೊಂಡಿರುವ ಹಸ್ತಪ್ರತಿಗಳು ನಷ್ಟವಾದರೆ ಅದಕ್ಕೆ ಹೊರಗಿನವರು ಕಾರಣ ಎನ್ನುವಂತಿಲ್ಲ ; ಕಾರಣ ನಾವೇ ; ನಮ್ಮ ಅಸಡ್ಡೆ, ಅಜ್ಞಾನ, ಮೌಢ್ಯ.

ಪರಕೀಯರು ನಮ್ಮ ದೇಶಕ್ಕೆ ಕಾಲಿಡುವ ಮುನ್ನವೇ ಲೆಕ್ಕವಿಲ್ಲದಷ್ಟು ಹಸ್ತಪ್ರತಿಗಳು ನಷ್ಟವಾಗಿಹೋಗಿವೆ. ಅವುಗಳಲ್ಲಿ ಲಿಖಿತವಾಗಿರುವ ಕಾವ್ಯಗಳು ನಮ್ಮ ಪಾಲಿಗೆ ಇಲ್ಲವಾಗಿವೆ. ಈ ನಷ್ಟದ ಪ್ರಮಾಣವನ್ನು ಊಹಿಸುವುದು ಮಾತ್ರ ಸಾಧ್ಯ; ನಷ್ಟಕ್ಕೆ ಒಂದೆರಡು ಕಾರಣಗಳನ್ನೂ ಊಹಿಸಬಹುದು.

ಈಗ ನಮಗೆ ಪರಿಚಿತವಿರುವ ಪ್ರಾಚೀನ ಕಾವ್ಯಗಳ ಹಸ್ತಪ್ರತಿಗಳು ಈವರೆಗೂ ಉಳಿದುಕೊಂಡುಬಂದಿದ್ದರೆ, ಅದರ ಶ್ರೇಯಸ್ಸಿನ ಬಹುಪಾಲು, ಬರೆಯುವ ಉಕ್ಕಿನ ಕಂಟನನ್ನು ಮುಷ್ಟಿಯಿಂದ ಬಲವಾಗಿ ಹಿಡಿದು, "ಬೆನ್ನನ್ನು ಬಗ್ಗಿಸಿ, ಕೊರಳನ್ನು ಕುಗ್ಗಿಸಿ ಕಣ್ಣನ್ನು ಅರಳಿಸಿ ಮುಖವನ್ನು ತಗ್ಗಿಸಿ ಬಹುಕಷ್ಟದಿಂದ ಬರೆದ" ಲಿಪಿಕಾರರಿಗೆ, ಅವರಿಂದ ಬರೆಯಿಸಿದ ಅಭಿಮಾನಿಗಳಿಗೆ, ಸಲ್ಲಬೇಕು.

ಪ್ರಾಚೀನಕಾಲದ ಹಸ್ತಪ್ರತಿ ಎಂದರೆ, ಕನ್ನಡನಾಡಿನ ಮಟ್ಟಿಗೆ ಹೇಳುವುದಾದರೆ, ಕೈಬರಹದ ತಾಳೆಗರಿಗಳ ಕಟ್ಟು. ದಕ್ಷಿಣ ಭಾರತದಲ್ಲಿ ತಾಳೆಯ ಮರಗಳು ವಿಶೇಷವಾಗಿ ಬೆಳೆಯುವುದರಿಂದ ನಮ್ಮ ಕವಿಗಳೂ ಲಿಪಿಕಾರರೂ ತಾಳೆಯಗರಿಗಳನ್ನೇ ಕೃತಿಗಳನ್ನು ಬರೆಯುವುದಕ್ಕೆ ಉಪಯೋಗಿಸುತ್ತಿದ್ದರು. ನಮ್ಮ ದೇಶದಲ್ಲಿ ಕಾಗದದ ಉಪಯೋಗವನ್ನು ಮಹಮ್ಮದೀಯರೂ, ಆಮೇಲೆ ಬ್ರಿಟಿಷರೂ ಬಳಕೆಗೆ ತಂದರು. ಕನ್ನಡನಾಡಿನಲ್ಲಿ ಕಾಗದದ ಉಪಯೋಗ ವಿಶೇಷವಾಗಿ ೧೫ನೆಯ ಶತಮಾನದಿಂದ ಬಳಕೆಗೆ ಬಂದಂತೆ ಕಾಣುತ್ತದೆ. ತಾಳೆಯೋಲೆಯ ಪ್ರತಿಗಳು ಒಂದು ಸಾವಿರವರ್ಷ ತಾಳಿಕೆ ಬರುತ್ತವೆ ಎಂದು ತಿಳಿದುಬರುತ್ತದೆ. ಈ ಕಾರಣದಿಂದ, ಕಾಗದ ವಿಶೇಷವಾಗಿ ಬಳಕೆಗೆ ಬಂದ ೧೯ನೆಯ ಶತಮಾನದಲ್ಲಿ ಕೂಡ ಕಾವ್ಯಗಳನ್ನೂ, ಇತರ ಶಾಸ್ತ್ರಗ್ರಂಥಗಳನ್ನೂ—ಕಡೆಗೆ ಪಂಚಾಂಗಗಳನ್ನೂ ಜಾತಕಗಳನ್ನೂ ಕೂಡ—ಓಲೆಗರಿಯ ಮೇಲೆ ಬರೆದಿಡುತ್ತಿದ್ದರು. ತಾಳಿಕೆ ಬರುವ ಸಂಗತಿ ಮಾತ್ರವಲ್ಲದೆ, ಓಲೆಗರಿಯ ಮೇಲೆ ಬರೆದದ್ದು ಪವಿತ್ರ ಎಂಬ ಧಾರ್ಮಿಕ ಭಾವನೆಯೂ ತಾಳೆಯೋಲೆಯ ಬಳಕೆಗೆ ಕಾರಣವಾಗಿದ್ದಿರಬೇಕು.

ಪೂರ್ವಕಾಲದಲ್ಲಿ ಸ್ವಂತ ವ್ಯಾಸಂಗಕ್ಕಾಗಿ, ಮಕ್ಕಳ ಮೊಮ್ಮಕ್ಕಳ ವಿದ್ಯಾಭ್ಯಾಸಕ್ಕಾಗಿ, ಆಚಾರ್ಯರು ಶಿಷ್ಯರಿಗೆ ಬೋಧಿಸುವುದಕ್ಕಾಗಿ ತಾಳೆಯೋಲೆಯ ಗ್ರಂಥಗಳನ್ನು ಸ್ವತಃ ಬರೆದಿಟ್ಟುಕೊಳ್ಳುತ್ತಿದ್ದರು; ಇಲ್ಲವೆ ಬರೆಯುವ ಕಲೆಯಲ್ಲಿ ಪಳಗಿದ್ದ ಲಿಪಿಕಾರರಿಂದ ಪ್ರತಿಮಾಡಿಸಿ, ಬೇಕಾದ ಗ್ರಂಥಗಳನ್ನು ದೊರಕಿಸಿಕೊಳ್ಳುತ್ತಿದ್ದರು. ಅಲ್ಲದೆ, ಧಾರ್ಮಿಕ ಗ್ರಂಥಗಳನ್ನು ತಾವೇ ಪ್ರತಿಮಾಡಿಯೋ, ಮಾಡಿಸಿಯೋ ಪಾತ್ರರಾದವರಿಗೆ ದಾನಮಾಡುತ್ತಿದ್ದರು. ಇದು 'ಶಾಸ್ತ್ರದಾನ' ಎಂದು ಪ್ರಸಿದ್ಧವಾಯಿತು. ಕನ್ನಡ ಸಾಹಿತ್ಯ ರಾಶಿಯಲ್ಲಿ ಧಾರ್ಮಿಕ ಗ್ರಂಥಗಳೇ ಬಹುಸಂಖ್ಯೆಯವಾದ್ದರಿಂದ, ಸಾಹಿತ್ಯಾಭಿಮಾನಿಗಳಾದ ರಾಜರುಗಳು ವಿದ್ವಾಂಸರಿಗೂ, ಕವಿಗಳಿಗೂ ಆಶ್ರಯ ಕೊಡುತ್ತಿದ್ದುದರಿಂದ ಅರಮನೆಗಳೂ ಗುರುಮನೆಗಳೂ ಅಕ್ಷರಶಃ ಸರಸ್ವತೀ ಭಂಡಾರಗಳಾದವು. ಇವುಗಳನ್ನು ಅನ್ವರ್ಥವಾಗಿ ಸರಸ್ವತೀ ಭಂಡಾರಗಳೆಂದು ಕರೆಯುತ್ತಿದ್ದರು. ಇವಲ್ಲದೆ ಪ್ರತಿಯೊಂದು ಊರಿನಲ್ಲಿಯೂ ಒಬ್ಬರ ಮನೆಯಲ್ಲಾದರೂ ಗ್ರಂಥಸಂಗ್ರಹ ಇರುತ್ತಿತ್ತು. ಪ್ರತಿಗಳನ್ನು ಮಾಡಿಸುವುದು ಬಹಳ ಕಷ್ಟದ ಕೆಲಸವಾದ್ದರಿಂದ, ಗ್ರಂಥಗಳೆಲ್ಲವೂ ಧಾರ್ಮಿಕ ವಿಷಯಗಳನ್ನೋ ಶಾಸ್ತ್ರವಿಚಾರಗಳನ್ನೋ ಒಳಗೊಂಡಿದ್ದು; ಧರ್ಮಾರ್ಥ ಕಾಮ ಮೋಕ್ಷಸಾಧಕಗಳು ಎಂಬ ನಂಬಿಕೆ ಇಟ್ಟಿದ್ದುದರಿಂದ ತಾಡವೋಲೆಯ ಗ್ರಂಥಗಳ ಸಂರಕ್ಷಣೆಯಲ್ಲಿ ನಮ್ಮ ಜನ ಅಪಾರ ಶ್ರದ್ಧಾಭಕ್ತಿಗಳನ್ನು ತೋರಿಸುತ್ತಿದ್ದರು.

ನಮ್ಮ ಪೂರ್ವಿಕರ ಗ್ರಂಥಭಕ್ತಿ ಮೂಢಭಕ್ತಿಯಾಗಿರಲಿಲ್ಲ. ಬಹಳ ಅರ್ಥಪೂರ್ಣವಾಗಿದ್ದು ಅತ್ಯಂತ ಜಾಗರೂಕವಾದ ಗ್ರಂಥಸಂರಕ್ಷಣೆಯಲ್ಲಿ ವ್ಯಕ್ತಪಡುತ್ತಿತ್ತು. ತಾಳೆಗರಿಯ ಕಟ್ಟುಗಳ ಗರಿಗಳು ಮುರಿದುಹೋಗದಂತೆ ಎರಡು ಕಡೆಯೂ ಮರದ ಫಲಕಗಳು ರಕ್ಷಣೆ ನೀಡುತ್ತಿದ್ದವು; ಗರಿಗಳಿಗೂ ಫಲಕಗಳಿಗೂ ಒಂದೇ ಕಡೆ ಎರಡು ರಂಧ್ರಗಳಿದ್ದು, ಈ ರಂಧ್ರಗಳ ಮೂಲಕ ದಪ್ಪ ದಾರಗಳನ್ನು ಉಪಯೋಗಿಸಿ, ಗರಿಗಳನ್ನು ಮಗುಚಿ ಮಗುಚಿ ಓದುವುದಕ್ಕೂ ಗ್ರಂಥವನ್ನು ಕಟ್ಟಿಡುವುದಕ್ಕೂ ಅವಕಾಶ ಕಲ್ಪಿಸಿದ್ದರು. ಜಿರಲೆಗಳೂ ಇಲಿಗಳೂ ಪ್ರವೇಶ ಮಾಡದಂತಹ, ಸಂದುಬಿಡದ, ಮುಚ್ಚಳ ಇರುವ ಮರದ ಪೆಠಾರಿಗಳಲ್ಲಿ ಗ್ರಂಥಗಳನ್ನು ಓರಣವಾಗಿ ಇಡುತ್ತಿದ್ದರು. ಪ್ರತಿಯೊಂದು ಗ್ರಂಥದ ಕಟ್ಟನ್ನು ಕೆಂಪು ಇಲ್ಲವೆ ಹಳದಿಬಣ್ಣದ ರೇಶಿಮೆ ವಸ್ತ್ರಗಳಿಂದ ಸುತ್ತಿಡುತ್ತಿದ್ದರು. ಈ ಬಣ್ಣಗಳ ಬಟ್ಟೆ ನುಸಿ ಹುಳು ಮುಂತಾದ ಕ್ರಿಮಿಕೀಟಗಳನ್ನು ದೂರವಿಡುತ್ತದೆ ಎಂದು ಅನುಭವದಿಂದ ಕಂಡುಕೊಂಡಿದ್ದರು. ಬಟ್ಟೆಯ ಒಳಗಡೆ ಕಟ್ಟುಗಳ ಸುತ್ತಲೂ ಒಣಗಿದ ಹೊಂಗೆಯ ಮತ್ತು ಬೇವಿನ ಎಲೆಯ ಪುಡಿಯನ್ನು ಉದುರಿಸುತ್ತಿದ್ದರು. ಪ್ರತಿವರ್ಷವೂ ಸರಸ್ವತೀ ಹಬ್ಬದ ದಿವಸ ಓಲೆಯ ಗರಿಯ ಕಟ್ಟುಗಳನ್ನು ಪೆಠಾರಿಯಿಂದ ಹೊರಕ್ಕೆ ತೆಗೆದು, ಪ್ರತಿಗರಿಯನ್ನೂ ಆಗತಾನೆ ಹುಟ್ಟಿದ ಮಗುವನ್ನು ಎತ್ತಿಕೊಳ್ಳುವಂತೆ ಎಚ್ಚರಿಕೆಯಿಂದ ಸರಿಸಿ, ಶುಭ್ರವಾದ ಮೃದುವಾದ ಬಟ್ಟೆಯಿಂದಲೋ ಕೂರ್ಚದಿಂದಲೋ ಒರಸಿ, ಕ್ರಿಮಿನಾಶಕ ತೈಲ

ಲೇಪನಮಾಡಿ ಕಟ್ಟುಗಳನ್ನು ಯಥಾಸ್ಥಾನದಲ್ಲಿರಿಸಿ, ಗ್ರಂಥಸ್ಥ ಸರಸ್ವತಿಯನ್ನು ಯಥಾವಿಧಿಯಾಗಿ ಧೂಪದೀಪ ನೈವೇದ್ಯನಿರಾಜನಾದಿಗಳಿಂದ ಪೂಜೆಮಾಡುತ್ತಿದ್ದರು. ಇಂಥ ಪೂಜೆಯ ವೇಳೆಯಲ್ಲೇ ಗ್ರಂಥಗಳಿಗೆ ಎಣ್ಣೆ ಬೆಂಕಿಗಳಿಂದ ಹಾನಿ ತಟ್ಟುವ ಭಯದ ಶಂಕೆ ಇದ್ದದ್ದು. ಬಿಚ್ಚಿದ ಕಟ್ಟುಗಳನ್ನು ಮತ್ತೆ ಕಟ್ಟುವಾಗ ಸಡಿಲವಾಗಿ ಕಟ್ಟುವುದರಿಂದ ಹುಳುಹುಪ್ಪಟೆ ಸೇರಿಕೊಳ್ಳುವ ಸಂಭವ ಇರುತ್ತಿತ್ತು. ಎಂದೇ "ತೈಲಾದ್ರಕ್ಷೇಜ್ಜಲಾದ್ರಕ್ಷೇತ್ ರಕ್ಷೇತ್ ಶಿಥಿಲ ಬಂಧನಾತ್" ಎಂದು ಲಿಪಿಕಾರರು ಮೊರೆಯಿಟ್ಟಿರುವುದು.

ನಮ್ಮ ಪೂರ್ವಿಕರು ಶತಮಾನಗಳ ಹಿಂದಿನಿಂದಲೂ ಇಷ್ಟೆಲ್ಲ ಎಚ್ಚರಿಕೆ ವಹಿಸುತ್ತಿದ್ದರೂ ಲೆಕ್ಕವಿಲ್ಲದಷ್ಟು ಗ್ರಂಥಗಳು ನಾಶವಾಗಿ ಹೋಗಿವೆ. ೯ನೆಯ ಶತಮಾನದ 'ಕವಿರಾಜಮಾರ್ಗ'ದಲ್ಲಿ ವಿಮಲೋದಯ, ನಾಗಾರ್ಜುನ, ಜಯಬಂಧು ಇತ್ಯಾದಿ ಅನೇಕ ಗದ್ಯ ಪದ್ಯ ಗ್ರಂಥಕರ್ತರ ಹೆಸರುಗಳು ಉಕ್ತವಾಗಿವೆ. ಆದರೆ ಇವರ ಯಾವ ಗ್ರಂಥಗಳೂ ಸಿಕ್ಕಿಲ್ಲ. ಇವು ಎಲ್ಲವೂ ನಷ್ಟವಾಗಿವೆ ಎಂದೂ ಹೇಳಬರುವುದಿಲ್ಲ. ಎಲ್ಲೋ ಯಾರ ಬಳಿಯೋ ಅಡಗಿಕೊಂಡಿರಬಹುದು. 'ಕಾವ್ಯಾವಲೋಕ'ನವನ್ನು ಬರೆದ ನಾಗವರ್ಮನು ಒಂದು ಜೈನ ಪುರಾಣವನ್ನು ಬರೆದಿರಬಹುದು ಎಂಬ ಸಂಗತಿ ನಮಗೆ ತಿಳಿದಿತ್ತು. ಆದರೆ ಅವನ ಪುರಾಣಗ್ರಂಥ ಯಾವುದೂ ಸಿಕ್ಕಿರಲಿಲ್ಲ. ಈಚೆಗೆ ಅನಿರೀಕ್ಷಿತವಾಗಿ ಅವನ 'ವರ್ಧಮಾನ ಪುರಾಣ' ಸಿಕ್ಕಿದೆ; ಮೈಸೂರು ವಿಶ್ವವಿದ್ಯಾನಿಲಯ ಅದನ್ನು ಅಚ್ಚು ಮಾಡಿಸಿದೆ. ಈ ಗ್ರಥ ದೊರೆತಮೇಲೆ ಈ ನಾಗವರ್ಮನ ಕಾಲ ಅದರಲ್ಲಿಯ ಕಾಲ ಸೂಚಕ ಪದ್ಯದಿಂದ ಕ್ರಿ.ಶ. ೧೦೪೨ ಎಂದು ಖಚಿತವಾಗಿ ತಿಳಿಯಿತು; ೧೧೫೦ ಎಂಬ ಕವಿಚರಿತೆಕಾರರ ನಿರ್ಣಯ ಬಿದ್ದು ಹೋಯಿತು! ಈ ಗ್ರಂಥದಲ್ಲಿ ಕವಿರಾಜಮಾರ್ಗಕಾರ ಶ್ರೀವಿಜಯನು **'ರಘುವಂಶ ಮಹಾಪುರಾಣ'**ವನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಅವನು 'ಚಂದ್ರಪ್ರಭ ಪುರಾಣ'ವನ್ನೂ ಬರೆದಿರುವನೆಂದು ಊಹಿಸಲವಕಾಶವಿದೆ. ಆದರೆ 'ಚಂದ್ರಪ್ರಭ ಪುರಾಣ' ಬರೆದಿದ್ದಾನೆಂದು ಹೇಳಲು ೧೬ನೆಯ ಶತಕದ ದೊಡ್ಡಯ್ಯ ಮುಂತಾದವರ ಹೇಳಿಕೆ ಅಷ್ಟು ವಿಶ್ವಸನೀಯವಲ್ಲ. ಈ ಎರಡೂ ನಷ್ಟವಾಗಿವೆಯೋ ಎಲ್ಲಾದರೂ ಅಡಗಿಕೊಂಡಿವೆಯೋ ಯಾರು ಬಲ್ಲರು? 'ನೃಪತುಂಗಾಭ್ಯುದಯ'ವೆಂಬ ಗ್ರಂಥವೂ ಆತನಿಂದ ರಚಿತವಾಗಿರುವಂತಿದೆ, ಪ್ರತಿ ಸಿಕ್ಕಿಲ್ಲ, ಎಂದು ಊಹಿಸಲು ಒಂದು ಆಧಾರ ದೊರಕಿದೆ. ಕರ್ನಾಟಕ ವಿಶ್ವವಿದ್ಯಾಲಯ ಕೆಲಕಾಲದ ಹಿಂದೆ ಕಂಡುಹಿಡಿದ **'ನೃಪತುಂಗಾಭ್ಯುದಯ'** ಎಂಬ ಹೆಸರನ್ನುಳ್ಳ 'ಕವಿರಾಜಮಾರ್ಗ'ದ ಹಸ್ತಪ್ರತಿ ಈ ಊಹೆಗೆ ಆಧಾರ. 'ಕವಿರಾಜಮಾರ್ಗ'ಕ್ಕೇ 'ನೃಪತುಂಗಾಭ್ಯುದಯ' ಎಂಬ ನಾಮಾಂತರ ಎಂಬುದಿದು ಡಾ|| ಎಂ. ಎಂ. ಕಲಬುರ್ಗಿ ಅವರ ಅಭಿಪ್ರಾಯ. ಈ ಸಂದರ್ಭದಲ್ಲಿ 'ಶಬ್ದಮಣಿ ದರ್ಪಣ'ದಲ್ಲಿ ಉದಾಹೃತವಾಗಿರುವ—

"ವೀರನುದಾರಂ ಶುಚಿ ಗಂ-
ಭೀರಂ ನಯಶಾಲಿ ಕೈದುವೊತ್ತರ ದೇವಂ-
ಗಾರೆಱಿಗರ್ ನೃಪತುಂಗಂಗೆ" (ಪು. ೧೫೧-೧)

ಎಂಬ ಪದ್ಯಖಂಡವನ್ನೂ, ಕೇಶಿರಾಜನು ಶ್ರೀವಿಜಯನ ಸುಮಾರ್ಗವನ್ನು ನೆನೆದಿರುವುದನ್ನೂ ; 'ಶಬ್ದಮಣಿದರ್ಪಣ'ದಲ್ಲಿ 'ಕವಿರಾಜಮಾರ್ಗ'ದ ಪದ್ಯಗಳೂ ಉದಾಹೃತವಾಗಿದ್ದರೂ ಮೇಲ್ಕಂಡ ಪದ್ಯಖಂಡ ಈ ವರೆಗೆ ದೊರೆತ ಯಾವ 'ಕವಿರಾಜಮಾರ್ಗ'ದ ಹಸ್ತಪ್ರತಿಯಲ್ಲೂ ಇಲ್ಲದಿರುವುದರಿಂದಲೂ ; 'ನೃಪತುಂಗಾಭ್ಯುದಯ' ಎಂಬ ನಾಮ 'ಕವಿರಾಜಮಾರ್ಗ'ದ ಹೊಸ ಹಸ್ತಪ್ರತಿಯಲ್ಲಿ ಅಕಾರಣವಾಗಿ ಎಂಬಂತೆ ಲಿಖಿತವಾಗಿರುವುದರಿಂದಲೂ ; ಈ ಪ್ರತಿಯ ಸಂಪ್ರತಿಕಾರ 'ನೃಪತುಂಗಾಭ್ಯುದಯ'ವನ್ನು ಪ್ರತಿಮಾಡಲುದ್ದೇಶಿಸಿ ಆ ಕಾವ್ಯದ ಹೆಸರನ್ನುಮಾತ್ರ ಬರೆದು ಕಾವ್ಯಬರೆಯುವುದನ್ನು ಮುಂದುವರಿಸದೆ ಅದೇ ಶ್ರೀವಿಜಯನ 'ಕವಿರಾಜಮಾರ್ಗ'ವನ್ನು ಸಂಪ್ರತಿಸತೊಡಗಿ ಪೂರೈಸಿದ್ದಾನೆ ಎಂದು ಊಹಿಸಲಡ್ಡಿಯಿಲ್ಲ. ಊಹೆಯಷ್ಟೆ. ಪೊನ್ನನು ಬರೆದಿರಬಹುದೆಂದು 'ಶಬ್ದಮಣಿದರ್ಪಣ'ದ ಆಧಾರದಿಂದ ಊಹಿಸಲಾದ 'ಭುವನೈಕರಾಮಾಭ್ಯುದಯ' ನಮ್ಮ ಕುತೂಹಲವನ್ನು ಕೆರಳಿಸಿರುವ ಇನ್ನೊಂದು ಕೃತಿ. ಶ್ರೀವಿಜಯನ ಒಂದು ಪುರಾಣಕಾವ್ಯ ಒಂದು ಲೌಕಿಕ ಕಾವ್ಯ ಇಂಥ ಜೋಡಿಕೃತಿಗಳ ರಚನೆ ಪಂಪ ಪೊನ್ನ ರನ್ನರಿಗೆ ಮಾದರಿಯಾಗಿರಬಹುದು. ಪಂಪ ಹೇಳಿಕೊಂಡಿದ್ದಾನೆ—ತನ್ನ ಕೃತಿಗಳು "ಮುನ್ನಿನ ಕಬ್ಬಮೆಲ್ಲಮನ್ ಇಕ್ಕಿ ಮೆಟ್ಟಿದುವು" ಎಂದು. 'ಕವಿಗೆ ಕವಿ ಮುನಿವಂ' ಎಂದು ಶಬ್ದಮಣಿದರ್ಪಣದಲ್ಲಿ ಒಂದು ಉದಾಹರಣವಾಕ್ಯವಿದೆ. ಹೀಗೆ ಹಲವು ಕೃತಿಗಳು ಸಿಕ್ಕದಿರುವುದು, ಈ ಕವಿ ವಾಕ್ಯಗಳು, ಇವನ್ನು ಗಮನಿಸಿದರೆ ಕವಿಗಳ ಅಸೂಯೆ, ಅನ್ಯಮತೀಯ ಗ್ರಂಥದ್ವೇಷ, ಅನೇಕ ಗ್ರಂಥಗಳ ನಷ್ಟಕ್ಕೆ ಕಾರಣವಾಗಿರಬಹುದು ಎಂದು ತೋರುತ್ತದೆ.

'ರಾಮನಾಥ ಚರಿತೆ'ಯ (ಕುಮಾರರಾಮನ ಸಾಂಗತ್ಯ) ಪೀಠಿಕಾ ಪ್ರಕರಣದಲ್ಲಿ ನಂಜುಂಡಕವಿ

ಕಾದಂಬರಿಯ ಸುಡಿಸಿ ಲೀಲಾವತಿ|ಗಾದರದಿಂ ಕಪ್ಪನಿಟ್ಟು
ಮೇದಿನಿಯನು ಮೆಚ್ಚಿಸಿದ ನೇಮಿಚಂದ್ರನ | ಪಾದಗಳನು ಬಲಗೊಂಬೆ ||

ಎಂದು ನೇಮಿಚಂದ್ರನನ್ನು ಹೊಗಳಿದ್ದಾನೆ. ನಾಗವರ್ಮನ ಕನ್ನಡ ಕಾದಂಬರಿಯ ಹಸ್ತಪ್ರತಿಯನ್ನು ಸುಡಿಸಿ, ಸುಟ್ಟ ಕರಿಕೆನಿಂದ ನೇಮಿಚಂದ್ರ ತನ್ನ ಕಾವ್ಯದ ಓಲೆಗರಿಯ ಪ್ರತಿಯಲ್ಲಿ ಕೊರೆದ ಅಕ್ಷರಗಳನ್ನು ಕಪ್ಪಾಗಿಸಿದ ಎಂಬ ಮಾತು 'ಲೀಲಾವತಿ' 'ಕಾದಂಬರಿ'ಗಿಂತ ಮೇಲು ಎನ್ನುವುದಕ್ಕೆ ಆಲಂಕಾರಿಕ ಭಾಷೆಯಾಗಿರಬಹುದು. ಅವರ ಮತಗಳ ಪೈಪೋಟಿಯ ಹಿಂದಿನ ಕಾಲದಲ್ಲಿ ಅಂಧಶ್ರದ್ಧೆಯ ಮತಾನುಯಾಯಿಗಳು ಅನ್ಯಮತದ ಕವಿಕೃತಿಗಳನ್ನು ಧ್ವಂಸಮಾಡುವುದಕ್ಕೆ ಹಿಂಜರಿಯುತ್ತಿರಲಿಲ್ಲ ಎಂದು ಹೇಳಬಹುದು. ಹಸ್ತಪ್ರತಿಗಳ ನಷ್ಟಕ್ಕೆ ಬೇರೆಯ ಕಾರಣಗಳೂ

ಇರಬಹುದು. ಅದು ಹಾಗಿರಲಿ, ನಾಮಾವಶೇಷವಾಗಿರುವ ಈ ಕೃತಿಗಳು 'ವರ್ಧಮಾನ ಪುರಾಣ' ಸಿಕ್ಕಿದಂತೆ ಸಿಕ್ಕಲೂಬಹುದು. ಈ ಕಾರಣಕ್ಕಾಗಿ ಹಸ್ತ ಪ್ರತಿಗಳ ಅನ್ವೇಷಣ, ಸಂಗ್ರಹಣ ಅತಿ ಮಹತ್ವದ ಕಾರ್ಯಗಳು ಎಂದು ಒತ್ತಿ ಹೇಳ ಬಯಸುತ್ತೇನೆ. ಸಂಗ್ರಹಿಸಿದ ಅನುಪಯುಕ್ತ ಗ್ರಂಥರಾಶಿಯಲ್ಲಿ ಒಂದು ಕೃತಿರತ್ನ ಅಡಗಿರಬಹುದು.

ಪೂರ್ವಿಕರ ಸಂರಕ್ಷಣೆಯ ವಿಧಾನಗಳಿಂದ ಅಸಂಖ್ಯಾತ ಹಸ್ತಪ್ರತಿಗಳು ನಷ್ಟ ವಾಗದೆ ನಮಗೆ ಉಳಿದು ಬಂದಿವೆ. ಇವುಗಳಲ್ಲಿ ಒಂದು ಗಣ್ಯಭಾಗ ಜೈನ, ವೀರ ಶೈವ, ವೈದಿಕ ಮತಗಳ ಬೇರೆ ಬೇರೆ ಮಠಗಳಲ್ಲಿ ತಕ್ಕಮಟ್ಟಿಗೆ ಸುರಕ್ಷಿತವಾಗಿವೆ ಎಂದು ಹೇಳಬಹುದು. ಆದರೆ ಖಾಸಗಿ ವ್ಯಕ್ತಿಗಳ ವಶದಲ್ಲಿರುವ ಅನೇಕ ಸಹಸ್ರ ಸಂಖ್ಯೆಯ ಹಸ್ತಪ್ರತಿಗಳು ಸುರಕ್ಷಿತವಾಗಿವೆ ಎಂದು ಹೇಳಲು ಸಾಧ್ಯವಿಲ್ಲ. ಸರಸ್ವತೀ ಪೂಜೆಯ ನಿಮಿತ್ತದಲ್ಲಿ ನಡೆಯುತ್ತಿದ್ದ ಹಸ್ತಪ್ರತಿಸಂರಕ್ಷಣೆಯ ವಿಧಿ ವಿಧಾನಗಳ ಅನುಸರಣೆ ಈ ಶತಮಾನದ ಆದಿಭಾಗದಿಂದಲೇ ನಿಂತುಹೋದಂತೆ ಕಾಣು ತ್ತದೆ. ಓಲೆಗರಿ ಕಟ್ಟುಗಳು ತುಂಬಿದ್ದ ಪೆಟ್ಟಗೆಯ ಮೇಲೆ ನಾಲ್ಕುಹೂವನ್ನು ಏರಿಸಿ, "ಧೂಪದೀಪ ಸಕಲಾರಾಧನೈಸ್ಸಮರ್ಚಿತಂ" ಎನ್ನುವ ಶುಷ್ಕೋಪಚಾರಪೂಜೆ ಮಾತ್ರ ಇಂದಿಗೂ ಉಳಿದು ಬಂದಿದೆ. ಪೆಟ್ಟಿಗೆಯೊಳಗೇ ಹಸ್ತಪ್ರತಿಗಳಿಗೆ ಧೂಳಿನ ಸ್ನಾನವಾಗಿ, ಅವು ಗೆದ್ದಲುಹುಳುವಿಗೋ ನುಸಿ ಮುಂತಾದ ಕ್ರಿಮಿಕೀಟಗಳಿಗೋ ನೈವೇದ್ಯವಾಗಿರಬಹುದು! ಈ ಪರಿಸ್ಥಿತಿಯಲ್ಲಿ ಈಗ ಜರೂರಾಗಿ ಆಗಬೇಕಾಗಿರು ವುದು ಹಸ್ತಪ್ರತಿಗಳ ಅನ್ವೇಷಣೆ, ಸಂಗ್ರಹಣ ಮತ್ತು ಸಂರಕ್ಷಣ; ಕಾಲಕ್ರಮದಲ್ಲಿ ಅವುಗಳ ಪ್ರಕಟನೆ, ಇದೇ ಅಂತಿಮ ಗುರಿ. ಈ ಕೆಲಸವನ್ನು ನಾವು ಮಾಡದೆ ಹೋದರೆ ಉಳಿದು ಬಂದಿರುವಷ್ಟು ಹಸ್ತಪ್ರತಿಗಳು ಕೂಡ ಒಲೆಯ ಪಾಲೋ ಹೊಳೆಯ ಪಾಲೋ ಆಗಬಹುದು; ಅರಿಯದ ಅಜ್ಞಾನಿ ಮನೆಮಕ್ಕಳ ಕೈಗೆ ಸಿಕ್ಕಿ ಪುಡಿಪುಡಿ ಯಾಗಬಹುದು. ಅಕ್ಷರಸರಸ್ವತಿ ಅಂತರ್ಧಾನಳಾಗಬಹುದು.

ಹಸ್ತಪ್ರತಿಗಳ ಸಂಗ್ರಹಣ, ಸಂರಕ್ಷಣ ಮತ್ತು ಪ್ರಕಟನ ಕಾರ್ಯಗಳಲ್ಲಿ ನಮಗೆ ಮೇಲ್ಪಂಕ್ತಿ ಹಾಕಿ ಮಾರ್ಗದರ್ಶಕರಾಗಿರುವವರು, ಲ್ಯೂಯಿ ರೈಸ್ ಸಾಹೇಬರು, ಆರ್. ನರಸಿಂಹಾಚಾರ್ಯರು, ಎಂ. ಎ. ರಾಮಾನುಜಯ್ಯಂಗಾರ್ಯರು, ಫ. ಗು. ಹಳಕಟ್ಟಿ ಮತ್ತು ಚೆನ್ನಪ್ಪ ಉತ್ತಂಗಿಯವರು. ರೈಸ್‌ರವರು ೧೮೯೦ರಲ್ಲಿ ಪ್ರಕಟಿಸಿದ 'ಶಬ್ದಾನುಶಾಸನ'ದ ಮುನ್ನುಡಿಯಲ್ಲಿ ೧೮೭೦ರಿಂದ ತಾವು ಹಸ್ತಪ್ರತಿಗಳ ಅನ್ವೇಷಣೆ ಮತ್ತು ಸಂಗ್ರಹ ಕಾರ್ಯದಲ್ಲಿ ತೊಡಗಿದ ಸಂಗತಿಯನ್ನು ಉಲ್ಲೇಖಿಸಿದ್ದಾರೆ; ಶ್ರವಣಬೆಳುಗೊಳದ ಬ್ರಹ್ಮಸೂರಿ ಶಾಸ್ತ್ರಿಗಳು, ಚಾಮರಾಜನಗರದ ಪಂಡಿತರು ಕಿಟ್ಟಪ್ಪರು, ಬಿ. ಮಲ್ಲಪ್ಪನವರು ಮುಂತಾದ ವಿದ್ವಾಂಸರು ಈ ಕಾರ್ಯದಲ್ಲಿ ತಮಗೆ ನೆರವಾದುದನ್ನು ಸ್ಮರಿಸಿದ್ದಾರೆ. ರೈಸ್ ಮತ್ತು ನರಸಿಂಹಾಚಾರ್ಯರ ದುಡಿಮೆಯ ಫಲವಾಗಿ ಮೈಸೂರಿನ ಓರಿಯಂಟಲ್ ಲೈಬ್ರರಿ ೧೮೮೮ರಲ್ಲಿ ಸ್ಥಾಪನೆಯಾಗಿ ಬೆಳೆ

ಯಿತು. ಅವರಲ್ಲಿದ್ದ ಕನ್ನಡ ಹಸ್ತಪ್ರತಿಗಳು ಈಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸುರಕ್ಷಿತವಾಗಿವೆ. ರೈಸ್ ಅವರಂತೆ ಕರ್ನಲ್ ಮೆಕಂಜಿ ಮದರಾಸು ಪ್ರಾಂತದಲ್ಲಿ ಹಸ್ತಪ್ರತಿಗಳ ಸಂಗ್ರಹ ಮಾಡಿದರು. ಈಚೆಗೆ ಕರ್ನಾಟಕ ವಿಶ್ವವಿದ್ಯಾನಿಲಯ, ಬೆಂಗಳೂರು ವಿಶ್ವವಿದ್ಯಾನಿಲಯಗಳೂ ಕೂಡ ಅತ್ಯಲ್ಪ ಕಾಲದಲ್ಲಿ ಗಣ್ಯವಾಗಿ ಸಂಗ್ರಹ ಮಾಡಿವೆ. ಮೈಸೂರು ವಿಶ್ವವಿದ್ಯಾನಿಲಯ ಹಸ್ತಪ್ರತಿಗಳು ಇರುವ ಕಡೆಗೆ ತನ್ನ ಪ್ರತಿನಿಧಿಗಳನ್ನು ಕಳಿಸಿ, ಅವುಗಳ ಮೈಕ್ರೋಫಿಲಂ ತೆಗೆಸಿಡುವ ಸ್ತುತ್ಯ ಕಾರ್ಯಕ್ರಮ ಹಾಕಿಕೊಂಡಿದೆ. ಹಸ್ತಪ್ರತಿಗಳ ಸಂಗ್ರಹಣ ಹಾಗೂ ಸಂಸ್ಕರಣ ಈಗ ವಿಜ್ಞಾನದ ನೆರವಿನಿಂದ ಅತ್ಯಂತ ಸಮರ್ಪಕವಾಗಿ ನಡೆಯುವುದು ಸಾಧ್ಯ. ಆದರೆ ಎಲ್ಲ ಸಂಸ್ಥೆಗಳೂ ಈ ಕೆಲಸ ಮಾಡುವುದು ಬಹಳ ಕಷ್ಟಸಾಧ್ಯ. ಆದ್ದರಿಂದ ಆಧುನಿಕ ವೈಜ್ಞಾನಿಕ ರೀತಿಯಲ್ಲಿ ಸಜ್ಜಾದ ಹಸ್ತಪ್ರತಿಗಳ ಕೇಂದ್ರಭಂಡಾರವೊಂದು ಕರ್ನಾಟಕ ಸರ್ಕಾರದಿಂದ ಸ್ಥಾಪಿತವಾಗಬೇಕು. ಇದರಲ್ಲಿ ಹೊಸದಾಗಿ ಸಂಗ್ರಹವಾಗುವ ಹಸ್ತಪ್ರತಿಗಳಲ್ಲದೆ ಕರ್ನಾಟಕದ ಒಳಗೂ, ಹೊರಗೂ ಇರುವ ಎಲ್ಲ ಹಸ್ತಪ್ರತಿಗಳ ಸಂಗ್ರಹಣ ಕೇಂದ್ರಗಳ ಹಾಗೂ ಖಾಸಗಿ ವ್ಯಕ್ತಿಗಳ ಬಳಿಯಿರುವ ಹಸ್ತಪ್ರತಿಗಳ ಮೈಕ್ರೋಫಿಲ್ಮ್ ತೆಗೆದು ಶೇಖರಿಸಬೇಕು. ಮೈಕ್ರೋಫಿಲ್ಮ್ ರೀಡರ್ ಯಂತ್ರ, ಧೂಪೋಪಚಾರಗೃಹ(Fumigation chamber) ಮುಂತಾದ ಆಧುನಿಕ ಯಂತ್ರಸಲಕರಣೆಗಳನ್ನು ಇಲ್ಲಿ ಅಳವಡಿಸಬೇಕು. ಇಂಥ ಕೇಂದ್ರ ಹಸ್ತಪ್ರತಿ ಭಂಡಾರ ಎಲ್ಲಿ ಸ್ಥಾಪನೆಯಾಗಬೇಕು ಎಂಬುದು ಆ ಸಂದರ್ಭದಲ್ಲಿ ನಿರ್ಣಯಿಸಬೇಕಾದ ಪ್ರಶ್ನೆ. (ಹಸ್ತಪ್ರತಿಗಳ ಸಂಗ್ರಹಣೆ, ಸಂರಕ್ಷಣೆ, ಪ್ರಕಟನೆ— ಈ ಮುನ್ನೋಗವ ಮಣಿಹವನ್ನು ಮುಂದಿಟ್ಟುಕೊಂಡಿರುವ ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿಯೇ ಅಂಥ ಭಂಡಾರ ಏಕೆ ಸ್ಥಾಪನೆಯಾಗಬಾರದು?) ಎಲ್ಲ ಹಸ್ತಪ್ರತಿಗಳೂ ಸರ್ಕಾರದ ಸ್ವತ್ತು ಎಂಬ ಕಾನೂನನ್ನು ಜಾರಿಗೆ ತರುವ ವಿಷಯವನ್ನೂ ಪರ್ಯಾಲೋಚಿಸಬೇಕು. ಇಷ್ಟೆಲ್ಲ ಮಾಡಿ, ಹಸ್ತಪ್ರತಿಗಳು ಕಾಲಗರ್ಭದ ಕತ್ತಲೆಕೋಣೆಯಲ್ಲಿ ಕೊಳೆಯುವಂತಾಗಬಾರದು. ರಾಘವಾಂಕನು ತನ್ನ 'ಸಿದ್ಧರಾಮ ಚರಿತೆ'ಯನ್ನು ಕುರಿತು ಅದು 'ನೆಟ್ಟ ಕಲ್ಲೆನಿಸದೆ ಇಳೆಯೊಳು ಸುಳಿವ ಶಾಸನ' ಆಗಲಿ ಎಂದಿರುವ ಮಾತು ಸಂಗ್ರಹವಾದ ಹಸ್ತಪ್ರತಿಗಳಿಗೆ ಅನ್ವಯಿಸುವಂತಾಗಬೇಕು. ಎಂದರೆ ಗ್ರಂಥಸಂಪಾದನ ಶಾಸ್ತ್ರಜ್ಞರಿಂದ ಹಸ್ತಪ್ರತಿಗಳ ಬಂಧನದಿಂದ ಕನ್ನಡ ಶಾರದೆಯ ಬಿಡುಗಡೆಯಾಗಿ ನಾಡವರಿಗೆ ಆಕೆಯ ನಿತ್ಯದರ್ಶನವಾಗಬೇಕು. ಆಗಮಾತ್ರ ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣೆ ಸಾರ್ಥಕವಾಗುವುದು.

ಹಸ್ತಪ್ರತಿಗಳ ಕೇಂದ್ರಭಂಡಾರ ಸ್ಥಾಪನೆಯಾಗುವವರೆಗೆ ನಾವು ಸುಮ್ಮನಿರುವುದು ಸಲ್ಲದು. ಹಸ್ತಪ್ರತಿಗಳನ್ನು ಹೊಂದಿರುವವರು ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣ ಕಾರ್ಯದಲ್ಲಿ ನಿರತರಾಗಿರುವ ಸಂಸ್ಥೆಗಳಿಗೂ ವಿಶ್ವಾಸಾರ್ಹ ಗ್ರಂಥ ಸಂಪಾದಕರಿಗೂ ಅವುಗಳನ್ನು ಹಿಂದೆ ಮುಂದೆ ನೋಡದೆ ಒಪ್ಪಿಸಿ, ತವರುನಾಡಿನ

ಋಣದಿಂದ ಮುಕ್ತರಾಗಬೇಕು, ಅವುಗಳ ಸಂರಕ್ಷಣೆಯಲ್ಲಿ ಭಾಗಿಗಳ ವ ಪುಣ್ಯ ಕಟ್ಟಿಕೊಳ್ಳಬೇಕು. ಏಕೆಂದರೆ, 'ಕಾಲೋ ಜಗದ್ಭಕ್ಷಕಃ'. ಎಚ್ಚರಿಕೆ ವಹಿಸದಿದ್ದರೆ, ಹಸ್ತಪ್ರತಿಗಳನ್ನು ಕಾಲಪುರುಷ ಖಂಡಿತ ಉಳಿಯಗೊಡುವುದಿಲ್ಲ.

* [ಆಕಾಶವಾಣಿಯ ಕೃಪೆ: ಲಿಖಿತ ರೇಡಿಯೋ-ಭಾಷಣದಲ್ಲಿ ಕೆಲವು ಭಾಗಗಳನ್ನು ತೆಗೆದುಹಾಕಿ, ಕೆಲವು ಅಂಶಗಳನ್ನು ಹೊಸದಾಗಿ ಸೇರಿಸಿ, ಸ್ವಲ್ಪಮಟ್ಟಿಗೆ ವಿಸ್ತರಿಸಿ, ಮಾರ್ಪಡಿಸಿದ ಲೇಖನ.-ಲೇಖಕ]

—o—

## ಹಸ್ತಲಿಖಿತ ಪ್ರಬಂಧನಾಶಕ್ಕೆ ಕಾರಣಗಳು

ಸಿದ್ಧಂ ಚ ಪ್ರಬನ್ಧಮನೇಕಾದರ್ಶಗತಂ ಕುರ್ಯಾತ್ | ಯದಿತ್ಥಂ ಕಥಯನ್ತಿ-

“ನಿಕ್ಷೇಪೋ ವಿಕ್ರಯೋ ದಾನಂ ದೇಶತ್ಯಾಗೋಽಲ್ಪಜೀವಿತಾ |
ತ್ರುಟಿಕೋ ವಹ್ನಿರಂಭಶ್ಚ ಪ್ರಬಂಧೋಚ್ಛೇದಹೇತವಃ ||
ದಾರಿದ್ರ್ಯಂ ವ್ಯಸನಾಸಕ್ತಿರವಜ್ಞಾ ಮಂದಭಾಗ್ಯತಾ |
ದುಷ್ಟೇ ದ್ವಿಷ್ಟೇ ಚ ವಿಶ್ವಾಸಃ ಪಞ್ಚ ಕಾವ್ಯಮಹಾಪದಃ || (ಇತಿ)

ಪುನಃ ಸಮಾಪಯಿಷ್ಯಾಮಿ, ಪುನಃ ಸಂಸ್ಕರಿಷ್ಯಾಮಿ, ಸುಹೃದ್ಭಿಃ ಸಹ ವಿವೇಚಯಿಷ್ಯಾಮೀತಿ ಕರ್ತುರಾಕುಲತಾ ರಾಷ್ಟ್ರೋಪಪ್ಲವಶ್ಚ ಪ್ರಬಂಧವಿನಾಶ ಕಾರಣಾನಿ |

— ರಾಜಶೇಖರ: 'ಕಾವ್ಯಮೀಮಾಂಸೆ', ಅಧ್ಯಾಯ ೧೦.
(ಗಾಯಕವಾಡ ಓರಿಯಂಟಲ್ ಸೀರಿಸ್ ಮುದ್ರಣ, ಪು. ೫೩)

ಸಿದ್ಧವಾದ ಪ್ರಬಂಧವನ್ನು ಅನೇಕ ಪ್ರತಿಗಳಲ್ಲಿ ಬರೆಯಿಸಬೇಕು. ಏಕೆಂದರೆ, ಹಿಂದಿನವರು ಹೇಳಿರುವಂತೆ-

“ಒತ್ತೆ ಇಡುವುದು, ಮಾರಾಟ, ದಾನ, ದೇಶತ್ಯಾಗ, ಅಲ್ಪಾಯುಷ್ಯ, ಗೆದ್ದಲು, ಬೆಂಕಿ, ನೀರು-ಈ ಎಂಟೂ ಕಾವ್ಯವನ್ನು ಹಾಳುಮಾಡುವ ನಿಮಿತ್ತಗಳು”.

“ಬಡತನ, ವ್ಯಸನಾಸಕ್ತಿ, ತಿರಸ್ಕಾರ, ದುರದೃಷ್ಟ ಮತ್ತು ದುಷ್ಟರಲ್ಲಿ ಹಾಗೂ ದ್ವೇಷಿಗಳಲ್ಲಿ ವಿಶ್ವಾಸ-ಈ ಐದೂ ಕಾವ್ಯಕ್ಕೆ ಮಹಾವಿಪತ್ತುಗಳು.”

“ಮುಂದೆ ಬರೆದು ಮುಗಿಸುತ್ತೇನೆ, ಮತ್ತೆ ತಿದ್ದಿ ಸರಿಮಾಡುತ್ತೇನೆ, ಸ್ನೇಹಿತರೊಂದಿಗೆ ಕೂಡಿ ಪರಿಶೀಲಿಸುತ್ತೇನೆ, ಎಂದು ಮುಂತಾದ ಕವಿಯ ಆಲಸ್ಯ, ರಾಷ್ಟ್ರಕ್ಕೆ ಬಂದ ವಿಪತ್ತು-ಇವು ಪ್ರಬಂಧದ ವಿನಾಶಕ್ಕೆ ಕಾರಣಗಳು.”

— ಡಾ|| ಕೆ. ಕೃಷ್ಣಮೂರ್ತಿ: 'ಕನ್ನಡ ಕಾವ್ಯಮೀಮಾಂಸೆ', ೧೯೬೯, ಪು. ೧೧೩-೧೪.

— o —

# ಸಂಸ್ಕೃತ ಹಸ್ತಪ್ರತಿಗಳು

ಸಂಗ್ರಾಹಕ : **ಡಾ|| ಆರ್. ಶೇಷಶಾಸ್ತ್ರಿ**

ಭಾರತದಾದ್ಯಂತ ಇರುವ ಸುಮಾರು ಇನ್ನೂರ ಹದಿನೈದು ಸಂಸ್ಥೆಗಳಲ್ಲಿ ಸಂಸ್ಕೃತ, ಪ್ರಾಕೃತ ಮತ್ತು ಪಾಳಿ ಭಾಷೆಗಳ ಸುಮಾರು ಐದುಲಕ್ಷ ಹಸ್ತಪ್ರತಿಗಳು ರಕ್ಷಿಸಲ್ಪಟ್ಟಿವೆ. ಇಷ್ಟುಗಳಲ್ಲದೆ, ಹೊರದೇಶಗಳಾದ ಜರ್ಮನಿ, ಬ್ರಿಟನ್, ಜಪಾನ್ ಮತ್ತು ಸಿಲೋನ್ ಮುಂತಾದ ದೇಶಗಳಲ್ಲಿ ಸುಮಾರು ಒಂದು ಲಕ್ಷ ಹಸ್ತಪ್ರತಿಗಳು ಸಂಗ್ರಹಿತವಾಗಿವೆ. ಮೂರು ಸಾವಿರ ವರ್ಷಗಳ ಸಾಹಿತ್ಯಿಕ ಚರಿತ್ರೆಯುಳ್ಳ ಮತ್ತು ಎರಡು ಸಾವಿರಕ್ಕೂ ಮಿಗಿಲಾದ ಲಿಖಿತದಾಖಲೆಗಳ ಇತಿಹಾಸ ಉಳ್ಳ ಹಸ್ತಪ್ರತಿಗಳು ಕೇವಲ ಆರು ಲಕ್ಷ ಸಂಖ್ಯೆಯಷ್ಟು ಮಾತ್ರ ಕೂಡಹಾಕಲ್ಪಟ್ಟಿವೆ. ಸಂಗ್ರಹವಾಗದ, ನಾಶವಾಗಿ ಹೋಗಿರುವ ಹಸ್ತಪ್ರತಿಗಳ ಸಂಖ್ಯೆ ಇದರ ಎರಡು ಪಟ್ಟಾದರೂ ಇದ್ದಿರಬೇಕು. ಈಗ ಸಂಗ್ರಹಕಾರ್ಯವನ್ನು ಸಮರ್ಪಕವಾಗಿ ಮಾಡಿದ್ದೇ ಆದರೆ ಮತ್ತೆ ಇಷ್ಟೇ ಸಂಖ್ಯೆಯ ಹಸ್ತಪ್ರತಿಗಳು ದೊರೆಯುವುದರಲ್ಲಿ ಯಾವ ಸಂದೇಹವೂ ಇಲ್ಲ.

ಈ ದೇಶದ ಹಸ್ತಪ್ರತಿಗಳು ವ್ಯಕ್ತಿಗಳ ಅಜ್ಞಾನದಿಂದಾಗಿ, ಮತೀಯ ಗಲಭೆಗಳಿಂದಾಗಿ, ಪರಸ್ಪರರ ಈರ್ಷ್ಯಾಸೂಯೆಗಳಿಂದಾಗಿ, ವಿದ್ವಾಂಸರ ವಲಸೆಯಿಂದಾಗಿ ಕಾಲಾಂತರಗಳಲ್ಲಿ ಹಲಹಲವಾರು ಹಸ್ತಪ್ರತಿಗಳು ನಾಶವಾಗಿರಬಹುದೆಂದು ಊಹಿಸಲಾಗಿದೆ. ಅವರು ಬಳಸುತ್ತಿದ್ದ ಲೇಖನ ಸಾಮಗ್ರಿಗಳಾದ ಭೂರ್ಜಪತ್ರ, ತಾಳೆಗರಿ, ಮರದ ತೊಗಟೆಗಳು ಸಹಜವಾಗಿ ತ್ರುಟಿತವಾಗಿ ಹಸ್ತಪ್ರತಿಗಳು ನಾಶವಾಗಿರಬಹುದು ಎಂಬ ಮತ್ತೊಂದು ಕಾರಣವನ್ನು ಮೇಲಿನ ಕಾರಣಗಳೊಂದಿಗೆ ಸೇರಿಸುತ್ತಾರೆ.

ಹಸ್ತಪ್ರತಿಗಳ ರಚನೆ ಯಾವಾಗ ಆರಂಭವಾಯಿತೆಂದು ಹೇಳುವುದು ಕಷ್ಟ. 'ಗ್ರಂಥ' ಎಂಬ ಪದವು ಶತಪಥ ಬ್ರಾಹ್ಮಣದಲ್ಲಿ ಮತ್ತು ಪಾಣಿನಿಯ ಸೂತ್ರಗಳಲ್ಲಿ ಉಕ್ತವಾಗಿದೆ. ಇಲ್ಲೆಲ್ಲ ಆ ಪದವು ಲಿಖಿತದಾಖಲೆ ಎಂಬ ಅರ್ಥದಲ್ಲಿ ಉಕ್ತವಾಗಿರದೆ 'ಕೃತಿರಚನೆ' ಎಂಬರ್ಥದಲ್ಲಿಯೂ ಪ್ರಯೋಗವಾಗಿದೆ ಎಂಬುದು ಗಮನಿಸಬೇಕಾದ ಅಂಶ. ಅಥರ್ವವೇದ ಮತ್ತು ಮೈತ್ರಾಯಣೀಯ ಸಂಹಿತೆಯಲ್ಲಿ 'ಲಿಖ್' ಎಂಬ ಧಾತು ರೂಪವು ದೊರೆಯುತ್ತದೆ. ಇದು ಅಂದು ಬಳಕೆಯಲ್ಲಿದ್ದಿರಬಹುದಾದ ಬರವಣಿಗೆಯನ್ನು ತಿಳಿಸುತ್ತದೆ. ಆದರೆ ಬರವಣಿಗೆಯಲ್ಲಿ ಕೃತಿಗಳನ್ನು ಅಳವಡಿಸಲು ಈ ಹಂತದಿಂದ ಬಹಳಷ್ಟು ಕಾಲವೇ ಹಿಡಿದಿರಬೇಕೆಂದು ತೋರುತ್ತದೆ. ಏಕೆಂದರೆ ಭಾರತದಲ್ಲಿ ಮೌಖಿಕ ಸಂಪ್ರದಾಯದಲ್ಲಿ ಕೃತಿಗಳು ತಲೆಮಾರಿನಿಂದ ತಲೆಮಾರಿಗೆ

ಬರುತ್ತಿದ್ದುದು ಪ್ರಬಲವಾದ ಅಂಶವಾಗಿತ್ತು. 'ಪುಸ್ತಕ' ಎಂಬ ಪದವು 'ಲಿಖಿತರೂಪದ ದಾಖಲೆ' ಎಂಬರ್ಥದಲ್ಲಿ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಪ್ರಯುಕ್ತವಾಗಿರುವುದನ್ನು ನಾವು ಗಮನಿಸಬಹುದು.

ಹಸ್ತಪ್ರತಿಗಳ ಉಗಮ ಮತ್ತು ಅವುಗಳ ಬೆಳವಣಿಗೆಯ ಬಗ್ಗೆ ಬಹುಶಃ ಹೀಗೆ ಊಹಿಸಬಹುದೆಂದು ತೋರುತ್ತದೆ. ನ್ಯಾಯ, ವ್ಯಾಕರಣ ಮುಂತಾದ ಶಾಸ್ತ್ರಗಳು ಯಾವಾಗ ಒಂದು ಅಧಿಕೃತ ಸ್ಥಿತಿಯನ್ನು ತಲುಪಿ ಪ್ರಮಾಣಗಳೆಂದು ಸ್ವೀಕೃತವಾದುವೋ ಆಗ ಆ ತೆರನ ಅಧಿಕೃತ ಕೃತಿಗಳನ್ನು ನಿರ್ದಿಷ್ಟವಾಗಿ ಬರೆದಿಡುವ, ಪ್ರತಿಮಾಡಿಕೊಳ್ಳುವ ಆವಶ್ಯಕತೆ ಕಂಡುಬಂದಿರಬೇಕು. ಹಾಗೆಯೇ ಇವುಗಳ ಮೇಲೆ ಟೀಕೆ, ವ್ಯಾಖ್ಯಾನಗಳೂ ಬೆಳೆಯುತ್ತಾ ಬಂದವು. ಇವುಗಳನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳು ಅವುಗಳ ನಕಲುಗಳನ್ನು ಮಾಡಿಕೊಳ್ಳುತ್ತಿದ್ದರು. ಹೀಗೆ ಇವುಗಳ ಸಂಖ್ಯೆ ಬೆಳೆಯುತ್ತಾ ಹೋಯಿತು. ಇದೇ ಸಂದರ್ಭದಲ್ಲಿ ತನ್ನ ಕೃತಿಯನ್ನು ಮತ್ತೊಬ್ಬರು ಓದಿ ಆನಂದಿಸಲಿ ಎಂದು, ತಾನು ಓದಿದ ಕೃತಿ ಚೆನ್ನಾಗಿದ್ದು ಅದನ್ನು ಮತ್ತೆ ಮತ್ತೆ ಓದಿ ಆನಂದಿಸಬೇಕೆಂಬ ಉದ್ದೇಶದಿಂದ ಸಾಹಿತ್ಯ ಕೃತಿಗಳ ಹಸ್ತಪ್ರತಿಗಳು ಬೆಳೆಯುತ್ತಾ ಬಂದುವು.

ಜ್ಞಾನಾರ್ಜನೆಯನ್ನೇ ಮುಖ್ಯ ಕಸುಬನ್ನಾಗಿ ಉಳ್ಳ ಬ್ರಾಹ್ಮಣರು ವಾಸಿಸುತ್ತಿದ್ದ ಅಗ್ರಹಾರಗಳು, ವಿದ್ಯೆ ಕಲಿಯುತ್ತಿದ್ದ ವಿದ್ಯಾಕೇಂದ್ರಗಳು, ಮಠಗಳು, ಆಶ್ರಮಗಳು, ಈ ತೆರನ ಹಸ್ತಪ್ರತಿಗಳ ಭಂಡಾರಗಳಾದವು.

ಕಾಮರೂಪದ ಭಾಸ್ಕರ ವರ್ಮನ್ ಎಂಬುವನು ಹರ್ಷವರ್ಧನನಿಗೆ ಪುಸ್ತಕಗಳನ್ನು ಕಾಣಿಕೆಯಾಗಿತ್ತ ವಿಷಯವನ್ನು ಬಾಣನು ತಿಳಿಸುತ್ತಾನೆ. ಹಾಗೆಯೇ, ಕ್ರಿ. ಶ. ೪೫೩ ರಲ್ಲಿ ಜೈನಮುನಿಗಳ ಸಮೂಹವೊಂದು ತಮ್ಮ ಧರ್ಮದ ಪ್ರಾಚೀನ ಕೃತಿಗಳನ್ನು ಪ್ರತಿಮಾಡಿಡುವ ಪ್ರಯತ್ನದಲ್ಲಿ ತೊಡಗಿದ್ದ ವಿಷಯ ತಿಳಿಯುತ್ತದೆ. ಈ ತೆರನ ಪುಸ್ತಕವನ್ನು ಪ್ರತಿಮಾಡುವ ವಿಧಾನವನ್ನು 'ಪುಸ್ತಕಾರೋಹಣ' ಎಂಬುದಾಗಿ ಜೈನಾಗಮಗಳು ಕರೆದಿವೆ.

ಸುಟ್ಟಮಣ್ಣಿನ ಮುದ್ರಿಕೆ, ಕಲ್ಲುಗಳು, ಮರ, ಲೋಹ, ಬಟ್ಟೆ ಮುಂತಾದುವುಗಳನ್ನು ಲೇಖನ ಸಾಮಗ್ರಿಗಳನ್ನಾಗಿ ನಮ್ಮ ಪ್ರಾಚೀನರು ಬಳಸಿದ್ದರೂ ದೀರ್ಘವಾದ ಕೃತಿಗಳನ್ನು ಬರೆಯಲು ಮರದ ತೊಗಟೆ, ಭೂರ್ಜಪತ್ರ ಮತ್ತು ತಾಳೆಗರಿಗಳನ್ನು ವಿಶೇಷವಾಗಿ ಬಳಸಿದ್ದಾರೆ. ದಕ್ಷಿಣ ಭಾರತದಲ್ಲಿ ತಾಳೆಗರಿಯನ್ನು ವಿಶೇಷವಾಗಿ ಬಳಸಲಾಗಿದೆ. ಇವುಗಳಲ್ಲಿ ಎರಡು ಜಾತಿಗಳಿವೆ. ಒಂದು 'ತಾಳ', ಮತ್ತೊಂದು 'ಶ್ರೀತಾಳ'. ತಾಳ ಜಾತಿಯ ಗರಿಯು ಚಿಕ್ಕದಾಗಿ ಮತ್ತು ಗಟ್ಟಿಯಾಗಿರುತ್ತದೆ. ಶ್ರೀತಾಳ ಅಗಲವಾಗಿ ಮತ್ತು ಮೃದುವಾಗಿರುತ್ತದೆ. ಮುಸ್ಲಿಮರ ಆಳ್ವಿಕೆಯ ಪ್ರಭಾವದಿಂದಾಗಿ ಕಾಗದದ ಉಪಯೋಗ ಬಳಕೆಗೆ ಬಂದರೂ ತಾಳೆಗರಿಗಳ ಉಪಯೋಗ ಮುಂದುವರಿದೇ ಇತ್ತು. ಕರಾವಳಿ ಪ್ರದೇಶಗಳಲ್ಲಿ ಕಾಗದಕ್ಕಿಂತಲೂ

ತಾಳಪತ್ರವೇ ಬಹುಕಾಲ ಬಾಳಿಕೆ ಬರುವುದರಿಂದ ಮತ್ತು ತಾಳೆಗರಿಗಳ ಬಗ್ಗೆ ಇದ್ದ ಒಂದು ಧಾರ್ಮಿಕ ಶ್ರದ್ಧೆಯಿಂದ ಇವುಗಳ ಉಪಯೋಗ ಮುಂದುವರಿಯಿತೆಂದು ವಿದ್ವಾಂಸರು ಊಹಿಸುತ್ತಾರೆ.*

ಇದುವರೆಗೆ ತಿಳಿದುಬಂದಿರುವಂತೆ ಅತಿ ಪ್ರಾಚೀನ ಲಿಖಿತ ಸಂಸ್ಕೃತ ಕೃತಿ ಮರದ ತೊಗಟೆಯ ಮೇಲೆ ಬರೆದುದಾಗಿದೆ. ಇದರ ಕಾಲ ಕ್ರಿ.ಶ. ಐದನೆಯ ಶತಮಾನವೆಂದು ಊಹಿಸಲಾಗಿದೆ. ತಾಳೆಗರಿಯ ಮೇಲೆ ಬರೆಯಲ್ಪಟ್ಟಿರುವ ಸಂಸ್ಕೃತ ಕೃತಿಯ ಪ್ರತಿ ಕ್ರಿ. ಶ. ಆರನೆಯ ಶತಮಾನದ್ದೆಂದು ನಿರ್ಣಯಿಸಲಾಗಿದೆ. ಕಾಗದದ ಮೇಲೆ ಬರೆಯಲ್ಪಟ್ಟ ಸಂಸ್ಕೃತ ಕೃತಿಯ ಪ್ರತಿಯ ಕಾಲವನ್ನು ಕ್ರಿ. ಶ. ೧೩ನೇ ಶತಮಾನವೆಂದು ನಿರ್ಣಯಿಸಲಾಗಿದೆ. ಮೇಲೆ ಹೇಳಿದ ಐದು ಮತ್ತು ಆರನೆಯ ಶತಮಾನಕ್ಕೆ ಸೇರಿದ ಹಸ್ತಪ್ರತಿಗಳು ದೊರೆತಿರುವುದು ಹೊರರಾಷ್ಟ್ರಗಳಲ್ಲಿ, ಭಾರತದಲ್ಲಿ ಅಲ್ಲ. ಅಶ್ವಘೋಷನ ನಾಟಕದ ಹಸ್ತಪ್ರತಿ ದೊರೆತಿರುವುದು ಮಧ್ಯ ಏಷಿಯಾದಲ್ಲಿ. ಭಾರತದಲ್ಲಿ ೧೪ನೆಯ ಶತಮಾನಕ್ಕಿಂತಲೂ ಹಿಂದಿನ ಹಸ್ತಪ್ರತಿಗಳು ದೊರೆಯುವುದು ತೀರಾ ವಿರಳ. ಅನಂತರದ ಕಾಲದ ಹಲವಾರು ಹಸ್ತಪ್ರತಿಗಳು ನಮಗೆ ದೊರೆಯುತ್ತವೆ.

ಭಾರತದಾದ್ಯಂತ ದೊರೆಯುವ ಸಂಸ್ಕೃತ ಹಸ್ತಪ್ರತಿಗಳು ಹಲವಾರು ಲಿಪಿಗಳಲ್ಲಿ ಬರೆಯಲಾಗಿರುವುದನ್ನು ನಾವು ಗಮನಿಸಬಹುದು. ಉಪಲಬ್ಧವಿರುವ ಅತ್ಯಂತ ಪ್ರಾಚೀನ ದೇವನಾಗರಿ ಲಿಪಿಯ ಹಸ್ತಪ್ರತಿಯ ಕಾಲ ಸುಮಾರು ಹನ್ನೆರಡನೆಯ ಶತಮಾನವೆಂದು ನಿರ್ಣಯಿಸಲಾಗಿದೆ. ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಸಂಸ್ಕೃತ ಹಸ್ತಪ್ರತಿಗಳು ದೇವನಾಗರಿ** ಮತ್ತು ನಂದಿನಾಗರಿ ಎಂಬ ಎರಡು ರೀತಿಯ ಲಿಪಿಗಳಲ್ಲಿ ಬರೆಯಲಾಗಿದೆ. ಸಂಸ್ಕೃತ ಹಸ್ತಪ್ರತಿಯು ಯಾವ ಪ್ರದೇಶದಲ್ಲಿ ಬರೆಯಲಾಗಿದೆಯೋ ಆ ಪ್ರದೇಶದ ಲಿಪಿಯಲ್ಲಿಯೇ ಆ ಸಂಸ್ಕೃತ ಹಸ್ತಪ್ರತಿಯನ್ನು

* ರಾಜಶೇಖರನು 'ಕಾವ್ಯಮೀಮಾಂಸೆ'ಯಲ್ಲಿ ಹೀಗೆ ಹೇಳಿದ್ದಾನೆ: ಕವಿಯಾದವನು ಯಾವಾಗಲೂ ತನ್ನ ಬಳಿ ಒಂದು ಸಂಪುಟಿಕೆಯನ್ನೂ ಹಲಗೆ ಮತ್ತು ಬಳಪವನ್ನು (ಫಲಕ, ಖಟಿಕಾ) ಲೇಖನಿ ಮತ್ತು ಮಸಿಕುಡಿಕೆಯನ್ನೂ (ಮಷೀಭಾಜನ), ತಾಡಿಪತ್ರ ಇಲ್ಲವೆ ಭೂರ್ಜ ವೃಕ್ಷದ ತೊಗಟೆಗಳನ್ನೂ (ತಾಡಿಪತ್ರ, ಭೂರ್ಜತ್ವಚೆ), ಲೇಖನ ಕಂಟಕಗಳು ಮತ್ತು ತಾಳೆದಳಗಳನ್ನೂ, ತಗಡುಗಳನ್ನೂ (ಭಿತ್ತಯಃ = Plates) ಇಟ್ಟುಕೊಂಡಿರಬೇಕೆಂದು ನಿರ್ದೇಶ ನೀಡಿದ್ದಾನೆ.

** ಭಾರತದ ಎಲ್ಲಾ ಲಿಪಿಗಳಿಗೂ ಬ್ರಾಹ್ಮೀಲಿಪಿಯೇ ಮೂಲ. ಕ್ರಿ. ಶ. ೭ನೆಯ ಶತಮಾನದಲ್ಲಿ ಬ್ರಾಹ್ಮೀಲಿಪಿ ದಕ್ಷಿಣ ದೇಶದಲ್ಲಿ ಪಲ್ಲವ ಲಿಪಿಯಾಗಿ ಮಾರ್ಪಾಟು ಹೊಂದಿ, ಅದರಿಂದ ದಕ್ಷಿಣದ ನಾಲ್ಕು ಲಿಪಿಗಳು ವಿಕಾಸಗೊಂಡವು. ಗುಜರಾತ್ ಪ್ರಾಂತದ ನಾಗರ ಬಂದದಲ್ಲಿ ರೂಪಗೊಂಡ ಲಿಪಿಯೇ ನಾಗರಿ. ಗುಪ್ತವಂಶದ ಸ್ಕಂದಗುಪ್ತನ ಕಾಲದಲ್ಲಿ ನಾಗರೀಲಿಪಿಗೆ ತಲೆಕಟ್ಟು ಕೊಡುವ ಪದ್ಧತಿ ರೂಢಿಗೆ ಬಂತು. ಸ್ಕಂದಗುಪ್ತನಿಗೆ 'ದೇವ' ಎಂಬ ಬಿರುದಿತ್ತು. ಆದ್ದರಿಂದ ನಾಗರಿಲಿಪಿಗೆ 'ದೇವನಾಗರಿ' ಎಂದು ಹೆಸರಾಯಿತು.

ಬರೆದಿರುವುದನ್ನು ಗಮನಿಸಬಹುದು. ಕರ್ನಾಟಕದಲ್ಲಿ ದೊರೆಯುವ ಹಲವಾರು ಸಂಸ್ಕೃತದ ಕೃತಿಗಳು ಕನ್ನಡ ಲಿಪಿಯಲ್ಲಿಯೂ, ಆಂಧ್ರದಲ್ಲಿ ದೊರೆಯುವ ಕೃತಿಗಳು ತೆಲುಗು ಲಿಪಿಯಲ್ಲಿಯೂ, ತಮಿಳು ನಾಡಿನಲ್ಲಿ ಗ್ರಂಥಾಕ್ಷರಗಳಲ್ಲಿಯೂ ಬರೆದಿರುವುದನ್ನು ಗಮನಿಸಬಹುದು. ಇದೇ ರೀತಿ ಉತ್ತರ ಭಾರತದಲ್ಲಿ ರಾಜಸ್ಥಾನೀ, ಗುಜರಾತಿ, ಅಸ್ಸಾಮಿ, ಗುರುಮುಖಿ (ಪಂಜಾಬಿ), ಬೆಂಗಾಲಿ ಮುಂತಾದ ಪ್ರಾದೇಶಿಕ ಲಿಪಿಗಳಲ್ಲಿ ಬರೆಯಲಾಗಿರುವ ಸಂಸ್ಕೃತ ಹಸ್ತಪ್ರತಿಗಳು ನಮಗೆ ದೊರೆಯುತ್ತವೆ.

ಈ ಹಸ್ತಪ್ರತಿಗಳ ಒಂದು ವೈಶಿಷ್ಟ್ಯವೆಂದರೆ ಅವು ಕಾಗದದ ಹಸ್ತಪ್ರತಿಗಳಾಗಿರಲಿ, ತಾಳೆಗರಿಯ ಹಸ್ತಪ್ರತಿಗಳಾಗಿರಲಿ ಅವುಗಳ ಮೇಲೆ ಅಲಂಕರಣ ಮತ್ತು ವಿವರಣಾತ್ಮಕ ಚಿತ್ರಗಳಿರುವವು. ಹಸ್ತಪ್ರತಿಗಳ ಅಂಚಿನಲ್ಲಿ ದೇವದೇವತೆಗಳ ಚಿತ್ರಗಳೋ ಅಥವಾ ಪದ್ಮ, ಶಂಖ, ಚಕ್ರ ಮುಂತಾದ ಶುಭಚಿಹ್ನೆಗಳೋ ರೇಖಾಚಿತ್ರದಲ್ಲಿ ಮೂಡಿರುತ್ತವೆ. ಈ ಅಲಂಕರಣದ ಚಿತ್ರಗಳಿಗೂ ಕೃತಿಯ ಪಾಠಕ್ಕೂ ಯಾವುದೇ ಸಂಬಂಧ ಇರುವುದಿಲ್ಲ. ಆದರೆ ಕಾಮಸೂತ್ರ, ರತಿರಹಸ್ಯ ಮುಂತಾದ ಶಾಸ್ತ್ರಗಳ ಹಸ್ತಪ್ರತಿಗಳಲ್ಲಿ ಶಾಸ್ತ್ರದಲ್ಲಿ ವಿವರಿಸಲಾಗಿರುವ ಅಂಶಗಳನ್ನು ರೇಖಾಚಿತ್ರಗಳಲ್ಲಿ ಬಿಡಿಸಲಾಗಿರುತ್ತದೆ. ಹಾಗೆಯೇ ಹಲವಾರು ಕಾವ್ಯಗ್ರಂಥಗಳ ಸಂದರ್ಭ ಸನ್ನಿವೇಶಗಳನ್ನು ನಿರೂಪಿಸುವ ಚಿತ್ರಗಳನ್ನು ರೇಖಾಚಿತ್ರ ಮತ್ತು ವರ್ಣಚಿತ್ರಗಳಲ್ಲಿ ಬಿಡಿಸಿರುವ ನಿದರ್ಶನಗಳೂ ಉಂಟು. ಬರೋಡಾದ ಓರಿಯಂಟಲ್ ಲೈಬ್ರರಿಯಲ್ಲಿ ಮಹಾಭಾರತ, ಭಾಗವತ, ಭಗವದ್ಗೀತೆ ಮುಂತಾದುವುಗಳಿಗೆ ಸಂಬಂಧಿಸಿದಂತೆ ವರ್ಣಚಿತ್ರಗಳ ಐದು ಸುರಳಿಗಳು ಇವೆ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ 'ಶ್ರೀತತ್ವನಿಧಿ' ಎಂಬ ಕೃತಿಯಲ್ಲಿ ದೇವದೇವತೆಗಳ, ನಾನಾ ಆಯುಧಗಳ, ಪ್ರಾಣಿಪಕ್ಷಿಗಳ ಸುಮಾರು ೧೫೦೦ ಬಣ್ಣದ ಚಿತ್ರಗಳಿವೆ. ಈ ಕೃತಿಯನ್ನು ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ರಚಿಸಲಾಗಿದೆಯೆಂದು ತಿಳಿದುಬರುತ್ತದೆ. ಹಸ್ತಪ್ರತಿಗಳಲ್ಲಿನ ಈ ತೆರನ ಚಿತ್ರಗಳನ್ನು ಕುರಿತು ಡಾ|| ಹಿರಾನಂದ ಶಾಸ್ತ್ರೀಯವರು 'Indian Pictorial art as developed in book illustration' ಎಂಬ ತಮ್ಮ ಕೃತಿಯಲ್ಲಿ ವಿವರವಾಗಿ ವಿವೇಚಿಸಿದ್ದಾರೆ.

ಹಸ್ತಪ್ರತಿಗಳ ಸಂಗ್ರಹಕಾರ್ಯದಲ್ಲಿ ಭಾರತದಲ್ಲಿ ಮೊದಲು ಆಸಕ್ತಿ ವಹಿಸಿದವರು ಮುಸಲ್ಮಾನ ಅರಸರು. ಇವರ ಕಾಲದ ಅರಮನೆಗಳಲ್ಲಿ 'ಕಿತಾಬ್ ಖಾನಾ' ಎಂಬುದು ಬಹು ಮುಖ್ಯವಾದ ಭಾಗವೇ ಆಗಿತ್ತು. ನಾಗರ ಕೋಟದ ಜ್ವಾಲಾಮುಖಿ ದೇವಾಲಯದಲ್ಲಿದ್ದ ಅನೇಕ ಹಸ್ತಪ್ರತಿಗಳನ್ನು ನಾಗರ ಕೋಟೆಯನ್ನು ಗೆದ್ದ ಫಿರೋಜ್ ಷಾ ತನ್ನ ವಶಕ್ಕೆ ತೆಗೆದುಕೊಂಡನು. ಅಷ್ಟೇ ಅಲ್ಲದೆ ಅವುಗಳನ್ನು ತನ್ನ ಭಾಷೆಗೆ ಅನುವಾದ ಮಾಡಲು ಅವನು ವಿದ್ವಾಂಸರನ್ನು ನಿಯಮಿಸಿದನು. ಮೊಗಲರರಸನಾದ ಬಾಬರನು ತನ್ನ ಸ್ವಂತ ಗ್ರಂಥಭಂಡಾರವನ್ನು ಬೆಳೆಯಿಸಿದನು. ಇವನೇ ಪುಸ್ತಕ

ಗಳಲ್ಲಿ ವಿವರಣಾತ್ಮಕ ಚಿತ್ರಗಳನ್ನು ಬರೆಯಿಸುವ ಪ್ರಯತ್ನವನ್ನು ಮೊದಲಿಟ್ಟನೆಂದು ಹಲವರು ಅಭಿಪ್ರಾಯಪಡುತ್ತಾರೆ.

ಪಾಶ್ಚಾತ್ಯರು ಸಂಸ್ಕೃತ ಮತ್ತು ಇತರ ಪ್ರಾಂತೀಯ ಭಾಷೆಗಳ ಅಧ್ಯಯನದ ಕಡೆಗೆ ಗಮನ ಹರಿಸಿದ ಮೇಲೆ ಇವುಗಳ ಸಂಗ್ರಹ ಕಾರ್ಯ ಆರಂಭವಾಯಿತು. ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಮತ್ತು ದೇಶೀಯ ಅರಸರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವ ಕಾರ್ಯವಷ್ಟೇ ಅಲ್ಲದೆ ಅವುಗಳನ್ನು ರಕ್ಷಿಸುವ, ರಕ್ಷಿಸಿದ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಯನ್ನು ತಯಾರು ಮಾಡುವ ಪ್ರಯತ್ನವು ನಡೆಯಿತು. ಈ ದಿಶೆಯಲ್ಲಿ ದುಡಿದ ಪಾಶ್ಚಾತ್ಯರಲ್ಲಿ ಕೀಲ್‌ಹಾರ್ನ್, ಬ್ಯೂಲ್ಹರ್, ಬೆಂಡೆಲ್, ಬರ್ನೆಲ್ ಮುಂತಾದ ವಿದ್ವಾಂಸರ ಸೇವೆ ಸ್ತುತ್ಯರ್ಹವಾದುದು. ದೇಶೀಯರಲ್ಲಿ ಹರಪ್ರಸಾದ ಶಾಸ್ತ್ರೀ, ರಾಜೇಂದ್ರಲಾಲ್ ಮಿಶ್ರ, ರಾಮಕೃಷ್ಣ ಗೋಪಾಲ ಭಂಡಾರ್‌ಕರ್, ರಾಯಬಹದ್ದೂರ್ ಹಿರಾಲಾಲ್, ಗಣಪತಿ ಶಾಸ್ತ್ರಿ, ಗೋಪಿನಾಥ್ ಕವಿರಾಜ್ ಮತ್ತು ಕುಪ್ಪುಸ್ವಾಮಿ ಶಾಸ್ತ್ರಿಗಳ ಸೇವೆ ಸ್ಮರಣೀಯವಾದುದು.

---

ಆಧಾರ: *The Wealth of Sanskrit Manuscripts in India and Abroad; By K. T. Pandurangi, Bangalore, 1978.*

— ० —

# ಉಪೇಕ್ಷಿತ ಹಸ್ತಪ್ರತಿಗಳು*

—ನಾ. ಗೀತಾಚಾರ್ಯ

ಹಸ್ತಪ್ರತಿಗಳು ನಾಡಿನ ಅತ್ಯಮೂಲ್ಯ ಸಂಪತ್ತು. ಪ್ರತಿಯೊಂದು ಮನೆಯವರ, ಸಂಸ್ಥೆಗಳ ವೈಯಕ್ತಿಕ ಆಸ್ತಿಯಾಗಿರುವ ಇವು ವಾಸ್ತವವಾಗಿ ನಾಡಿನ ಆಸ್ತಿ. ಇಂದು ನಾವು ಅಧ್ಯಯನ ಮಾಡುತ್ತಿರುವ ಕೃತಿಗಳೆಲ್ಲಕ್ಕೂ ಮೂಲ ಆಕರ ಈ ಹಸ್ತಪ್ರತಿಗಳು, ಇವುಗಳಿಲ್ಲದಿದ್ದಲ್ಲಿ ಇಡೀ ನಾಡು ಸಾಹಿತ್ಯಕವಾಗಿ ನಿಸ್ತೇಜವಾಗಿರುತ್ತಿತ್ತು ; ಸಾಂಸ್ಕೃತಿಕವಾಗಿ ಬರಡಾಗಿರುತ್ತಿತ್ತು. ಇಂಥ ಅಮೂಲ್ಯ ಸಂಪತ್ತನ್ನು ರಕ್ಷಿಸಿ ಪ್ರಕಟಿಸುವುದು ನಾಡಿನ ಪ್ರತಿಯೊಬ್ಬ ಪ್ರಜೆಯ ಆದ್ಯ ಕರ್ತವ್ಯ. ಈ ಕರ್ತವ್ಯ ಪಾಲನೆ ಕನ್ನಡದ ಮಟ್ಟಿಗೆ ಹೇಳಬೇಕಾದರೆ ವಿಪುಲವಾಗಿಯೇ ಆಗಿದೆ, ಆದರೂ ಇನ್ನೂ ಎಷ್ಟೋ ಅಜ್ಞಾತ ಕೃತಿಗಳು ಹೊರಬರಬೇಕಾಗಿವೆ. ಗ್ರಂಥ ಸಂಪಾದನಾ ಶಾಸ್ತ್ರ ವೈಜ್ಞಾನಿಕವಾದ ಮುನ್ನಡೆ ಹೊಂದಿದ್ದರೂ ಮೊದಮೊದಲು ಉತ್ಸಾಹದಿಂದ ಹುರುಪಿನಿಂದ ಜರುಗಿದ ಈ ಹಬ್ಬ ಕ್ರಮೇಣ ತನ್ನ ಮೊದಲಿನ ಉತ್ಸಾಹವನ್ನು ಕಳೆದುಕೊಳ್ಳುತ್ತಾ ಬರುತ್ತಿರುವುದನ್ನು ನೋಡಿದರೆ ಇದರ ಬಗ್ಗೆ ಸಾಹಿತ್ಯ ವಿದ್ಯಾರ್ಥಿಗಳಲ್ಲಿ ಆಸಕ್ತಿಯಿಲ್ಲದೆ, ವಿಶ್ವವಿದ್ಯಾನಿಲಯಗಳಲ್ಲಿ ಕೇವಲ ಒತ್ತಾಯಕ್ಕಾಗಿ ಕಲಿಯುವಂಥ ವಿಷಯವಾಗಿ ಮಾತ್ರ ಉಳಿಯುತ್ತದೇನೋ ಎನ್ನಿಸುತ್ತದೆ. ಕಾಲಕ್ರಮದಲ್ಲಿ ಪಠ್ಯ ವಿಷಯ ಪ್ರಣಾಳಿಕೆಯಿಂದ ಗ್ರಂಥಸಂಪಾದನೆ ಹೊರಗುಳಿದರೂ ಆಶ್ಚರ್ಯವಿಲ್ಲ.

ಸಂಪಾದಿಸುವಂಥ ಮುಖ್ಯವಾದ ಗ್ರಂಥಗಳಾವುವೂ ಇಲ್ಲ ಎಂಬ ನಂಬಿಕೆಯ ಹತ್ತಿರಕ್ಕೆ ಈ ಶಾಸ್ತ್ರ ಬಂದು ನಿಂತಿರುವಂತೆ ಕಾಣುತ್ತದೆ. ಆದರೆ ಈ ನಂಬಿಕೆ ಎಷ್ಟು ನಿಜ? ಎಂಬುದರ ಜೊತೆಗೆ ಮುಖ್ಯ–ಅಮುಖ್ಯ ಎಂದು ವರ್ಗೀಕರಿಸುವಲ್ಲಿ ಇರುವ ದೃಷ್ಟಿ ಎಂತಹದು? ಈ ದೃಷ್ಟಿಯನ್ನೇ ನಂಬುವುದಾದರೆ ಈಗಾಗಲೇ ಸಂಗ್ರಹಿಸಿರುವ ಉಳಿದ ಹಸ್ತಪ್ರತಿಗಳನ್ನು ಏನು ಮಾಡಬೇಕು? ಇಂಥ ಪ್ರಶ್ನೆಗಳನ್ನು ಇಂದು ಆಲೋಚಿಸಬೇಕಾಗಿದೆ. ಹಸ್ತಪ್ರತಿ ಭಂಡಾರಗಳಲ್ಲಿ ಹಸ್ತಪ್ರತಿಗಳ ಸಂಖ್ಯೆ ದಿನೇ ದಿನೇ ಬೆಳೆಯುತ್ತಿದೆ. ಓದಲಾಗದ, ಭಾಷೆ ಗೊತ್ತಿಲ್ಲದ, ಅರ್ಥಮಾಡಿಕೊಳ್ಳಲು

* ಈ ಲೇಖನ ಸಿದ್ಧಪಡಿಸುವಲ್ಲಿ ಸಲಹೆ, ಸೂಚನೆ ನೀಡಿ ಉಪಕರಿಸಿದ ಪೂಜ್ಯ ಗುರುಗಳಾದ ಪ್ರೊ|| ಎಂ. ವಿ. ಸೀತಾರಾಮಯ್ಯನವರಿಗೆ ಹಾಗೂ ಡಾ|| ಆರ್. ಶೇಷಶಾಸ್ತ್ರಿ ಅವರಿಗೆ ಕೃತಜ್ಞತೆಗಳು.

ಆಗಿನ ಶೀರ್ಷಿಕೆ ಅಥವಾ ಮೊದಲ ವಿವರಗಳಿಂದಲೇ 'ಅಪ್ರಯೋಜಕ' ಎಂದು ಕರೆಸಿಕೊಳ್ಳುವ ಎಷ್ಟೋ ಹಸ್ತಪ್ರತಿಗಳು ಉಪೇಕ್ಷೆಗೊಳಪಟ್ಟು ಷೆಲ್ಫುಗಳನ್ನು ಅಲಂಕರಿಸಿವೆ. ಇವುಗಳನ್ನು ಇಷ್ಟು ಮಾತ್ರಕ್ಕೆ ಸೀಮಿತವಾಗಿರಿಸಬೇಕೆ? ಅಥವಾ ಇವುಗಳಿಂದಲೂ ಏನನ್ನಾದರೂ ಪಡೆಯಬಹುದೇ? ಎಂಬುವರತ್ತ ಸಂಶೋಧಕರು ಗಮನಹರಿಸದೇ ತಟಸ್ಥರಾಗಿರುವುದು ವಿಷಾದನೀಯ.[1] 'ವಡ್ಡಾರಾಧನೆ'ಯಂಥ ಎಷ್ಟೋ ಕೃತಿಗಳು ಇಂಥ ಹಸ್ತಪ್ರತಿಗಳ ನಡುವೆ ಕಣ್ಮರೆಯಾಗಿರಬಹುದು. ಈ ಕುತೂಹಲಕ್ಕಾದರೂ ಸಂಬಂಧಪಟ್ಟವರು ಇನ್ನೂ ವರ್ಗೀಕರಿಸದೆ ಇರುವ ಉಪೇಕ್ಷಿತ ಹಸ್ತಪ್ರತಿಗಳನ್ನು ವರ್ಗೀಕರಿಸಿ ಅವುಗಳ ಸೂಚಿಗಳನ್ನು ಪ್ರಕಟಿಸಬೇಕು.

ಈಗಾಗಲೇ ವರ್ಗೀಕರಿಸಿದ್ದರೂ ಕೆಲವು ಹಸ್ತಪ್ರತಿಗಳ ಬಗೆಗೆ ಅಪ್ರಯೋಜಕ, ನಿರಪೇಕ್ಷಣೀಯ ಎಂಬ ಸಾಮಾನ್ಯ ಧೋರಣೆಯನ್ನು ತಳೆದಿದ್ದೇವೆ. ಕನ್ನಡ ಗ್ರಂಥ ಸಂಪಾದನೆಯ ವ್ಯಾಪ್ತಿಯಲ್ಲೇ ಇರುವ ಸಂಕುಚಿತತೆಯೇ ಇದಕ್ಕೆ ಕಾರಣವೆನ್ನಬಹುದೇನೋ? 'ಗ್ರಂಥ ಸಂಪಾದನೆ' ಎಂದರೆ ಸಾಹಿತ್ಯಕೃತಿಗಳ ಸಂಪಾದನೆ ಎಂದಷ್ಟೇ ನಮ್ಮ ಧೋರಣೆಯಾಗಿರುವುದರಿಂದ ಸಾಹಿತ್ಯೇತರ ಕೃತಿಗಳನ್ನು ತಿರಸ್ಕರಿಸಿದ್ದೇವೇನೋ.[2] ಆದರೆ ಈ ಧೋರಣೆಯನ್ನು ಇನ್ನಾದರೂ ಬದಲಿಸಿಕೊಳ್ಳುವುದು ಒಳಿತು ಎನ್ನಿಸುತ್ತದೆ. ಇಂಥ ಹಸ್ತಪ್ರತಿಗಳು ಯಾವುದೋ ಒಂದು ಉದ್ದೇಶದ ದೃಷ್ಟಿಯಿಂದ ಬೇಡದವುಗಳಾದರೆ ಇನ್ನೊಂದಕ್ಕೆ ಬೇಕಾಗಬಹುದು. ನಮ್ಮ ಅಧ್ಯಯನ ಕೇವಲ ಸಾಹಿತ್ಯವೊಂದಕ್ಕೇ ಸೀಮಿತವಾಗಬಾರದು.

ಉಪೇಕ್ಷಿತ ಹಸ್ತಪ್ರತಿಗಳನ್ನು ಸಾಮಾನ್ಯವಾಗಿ. ಶಾಸ್ತ್ರಸಾಹಿತ್ಯದಲ್ಲಿ ಬರುವ ಲೌಕಿಕ ಶಾಸ್ತ್ರದ ವರ್ಗದಲ್ಲಿ ಸೇರಿಸಲಾಗುತ್ತದೆ. ಈ ಶಾಸ್ತ್ರವನ್ನು "ಲೌಕಿಕ ಶಾಸ್ತ್ರಗಳೆಂಬುವು ಭೌತ, ರಾಸಾಯನಿಕ, ಖಗೋಳೀಯ ಮೊದಲಾದವುಗಳಂತೆ ಬಾಹ್ಯಪ್ರಪಂಚದ ವಸ್ತುಗಳನ್ನು ಕುರಿತು ವಿಚಾರಮಾಡತಕ್ಕವು. ಅಥವಾ ಅರ್ಥಶಾಸ್ತ್ರ, ವ್ಯವಹಾರ ಶಾಸ್ತ್ರ, ರಾಜ್ಯಮೀಮಾಂಸೆ ಮೊದಲಾದವುಗಳಂತೆ ಸಮಾಜ ವ್ಯವಸ್ಥೆಗಳನ್ನು ಕುರಿತು ವಿಚಾರ ಮಾಡತಕ್ಕವು"[3] ಎಂದು ಡಿ. ವಿ. ಜಿ. ಯವರು ಗುರುತಿಸಿದರೆ, ಎಂ. ವಿ. ಸೀ. ಅವರು "ಕಾಮ, ಅರ್ಥ– ಈ ಫಲಸಿದ್ಧಿಗಳನ್ನು ಕೊಡತಕ್ಕವು ಲೌಕಿಕ ಶಾಸ್ತ್ರಗಳೆಂದು ಪ್ರಾಚೀನರ ದೃಷ್ಟಿಯಿಂದ ನಾವು ವಿವರಿಸಬಹುದು"[4] ಎಂದು ಗುರುತಿಸುತ್ತಾರೆ. ಸಾಹಿತ್ಯೇತರ ದೃಷ್ಟಿಯಿಂದ ನೋಡಿದೆವಾದರೆ ಇವುಗಳಿಂದಲೂ ಪ್ರಯೋಜನ ಉಂಟೆಂಬುದನ್ನು ಎಂ. ವಿ. ಸೀ. ಅವರೇ ಸ್ಪಷ್ಟಪಡಿಸಿದ್ದಾರೆ: "ಪ್ರಾಚೀನ ಶಾಸ್ತ್ರಗ್ರಂಥಗಳಲ್ಲಿ ಕಾವ್ಯಾಂಶವನ್ನು ಹುಡುಕುವುದೆಂದರೆ 'ಗೊರಟಿನಲ್ಲಿ ಮಾದುಫಳವನರಸಿದಂತೆಯೇ' ಸರಿ. ಪ್ರಯೋಜನ ದೃಷ್ಟಿಯಿಂದ ನೋಡುವುದಾದರೆ ವೈದ್ಯಶಾಸ್ತ್ರಗ್ರಂಥಗಳಿಂದ ಬಹುಶಃ ಇಂದೂ ಪ್ರಯೋಜನ ಪಡೆಯಬಹುದೇನೋ. ವೈದ್ಯವಿಶಾರದರು ಇವುಗಳನ್ನು ಸಂಶೋಧನ ದೃಷ್ಟಿಯಿಂದ ಪರಾಮರ್ಶೆ ಮಾಡುವುದು ಅಗತ್ಯ. ಪಾಕಶಾಸ್ತ್ರಗ್ರಂಥಗಳನ್ನು

ಗೃಹಿಣಿಯರು ಗಮನಿಸಿ ಬಳಕೆ ತಪ್ಪಿದ ಹಳೆಯ ರುಚಿಗಳನ್ನು 'ಹೊಸರುಚಿ'ಗಳಾಗಿ ರೂಢಿಗೆ ತರಬಹುದಲ್ಲವೆ? ಜ್ಯೋತಿಷ-ಶಕುನಗಳಲ್ಲಿ ನಮ್ಮ ಸಮಾಜಕ್ಕೆ ಇನ್ನೂ ನಂಬಿಕೆಯಿದೆಯಾದ್ದರಿಂದ ಆ ಸಂಬಂಧದ ಶಾಸ್ತ್ರಗಳನ್ನು ಅಧ್ಯಯನ ಮಾಡುವವರೂ ಇದ್ದಾರು. ಅಶ್ವವೈದ್ಯ, ಗೋವೈದ್ಯಗಳನ್ನು ಕಡೆಗಣಿಸಬೇಕಾಗಿಲ್ಲ. ಗೋವೈದ್ಯ ವಂತೂ ಹಳ್ಳಿಗಾಡಿನ ಜನಕ್ಕೆ ಕೆಲವು ಸುಲಭ ವೈದ್ಯಕ್ಕೆ ದಾರಿ ತೋರಿಸೀತು. ಇವನ್ನು ಹೊಸಗನ್ನಡದಲ್ಲಿ ಅನುವಾದಮಾಡಿಸಿ ಪ್ರಕಟಿಸುವ ಕೆಲಸ ಆಗಬೇಕು."[5] ಹೀಗೆ ವೈವಿಧ್ಯಮಯವಾಗಿರುವ, ವಿವಿಧೋಪಯೋಗಿಯಾಗಿರುವ ಇಂಥ ಉಪೇಕ್ಷಿತ ಹಸ್ತಪ್ರತಿಗಳಿಂದ ಯಾವ ಯಾವ ದೃಷ್ಟಿಗಳಲ್ಲಿ ಪ್ರಯೋಜನ ಪಡೆಯಬಹುದೆಂಬುವರ ಬಗೆಗೆ ಒಂದು ಪಕ್ಷಿನೋಟವನ್ನಷ್ಟೇ ಹರಿಸಲು ಇಲ್ಲಿ ಯತ್ನಿಸಿದೆ. ಮುಖ್ಯವಾಗಿ ಇತಿಹಾಸ, ಸಂಸ್ಕೃತಿ ಮತ್ತು ಭಾಷೆ– ಈ ದೃಷ್ಟಿಗಳಲ್ಲಿ ಇವುಗಳನ್ನು ನೋಡಬಹುದು.

**I. ಇತಿಹಾಸ:** ಶಾಸನಗಳು, ರಾಜಚರಿತ್ರೆಗಳು, ಕೆಲವು ಸಾಹಿತ್ಯ ಕೃತಿಗಳು ಒಂದು ನಾಡಿನ ಇತಿಹಾಸರಚನೆಗೆ ಸಾಧನಗಳಿರುವಂತೆ ಕೆಲವು ಹಸ್ತ ಪ್ರತಿಗಳೂ ಆ ಬಗೆಗೆ ಮಾಹಿತಿಯನ್ನು ಒದಗಿಸಲು ನೆರವಾಗುತ್ತವೆ. 'ವೇಣುಪುರದ ಕ್ಷತ್ರಿಯ ವಂಶಾವಳಿ[6], 'ಶ್ರೀರಂಗಪಟ್ಟಣದ ಚರಿತ್ರೆ[7], 'ಹೊಳೆಹೊನ್ನೂರು ಕೈಫಿಯತ್ತು,[8]' 'ಹೊಯ್ಸಳ ರಾಜರ ಚರಿತ್ರೆ'[9] ಇತ್ಯಾದಿ ಬಹಳ ಗಮನಿಸಿರದ ಹಸ್ತಪ್ರತಿಗಳು ದೊರಕುತ್ತವೆ. ಇವುಗಳನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿದೆವಾದರೆ ಇವುಗಳಿಂದಲೂ ಇತಿಹಾಸ ಸಾಮಗ್ರಿಗಳನ್ನು ಪಡೆಯಬಹುದು.

"೨೫೮ ವರುಷ ೧೯ ದಿನ ಮೇಲ್ಕಂಡ ೧೨ ಜನ ಕಳಲೆ ಪಟ್ಟಣವನ್ನಾಳಿದರು. ನಂತರ ಹೈದರನು ಮೈಸೂರಿಗೆ ಕರೆಸಿಕೊಂಡು ಇವರಿಗೆ ಮಾಸಾಶನ ೪೦೦ ವರಹಾ ನಗದು, ೩೦೦ ವರಾಹ ದಿನಸಿ ಹಸು ಕಾವಲು ತೋಟ ಗದ್ದೆ ಸರ್ವಮಾನ್ಯಗ್ರಾಮ ಸಹ ನಡಿಸುತ್ತ ಬಂದನು. ನಂತರ ಟಿಪ್ಪೂದಿವಸದಲ್ಲಿ ೨೦೦ ವರಹಾ ನಗದು ೩೦೦ ವರಹಾ ದಿನಸಿ ಹಸು ಗ್ರಾಮ ವಗೈರೆ ನಡಸುತ್ತ ಮೊಕಾಫ್ ಮಾಡಿದನು."

ವೇಣುಪುರದ ಕ್ಷತ್ರಿಯರ ವಂಶಾವಳಿಯಲ್ಲಿ ದೊರಕುವ ಇಂಥ ಭಾಗಗಳು ಇತಿಹಾಸಕ್ಕೆ ಎಷ್ಟು ಹತ್ತಿರವಾಗಬಲ್ಲವೆಂಬುದನ್ನು ಗಮನಿಸಬಹುದು. ಒಂದು ಹಸ್ತಪ್ರತಿಯಲ್ಲಿ 'ಕ್ಷೇತ್ರ ನದಿ ಇತ್ಯಾದಿಗಳ ಪಟ್ಟಿ'[19] ದೊರಕುತ್ತದೆ. ಇಡೀ ಕರ್ನಾಟಕದಲ್ಲಿ ಇರುವ ನದಿಗಳು, ಉಪನದಿಗಳು, ದೇವಾಲಯಗಳು, ಮತ್ತೀಯ ದೇವರುಗಳು, ವಟವೃಕ್ಷಗಳು, ಇತ್ಯಾದಿಗಳ ಪಟ್ಟಿ ಸಂಖ್ಯಾಸಮೇತ ಇದರಲ್ಲಿದೆ. ಇತಿಹಾಸ ರಚಯಿತರಿಗೆ ಇವು ಎಷ್ಟು ಮುಖ್ಯ ಎಂದು ಹೇಳುವ ಅಗತ್ಯವಿಲ್ಲ. ಕೆಲವು 'ಮನೆಲೆಕ್ಕ'ಗಳುಳ್ಳ ಹಸ್ತಪ್ರತಿಗಳೂ ನಮಗೆ ಸಿಕ್ಕುತ್ತವೆ.[11] ಇವು ಯಾವನೋ ಒಬ್ಬ ವ್ಯಕ್ತಿಯ ಅಥವಾ ಒಂದು ಮನೆಯ ಲೆಕ್ಕಗಳಾಗಿರುವುದಿಲ್ಲವೆಂದು ಸಾಮಾನ್ಯ ವಾಗಿ ಊಹಿಸಬಹುದು. ಏಕೆಂದರೆ ಒಬ್ಬ ಸಾಮಾನ್ಯ ವ್ಯಕ್ತಿ ಓಲೆಗರಿಗಳಲ್ಲಿ ಒಂದು ಗ್ರಂಥವನ್ನು ಬರೆಯುವಂತೆ ಮನೆಲೆಕ್ಕಗಳನ್ನು ಬರೆದಿಡುವ ಗೋಜಿಗೆ ಹೋಗುವುದಿಲ್ಲ.

ಇಂಥ ಲೆಕ್ಕಗಳು ಹಿಂದಿನ ಕಾಲದ ಸಮಾಜದಲ್ಲಿ ಪ್ರತಿಷ್ಠಿತರೆನಿಸಿದವರಿಗೆ ಸಂಬಂಧಿಸಿರುತ್ತವೆ. ಇವು ರಾಜರ ಮಾಂಡಲಿಕರು, ಸಾಮಂತರು, ಪಾಳೆಯಗಾರರು, ಅವರ ಕೈಕೆಳಗಿನ ಅಧಿಕಾರಿಗಳು ಇಂಥವರಿಂದ ಬರೆಯಲ್ಪಟ್ಟಿರುತ್ತವೆಯಾದ್ದರಿಂದ ಆ ವಿವರಗಳು ರಾಜ್ಯಾಡಳಿತಕ್ಕೆ ಸಂಬಂಧಪಟ್ಟಿರುತ್ತವೆನ್ನಬಹುದು. ಇತಿಹಾಸಕ್ಕೆ ರಾಜರ ಚರಿತ್ರೆ ಮತ್ತು ಯುದ್ಧ ವಿವರಗಳು ಎಷ್ಟು ಮುಖ್ಯವೊ ಅಷ್ಟು ಮುಖ್ಯ ಇವೂ ಸಹ. ಇವುಗಳಿಂದ ಆ ರಾಜರು ತಮ್ಮ ಆಳ್ವಿಕೆಯಲ್ಲಿ ತಮ್ಮ ಅಧಿಕಾರಿಗಳೊಡನೆ, ಪ್ರಜೆಗಳೊಡನೆ, ಅಧಿಕಾರಿಗಳು ಜನರೊಡನೆ ಎಂಥ ಸಂಪರ್ಕವಿಟ್ಟುಕೊಂಡಿದ್ದರು? ಅವರ ರಾಜನೀತಿ ಎಂತಹದು ? ಆ ಕಾಲದ ಜನಜೀವನ ಹೇಗಿತ್ತು ? ಎಂಬ ವಿವರಗಳು ದೊರಕುವ ಸಾಧ್ಯತೆಯಿದ್ದು ಆ ವ್ಯಕ್ತಿಯ ಚರಿತ್ರೆಗೆ ಹೆಚ್ಚಿನ ಪುಷ್ಟಿಯನ್ನೊದಗಿಸುತ್ತವೆ. ಇಂಥ ದಾಖಲೆಗಳಿಂದ ಇತಿಹಾಸದ ವಾಸ್ತವ ಚಿತ್ರಣ ಬೆಳಕಿಗೆ ಬರಬಹುದು.

ಕ್ಷೇತ್ರ, ನದಿಗಳು, ಎಲ್ಲೆಲ್ಲಿವೆ ಎಂಬುದನ್ನು ತಿಳಿಸುವಾಗ, ಒಂದು ಪ್ರಾಂತ್ಯ/ನಾಡುಗಳಿಗೆ ಸಂಬಂಧಿಸಿದ ಲೆಕ್ಕವಿವರಗಳನ್ನು ಕೊಡುವಾಗ ಆ ಕಾಲದಲ್ಲಿ ಪ್ರಚಲಿತವಿದ್ದ ಸ್ಥಳಗಳ ಹೆಸರುಗಳು ತಮಗೆ ಸಿಕ್ಕುತ್ತವೆ. ಅವುಗಳನ್ನು ಗುರುತಿಸಿ ಅಧ್ಯಯನ ಮಾಡಿದೆವಾದರೆ ಸ್ಥಳನಾಮಗಳ ಅಧ್ಯಯನಕ್ಕೂ ಇವು ನೆರವಾಗಬಲ್ಲವು. ಹಾಗೆಯೇ ಜ್ಯೋತಿಷ್ಯಕ್ಕೆ ಸಂಬಂಧಿಸಿದ ಕೆಲವು 'ಪಂಚಾಂಗ'[12]ದ ಹಸ್ತಪ್ರತಿಗಳೂ ದೊರಕುತ್ತವೆ. ಸಾಮಾನ್ಯವಾಗಿ ಇವು ೧೮–೧೯ನೇ ಶತಮಾನಕ್ಕೆ ಸೇರಿದವುಗಳಾಗಿರುತ್ತವೆ. (ಇದು ಕೇವಲ ಊಹೆಯಷ್ಟೇ. ಇದಕ್ಕೂ ಪ್ರಾಚೀನ ಹಸ್ತಪ್ರತಿಗಳು ಇರುವ ಸಾಧ್ಯತೆ ಇಲ್ಲದಿಲ್ಲ.) ಆಗ, ಈಗ ನಾವು ಅಧ್ಯಯನಯೋಗ್ಯವೆಂದುಕೊಂಡಿರುವ ಪ್ರಾಚೀನ ಕವಿ–ಕೃತಿಗಳ ಸ್ಥಾನದಲ್ಲಿ ೧೮–೧೯ನೇ ಶತಮಾನದ ಕವಿ–ಕೃತಿಗಳೇ ನಿಲ್ಲಬಹುದು. ಏಕೆಂದರೆ ಈಗ ನಾವಿರುವ ಕಾಲ ನಮ್ಮ ಮುಂದಿನ ಪೀಳಿಗೆಗೆ ಪ್ರಾಚೀನವೇ. ಅಂಥ ಸಂದರ್ಭದಲ್ಲಿ ಅವರಿಗೆ ಈ ಪಂಚಾಂಗಗಳು ಆವಶ್ಯಕವಾಗಬಹುದು. ಕವಿ–ಕೃತಿ ಕಾಲನಿರ್ಣಯದಲ್ಲಿ ಬರಬಹುದಾದ ತೊಡಕುಗಳನ್ನು ನೀಗಿಸಲು ಇವು ಸ್ವಲ್ಪ ಮಟ್ಟಿಗಾದರೂ ಸಹಕರಿಸಬಲ್ಲವು. (ಈ ಸಹಕಾರವನ್ನು ಇಂದೂ ಪಡೆಯಬಾರದು ಎಂದೇನಿಲ್ಲ.) ಇತಿಹಾಸ ರಚನೆಯಲ್ಲಿ ಮುಖ್ಯ ಭಾಗವಾಗಿರುವ ಕಾಲನಿರ್ಣಯದಲ್ಲಿ ಇವು ಭಾಗವಹಿಸುತ್ತವೆಂದರೆ ಇವುಗಳ ಮಹತ್ವವನ್ನು ಬೇರೆ ಹೇಳಬೇಕಾಗಿಲ್ಲ.

II. **ಸಂಸ್ಕೃತಿ :** ಒಂದು ನಾಡಿನ ಸಂಸ್ಕೃತಿ ರೂಪಗೊಳ್ಳುವುದು ಆ ನಾಡಿನಲ್ಲಿ ಸಿಕ್ಕಬಹುದಾದ ಪ್ರಾಚೀನ ಆಕರಗಳಿಂದ. ನಮ್ಮ ಪೂರ್ವಿಕರ ನಡಾವಳಿಗಳು ಹೇಗಿದ್ದವು ಎಂಬುದರ ಅಧ್ಯಯನವೇ ಸಂಸ್ಕೃತಿಯ ಅಧ್ಯಯನ. ಉಪೇಕ್ಷಿತ ಹಸ್ತಪ್ರತಿಗಳು ಇಂಥ ಸಂಸ್ಕೃತಿಯ ಅಧ್ಯಯನಕ್ಕೆ ಹೆಚ್ಚು ನೆರವಾಗುತ್ತವೆ. ಅವುಗಳನ್ನು ಹೀಗೆ ನೋಡಬಹುದು.

೧) **ಪ್ರಶ್ನಶಾಸ್ತ್ರ**: 'ಅಕ್ಷರ ಕೇವಲಿ ನಿಮಿತ್ತ',[13] 'ನರಪಿಂಗಲಿ',[14] 'ನವರತ್ನ ಚಿಂತಾಮಣಿ',[15] 'ಪ್ರಶ್ನ ಚಿಂತಾಮಣಿ',[16] 'ಶಕುನ ಪ್ರಪಂಚ',[17] 'ಸಾಮುದ್ರಿಕ ಲಕ್ಷಣ',[18] ಇತ್ಯಾದಿ ಭವಿಷ್ಯಶಾಸ್ತ್ರಗಳು ಹಿಂದಿನ ಜನರ ಜೀವನದ ಹಲವಾರು ಮೌಲ್ಯಗಳನ್ನು ಪ್ರತಿನಿಧಿಸುತ್ತವೆ. ಅವರ ನಂಬಿಕೆಗಳು, ಅವರ ಬದುಕಿನ ರೀತಿ ಇತ್ಯಾದಿಗಳ ಚಿತ್ರಣವನ್ನು ಕೊಡುತ್ತವೆ. ಇವುಗಳಲ್ಲಿ ವೈವಿಧ್ಯಮಯ ಮಾದರಿಗಳಿವೆ. ಇಲ್ಲಿ ಸಿಗುವ ಎಲ್ಲ ಹಸ್ತಪ್ರತಿಗಳೂ ಪ್ರಶ್ನೆ ಕೇಳುವಲ್ಲಿ ಮತ್ತು ಹೇಳುವಲ್ಲಿ ತನ್ನದೇ ಆದ ವಿಶಿಷ್ಟ ಗುಣದಿಂದ ಕೂಡಿರುತ್ತವೆ.

> 'ಯಿತನ ಕೆಲಸ ಯಿತನಿಗೆ ಆದೀತೋ ಆಗದೋ' ಎಂಬ ಪ್ರಶ್ನೆಯೂ ಇದು
> "ಯಿತನ ಕೆಲಸ ಧನಮೂಲದಿಂದ ಆದೀತು. ಯಿ ಯಾದು ಸಾಳಾವಳಿ ಉಂಟು, ಯಿ ಧನ ಬಾರದು. ಯಿತನು ಧರ್ಮ ಕೊಳ್ಳನು. ಯಿ ಜಾಡಿ ಗೆಲುವುದು. ಯಿ ಜಗಳ ಗೆಲ್ಲನು. ಯಿ ಮೈನೆರೆದವಳು ರೋಗಿಯಾಗುವಳು. ಯಿ ತಿರು ಭಾಗ್ಯವುಳ್ಳದು. ಯಿ ಮಗ ವಿದ್ವಾಂಸನಾದಾನು."

ಎಂಬ ವಿವಿಧ ಉತ್ತರಗಳಿರುವಂಥವು ಒಂದು ಬಗೆಯಾದರೆ,

> "ನೀನು ಕೇಳುವ ಪ್ರಶ್ನೆಯು। ಅನುಮಾನವಾಗಿ ಕಂಡಮಂಡಲವಾಗಿರುವುದು॥ ಅದು ಹ್ಯಾಗೆ ಯೆಂದರೆ। ರಾಮಸ್ವಾಮಿಯವರು। ಸುಗ್ರೀವ ಜಾಂಬವ ನಳ ನೀಲ ಸುಷೇಣ ಹನುಮಂತ ಸಹಾ ಶೀತಾದೇವಿಯವರ ಕುರುಹು ತಿಳಿಯುವುದಕ್ಕೆ ನಾಲ್ಕು ದಿಕ್ಕಿಗೆ ಕಳುಹಿದಲ್ಲಿ। ಯಿವರಿಗೆ ಶೀತಾದೇವಿಯು। ಗೋಚರವುಂಟೋ ಯಿಲ್ಲವೋ। ಯೆಂದು ರಾಮಸ್ವಾಮಿಯವರು ಅನುಮಾನದಲ್ಲಿ ಯಿದ್ದರು. ಅದು ಕಾರಣ ನಿನ್ನ ಕಾರ್ಯವು ನೆಲವರ (?) ವಿಲ್ಲಾ।"

ಎಂಬಂಥ ರಾಮಾಯಣದ ಘಟನೆಗಳನ್ನಾಧರಿಸಿ ಶುಭಾಶುಭಗಳನ್ನು ಹೇಳುವ ಮಾದರಿಗಳೂ ಉಂಟು.[19] ಸಾಮುದ್ರಿಕ ಲಕ್ಷಣ ಹೇಳುವ ಹಸ್ತಪ್ರತಿಯಲ್ಲಿ-

> ಹೆಣ್ಣಿಗೆ ಸುಳಿಪ್ರಟ್ಟುವ ಲಕ್ಷಣ॥ ಹುಬ್ಬಿನಮೇಲೆ ಯಿರಲು ಧನಲಾಭ ಬುಜದ ಮೇಲೆ ಯಿರಲು ಗಂಡನ ಮೇಲೆ ಸ್ನೇಹ ಮೊಲೆ ಮೇಲೆ ಯಿರಲು ಜಾರೆ ನಡದ ಮೇಲೆ ಯಿದ್ದರೆ ಹುಟ್ಟಿದಮನೆ ಹೊಕ್ಕಮನೆ ದರಿದ್ರ ಮುಂದದ ಮೇಲೆ ಯಿರೆ ಶುಭ॥

ಎಂದಿದೆ. ಹಿಂದಿನಕಾಲದಲ್ಲಿ ನಮ್ಮ ಜನ ಕೇವಲ ನಂಬಿಕೆಗಳ ಆಧಾರದ ಮೇಲೆಯೇ ಬದುಕುತ್ತಿದ್ದರಾದ್ದರಿಂದ ಅವು ಎಂಥವು, ಅವು ಜೀವನದಮೇಲೆ ಎಂತಹ ಪರಿಣಾಮ ಬೀರುತ್ತಿದ್ದವು, ಈ ನಂಬಿಕೆಗಳನ್ನೇ ಇಡೀ ಸಾಮಾಜಿಕ ವ್ಯವಸ್ಥೆ ಹೇಗೆ ಅವಲಂಬಿಸಿತ್ತು, ಇವುಗಳ ಆಧಾರವೇ ಮುಖ್ಯವಾಗಿದ್ದ ಅವರ ಬದುಕು ಹೇಗಿತ್ತು ಎಂಬಂತಹ ಒಟ್ಟು ಸಮಾಜ ಜೀವನದ ಅಧ್ಯಯನಕ್ಕೆ ಇದಕ್ಕಿಂತ ಉತ್ತಮ ಆಕರಗಳು ಬಹುಶಃ ಸಿಕ್ಕಲಾರವು.

೨) **ವೈದ್ಯಶಾಸ್ತ್ರ:** ಈ ವಿಷಯದ ಹಸ್ತಪ್ರತಿಗಳು ಅನೇಕವಿವೆ. ಇಂದು ವೈಜ್ಞಾನಿಕವಾಗಿ ಹೊಸ ಹೊಸ ಔಷಧಿಗಳು ಬರುತ್ತಿದ್ದರೂ ಹೊಸ ಹೊಸ ಕಾಯಿಲೆಗಳು ಹುಟ್ಟುತ್ತಿದ್ದರೂ ಅವುಗಳನ್ನೆಲ್ಲ ಮೊದಲೇ ಕಂಡುಹಿಡಿದು ಔಷಧಿಗಳನ್ನು ಸಿದ್ಧಪಡಿಸಿಟ್ಟಿದ್ದರಿಂದ ನಮ್ಮ ವೈದ್ಯಕೀಯ ಸಿದ್ಧತೆಯನ್ನು ಊಹಿಸಿಕೊಳ್ಳಬಹುದು. ಇಂದಿನ ಇಂಗ್ಲಿಷ್ ಔಷಧಿಗಳ ತೀವ್ರ ಪೈಪೋಟಿಯಲ್ಲೂ ನಮ್ಮ ಔಷಧಿಗಳು ತನ್ನತನವನ್ನು ಕಾಯ್ದುಕೊಂಡಿರುವುದರ ಜೊತೆಗೆ ಇಂದಿಗೂ ಇವೇ ಜನಾನುರಾಗಿಗಳಾಗುತ್ತವೆ. ಈ ಪದ್ಧತಿ ಈಗಾಗಲೇ ಜನಪ್ರಿಯವಾಗಿದ್ದರೂ ಇನ್ನೂ ಕೆಲವು ವೈದ್ಯಪದ್ಧತಿಗಳು ಜನಪ್ರಿಯವಾಗಬೇಕಾಗಿವೆ. ವಿಷಚಿಕಿತ್ಸೆ[20] (ಹಾವು ಚೇಳು ಇತ್ಯಾದಿ ವಿಷ ಜಂತುಗಳ ನಂಜಿಗೆ ಮಾಡುವ ಚಿಕಿತ್ಸೆ), 'ಯೋಗದ ರಹಸ್ಯ'[21] (ಯೋಗದ ವಿವಿಧ ಸಾಧನೆಗಳಿಂದ ಮಾಡುವ ಚಿಕಿತ್ಸೆ), ಪಿಂಡೋತ್ಪತ್ಯ[22] (ಗರ್ಭಪಿಂಡಹುಟ್ಟುವ ವಿವರವನ್ನೊಳಗೊಂಡ ಗರ್ಭಿಣೀಚಿಕಿತ್ಸೆ), 'ಸ್ವಪ್ನಾಧ್ಯಾಯ'[23] (ವಿವಿಧ ಬಗೆಯ ಸ್ವಪ್ನಗಳು ಮತ್ತು ಅವುಗಳ ಫಲಾಫಲಗಳ ಚಿಕಿತ್ಸೆ) ಇತ್ಯಾದಿಗಳ ಬಗೆಗೆ ವೈಜ್ಞಾನಿಕ ಅಧ್ಯಯನದ ಅಗತ್ಯವಿದೆ. ನಮ್ಮ ಪ್ರಾಚೀನರಲ್ಲಿ ಮನಶ್ಶಾಸ್ತ್ರದ ಅಧ್ಯಯನ ಹೇಗಿತ್ತು ಎಂಬುದಕ್ಕೆ 'ಸ್ವಪ್ನಾಧ್ಯಾಯ' (ವೈಜ್ಞಾನಿಕವಾಗಿಯೂ ಸ್ವಪ್ನಗಳ ಬಗೆಗೆ ಖಚಿತವಾದ ತೀರ್ಮಾನವಿಲ್ಲ), 'ಮನೋವಿಕಾರ ನಿರಸನ'[24] ಎಂಬ ವಿಷಯದ ರಗಳೆಯ ಗ್ರಂಥವೊಂದು ಸಿಕ್ಕುತ್ತದೆ. ಇದರಲ್ಲಿ ಮನದ ವಿಕಾರಗಳ ವಿಚಾರವಿದೆ. ಇವುಗಳು ಅತ್ಯುತ್ತಮ ಸಾಮಗ್ರಿಯಾಗಬಲ್ಲವು.

೩) **ವಾಸ್ತು ಮತ್ತು ಲೋಹಶಾಸ್ತ್ರ:** 'ಮನೆಕಟ್ಟುವ ಲಕ್ಷಣ',[25] 'ವಾಸ್ತು ಶಾಸ್ತ್ರ'[26] ಇತ್ಯಾದಿಗಳಿಂದ ಮನೆಗಳನ್ನೂ ದೇವಾಲಯಗಳನ್ನೂ ಕಟ್ಟುವ ವಿಧಿವಿಧಾನಗಳನ್ನು ತಿಳಿಯಬಹುದು. ಇಲ್ಲಿ ಮನೆಗಳನ್ನು ಹೇಗೆ ಕಟ್ಟಬೇಕು? ಅದಕ್ಕೆ ಅಡಿಪಾಯವನ್ನು ಹೇಗೆ ಎಲ್ಲಿ ಹಾಕಬೇಕು? ಎಂತಹ ಸಲಕರಣೆಗಳು ಬೇಕು? ಅವುಗಳನ್ನು ಹೇಗೆ ಉಪಯೋಗಿಸಬೇಕು ಇತ್ಯಾದಿಗಳೆಲ್ಲಕ್ಕೂ ವಿವರಣೆಗಳು ದೊರಕುತ್ತವೆ. ಈ ವಿವರಣೆಗಳಿಂದ ಆಗಿನಕಾಲದ ಮನೆಗಳು ಹೇಗಿರುತ್ತಿದ್ದವು ಎಂಬುದರ ಆಧಾರದ ಮೇಲೆ ಸಾಂಸ್ಕೃತಿಕ ಜೀವನವನ್ನು ಅಧ್ಯಯನ ಮಾಡಲು ಸಾಧ್ಯವಿದೆ ಮತ್ತು ವಾಸ್ತು ಶಿಲ್ಪದ ಇತಿಹಾಸದ ಅಧ್ಯಯನಕ್ಕೂ ಸಾಧ್ಯವಿದೆ.

'ರಸಸಿಂಧೂರ ಮಾಡುವ ಕ್ರಮ'[27] 'ರಸವಾದ'[28] ಇತ್ಯಾದಿ ಹಸ್ತಪ್ರತಿಗಳಿಂದ ಲೋಹಗಳನ್ನು ತಯಾರಿಸುವ, ಕರಗಿಸುವ ವಿಚಾರಗಳು ತಿಳಿಯುತ್ತವೆ. 'ರತ್ನ ಶಾಸ್ತ್ರವು'[illegible] ರತ್ನಗಳ ಬಗೆಗೆ ಹೇಳುತ್ತದೆ. 'ಬಣ್ಣಾಂತರಸೂತ್ರ'[29]ವೆಂಬ ಇನ್ನೊಂದು ಹಸ್ತಪ್ರತಿಯಲ್ಲಿ ಚಿನ್ನದ ಬಣ್ಣವನ್ನು ಹಾಕುವುದಕ್ಕೆ ಲೆಕ್ಕವನ್ನು ಹೇಳುತ್ತದೆ.

"ಹಂಚಿನಲು ಬೂದಿಕಟಿಕಟ್ಟಿ ಯೀ ಮುಡಿಯುನಿಟ್ಟು ಹಂಚಮುಚ್ಚಿ ಕೆಳಗು ಮೇಲು ಕುರಕೊಟ್ಟು ಪ್ರುಟವಸಿಕ್ಕಲು ತಾಂಬ್ರವಾಹದು"[30]

ಹೀಗೆ ಲೋಹಗಳಾಗುವುದನ್ನು ಹೇಳುವುದರ ಜೊತೆಗೆ ಅವುಗಳನ್ನು ಶುದ್ಧಿ ಮಾಡುವ ಕ್ರಮಗಳನ್ನು ಹೇಳುತ್ತವೆ. ನಮ್ಮಲ್ಲಿದ್ದ ಖನಿಜಗಳ ಬಗೆಗೆ ಮತ್ತು ಅವುಗಳಿಂದ ನಮ್ಮವರು ಕಂಡುಕೊಂಡಿದ್ದ ಉಪಯೋಗಗಳ ಬಗೆಗೆ ಮತ್ತು ನಮ್ಮ ಆಭರಣಗಳ ಬಗೆಗೆ ಹೆಚ್ಚು ತಿಳಿಯಬಲ್ಲವರಿಗೆ ಇಲ್ಲಿ ಸಾಮಗ್ರಿಯಿದೆ.

**ಳ) ಪದ್ಧತಿಗಳು :** 'ಸಮಾಧಿಕ್ರಿಯೆ'31 ಎಂಬ ಹಸ್ತಪ್ರತಿ ವೀರಶೈವರಿಗೆ ಲಿಂಗೈಕ್ಯ ಕಾಲದಲ್ಲಿ ಮಾಡುವ ತ್ರಿಕೋನಗಳು, ತಗಡು ಸಂಬಂಧಗಳು ಇತ್ಯಾದಿ ಪದ್ಧತಿಗಳ ಬಗೆಗೆ ಮಾಹಿತಿ ಒದಗಿಸುತ್ತವೆ. ಹಾಗೆಯೇ 'ಮಂತ್ರಗಳು' ಇರುವ ಹಸ್ತಪ್ರತಿಗಳೂ ಉಂಟು.32 ಇವುಗಳು ವೈದಿಕ ಪದ್ಧತಿಗಳನ್ನು ಹೇಳುತ್ತವೆ. ಅಲ್ಲಿ ದೇವತಾರ್ಚನೆಗೆ ಬಳಸುವ ಮಂತ್ರಗಳು ಇತ್ಯಾದಿಗಳೊಡನೆ ಅಪರಕರ್ಮಗಳಿಗೆ ಸಂಬಂಧಿಸಿದವೂ ಇರುತ್ತವೆ. ಶ್ರಾದ್ಧ ಮಂತ್ರಗಳ ಬಗೆಗೆ ಮತ್ತು ಸಮಾಧಿಕ್ರಿಯೆಯ ಸಂಬಂಧಗಳ ಬಗೆಗೆ ಹಾಗೂ ಇಂಥ ಅನೇಕ ಪದ್ಧತಿಗಳ ಬಗೆಗೆ ಸಂಶೋಧನಾತ್ಮಕವಾಗಿ ಅಧ್ಯಯನ ಮಾಡುವವರಿಗೆ ಇವುಗಳು ಸ್ವಲ್ಪಮಟ್ಟಿಗಾದರೂ ಸಹಾಯಕಗಳಾಗುತ್ತವೆ.

'ಸಭಾಪತಿಯ ಲಕ್ಷಣ'33ವನ್ನು ಹೇಳುವ ಹಸ್ತಪ್ರತಿಯೊಂದು

ಭಾವಕ ರಸಿಕರಸ। ಭಾವನೆ ನೆರೆಉಳ್ಳ ರಾಯಭಾರಿಗಳಂ।
ಕೋವಿನರಕರಸಿ ನಿಯತಾ। ಸ್ಥಾನದೊಳಿರಿಸೂದು ತತ್ಸಭಾಪತಿ ಧರೆಯೊಳ್ ॥

ಎಂದು ಕಂದಪದ್ಯದಲ್ಲಿ ಸಭೆಯ ಮತ್ತು ಸಭಾಪತಿಯ ಧರ್ಮವನ್ನು ಹೇಳುತ್ತದೆ. ಇದು ಅಂದಿನ ಸಮಾಜದಲ್ಲಿ ಒಬ್ಬ ಅಧಿಕಾರಿ ಪ್ರತಿಷ್ಠಿತ ವ್ಯಕ್ತಿ (=ಸಭಾಪತಿ) ಹೇಗಿರಬೇಕಿತ್ತು, ಅವನ ಲಕ್ಷಣಗಳೇನು, ಅವನು ಆ ಸಮಾಜದೊಡನೆ ಹೇಗೆ ವರ್ತಿಸಬೇಕು ಎಂಬೆಲ್ಲ ವಿವರಗಳನ್ನು ತಿಳಿಸಬಲ್ಲದು.

'ರಾತ್ರಿನಲ್ಲನ ಪದ್ಯ'34ಗಳುಳ್ಳ ಹಸ್ತಪ್ರತಿಯೊಂದು ವೇಶ್ಯೆಯರ ಧರ್ಮವನ್ನು ಹೇಳುತ್ತದೆ.

ಎಂಟಡಿಯನ ತಾಯಂಗೆ। ಕಂಟಕಗೈದವನ ಬಾಯತುತ್ತಿಗೆ ಮುನಿದನ
ನೆಂಟರ ಬಗೆಯನಾಳ್ದನ। ಭಂಟನ ತಾ ಪೋಲ್ದನಕ್ಕ ರಾತ್ರಿಯ ನಲ್ಲಂ॥

ಎಂದು ತಂಗಿ ಅಕ್ಕನಿಗೆ ರಾತ್ರಿವೇಳೆಯಲ್ಲಿ ವೇಶ್ಯೆಯರ ಮನೆಗೆ ಬರುತ್ತಿದ್ದ ವಿಟರ ವರ್ಣನೆಯನ್ನು ಹೇಳುವ ರೀತಿಯಲ್ಲಿದೆ. ಇಂಥ ಹಸ್ತಪ್ರತಿಗಳ ಆಳವಾದ ಅಧ್ಯಯನದಿಂದ ಕನ್ನಡ ಕಾವ್ಯಗಳಲ್ಲಿ ವಿವರಣೆಗಳಿಲ್ಲದೆ ಒಂದು ವರ್ಣನೆಯಾಗಿ ಬರುವ ವೇಶ್ಯಾವಾಟಿಕೆಗಳ ಮೇಲೆ ಹೆಚ್ಚು ಬೆಳಕು ಚೆಲ್ಲಲು ಸಾಧ್ಯವಿದೆ. ಅವರು ಬದುಕುತ್ತಿದ್ದ ರೀತಿ, ಅವರ ಬದುಕಿಗಿದ್ದ ಅವರದೇ ಆದ ಕೆಲವು ನಿಯಮಗಳು, ಅವರು ವಿಟರೊಡನೆ ವ್ಯವಹರಿಸುತ್ತಿದ್ದ ರೀತಿ, ಸಮಾಜಕ್ಕೂ ಅವರಿಗೂ ಇದ್ದ ಸಂಬಂಧ ಇತ್ಯಾದಿಗಳ ಮೂಲಕ ಅವರ ಬದುಕನ್ನು ಕೂಲಂಕಷವಾಗಿ ಅಧ್ಯಯನ ಮಾಡಬಹುದು.

ಗೃಹಿಣಿಯರು ಅಡಿಗೆ ಮಾಡುವುದಕ್ಕೆ ಅಗತ್ಯವಾದ ಪದ್ಧತಿಗಳನ್ನುಳ್ಳ 'ಪಾಕ ಶಾಸ್ತ್ರ'ವನ್ನು ಈಗಾಗಲೆ ಗೊತ್ತಿರುವ ಮಂಗರಸನ 'ಸೂಪಶಾಸ್ತ್ರ', ಚಾವುಂಡರಾಯನ 'ಲೋಕೋಪಕಾರ'ಗಳಲ್ಲಿ ಹೇಳಿದೆ.[35] ಇನ್ನೂ ಇಂಥ ಅನೇಕ ಹಸ್ತಪ್ರತಿಗಳುಂಟು.

> "ವುಕ್ಕರಿಸಿ ಫಲಸಿನಕಾಯ ಮುಳ್ಳರಿದು ವುಪ್ಪು ಹುಳಿ ಯೀರುಳ್ಳಿ ಕರಿಬೇವು ಕೊತ್ತಂಬರಿಯ ರಸದಿಂ ಹೊರಳಿಸಿ ಕವೆಗೋಲಲಿಕಟ್ಟಿ ಕೆಂಡದ ಮೇಲೆ ಯೀ ವ್ರವ ಹಿಂಗುವ ಹಾಗೆ x x x x ಕವೆಗೋಲ ಕೆಂಡದ ಮೇಲೆ ಕಾಶಿ ಮೆಣಸಿನ ಚೂರ್ನವ ತಳವುದೂ. ಇದು ವೃಂತಾಕ ಪನಸ ಶಲಾಕವೆಂಬರು".[36]

ಹಲಸಿನಕಾಯಿಯಿಂದ ಮಾಡುತ್ತಿರುವ ತಿಂಡಿಯನ್ನು ಹೇಳುತ್ತಿರುವ ಇಂಥ ಎಷ್ಟೋ ಬಳಕೆ ತಪ್ಪಿದ ಹೊಸರುಚಿಗಳನ್ನು ಇವುಗಳ ಅಧ್ಯಯನದಿಂದ ಮತ್ತೆ ಪಡೆಯಬಹುದು. ಮತ್ತು ಸಾಹಿತ್ಯ ಕೃತಿಗಳಲ್ಲಿ ಅಲ್ಲಲ್ಲಿ ಬರುವ ಇಂಥ ರುಚಿಗಳಿಗೆ ನಾವು ಈ ಶಾಸ್ತ್ರದ ವ್ಯಾಸಂಗದಿಂದ ವಿವರಗಳನ್ನು ಪಡೆಯಲೂ ಬಹುದು. ಆಯಾ ಕಾಲದಲ್ಲಿ ಯಾವ ಯಾವ ರುಚಿಗಳನ್ನು ಬಳಸುತ್ತಿದ್ದರು, ನಮ್ಮ ಸಮಾಜದ ಮೂಲ ರುಚಿಗಳಾವುವು, ಹೊಸದಾಗಿ ಬಂದವುಗಳಾವುವು ಇತ್ಯಾದಿಗಳನ್ನೂ ನಾವು ತಿಳಿಯಬಹುದಾಗಿದೆ.

'ಮಗ್ಗಿ ಕೋಷ್ಟಕ',[37] 'ವ್ಯವಹಾರ ಗಣಿತ'[38] ಮುಂತಾದ ಹಸ್ತಪ್ರತಿಗಳು ಸಮಾಜದಲ್ಲಿ ರೂಢಿಯಲ್ಲಿದ್ದ ವ್ಯವಹಾರಗಳನ್ನು ಹೇಳುತ್ತವೆ.

> "ಮೂಜುಗೋಟಿನ ಭೂಮಿಯಿಂ ಉದ್ದವನಳದು ೧೦ ಅಗಲವನಳದರೆ ೧೦ಯೀ ೧೦ನು ಅರ್ಧಿಸಿದರೆ ೫ ಯೀ ೫ ನೂ ಉದ್ದ ೧೦ ನೂ ಗುಣಿಸಲು ೫೦ ಹಾರ ೫ ವೃತ್ತವಾಗಿದ್ದ ಭೂಮಿಯನು ಅರ್ಧವ ಮಾಡಿದರೆ ೪ ಯೀ ೪ ನು ಅರ್ಧಿಸಿದರೆ ೨ ಯೀ ೨ ನು ಗುಣಿಸಿದರೆ ೪ ಕಂಭವಹುದು."[39]

ಇಂಥ ವ್ಯವಹಾರ ಪದ್ಧತಿಗಳಿಂದ ಅಂದಿನ ಸಮಾಜದಲ್ಲಿದ್ದ ವ್ಯಾವಹಾರಿಕ ಕ್ಷೇತ್ರವನ್ನು ಅಧ್ಯಯನ ಮಾಡುವುದರ ಮೂಲಕ ಬಹುಮುಖ ಪ್ರಯೋಜನವನ್ನು ಪಡೆಯ ಬಹುದು. ನಮ್ಮ ಪೂರ್ವಿಕರಲ್ಲಿದ್ದ ವ್ಯವಹಾರ ಪದ್ಧತಿಗಳು, ಮೂಲಮಾನಗಳು, ಅವಕ್ಕೆ ಬಳಸುತ್ತಿದ್ದ ಸಾಧನಗಳು ಇತ್ಯಾದಿಗಳೊಂದಿಗೆ ಶಾಸನ ಇತ್ಯಾದಿಗಳಲ್ಲಿ ದೊರಕುವ ವ್ಯಾವಹಾರಿಕ ಪದಗಳ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಇವುಗಳ ಅಧ್ಯಯನ ತೀರ ಅಗತ್ಯವಾಗುತ್ತದೆ.

೫) **ಜಾನಪದ :** 'ಮಳೆಯರಾಜ ಚರಿತ್ರೆ',[40] 'ವಜ್ರಕುಮಾರ ಚರಿತ್ರೆ'[41] 'ವೀರಸಂಗಯ್ಯನ ಚೌಪದ',[42] 'ಲಾವಣಿಗಳು'[43], 'ಒಗಟಿಪದಗಳು'[44] ಮುಂತಾದ ವಿಷಯಕ ಹಸ್ತಪ್ರತಿಗಳ ಜೊತೆಗೆ 'ಮಹಾನವಮಿ ಪದಗಳು'[45], 'ಹರಕೆಪದ' 'ಸಾವಿತ್ರಿ ಚರಿತ್ರೆ', 'ಮೊಸರು ಕಡೆಯುವ ಹಾಡು' ಐರಾವತ ಚೌಪದ', 'ಅನಂತ ಪದ್ಮನಾಭವ್ರತ, 'ಸೋಬಾನೆ ಪದ', 'ಗೌರಿವ್ರತ' ಇತ್ಯಾದಿ ಸಂಪ್ರದಾಯದ ಹಾಡಗಳೂ ದೊರೆಯುತ್ತವೆ. ಈ ಸಂಪ್ರದಾಯದ ಹಾಡುಗಳನ್ನು ಜಾನಪದ ಎಂದು ಕರೆಯ

ಲಾಗದಿದ್ದರೂ ಅದರ ವ್ಯಾಪ್ತಿಯಲ್ಲೇ ಸೇರುತ್ತದೆ. ಈ ಹಾಡುಗಳಿಂದ ನಮ್ಮ ಸಮಾಜದಲ್ಲಿ ರೂಢಿಗೆ ಬಂದ ವ್ರತ, ಪೂಜೆ ಇತ್ಯಾದಿ ಧಾರ್ಮಿಕ ವಿಧಿಗಳ ಬಗ್ಗೆ ಸಂಶೋಧನಾತ್ಮಕವಾಗಿ ಅಧ್ಯಯನ ಮಾಡಲು ಸಾಧ್ಯವಿದೆ. ಇಂದಿಗೂ ಈ ಹಾಡುಗಳ ನೂರಾರು ಚೌಪದ, ಷಟ್ಪದಿಗಳು ಸಂಪ್ರದಾಯವಂತರ ನೆನಪಿನಲ್ಲಿ ಉಳಿದಿವೆ. ಹಾಗೆಯೇ ಜಾನಪದಗೀತೆ, ಕಥೆಗಳೂ ಕೂಡ. ಅವುಗಳನ್ನೆಲ್ಲ ಸಂಗ್ರಹಿಸು ವುದರ ಜೊತೆಗೆ ಈಗಾಗಲೇ ಸಂಗ್ರಹಿಸಿ ಪ್ರಕಟಿಸಿರುವ ಅಂಥವುಗಳೊಡನೆ ಪರಸ್ಪರ ಹೋಲಿಸಿ ಶುದ್ಧಪಾಠಕೊಡುವುದರ ಜೊತೆಗೇ ಆ ವಿಷಯಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಬೇಕಾಗಿದೆ.

III. **ಭಾಷೆ:** ಭಾಷೆಯ ವಿವಿಧ ಮುಖಗಳಿಗೆ ಈ ಹಸ್ತಪ್ರತಿಗಳು ಕೈಗನ್ನಡಿಯಾಗುತ್ತವೆ. ಕನ್ನಡ ಹಸ್ತಪ್ರತಿಗಳ ಲಿಪಿ ಬೆಳವಣಿಗೆಯನ್ನು ಗುರುತಿಸಲು ಮತ್ತು ಈ ಲಿಪಿಗೂ ಶಾಸನ ಲಿಪಿಗಳಿಗೂ ಇರುವ ಸಾಮ್ಯ ವ್ಯತ್ಯಾಸಗಳನ್ನು ಅಧ್ಯಯನ ಮಾಡಲು ಸಾಧ್ಯವಿದೆ. ಹಸ್ತಪ್ರತಿಗಳ ಲಿಪಿಗೆ ಪ್ರಾಚೀನ ದಾಖಲೆ ಸಿಕ್ಕುವುದಿಲ್ಲವೆಂಬ ಕೊರತೆಯಿದ್ದರೂ ಇರುವಷ್ಟರಿಂದಲೇ ಅಧ್ಯಯನಕ್ಕವಕಾಶವಿದೆ. ಶಾಸನ ಲಿಪಿಗಿಂತ ಹಸ್ತಪ್ರತಿ ಲಿಪಿ ಹೆಚ್ಚು ವೈವಿಧ್ಯಮಯವಾಗಿದೆ. ಏಕೆಂದರೆ ಸಾಮಾನ್ಯವಾಗಿ ಇಲ್ಲಿ ವ್ಯಕ್ತಿ ವೈಶಿಷ್ಟ್ಯಗಳು ಅಧಿಕ. ಶಾಸನ ಲಿಪಿಯಲ್ಲಿ ಕಾಣ ದೊರೆಯದ ಅಕ್ಷರರೂಪಗಳು ಇಲ್ಲಿ ಸಿಕ್ಕುತ್ತವೆ.

ಭಾಷಿಕ ವ್ಯತ್ಯಾಸಗಳ ಅಧ್ಯಯನಕ್ಕೆ ಈ ಹಸ್ತಪ್ರತಿಗಳು ವಿಪುಲವಾದ ಸಾಮಗ್ರಿ ಗಳನ್ನೊದಗಿಸುತ್ತವೆ. ವೈವಿಧ್ಯಮಯವಾದ ಭಾಷಾವ್ಯತ್ಯಾಸಗಳು ಇಲ್ಲಿ ದೊರೆಯು ತ್ತವೆ. ಸಾಹಿತ್ಯಕೃತಿಗಳಲ್ಲಿ ದೊರೆಯುವ ರೂಪಗಳಿಗೂ ಸಾಹಿತ್ಯೇತರ ಕೃತಿಗಳಲ್ಲಿ ದೊರಕುವ ಅದೇ ರೂಪಗಳಿಗೂ ಇರುವ ವ್ಯತ್ಯಾಸಗಳನ್ನು ಗುರುತಿಸಬಹುದು. ಉದಾ: ಅರಣ್ಯ–ಅರುಣ್ಯ, ಆರೋಗ್ಯ–ಆರ್ಯೋಗ್ಯ, ವ್ಯಾಪಕ–ಗ್ವಾಪಕ, ತಾಮ್ರ–ತಾಂಬ್ರ, ಗೆಲ್ಲುವುದು–ಗೆಲುವುದು. ಇನ್ನು [illegible] ಪ್ರತ್ಯಯಗಳ ಬಳಕೆಯಲ್ಲಿಯೂ ವ್ಯತ್ಯಾಸಗಳು ಕಾಣುತ್ತವೆ. ಉದಾ: ಕೊಲ್ಲುತ್ತಾನೆ–ಕೊಲ್ತಾನು, ಆಗುತ್ತದೆ–ಆದೀತು, ಆಗುತ್ತಾನೆ–ಆದಾನು. ಇರುವುದು–ಇರಸೂದು ಇತ್ಯಾದಿ. ಹಾಗೆಯೇ ಪ–ಹ ಅದ ಉದಾಹರಣೆಗಳು ಸ–ಶ–ಷ ಭೇದಗಳು ಹೀಗೆ ಇನ್ನೂ ವಿಸ್ತಾರವಾಗಿ ಭಾಷಾವ್ಯತ್ಯಾಸಗಳನ್ನು ಈ ರಂಗದಲ್ಲಿ ಅಧ್ಯಯನ ಮಾಡಬಹುದು.

ಶಿಷ್ಟ ಭಾಷಾವಿದ್ವಾಂಸರಿಗೆ ಜನ ಆಡುವ ಭಾಷೆ ಮುಖ್ಯವೇ ವಿನಾ ಲಿಖಿತ ಭಾಷೆಯಲ್ಲ. ಆದರೆ ಪ್ರಸ್ತುತ ಹಸ್ತಪ್ರತಿಗಳಲ್ಲಿಯ ಭಾಷೆ ಲಿಖಿತವಾಗಿದ್ದರೂ ಅದು ಬಹುಮಟ್ಟಿಗೆ ಆಡುಭಾಷೆಯಾಗೇ ಇರುತ್ತದೆ. ಏಕೆಂದರೆ ಇಲ್ಲಿಯ ಬರಹಗಾರರು ಭಾಷೆಯ ನಿಯಮಗಳನ್ನು ವ್ಯಾಕರಣಗ್ರಂಥ ಒಂದನ್ನು ಬಲ್ಲವರಲ್ಲ. ತಾವು ದಿನ ನಿತ್ಯ ಆಡುವ ಭಾಷೆಯನ್ನೇ ಬಳಸಿ ಹಾಗೆಯೇ ಬರೆಯುತ್ತಾರೆ. ಅಷ್ಟರಿಂದ

ಭಾಷಾವಿಜ್ಞಾನಿ ಸಾಹಿತ್ಯಕೃತಿಗಳಲ್ಲಿ ಸಿಗದಿರುವ ರೂಪಗಳಿಗಿಂತ ಈ ಲೌಕಿಕ ಕೃತಿಗಳಲ್ಲಿಯ ರೂಪಗಳನ್ನು ಗಮನಕ್ಕೆ ತೆಗೆದುಕೊಳ್ಳಬಹುದೆನಿಸುತ್ತದೆ. ಈ ಹಸ್ತಪ್ರತಿಗಳ ಭಾಷೆ ಲಿಖಿತಭಾಷೆ ಎನ್ನುವುದಕ್ಕಿಂತ ಮಾತನಾಡುವ ಭಾಷೆ ಎಂದು ಹೇಳುವುದಕ್ಕೆ ಇಲ್ಲಿ ಸಿಕ್ಕುವ 'ಸಂಭಾಷಣಾ ಸರಣಿ'[6] ಎಂಬ ಹಸ್ತಪ್ರತಿ ಒಳ್ಳೆಯ ನಿದರ್ಶನ :

> "ನಾನು ಯಿದನ್ನು ಪ್ರೋದಿಪೆನು । ನೀವು ಯಿದನ್ನು ಯಷ್ಟು ಸಾರಿ ಪ್ರೋದಿದಿರಿ । ಪ್ರತಿ ಶಬ್ದಗಳನ್ನು ಗ್ನಾಪಕಕ್ಕೆ ಬರುವ ತನಕ ಅದನ್ನ ಪ್ರೋದಿದೇನು । ನೀವು ಅದನ್ನ ಯತ್ತಿ ಬರದಿದ್ದೀರಾ । ಯತ್ತಿ ಬರದಿದ್ದೇನೆ ಯತ್ತಿ ಬರೆಯಲಿಲ್ಲ । ಅದನ್ನ ದುಂಡಕ್ಷರಗಳನ್ನಾಗಿ ಬರದಿದ್ದೇನೆ । ತೊಡಕಕ್ಷರಗಳನ್ನು ಪ್ರೋದುವುದಕ್ಕೆ ನೀವು ಬ್ಯಾಗ ಕಲಿತುಕೊಳ್ಳಿರಿ ।"

ಎನ್ನುವಂಥಹ ಸಂಭಾಷಣೆಗಳನ್ನುಳ್ಳ ಅನೇಕ ಪಾಠಗಳು ಈ ಹಸ್ತಪ್ರತಿಯಲ್ಲಿವೆ. ಇದರಿಂದ ಒಂದು ಪ್ರದೇಶದ ಜನ ಆಡುವ ಭಾಷೆಯನ್ನು ದಾಖಲು ಮಾಡಿ ಇಟ್ಟಂತಹ ದಾಖಲೆಯಿಂದ ಒಬ್ಬ ಭಾಷಾವಿಜ್ಞಾನಿ ಪಡೆಯಬಹುದಾದಷ್ಟು ಉಪಯೋಗಗಳನ್ನು ಪಡೆಯಬಹುದೆನ್ನುವುದಕ್ಕೆ ಅಡಿಯಿಲ್ಲ.

ಭಾಷಾವಿಜ್ಞಾನದಲ್ಲಿ ಗುರುತಿಸುವ ಅರ್ಧಸ್ವರಗಳಾದ 'ಯ' ಮತ್ತು 'ವ' ಗಳನ್ನು ನಾವೇಕೆ ಗುರುತಿಸುತ್ತೇವೆ ಎಂಬುದಕ್ಕೆ ಇಂಥ ಹಸ್ತಪ್ರತಿಗಳಲ್ಲಿ ಉತ್ತರ ದೊರಕುತ್ತದೆ. ಸ್ವರಗಳನ್ನು ಬಳಸುವ ಜಾಗಗಳಲ್ಲಿ ಈ ವ್ಯಂಜನಗಳು ಪಾಲ್ಗೊಳ್ಳುತ್ತವೆ. ಇ, ಈ, ಎ ಗಳನ್ನು ಬಳಸುವೆಡೆಯಲ್ಲಿ 'ಯ'ವನ್ನೂ, ಉ, ಒ, ಓ ಗಳನ್ನು ಬಳಸುವೆಡೆಯಲ್ಲಿ 'ವ'ವನ್ನೂ ಸಾಮಾನ್ಯವಾಗಿ ಕಾಣುತ್ತೇವೆ. ಉದಾ: ಯಿವರಿಗೆ, ಯಿಲ್ಲ, ಯೀತನ, ಯೀ ಕಿತು, ಯೀ ಊರು, ಯಷ್ಟು, ಯೆಂದು, ಯತ್ತಿ, ಹ್ಯಾಗೆ, ಬ್ಯಾಗ, ವುಪ್ಪು, ವುಕ್ಕರಿಸು, ವೊಂಬತ್ತು, ವೋದಿಪೆನು, ಕ್ವಾಟೆ (ಕೋಟೆ) ಇತ್ಯಾದಿ.

ಈ ಲೌಕಿಕ ಹಸ್ತಪ್ರತಿಗಳಲ್ಲಿ ಮುಖ್ಯವಾಗಿ ನಮ್ಮ ಜನ ಹಿಂದೆ ದಿನನಿತ್ಯ ಬಳಸುತ್ತಿದ್ದ ನಿತ್ಯಬಳಕೆ ಪದಗಳ ರಾಶಿಯನ್ನೇ ಕಾಣಬಹುದು. ಈ ಹಸ್ತಪ್ರತಿಗಳ ಜನಜೀವನದ ಮಧ್ಯದಿಂದ ಮೂಡಿಬಂದವುಗಳಾದ್ದರಿಂದ ಅವರು ತಮ್ಮ ನಡುವಿನ ಸಂಪರ್ಕಕ್ಕಾಗಿ ಬಳಸುತ್ತಿದ್ದ ಇಂಥ ಪದಗಳು ಹೇರಳವಾಗಿ ದೊರೆಯುತ್ತವೆ. ಉದಾ: ಮುಂಬ್ಯಾಗ, ಕಾರ, ಬಾಗ, ಪರಟಿ, ಕೆಂಪಮಂಡಲ, ಹೋಹುದು, ವುಕ್ಕರಿಸು, ತಕವು, ದಾಲಿಭಾಗ್ಯ, ತುರಿತ, ಮಾನ್ಯ, ಗೋಟು, ಕಂಭ, ಕ್ರಯ, ಹಿಂಗು, ದಿವಾನ, ಸಗಟು, ಜಾಡಿ, ನೆಲಮನೆ, ಮುಕ್ಕರಿ, ಕವೆಗೋಲು, ಮೋಕಾಪ್, ವಗೈರೆ, ಇವಲ್ಲದೆ ಬೇರೆ ಅನುಕರಣಾತ ಪದಗಳು (ಕನ್ನಡವು, ಅನ್ಯಭಾಷಾ ಸ್ವೀಕರಣಗಳು) ಸಿಕ್ಕುತ್ತವೆ. ಹಾಗೆ ಈ ಹಸ್ತಪ್ರತಿಗಳ ಭಾಷಾವ್ಯಾಪ್ತಿಯ ಅಧ್ಯಯನದಿಂದಲೇ ಹೆಚ್ಚು ಹೆಚ್ಚು ಪ್ರಯೋಜನಗಳನ್ನು ಪಡೆಯಬಹುದು. ಈ ಹಸ್ತಪ್ರತಿಗಳನ್ನು ಇಲ್ಲಿ ಎಷ್ಟು

ವಿಭಾಗವಾಗಿ ವಿಂಗಡಿಸಲಾಗಿದೆಯೋ ಅಷ್ಟೇ ಕ್ಷೇತ್ರಗಳಲ್ಲದೆ ಇನ್ನೂ ಅನೇಕ ಕ್ಷೇತ್ರಗಳು ಬದುಕಿನಲ್ಲಿರುವುದರಿಂದ ಆಯಾಯ ಕ್ಷೇತ್ರಗಳಲ್ಲೇ ವಿಶಿಷ್ಟವಾಗಿ ಬಳಸುವ ಪ್ರತ್ಯೇಕ ಪರಿಭಾಷೆಗಳೇ ನಮಗೆ ಸಿಕ್ಕುತ್ತವೆ. ಈ ಪರಿಭಾಷೆಗಳ ಪರಸ್ಪರ ಅಧ್ಯಯನ ಮಾಡಲು, ಆಯಾ ಪರಿಭಾಷಾ ಕ್ಷೇತ್ರಗಳ ಜೀವನ–ಸಂಸ್ಕೃತಿಯನ್ನು ಅಧ್ಯಯನ ಮಾಡಲೂ ಇವು ಸಹಾಯಕವಾಗುತ್ತವೆ. ಇವುಗಳಿಂದ ಭಾಷೆಯ ಬೆಳವಣಿಗೆ, ರೂಪಾಂತರಗಳು, ವ್ಯತ್ಯಾಸಗಳು ಇತ್ಯಾದಿಗಳನ್ನು ಅಧ್ಯಯನ ಮಾಡುವುದರ ಜೊತೆ ಜೊತೆಗೇ ಸಂಸ್ಕೃತಿಯ, ಇತಿಹಾಸದ ಅಧ್ಯಯನವನ್ನೂ ಮಾಡಬಹುದಾಗಿದೆ.

ಹೀಗೆ ಉಪೇಕ್ಷಿತ ಹಸ್ತಪ್ರತಿಗಳನ್ನು ಅನೇಕ ಬೇಕುಗಳತ್ತ ಒಯ್ಯಬಹುದು. ಕೇವಲ ಸಾಹಿತ್ಯಕೃತಿಗಳೇ ಅಧ್ಯಯನ ಯೋಗ್ಯ, ಸಾಹಿತ್ಯಾಭ್ಯಾಸಿಗಳೇ ಅಧ್ಯಯನಾರ್ಹರು ಎಂಬ ಸಂಕುಚಿತತೆಯನ್ನು ತೊರೆದು ಆಯಾ ಕ್ಷೇತ್ರದವರೇ ಆಯಾ ವಿಷಯಗಳ ಅಧ್ಯಯನವನ್ನು ಮಾಡಲು ಯಾವುದೇ ಅಡ್ಡಿಯಿಲ್ಲ. ಆದರೆ ಈ ಹಸ್ತಪ್ರತಿಗಳನ್ನು ಇಂದಿನ ಜಾನಪದ ಕೃತಿಗಳ ಸಂಪಾದನೆಯಂತೆ ಸಂಪಾದಿಸಿದರೆ ಸಾಲದು. ಇಲ್ಲಿ ಸಂಪಾದನೆಯಷ್ಟೇ ಸಂಶೋಧನೆ ಬಹಳ ಮುಖ್ಯ. ವೈಜ್ಞಾನಿಕ ರೀತಿಯಲ್ಲಿ ಎಷ್ಟು ವಿಧದಲ್ಲಿ ಅಧ್ಯಯನ ಮಾಡಲು ಸಾಧ್ಯವೋ ಅಷ್ಟು ವಿಧಗಳಿಂದ ಈ ಹಸ್ತಪ್ರತಿಗಳನ್ನು ನಾವು ದುಡಿಸಿಕೊಳ್ಳಬಹುದು.

---

## ಟಿಪ್ಪಣಿಗಳು

1. ಇಂಥ ಹಸ್ತಪ್ರತಿಗಳನ್ನು 'ಮುಂದೆ ಯಾರಿಗಾದರೂ ಉಪಯೋಗವಾಗುತ್ತದೆ' ಎಂಬ ಸಾಮಾನ್ಯ ಧೋರಣೆಯಿಂದ ರಕ್ಷಿಸುತ್ತಾರೆಯೇ ಹೊರತು ಅವುಗಳ ಅಧ್ಯಯನಕ್ಕೆ ಮನಸ್ಸು ಮಾಡುವುದಿಲ್ಲ.
2. ಈ ಲೇಖನಕ್ಕೆ ಸಂಬಂಧಪಟ್ಟಂತೆ ಸಾಹಿತ್ಯ ಎಂದರೆ ಕಾವ್ಯ ಮತ್ತು ಅದರ ಅಧ್ಯಯನದ ಪರಿಕರಗಳನ್ನು ಕುರಿತದ್ದು ; ಭಾವೋಪಯೋಗಿಯಾದದ್ದು. ಸಾಹಿತ್ಯೇತರ ಎಂದರೆ ಜನಜೀವನದ ವ್ಯಾವಹಾರಿಕ ಪರಿಕರಗಳನ್ನು ಕುರಿತದ್ದು, ಲೋಕೋಪಯೋಗಿಯಾದದ್ದು.
3. ಡಿ. ವಿ. ಗುಂಡಪ್ಪ : ಜೀವನ ಸೌಂದರ್ಯ ಮತ್ತು ಸಾಹಿತ್ಯ ; ಪು. ೧೮೧ ; ೧೯೬೭.
4. ಪ್ರೊ॥ ಎಂ. ವಿ. ಸೀತಾರಾಮಯ್ಯ : ಶಾಸ್ತ್ರಸಾಹಿತ್ಯ, ಪು. ೨೬೮ ; ೧೯೭೫.
5. ಅದೇ. ಪು. ೨೬೮–೨೬೯.
6. [ಇಲ್ಲಿಂದ ಮುಂದಕ್ಕೆ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ; (1–4 ಭಾಗಗಳು) ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು, ಇಲ್ಲಿಂದ ಆಕರಗಳನ್ನು ಕೊಡಲಾಗಿದೆ. ಮೊದಲನೆಯದು ಕ್ರಮಸಂಖ್ಯೆ, ಎರಡನೆಯದು ಪ್ರತಿಯ ಸಂಖ್ಯೆ]
   ೧೬೨೫/ಕೆ. ಬಿ. ೪೨೪ ; ಗದ್ಯ.
7. ೧೮೦೧/ಕೆ. ಬಿ. ೨೫/I ; ಗದ್ಯ.
8. ೨೦೬೨/ಕೆ. ಎ. ೨೭೪/೨ ; ಗದ್ಯ
9. ೨೦೬೦/ಕೆ. ಎ. ೬೦೧/೨ ; ಚಂಪು

10. ೩೭೦/ಕೆ. ಬಿ. ೨೪೧.

11. ಬಿ. ಎಂ. ಶ್ರೀ. ಪ್ರತಿಷ್ಠಾನದ ಭಂಡಾರದಲ್ಲಿ ಇಂಥದೊಂದು ತೆಲುಗು ಹಸ್ತಪ್ರತಿಯಿದೆ. ಇದರಲ್ಲಿ ಅನೇಕ ಊರುಗಳೊಂದಿಗೆ ಇಟ್ಟುಕೊಂಡ ವಹಿವಾಟಿನ ಲೆಕ್ಕವಿವರಗಳಿವೆ.

12. ಇಂಥ ಕೆಲವು ಹಸ್ತಪ್ರತಿಗಳೂ ಬಿ.ಎಂ.ಶ್ರೀ. ಪ್ರತಿಷ್ಠಾನದ ಭಂಡಾರದಲ್ಲಿವೆ.

13. ೧೦/ಕೆ. 11/3.

14. ೭೩೮ ಕೆ. ೩೮೨/೭ : ಕಂದ ; ಮಾಧವ, ಕಾಲ ?

ಯಂತ್ರದೊಳಂ ಮಂತ್ರದೊಳಂ ತಂತ್ರದೊಳಂ ಗೇಯರಸ ಸಭಾಮಂಡಲದೊಳು।
ಸಂತರ ಶಕುನ ವಿಚಾರಮನ, ನೆಂತುಂ ನೆರೆ ಪೇಳಬಲ್ಲ ಮಾಧವದೇವಾ ॥

15. ೭೪೧/ಕೆ. ೩೪೧ ; ಗದ್ಯ

16. ೯೭೫/ಕೆ. ೫೦ ; ಗದ್ಯ.

17. ೧೬೬೦/ಕೆ. ೯೦ ; ಕಂದ, ವೃತ್ತ.

18. ೧೮೯೭/ಕೆ. ೩೮೨ ೪ ; ಶ್ಲೋಕ, ಟೀಕು.

19. ಈ ಎರಡೂ ಹಸ್ತಪ್ರತಿಗಳು ನನ್ನ ಬಳಿ ಇವೆ.

20. ೧೫೭೨/ಕೆ. ೪೩೯/೧ ; ಶ್ಲೋಕ, ಟೀಕು.

21. ೧೩೮೦/ಕೆ. ೩೨೨/೨, ಶ್ಲೋಕ, ಟೀಕು.

22. ೯೦೧/ಕೆ. ೩೯೧/೨

23. ೧೯೯೨/ಸ್ವಪ್ನಾಧ್ಯಾಯದ ಟೀಕು, ರಂಗಾಶಾಸ್ತ್ರಿ, ಸು : ಕ್ರಿ. ಶ. 1815.

24. ೧೨೫೨/ಕೆ. ೨೬೪/೪ ; ರಗಳೆ.

25. ೧೨೫೧/ಕೆ. ೨೮೩/೪ ; ಶ್ಲೋಕ, ಟೀಕು

26. ೧೫೩೭/ಕೆ. ೩೪೦ ; ಶ್ಲೋಕ ; ಟೀಕು.

27. ೧೪೦೨/ಕೆ. ೧೭೫/೬ ; ಗದ್ಯ.

28. ೧೪೦೧/ಕೆ. ೪೪೭ ; ಗದ್ಯ,

28.ಅ ೧೩೯೪/ಕೆ. ಬಿ. ೬೯ ; ವಾರ್ಧಕ, ಚೆಲುವ, ಸು : ಕ್ರಿ. ಶ. ೧೭೧೫

29. ೧೦೦೨/ಕೆ. ೧೩೨/೧ ಸೂತ್ರ, ಗದ್ಯ ; ರಾಜಾದಿತ್ಯ, ಸು. ಕ್ರಿ. ಶ. ೧೧೨೦.

ಮುಪ್ಪಾಗವನ್ನು ಹಾಗವಮಾಡಲು ೩೯ ಕಡೆಯು ಯಿಪ್ಪತ್ತೆಂಟ್ಟು ವರಹಾಂನು ಹಾಗವ ಮಾಡಲು ೩೧೨೦ ಹಾಗ/ಅದನು ೧ ಹಾರದಿಂ ಭಾಗಿಸಲು/೮೦.... ಉಘುಡಿಸುವ ವಿವರಾ/ವೊಂಭತ್ತು ಮುಪ್ಪಾಗದ ತೂಕ ಬಂಣ ೭೮ ಹಾಗಕ್ಕೆ ತೂಕ ವೇನಾದಿತ್ತಾ ಎಂದರೆ ತೂಕ ೮೦೧೭॥

30. ಅಡಿಟಿಪ್ಪಣಿ ೨೭ ನೋಡಿ.

31. ೧೮೭೧/ಕೆ. ೩೪೫/೧ ; ಗದ್ಯ.

32. ಪ್ರತಿಷ್ಠಾನದ ಭಂಡಾರದಲ್ಲಿ ಇಂಥ ಕೆಲವು ಹಸ್ತಪ್ರತಿಗಳಿವೆ.

33. ೧೬೬/ಕೆ. ೧೩೯/೪ ; ಕಂದ, ಗದ್ಯ.

34. ೧೪೨೩/ಕೆ. ಎ. ೨೮೫ ; ಕಂದ

35. ಇದರಲ್ಲಿ ಸೂಪ ಶಾಸ್ತ್ರದೊಡನೆ ಇನ್ನೂ ಕೆಲವು ಲೌಕಿಕ ಶಾಸ್ತ್ರ ವಿಷಯಗಳಿವೆ.

36. ೧೯೫೭/ಸೂಪ ಶಾಸ್ತ್ರದ ಟೀಕು. ಗದ್ಯ.

37. ೧೨೩೬/ಕೆ. ೨೧೬/೧. ; ಗದ್ಯ

38. ೧೬೫೭/ವ್ಯವಹಾರ ಗಣಿತ, ಪದ್ಯ ಟೀಕು, ರಾಜಾದಿತ್ಯ, ಸು. ಕ್ರಿ. ಶ. ೧೨೨೦.

39. ಅದೇ

40. ೧೩೦೧/ಕೆ. ೫೩೪ ; ವಾರ್ಧಕ, ಸಜ್ಜಿಯ ಸಿದ್ಧಲಿಂಗಾರ್ಯ, ಸು : ಕ್ರಿ ಶ. ೧೬೬೫.

41. ೧೫೧೮/ಕೆ. ಎ. ೨೩೫/೩. ಸಾಂಗತ್ಯ.

42. ೧೨೯೧/ಕೆ. ೨೦೭/೧, ಚೌಪದ ಹಾಡುಗಳು.

43. ೧೪೯೦/ಕೆ. ಎ. ೨೭೮. ಹಾಡು

44. ೧೯೬/ಕೆ. ೨೦೭/೩, ರಗಳೆ (?)

ಕಂನಡ ಸೂಜಾಣ ಕವಿಗಳದೇವ ಪೇಳು
ಬಿನ್ನಣದ ವಾಗಟೆಯ ತಿಳಿದು ನಮಿಗೆ ಹೇಳು
ಕಾಲಾರು ತಲೆಮೂರು ತ್ರಯಿ ಮೂರ್ತಿಯಲ್ಲ
ಬಾಲಂಗಳೆರಡು ಕಿವಿನಾಲ್ಕು ಮೃಗವಲ್ಲ
ನಾಲಿಗೆಯುನಾಲ್ಕುಂಟು ವಿಪರೀತವಲ್ಲ
ಯಿದ ಹೇಳಬಲ್ಲ ಜಾಣರಿಗೆ ಅರಿದಲ್ಲಾ ॥

45. ೧೨೯೨-೯೫ರ ವರೆಗೆ ಮತ್ತು ೨೦೩೬-೩೦೫೭ರ ವರೆಗೆ ಅನೇಕ ಹಸ್ತಪ್ರತಿಗಳಿವೆ. ಇವುಗಳಲ್ಲಿ ಕೆಲವು ಜಾನಪದ ಸಂಪ್ರದಾಯದ ಹಾಡುಗಳು ಇವೆ. ಒಂದೊಂದು ಹಸ್ತಪ್ರತಿಯಲ್ಲಿಯೂ ಅನೇಕ ಹಾಡುಗಳಿವೆ. ಇವುಗಳನ್ನೆಲ್ಲ ಬಾಲಕರು ಹರಸುವ ಪದಗಳು ಎಂದು ಹೆಸರಿಸಿದೆ.

46. ೧೮೭೫/ಕೆ. ಬಿ. ೨೮೦ ; ಗದ್ಯ.

—o—



# ಹಸ್ತಪ್ರತಿಗಳು: ಮೆಕೆಂಜಿ ಸಂಗ್ರಹ

---

**ಎಂ. ಜಿ. ಹೆಗ್ಡೆ**

೧೦ನೆಯ ಶತಮಾನದಿಂದ ಅವ್ಯಾಹತವಾಗಿ ಬೆಳೆದು ಬಂದ ಕನ್ನಡ ಭಾಷೆ, ಸಾಹಿತ್ಯಗಳು ೧೮ನೆಯ ಶತಮಾನದ ಕೊನೆಯ ಅವಧಿಯಲ್ಲಿ ಮತ್ತೊಂದು ಅಪೂರ್ವವಾದ ಬೆಳವಣಿಗೆಗೆ ಕಾರಣವಾದವು. ಈ ಬೆಳವಣಿಗೆ ಕನ್ನಡಕ್ಕೆ ಮಾತ್ರ ಸೀಮಿತವಾಗಿರದೆ, ದಕ್ಷಿಣ ಭಾರತದ ಎಲ್ಲ ಭಾಷೆಗಳಲ್ಲೂ ಕಂಡುಬಂದಿತು. ಭೂಮಿಯ ಅಡಿಯಲ್ಲಿ ಅಡಗಿಕೊಂಡಿರುವ ನಮ್ಮ ಚರಿತ್ರೆಯನ್ನು ತಿಳಿಸುವ ಶಾಸನಗಳ ನಕಲುಗಳನ್ನು ತೆಗೆಯುವ ಕಾರ್ಯ ಮೊತ್ತಮೊದಲು ಆರಂಭವಾಯ್ತು. ಎಷ್ಟೋ ಜನರ, ಮನೆಗಳಲ್ಲಿ, ದೇವಾಲಯಗಳಲ್ಲಿ ಗೆದ್ದಲು ಹಿಡಿಯುತ್ತಿದ್ದ ಸಾಹಿತ್ಯ, ಪುರಾಣ, ವ್ಯಾಕರಣ ಮುಂತಾದವುಗಳಿಗೆ ಸಂಬಂಧಿಸಿದ ತಾಳೆಗ್ರಂಥಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸುವ ಕಾರ್ಯ ಆರಂಭವಾಯ್ತು. ಇದರೊಂದಿಗೆಯೆ ಪ್ರತಿ ಹಳ್ಳಿ ಹಳ್ಳಿಯಲ್ಲಿ ದೊರೆಯಬಹುದಾದ ಪ್ರತಿ ಸಮಾಜದ ಆಚಾರ–ವಿಚಾರ ಮತ್ತು ಅಲ್ಲಿಯ ಸ್ಥಳಪುರಾಣ, ಚಾರಿತ್ರಿಕ ಹಿನ್ನೆಲೆಗಳನ್ನು ಕೂಡ ಅಲ್ಲಿಯ ಜನರಿಂದಲೇ ಕೇಳಿ ತಿಳದು ಬರೆದುಕೊಳ್ಳಲಾಯ್ತು. ಭೂಪಟಗಳನ್ನೂ ಮೊತ್ತಮೊದಲಿಗೆ ತಯಾರಿಸಲಾಯ್ತು. ಇಂತಹ ಮಹತ್ಕಾರ್ಯವನ್ನು ಪ್ರಾರಂಭಿಸಿದವನು ಕರ್ನಲ್ ಕೊಲಿನ್ ಮೆಕೆಂಜಿ (Colonel Colin Mackenzie)

ಸ್ಕಾಟ್‌ಲೆಂಡಿನ ಸಮೀಪ ಇರುವ ಲೆವೀಸ್ ದ್ವೀಪದಲ್ಲಿ ಈತನ ಜನನವಾಯ್ತು (೧೭೫೪). ಇವನಿಗೆ ಚಿಕ್ಕವನಿದ್ದಾಗಿನಿಂದಲೇ ಗಣಿತಶಾಸ್ತ್ರದ ಕಡೆಗೆ ಹೆಚ್ಚಿನ ಒಲವು. ವಿಶ್ವಗಣಿತಕರ್ತನಾದ ಜಾನ್ ನೇಪಿಯರನ ಜೀವನಚರಿತ್ರೆಯನ್ನು ಪ್ರಾರಂಭಿಸಿದ್ದ, ಆತನ ವಂಶಸ್ಥನಾದ ಫ್ರಾನ್ಸಿಸ್ ಜೊತೆ ಮೆಕೆಂಜಿ ಸೇರಿಕೊಂಡ. ಆದರೆ ವಿಧಿ ಈ ಕಾರ್ಯ ಮುಗಿಸುವ ಮುಂಚೆಯೇ ಫ್ರಾನ್ಸಿಸ್‌ನನ್ನು ತನ್ನತ್ತ ಎಳೆದುಕೊಂಡಿತು. ಈ ಸಮಯಕ್ಕಾಗಲೇ ಮೆಕೆಂಜಿಗೆ ಭಾರತೀಯ ಗಣಿತಶಾಸ್ತ್ರವನ್ನು ಅಭ್ಯಸಿಸುವ ಅಭಿಲಾಷೆ ಉಂಟಾಗಿ, ಇದೇ ಉದ್ದೇಶದಿಂದ ಅಂದಿನ ಈಸ್ಟ್ ಇಂಡಿಯಾ ಕಂಪನಿಯ ಮದರಾಸು ವಿಭಾಗದಲ್ಲಿ ಕ್ಯಾಡೆಟ್ ಇಂಜಿನಿಯರ್ ಹುದ್ದೆ ಹಿಡಿದು ೨–೯–೧೭೮೩ರಲ್ಲಿ ಮದರಾಸಿಗೆ ಬಂದನು. ಈ ಸಮಯದಲ್ಲೇ ನೇಪಿಯರನ ಬಗ್ಗೆ ಮಾಹಿತಿ ಸಂಗ್ರಹಿಸುತ್ತಿದ್ದ ಶ್ರೀಮತಿ ಜೋನ್‌ಸ್ಟನ್ನಳ ಪರಿಚಯ

ವಾಯ್ತು. ಇವಳಿಂದ ಮಧುರೆಯಲ್ಲಿದ್ದ ಭಾರತೀಯ ವಿದ್ವಾಂಸರ ಪರಿಚಯ ಮಾಡಿಕೊಂಡನು. ಅಲ್ಲಿ ಖಗೋಳಶಾಸ್ತ್ರ, ವೇದಾಂತ, ಗಣಿತಶಾಸ್ತ್ರ, ಮತ್ತು ಲೌಕಿಕ ಶಾಸ್ತ್ರಗಳನ್ನು ಬಲ್ಲ ವಿದ್ವಾಂಸರಿದ್ದರು. ಈ ಪಂಡಿತರ ಸಂಪರ್ಕ ಗಾಢ ವಾದಂತೆಲ್ಲ ಮೆಕೆಂಜಿಗೆ ಭಾರತದ ವೇದ, ಪುರಾಣ, ಇತಿಹಾಸ, ವಿಜ್ಞಾನಗಳಿಗೆ ಸಂಬಂಧಿಸಿದ ಸಾಹಿತ್ಯಗಳನ್ನು ಸಂಗ್ರಹಿಸಬೇಕೆಂಬ ಮಹತ್ವಾಕಾಂಕ್ಷೆ ಸ್ವಾಭಾವಿಕ ವಾಗಿಯೇ ಉಂಟಾಯಿತು. ೧೭೯೬ರಿಂದ ೧೮೧೧ರವರೆಗೆ ಇವನ ಕಾರ್ಯಕ್ಷೇತ್ರ ದಕ್ಷಿಣ ಭಾರತವೇ ಆಗಿತ್ತು. ಇವನನ್ನು ದಕ್ಷಿಣ ಭಾರತದ ಭೂಪಟ ತಯಾರಿಸುವ ಕಾರ್ಯಕ್ಕೆ ನೇಮಿಸಿದ್ದರು. ಈ ಸಮಯದಲ್ಲಿ ದೇಶೀಯ ವಿದ್ವಾಂಸರ ಸಹಾಯ ದಿಂದ ಸಾವಿರಾರು ಹಸ್ತಪ್ರತಿ, ಪ್ರಾಚ್ಯವಸ್ತು, ಕೈಫಿಯತ್ತು, ಬಖೈರು, ರಾಜವಂಶಾ ವಳಿ ಮುಂತಾದವುಗಳನ್ನು ಸಂಗ್ರಹಿಸಿದನು. ತನಗೆ ನೆರವು ನೀಡಿದ ಕಾವಲಿ ವೆಂಕಟಬೋರಯ್ಯ ಎಂಬ ವಿದ್ವಾಂಸನನ್ನು ಬಹುವಾಗಿ ಪ್ರಶಂಸಿಸಿದ್ದಾನೆ. ಇವನ ಸಂಗಡ ಕನ್ನಡ, ತಮಿಳು, ತೆಲುಗು, ಸಂಸ್ಕೃತ, ಮರಾಠಿ ಮತ್ತು ಪರ್ಶಿಯನ್ ಬಲ್ಲ ದೇಶೀಯ ಪಂಡಿತರಿದ್ದರು. ಕನ್ನಡಕ್ಕೆ ರಾಮದಾಸ ಮತ್ತು ನಾರಾಯಣರಾವ್ ಎಂಬುವರಿಬ್ಬರಿದ್ದರು. ಇವರಿಗೆ ತಮಿಳು ಕೂಡ ಚೆನ್ನಾಗಿ ತಿಳಿದಿತ್ತು. ಇವರೆಲ್ಲರಿಗೂ ಮೆಕೆಂಜಿ ತನ್ನ ಕೈಯಿಂದಲೇ ಸಂಬಳವನ್ನು ಕೊಡುತ್ತಿದ್ದನು; ಕೆಲವು ಪ್ರಾಚ್ಯವಸ್ತು ಗಳನ್ನು ಕೊಳ್ಳುವುದಕ್ಕೆ ತನ್ನ ಕೈಯಿಂದಲೇ ೧೫ ಸಾವಿರ ಪೌಂಡ್ ಹಾಕಿದ್ದನು. ಈತನ ಕಾರ್ಯಕ್ಷೇತ್ರ ಭಾರತಕ್ಕಷ್ಟೇ ಸೀಮಿತವಾಗಿರದೆ, ಜಾವಾ, ಸುಮಾತ್ರಾ, ಬರ್ಮಾ, ಶ್ರೀಲಂಕಾಗಳವರೆಗೂ ವ್ಯಾಪಿಸಿತ್ತು. ಅಲ್ಲಿಯೂ ಕೂಡ ಈ ಸಂಗ್ರಹ ಕಾರ್ಯವನ್ನು ನಡೆಸಿಯೇ ಇದ್ದ. ೩೮ ವರ್ಷಗಳ ಕಾಲ ಒಂದು ದಿನ ಕೂಡಾ ರಜೆ ತೆಗೆಯದೆ ಕಾರ್ಯ ನಿರ್ವಹಿಸಿದ್ದ ಇವನ ಆರೋಗ್ಯ ಹದಗೆಟ್ಟಿತು. ಈ ಪರಿಣಾಮದಿಂದಾಗಿ ಮೆಕೆಂಜಿ (೮–೫–೧೮೨೧) ಹುಗ್ಲಿನದಿಯ ದಡದಲ್ಲಿ ಅಸುನೀಗಿದ.

ಮೆಕೆಂಜಿಯ ಮರಣದ ತರುವಾಯ ಅವನ ಸಂಗ್ರಹವನ್ನು ಈಸ್ಟ್ ಇಂಡಿಯಾ ಕಂಪೆನಿಯವರು ಸ್ವಲ್ಪ ಹಣಕೊಟ್ಟು ಅವನ ಹೆಂಡತಿಯಿಂದ ಪಡೆದುಕೊಂಡರು. ಹೀಗೆ ಪಡೆದುಕೊಂಡ ಸಂಗ್ರಹಗಳನ್ನು ೧೮೨೧ರಲ್ಲಿ ೩ ವಿಭಾಗ ಮಾಡಿ ಒಂದನ್ನು ಇಂಗ್ಲೆಂಡಿಗೂ, ಇನ್ನೊಂದನ್ನು ಕಲಕತ್ತಾಗೂ, ಉಳಿದವುಗಳನ್ನು ಮದ್ರಾಸಿಗೂ ಹಂಚಿ ಹಾಕಿದರು. ಈ ಸಂಗ್ರಹಗಳಲ್ಲಿ ಭಾಷೆಗಳಿಗೆ ಸಂಬಂಧಿಸಿದವು, ನಾಣ್ಯಗಳು, ಮೂರ್ತಿಗಳೂ ಸೇರಿದ್ದವು. ಇಂಗ್ಲೆಂಡಿಗೆ ಸಾಗಿಸಿದವುಗಳಲ್ಲಿ ಮುಖ್ಯವಾಗಿ ನಾಣ್ಯಗಳು, ಮೂರ್ತಿಗಳು, ಬರ್ಮೀಯ ಹಸ್ತಪ್ರತಿ ಮುಂತಾದುವುಗಳು ಸೇರಿವೆ.

ಮೆಕೆಂಜಿ ಸಂಗ್ರಹಿಸಿದ ಕನ್ನಡ ಕೈಫಿಯತ್ತುಗಳಲ್ಲಿ ಚಾರಿತ್ರಿಕ ಮಹತ್ವ ಉಳ್ಳಂಥವು, ಪೌರಾಣಿಕ ಮಹತ್ವ ಉಳ್ಳವು, ಒಂದೊಂದು ಸಮಾಜದ ಆಚಾರ–ವಿಚಾರಗಳಿಗೆ ಸಂಬಂಧಿಸಿದವು, ಮತ್ತು ಸ್ಥಳನಾಮ ಪರಿಚಯ ಉಳ್ಳವು ಗಮನಾರ್ಹ ವಾಗಿವೆ.

**ಚಾರಿತ್ರಿಕ ಹಿನ್ನೆಲೆ ಉಳ್ಳ ಸಿರ್ಸಿ ಕೈಫಿಯತ್ತುಗಳು:** ಶಿರಸಿ, ಮೂಡಸ್ಸಿ, ಭಾಗಿ ಕೈಫಿಯತ್ತುಗಳಲ್ಲಿ ಅಂದು ಆಳಿದ ಮಾಂಡಲಿಕರ ಬಗೆಗೆ ಮಾಹಿತಿ ಇದೆ. ಅವರ ಆಡಳಿತಕ್ಕೆ ಒಳಪಟ್ಟ ಕೆಲ ಊರುಗಳ ಹೆಸರೂ ಇವೆ. ಬಿಚ್ಚನಾಮೆ, ಯಸಳೆ, ಕಬ್ಬಗಾರು, ಸುರಕಲ ಕೊಪ್ಪ, ಬಿದ್ರಾಪುರ, ಕೆರೆಕೊಪ್ಪ, ಹುಸುರೆ, ವಡುಗನಹಳ್ಳಿ, ಬಗೇರಿಕೊಪ್ಪ ಮೊದಲಾದವು. ಇವು ಒಟ್ಟು ೧೪ ಗ್ರಾಮಗಳು. ಜಂಬೇ ಹಳ್ಳಿಗಾಡಿಗೆ ಸೇರಿದ ಕಿಲ್ಲೆಗಳು ಮೂರು. ಇವುಗಳಲ್ಲಿ ಒಂದು ಚನ್ನಪಟ್ಟಣ ಕಿಲ್ಲೆ. ಇದನ್ನು ಕಟ್ಟಿಸಿದವರು ಸೋದೆ ರಾಮಚಂದ್ರ ನಾಯಕರು. ಬಶೆಟ್ಟಿಯ ಕೆರೆಯಮೇಲೆ ಇರುವ ಕಿಲ್ಲೆ ಬಸಲಿಂಗರಾಜರ ಕಾಲಕ್ಕೆ ಕಟ್ಟಿಸಿದ್ದು. ಹಿತ್ತಲಗದ್ದೆ ಮೇಲಿರುವ ಕಿಲ್ಲೆ ಹಿಂದೆ ಮೂಡಶಿ ಬಾಗಿ ಪಾಳೇಗಾರನ ಕಾಲದ್ದು. ಈಗ ಕಿಲ್ಲೆಯ ಪಾಯ ಮಾತ್ರ ಕಾಣುತ್ತದೆ.

"ಭಾವ ಸಂವತ್ಸರದ ಆಶಾಢ ಶುದ್ಧ ೬ ರಲ್ಲು ಹುಣಿಶೆಕೊಪ್ಪದ ಪುಟ್ಟಯ್ಯ ಹೆಗ್ಗಡೆ, ನರಸಪ್ಪ ಹೆಗ್ಗಡೆ, ವಿಘ್ನೇಶ್ವರ ಹೆಗ್ಗಡೆ, ಭೀಷ್ಮಪ್ಪನ ಪುಟ್ಟಯ್ಯ ಹೆಗ್ಗಡೆ ಮುಂತಾದವರು ಬರೆಸಿಕೊಟ್ಟ ಕೈಫಿಯತ್ತು. ಶಿರಸಿ ಕಸುಬೆಯು ಬೆಡಳ್ಳಿ ಭಾಗಿ ವಳಗಣ ಪುಟ್ಟನ ಮನೆ ಗ್ರಾಮಕ್ಕೆ ಸೇರಿದ್ದು. ಇಲ್ಲಿ ಮಠದ ಬೇಣಾ ಇದ್ದು ಇದಕ್ಕೆ ಹೊಲತಿಕೋಟೆ ಅಂತಾ ಹೇಳುತ್ತಾರೆ. ನಂತರ ಇದಕ್ಕೆ ಹೊಲತಿ ಕಾನಕೋಟೆ ಅಂತ ಹೆಸರಾಯಿತು. ನಂತರ ಈ ಮೇಲಘಟ್ಟ ಶೀಮೆಯ ಅಲಾಹಿದೆ ವಂಶಾವಳಿ ಬರೆದ ಸೋದೆ ಅರಸರ ವಂಶಸ್ಥರಾದ ರಾಮಚಂದ್ರ ನಾಯಕರ ಕಾಲದಲ್ಲು ಮೇಲೆ ಹೇಳಿದ ಎರಡು ಕೋಟೆ ಮಧ್ಯದಲ್ಲು, ದೇವೀಕೆರೆಗೆ ದಕ್ಷಿಣ ದಿಕ್ಕಿನಲ್ಲು ಕೋಟೆ ಕಟ್ಟಿ 'ಚನ್ನಪಟ್ಟಣ' ಎಂಬ ಹೆಸರಿಟ್ಟು ಯಾವತ್ತೂ ಮೇಲುಸೀಮೆ ರಾಜ್ಯಭಾರವನ್ನು ಈ ಕೋಟೆಯೊಳಗಿದ್ದು ಮಾಡುತ್ತಾ ಬಂದರು." (ಚನ್ನಪಟ್ಟಣ ಇಂದಿಗೂ ಸಿರ್ಸಿಯ ಪ್ರಮುಖ ಪೇಟೆಯಾಗಿದೆ.) "ಇದೇ ಸಮಯದಲ್ಲಿ ಬಿದರೂರ ಅರಸು ಕೆಳದಿ ಚನ್ನಮ್ಮಾಜಿಯ ಮಗ ವೀರಭದ್ರನು ಫೌಜು ತಂದು, ಯುದ್ಧಮಾಡಿ ಚನ್ನಪಟ್ಟಣ ಕಿಲ್ಲೆಗೆ ಠಾಣೆ ಹಾಕಿದನು. ಆದ್ದರಿಂದ ಅರಸು ಅಲ್ಲಿಂದ ಕೆಂಗೆರೆ ಬದಿಯಲ್ಲಿರುವ ಕೋಟೆಗೆ ಹೋದನು. ಅಲ್ಲೂ ಆವಾಂತ್ರ ಬಂದ ಕಾರಣ ಕುಕ್ಕಳಿಗೆ ಹೋದನು. ಕುಕ್ಕಳಿಂದ ಅವರ ತಮ್ಮ ಸದಾಶಿವ ನಾಯಕರು ವಿಜಾಪುರದ ಬಾದಶಾಹಿನ ಬಳಿ ಹೋಗಿ, ಆತನ ಭೇಟಿಮಾಡಿ 'ದಶಾವತಾರ' ಯಕ್ಷಗಾನವನ್ನು ಆಡಿತೋರಿಸಿ ಅವನ ಸುಸಂತೋಷಗೊಳಿಸಿದನು. ಇದರಿಂದಾಗಿ ಖಾನ ಯಂಬ ಸರದಾರನಿಗೆ ಅಪ್ಪಣೆ ಆಯ್ತು. ಸಂಗಡ ೪೦,೦೦೦ ಫೌಜು ನೇಮಕಾ ಮಾಡಿಕೊಟ್ಟು, ಆ ಮೇಲೆ ನಾಯಕರಿಗೆ ಊಟಕ್ಕೆ ಬರಲು ಅಪ್ಪಣೆ ಆಯ್ತು. ಆದರೆ ನಾಯಕರಿಗೆ ಊಟಕ್ಕೆ ಹೋಗಲು ಮನಸ್ಸಿರಲಿಲ್ಲ. ತಪ್ಪಿಸಲು ಪ್ರಯತ್ನಿಸಿದರು, ಅದು ಅಸಾಧ್ಯವಾಗದಾಗ ಊಟಕ್ಕೆ ಹೋದರು. ಅಲ್ಲಿ ವಜೀರರೆಲ್ಲಾ ಊಟಕ್ಕೆ ಕುಳಿತಿದ್ದರು. ಎಲ್ಲರಿಗೂ ಚಿನ್ನದ ಕವುಳಗೆಯಲ್ಲಿ ಊಟದ ವ್ಯವಸ್ಥೆ ಮಾಡಿದ್ದರು. ಅದೇ ಸಮಯಕ್ಕೆ

ಸದಾಶಿವ ನಾಯಕರು ಎದ್ದು ಶ್ರೀದೇವರ ಪ್ರಸಾದ ಬಿಡಾರದಲ್ಲಿ ಬಿಟ್ಟಿರುವೆ ಎಂದು ಹೇಳಿ, ಅದನ್ನು ತರಿಸಿ ವಸ್ತ್ರ ಮುಚ್ಚಿಟ್ಟಿದ್ದ ಊಟದ ಕವುಳಿಗೆಯ ಮೇಲೆ ತೀರ್ಥ ಹಾಕಿದರು. ನಂತರ ವಸ್ತ್ರ ತೆಗೆದು ನೋಡಲಾಗಿ ಅಲ್ಲೊಂದು ಪವಾಡವೇ ನಡೆದಿತ್ತು. ಯಾವತ್ತೂ ಪದಾರ್ಥಗಳೆಲ್ಲಾ ನಾನಾ ತರದ ಹೂಗಳಾಗಿದ್ದವು! ಇದೇನಾಶ್ಚರ್ಯ! ಎಂದು ಬಾದಶಹ ಉದ್ಗಾರ ತೆಗೆದನು. ನೀನು ಮಹಾಪುರುಷ, ಪುಣ್ಯವಂತ ಅಂತ ಹೇಳಿ ಫೌಜು ಮುಂಡೆಹೋಗಲು ಅಪ್ಪಣೆ ಮಾಡಿದನು. ಅಲ್ಲಿ ಕೆಲವುದಿನ ನಿಂತು ಬಾವಲಿ ರಾಜರು ಅಂತ ಕಿತಾಬು ಕೊಟ್ಟು ಕಳಿಸಿದರು. ಅಲ್ಲಿಂದ ಊರಿಗೆ ಬಂದು, ಯಾವತ್ತೂ ತಮ್ಮ ಶೀಮೆಗೆ ಬಂದು ಠಾಣೆ ಹಾಕಿ ರಾಮಚಂದ್ರ ರಾಜರು, ಸದಾಶಿವ ರಾಜರು ಉಭಯತರು ಬಿದರೂರಿಗೆ 'ರಾಮಚಂದ್ರಪುರ' ಎಂದು ಹೆಸರಿಟ್ಟು ಆಳಿದರು.

**ಶಿರಸಿ ಮಾರ್ಯಮ್ಮದೇವರ ಕೈಫಿಯತ್ತು :** ಈ ಕೈಫಿಯತ್ತಿನಲ್ಲಿ ಮಾರ್ಯಮ್ಮ ಸಿರ್ಸಿಗೆ ಬಂದ ಕುತೂಹಲಕರ ಹಿನ್ನೆಲೆ ಇದೆ. ಈ ಕೈಫಿಯತ್ತಿನ ಸಾರಾಂಶ ಹೀಗಿದೆ: ಒಮ್ಮೆ ಮೊಗಲರ ದಂಡು ಬಂಕಾಪುರದ ಕಿಲ್ಲೆಗೆ ಧಾಳಿ ಇಟ್ಟಿತು. ಆಗ ಅಲ್ಲಿಯ ಜನರೆಲ್ಲಾ ಮೊಗಲರ ಆಜ್ಞೆಯಂತೆ ಗಡಿಪಾರಾಗಬೇಕಾಯ್ತು. ಆ ಸಮಯಕ್ಕಾಗಲೇ ಅಲ್ಲಿದ್ದ ಮಾರಿದೇವತೆಯನ್ನು ಪೆಟ್ಟಿಗೆಯಲ್ಲಿ ಹಾಕಿ ಅರಗಿನ ಸೀಲು ಹಾಕಿದ್ದರು. ಗಡಿಪಾರಾದ ಜನರ ಪೈಕಿ ಒಬ್ಬ ಕೋಟೆಯಿಂದ ಹೊರಬರುವಾಗ ಆ ಪೆಟ್ಟಿಗೆಯನ್ನು, ಏನೋ ಬೆಲೆಬಾಳುವ ವಸ್ತು ಇರಬೇಕೆಂದು ಹೊತ್ತು ತಂದ. ಈ ಜನರೆಲ್ಲಾ ಸಿರ್ಸಿಯ ಕೋಟೆಕೆರೆ ಮೇಲೆ ಇಳಿದುಕೊಂಡರು. ಆ ಸಮಯದಲ್ಲಿ ಆ ದೇವರು ಅಲ್ಲಿದ್ದ ಹುಡುಗನೊಬ್ಬನ ಮೇಲೆ ಬಂದು, 'ನಾನು ಬಂಕಾಪುರದ ಮಾರಿ. ನನಗೆ ಇಲ್ಲಿ ಇರಲು ಸರಿಯಾದ ಸ್ಥಳ ಮಾಡಿಕೊಡಿ' ಎಂಬ ಅಪ್ಪಣೆ ಆಯ್ತು. ಅದೇ ಪ್ರಕಾರ ಸಿರ್ಸಿ ಊರಿನ ಜನರೆಲ್ಲಾ ಕೂಡಿ ವಿಜೃಂಭಣೆಯಿಂದ ಆ ದೇವತೆಯನ್ನು ಪೇಟೆಯೊಳಗೆ ತಂದು ಸ್ಥಾಪಿಸಿದರು. ಪೂಜೆ ಪುನಸ್ಕಾರಗಳಿಗೆ ಕೆಲವು ಜಮೀನು ಬಿಡಲಾಯಿತು. ಅದೇ ಸಮಯಕ್ಕೆ ಮೂರು ವರ್ಷಕ್ಕೊಮ್ಮೆ ಹಬ್ಬ ಮಾಡಬೇಕೆಂತ ಅಪ್ಪಣೆಯೂ ಆಯ್ತು. ಪೂಜೆಗೆ ಸಂಬಾಳ ನರಸಣ್ಣ ಯೆಂಬುವವನನ್ನು ನೇಮಿಸ ಲಾಯ್ತು. ಈಗಲೂ ಸಿರ್ಸಿಯ ಮಾರ್ಯಮ್ಮ ಈ ಕಡೆ ಜನರಿಗೆ ಪ್ರಸಿದ್ಧ ದೇವತೆ ಯಾಗಿದ್ದಾಳೆ. ಇಲ್ಲಿ ಬ್ರಾಹ್ಮಣೇತರರಿಂದಲೇ ಪೂಜೆ ನಡೆಯುತ್ತಾ ಬಂದಿದೆ.

**ಗೋಕರ್ಣದ ಕೈಫಿಯತ್ತು :** ಪೌರಾಣಿಕ .ಹಿನ್ನೆಲೆಯುಳ್ಳ ಈ ಕೈಫಿಯತ್ತಿನಲ್ಲಿ ಗೋಕರ್ಣದ ಮಹತ್ವ, ಅಲ್ಲಿಯ ದೇವರು, ತೀರ್ಥಗಳ ಮಹತ್ವ ಮತ್ತು ಹೆಸರುಗಳನ್ನು ನಮೂದಿಸಿದ್ದಾರೆ. ಕೈಫಿಯತ್ತಿನ ಮಧ್ಯದಲ್ಲಿ ಸಂಸ್ಕೃತ ಶ್ಲೋಕ ಗಳನ್ನು ಬಳಸಿಕೊಂಡಿದ್ದು, ಬರಹ ಶುದ್ಧವಾಗಿಲ್ಲದ ಕಾರಣ ಅರ್ಥಮಾಡುವುದು ಕಷ್ಟ. ಇದರ ಸಾರಾಂಶ ಹೀಗಿದೆ: ಪೂರ್ವದಲ್ಲಿ ತ್ರೇತಾಯುಗದ ಪ್ರಥಮ ಪಾದದಲ್ಲಿ

ಪರಶುರಾಮನು ಕ್ಷತ್ರಿಯರ ಸಂಹಾರಮಾಡಿ ಬ್ರಾಹ್ಮಣರಿಗೆ ಭೂಮಿ ಸಮಗ್ರದಾನ ಮಾಡಿ ಮಹೇಂದ್ರ ಪರ್ವತದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. ಈ ಸಮಯದಲ್ಲಿ ಕಶ್ಯಪ ಮೊದಲಾದ ಮಹರ್ಷಿಗಳು, ತಮಗೆ ತಪಸ್ಸನ್ನಾಚರಿಸಲು ಸ್ಥಳವಿಲ್ಲ ; ಅನಾದಿಯಿಂದ ಸಂಸಿದ್ಧಿಯಾದ ಗೋಕರ್ಣ ಸಮುದ್ರದ ಒಳಗೆ ಮುಳುಗಿಹೋಗಿದೆ ; ಇದನ್ನು ಪುನಃ ಉದ್ಧಾರ ಮಾಡುವವರು ಯಾರು? ಮಾಡಿದರೆ ಪರಶುರಾಮನೊಬ್ಬನೇ. ಆತನ ಮೂಲಕ ಗೋಕರ್ಣವನ್ನು ಉದ್ಧಾರ ಮಾಡಿಸಿ, ಇಲ್ಲಿ ತಪಸ್ಸು ಮಾಡಿದರೆ ಸಕಲ ಇಷ್ಟಸಿದ್ಧಿಯಾಗುವುದು ಎಂದು ಯೋಚಿಸಿ, ಮಹೇಂದ್ರ ಪರ್ವತಕ್ಕೆ ಹೋಗಿ ಕಾದುಕೊಂಡಿದ್ದರು. ಕೆಲವು ದಿವಸಗಳ ಅನಂತರ ಪರಶುರಾಮನ ತಂದೆಯ ಶ್ರಾದ್ಧ ದಿವಸ ಬಂತು. ಆಗ ಋಷಿಗಳನ್ನು ನಿಮಂತ್ರಿಸಲಾಗಿ ಅವರು ಬಂದರು. ಆಪೋಶನ ತೆಗೆದುಕೊಳ್ಳುವ ಸಮಯದಲ್ಲಿ, ತಮ್ಮ ಒಂದು ಹೇಳಿಕೆ ಇದೆ. ಇದನ್ನು ಈಡೇರಿಸಿದರೆ ಮಾತ್ರ ಆಪೋಶನ ತೆಗೆದುಕೊಳ್ಳುವುದಾಗಿ ಹೇಳಿದರು. ಆಗ ಪರುಶರಾಮನು, ಅವರ ಮನೋಭಿಷ್ಟವನ್ನು ಈಡೇರಿಸುವುದಾಗಿ ಹೇಳಿದನು. ಋಷಿಗಳು ಸಮುದ್ರದ ಒಳಗೆ ಮುಳುಗಿದ್ದ ಗೋಕರ್ಣ ಸ್ಥಳವನ್ನು ಉದ್ಧಾರಮಾಡಬೇಕಾಗಿ ಕೇಳಿಕೊಂಡರು. ಆಗ ಪರಶುರಾಮನು, ತಪಸ್ಸಿಗೆ ಇದೇ ಸ್ಥಳ ಯೋಗ್ಯವಾದುದು ಹೇಗೆ? ಎಂದು ಕೇಳಿದಾಗ, ಅದಕ್ಕೆ ಋಷಿಗಳು ಗೋಕರ್ಣದ ಪುರಾಣವನ್ನೇ ಹೇಳುವರು. ಅದು ತುಂಬಾ ವಿವರವಾಗಿ ಬಂದಿದೆ. ಕೊನೆಯಲ್ಲಿ ೩೩ ಕೋಟಿ ದೇವತೆಗಳಿಗೆ ೩೩ ತೀರ್ಥಗಳ ಹೆಸರು ಕೊಟ್ಟಿದ್ದಾರೆ. ಈ ತೀರ್ಥಗಳು ಹುಟ್ಟಿದ ಸ್ಥಳವನ್ನ ತಿಳಿಸಿ, ಅನಂತರ ಭೂಮಿಗೆ ಅಡಿಗಾದ ತೀರ್ಥಗಳನ್ನೂ ಹೆಸರಿಸಿದ್ದಾರೆ.

**ಸ್ಥಳನಾಮ ಪರಿಚಯಿಸುವ ಕೈಫಿಯತ್ತು :** "ಕಸುಬಾ ಶಿರಸಿಗೆ ಪಶ್ಚಿಮ ದಿಗ್ಭಾಗ ಲಿಂಗದಕೊಣಾ ಯಂತ ಒಂದು ತಟಾಕ ಉಂಟು. ಯಿದಕ್ಕೆ ಲಿಂಗದಕೊಣಾಯಂತ ಹೆಸರು ಬಂದದ್ದು ಹ್ಯಾಗೆಂದರೆ, ಕೆಳಗೆ 'ಕೊಣಾ' ಮೇಲೆ 'ಲಿಂಗಾ' ಇರುವುದರಿಂದ ಜನರು ಯೀ ಎರಡೂ ಕೂಡಿಸಿ 'ಲಿಂಗದ ಕೊಣದ ರಾಮೇಶ್ವರ ದೇವರ'ಂತ ಹೇಳುತ್ತಾರೆ." ಇಂದಿಗೂ ಈ ಸ್ಥಳವನ್ನು ನೋಡಬಹುದಾಗಿದೆ. ಇಂದು ಈ ಸ್ಥಳಕ್ಕೆ 'ಲಿಂಗದ ಕೊಣ'ದ* ಬದಲಾಗಿ 'ಲಿಂಗದ ಕೋಣ' ಎಂತ ಹೇಳುತ್ತಾರೆ. ಈ ಸ್ಥಳನಾಮಗಳು ಒಂದು ನಾಡಿನ ಸಾಂಸ್ಕೃತಿಕ, ರಾಜಕೀಯ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಸರಿಯಾದ ಆಧಾರಗಳನ್ನು ಒದಗಿಸಬಲ್ಲವು.

**ಜಾತಿಗೆ ಸಂಬಂಧಿಸಿದ ಕೈಫಿಯತ್ತು :** ಭಾರತವು ಹಲವು ಧರ್ಮಗಳ ನೆಲೆವೀಡು. ಹಿಂದೂ ಧರ್ಮದಲ್ಲೂ ಅನೇಕ ಪಂಗಡಗಳಿದ್ದು, ಇವರ ಆಚಾರ ವಿಚಾರ ವಿಶಿಷ್ಟವಾಗಿದೆ. ಇವರು ಆಚರಿಸುವ ಹಬ್ಬ ಹರಿದಿನ ಇವುಗಳು ಒಂದು

* ಕೊಣ < ಕೊಳ, ಇರಬಹುದು.

ಹೋಲಿಸಿ : ಮಣಲ್ = ಮಳಲ್ > ಮರಳು.—ಸಂ.

ಸಮಾಜದಿಂದ ಇನ್ನೊಂದು ಸಮಾಜಕ್ಕೆ ಭಿನ್ನವಾಗಿವೆ. ಇವುಗಳನ್ನು ಈ ಕೈಫಿಯತ್ತು ಸ್ಪಷ್ಟಪಡಿಸುತ್ತದೆ. "ಮೇದಾರ ಜಾತಿಯಲ್ಲಿ ಹಡೆದರೆ ಹೊಲೆ (ಸೂತಕ) ಅಯಿದು ದಿನಕ್ಕೆ ಹೋಗುವುದು. ಅನಂತರ ಅರವಿ, ಹಚ್ಚಡ ಎಲ್ಲವನ್ನು ತೊಳೆದು, ಮನೆ ಸಾರಿಸಿ, ಕೂಶಿನ ತೊಟ್ಟಿಲ ಒಳಗೆ ಹಾಕಿ ಕುಲದವರು ಕೂಡಿ ಊಟಮಾಡಬೇಕು. ಈ ಸಮಾಜದಲ್ಲಿ ಹೆಣ್ಣಿಗೆ ತೆರ ಕೊಡುವ ಪದ್ಧತಿ ಇದೆ. ಜೋಯಿಸರ ಮನೆಗೆ ಹೋಗಿ ಲಗ್ನ ಕಟ್ಟಿಸಿಕೊಡಬೇಕಾದರೆ, ಒಂದು ಶಿದ್ದೆ ಅಕ್ಕಿ, ೫ ತೊಂಡೆಕಾಯಿ ತೆಗೆದುಕೊಂಡು ಹೋಗಿ ಕಟ್ಟಿಸಿಕೊಂಡು ಬರಬೇಕು. ಇದಾದ ಮೂರು ದಿನಕ್ಕೆ ಲಗ್ನಾ ಮಾಡಬೇಕು. ಉಡಿ ತುಂಬುವ ಪದ್ಧತಿ ಇದೆ. ಬಿಳಿ ಶೀರೆ, ಕುಬಸದ, ಒಂದು ಕಡಗ ಜೋಡು, ಒಂದು ಹೊಸ ಚಾಪೆ, ಪೂಜೆ ಮಾಡಿ ಉಡಿ ತುಂಬಿ, ಗುರುಗಳು, ಗೌಡ, ಬುದ್ಧಿವಂತ ಇವರುಗಳಿಗೆ ವೀಳ್ಯೆ ಹಂಚಬೇಕು. ಸೋದರಮಾವ ಧಾರೆಯರೆಯಬೇಕು. ಮಂಗಳಸೂತ್ರ, ಬಾಸಿಗಗಳನ್ನು ಕುಲದವರು ತರಬೇಕು. ಜೋಯಿಸರಿಗೆ ಗಂಡಿನವರು ಹತ್ತಣೆ, ಹೆಣ್ಣಿನವರು ಹತ್ತಣೆ ಕೊಡಬೇಕು. ನಾಲ್ಕನೇ ದಿವಸಕ್ಕೆ ನಾಗೋಲೆ ಶಾಸ್ತ್ರಮಾಡಿ ಕುಲದವರೆಲ್ಲಾ ಕೂಡಿ ಊಟಾಮಾಡಿ ಗಂಡಿನ ಮನೆಗೆ ಕರೆದುಕೊಂಡು ಹೋಗಿ ಮನೆ ತುಂಬಿಸಿ ವೀಳ್ಯೆ ಕೊಂಡು ಬರಬೇಕು." ಇದಲ್ಲದೆ ಇನ್ನೂ ಕೆಲವು ಜಾತಿಗಳಿಗೆ ಸಂಬಂಧಿಸಿದ ಕೈಫಿಯತ್ತುಗಳಿವೆ. ಅವುಗಳಲ್ಲಿ 'ಹಳೇ ಪೈಕದ ಜಾತಿರಿವಾಜು ಕೈಫಿಯತ್ತು', 'ಕೊಂಕಣಿ ಅವರ ಕೈಫಿಯತ್ತು', ಮುಂತಾದುವುಗಳನ್ನು ಹೆಸರಿಸಬಹುದು.

**ಮಠಮಾನ್ಯಗಳ ಕೈಫಿಯತ್ತು:** ಇಂದು ಸಾರ್ವಜನಿಕ ಶಾಲೆ, ವಾಚನಾಲಯಗಳಿಗಿರುವ ಮಹತ್ವ ಹಿಂದೆ ಮಠಗಳಿಗಿದ್ದವು. ಮಠಗಳಲ್ಲಿ ಎಷ್ಟೋ ಉಪಯುಕ್ತ ಗ್ರಂಥಗಳಿರುತ್ತಿದ್ದು, ಅವು ಗ್ರಂಥಭಂಡಾರಗಳೇ ಆಗಿರುತ್ತಿದ್ದವು. ಈ ಕೈಫಿಯತ್ತುಗಳಲ್ಲಿ ಮಠಗಳಲ್ಲಿರಬಹುದಾದ ಪುಸ್ತಕ ಪಟ್ಟಿಯನ್ನೆ ಕೊನೆಯಲ್ಲಿ ಕೊಟ್ಟಿದ್ದಾರೆ. ಪೇಜಾವರ ಮಠದ ಕೈಫಿಯತ್ತು: 'ಮಹಾಜ್ಞಾನ ವಿಶೇಷರಾಗಿ ಸ್ವಮತ ಪ್ರತಿಸಾರಕಗಳಾದ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಮಾಡುತ್ತಾ, ಭಾಗೀರಥಿ ಯಾತ್ರೆಯನ್ನು ಮಾಡಿ ನಳಸಂವತ್ಸರದ ವೈಶಾಖ ಶು|| ೨ ರಲ್ಲು ವೈಕುಂಠ ಯಾತ್ರೆಯನ್ನು ಮಾಡಿದರು. ಅವರ ಶಿಷ್ಯ ವಿಶ್ವನಿಧಿ ತೀರ್ಥರು ಮಹಾವಿರಕ್ತವಂತರಾಗಿ ಮಹಾತಪೋನಿಷ್ಠರಾಗಿ ಪೇಜಾವರದಲ್ಲು ವಿಭವ ಸಂವತ್ಸರದ ಫಾಲ್ಗುಣ ಶು ೭|| ರಲ್ಲು ದೇವರ ಯಾತ್ರೆ ಮಾಡಿದರು. ..."

ಘಟ್ಟದ ಕೆಳಗಿನ ಭಾಷೆಗಳ ಕುರಿತು ಒಂದು ದಾಖಲೆ ಇದೆ. ಇದರಲ್ಲಿ ಕೆಲವು ಶಬ್ದಗಳನ್ನು ಕೊಟ್ಟು, ಅದಕ್ಕೆ ಉತ್ತರ ಕನ್ನಡದ ಘಟ್ಟದ ಕೆಳಗಿನ ಭಾಗಗಳಲ್ಲಿ ಉಪಯೋಗಿಸುವ ಸಮಾನ ಅರ್ಥವನ್ನು ಕೊಟ್ಟಿದೆ. 'ದೊಡ್ಡಕೆರೆಗೆ–ಮುರುಗಾಯೆಂಬ ಹೆಸರು', 'ಹೊಂಗೆಯೆಂದರೆ-ಮುಳಲು', 'ಸಂಬಳಿಗೆಯೆಂದರೆ–ಗೂಢಿಗೆ ಹೆಸರು'

'ಜಿನ್ನಾಯೆಂದರೆ–ಭೂಮಾಲಿಕರು' – ಹೀಗೆ ಅನೇಕ ಶಬ್ದಗಳ ಅರ್ಥಗಳನ್ನು ಸಂಗ್ರಹಿಸಿದ್ದಾರೆ.

ಹಿಂದಿನ ಕೆಲವು ಪತ್ರ ಮತ್ತು ಅರ್ಜಿಗಳ ಮಾದರಿ ಸಹ ಮೆಕೆಂಜಿ ಸಂಗ್ರಹಿಸಿದ್ದಾನೆ. ಒಬ್ಬ ಪ್ರಜೆ ಸಬ್ ಕಲೆಕ್ಟರ್ ಅವರಿಗೆ ಬರೆದ ಒಂದು ಅರ್ಜಿಯ ಮಾದರಿ ಹೀಗಿದೆ: "ಸನ್ ೧೨೪೪ನೇ ಫಸಲ್ ಮಾಹೆ ಜೂನ್ ತಾರೀಖು ೧ರಲ್ಲಿ ಹಾಲಿ, ಪುತ್ತೂರಿನಲ್ಲಿರುವ ಶಾಂತಪ್ಪನು ಅದಬಿನಿಂದಾ ಬರಕೊಂಡ ಅರ್ಜಿ. ನಾನು ಸಕುಟುಂಬಸ್ತ. ಕೇವಲ ಗರೀಬಾ. ನನಗೆ ಯಿದ್ದ ಕೋರ್ಟ್ರ ಯಿಲಾಖೆ........ ಖಾವಂದರು ದಯವಿಟ್ಟು ಯಾವುದಾದರೊಂದು ಯಿಸಂ ನನಗೆ ಮೊತ್ತ ಜರೂರು ಕೊಡುವಂತೆ ಅಪ್ಪಣೆ ಆಗಿ ನನ್ನ ಕುಟುಂಬ ಸಮೇತ ರಕ್ಷಣೆ ಮಾಡಿಕೊಡಬೇಕಾಗಿ ಪ್ರಾರ್ಥಿಸುತ್ತೇನೆ." —ಶಾಂತಪ್ಪನ ರುಜು

ಮೆಕೆಂಜಿ ಸಂಗ್ರಹವು ಬೃಹದಾಕಾರವಾಗಿದ್ದು, ಎಷ್ಟು ಅಧ್ಯಯನ ಮಾಡಿದರೂ ಮುಗಿಯದಂತಹುದು. ಈ ಮೇಲೆ ನೀಡಿದ ದಾಖಲೆಗಳಲ್ಲದೆ, ಪಶುಪಕ್ಷಿ ವಿವರ, ಗಿಡಮರಗಳ ಹೆಸರಿನ ಪಟ್ಟಿ, ಬೆಳೆ ಬೇಸಾಯಗಳ ಮಾಹಿತಿ ಇವುಗಳೆಲ್ಲಾ ಸೇರಿವೆ.

ದೂರದ ದೇಶದಲ್ಲಿ ಹುಟ್ಟಿ, ತನ್ನದಲ್ಲದ ಭಾಷೆ, ಜನಾಂಗಗಳ ಮೇಲೆ ಅಭಿಮಾನವಿಟ್ಟು, ಹಳ್ಳಿ ಹಳ್ಳಿಗಳೆಲ್ಲೆಲ್ಲಾ ಕುದುರೆಯ ಮೇಲೆ ಸಂಚರಿಸಿ, ಹಳ್ಳಿಯ ನಿಷ್ಕಲ್ಮಷ ಬುದ್ಧಿಯ ಜನರಿಂದ ಇಷ್ಟೆಲ್ಲಾ ದಾಖಲೆಗಳನ್ನು ಸಂಗ್ರಹಿಸಿದ ಈ ಮಹನೀಯನನ್ನು ಎಷ್ಟು ಸ್ಮರಿಸಿದರೂ ಕಡಿಮೆಯೇ. ದಕ್ಷಿಣ ಭಾರತದ ಇತಿಹಾಸದಲ್ಲಿ ಇವನಿಗೊಂದು ಉಚ್ಚ ಸ್ಥಾನವಿದೆ.

— ೦—

## ಮೆಕೆಂಜಿ ಸಂಗ್ರಹಿಸಿದ್ದ ಕನ್ನಡ ಹಸ್ತಪ್ರತಿಗಳ ವಿವರ

(ಎಚ್.ಎಚ್. ವಿಲ್ಸನ್ ಅವರ The Mackenzie collection descriptive catalogueನ ಪ್ರಕಾರ)

| | |
|---|---|
| ಜೈನ ಸಾಹಿತ್ಯ | ೨೧ |
| ಹಳಗನ್ನಡ ಗ್ರಂಥಗಳು | ೪೮ |
| ಸ್ಥಳ ಪುರಾಣ, ಜೀವನ ಚರಿತ್ರೆ | ೧೭ |
| ಕಥೆ, ಕವನ, ನೀತಿ, ಧರ್ಮ | ೧೮ |
| ವ್ಯಾಕರಣ, ಜ್ಯೋತಿಷ, ವೈದ್ಯ ಇತ್ಯಾದಿ | ೧೬ |
| ಕಡಿತಪಲ್ಲಿ ಚರಿತ್ರೆ, ಕೈಗಾರಿಕೆ, ವಂಶಾವಳಿ ಇತ್ಯಾದಿ | ೩೨ |
| ಒಟ್ಟು | ೧೫೨ |

(ಕ್ಯಾಟಲಾಗಿನ ಪೀಠಿಕೆಯಲ್ಲಿ (ಪುಟ ೧೪) ಕೊಟ್ಟಿರುವ ಪಟ್ಟಿಯಲ್ಲಿರುವಂತೆ)

* ಹಳೆಯ ಮೈಸೂರಿನ ಸ್ಥಳಪುರಾಣ, ಚರಿತ್ರೆ ಮುಂತಾದವು : ೨೦ ಸಂಪುಟಗಳಲ್ಲಿ ೧೪೬
* ಪಶ್ಚಿಮತೀರಕ್ಕೆ (Western Coast) ಸಂಬಂಧಿಸಿದವು : ೯ ಸಂಪುಟಗಳಲ್ಲಿ ೯೩
* ಕನ್ನಡ ಶಾಸನ ನಕಲುಗಳು : ೨೮ ಬೃಹತ್ ಸಂಪುಟಗಳಲ್ಲಿ ೪,೦೦೦
* ಸ್ಥಳೀಯ ವೃತ್ತಾಂತಗಳು (Local tracts, etc.), ಶಾಸನಗಳ ನಕಲುಗಳು (Inscriptions), ಆಂಗ್ಲಾನುವಾದಗಳು (Translations, etc.) ಇತ್ಯಾದಿ ಕರ್ನಾಟಕದ ಇತಿಹಾಸ ಸಂಸ್ಕೃತಿಗಳಿಗೆ ನೇರವಾಗಿ ಸಂಬಂಧಪಟ್ಟ ಕನ್ನಡ ಕೈಬರಹಗಳು ೨೦೭
* ಸ್ಥಳಪುರಾಣ, ಚರಿತ್ರೆ ಮುಂತಾದವುಗಳ ಆಂಗ್ಲಾನುವಾದಗಳು (ಸಂಪುಟಗಳಲ್ಲಿ) ೭೪

(ಇವು ಈಗ ಕಾಮನ್‌ವೆಲ್ತ್ ಲೈಬ್ರರಿಯಲ್ಲಿವೆ.)

(ಮೆಕೆಂಜಿಯ ಈ ಎಲ್ಲ ಸಂಗ್ರಹಗಳೂ ಈಗ ಮದರಾಸಿನ ಪ್ರಾಚೀನ ಹಸ್ತಪ್ರತಿ ಭಂಡಾರದಲ್ಲಿವೆ.)

## ಮೆಕೆಂಜಿಯ ಒಟ್ಟು ಸಂಗ್ರಹ

* ದಕ್ಷಿಣ ಭಾರತದ ಶಾಸನಗಳ ನಕಲುಗಳ ಸಂಖ್ಯೆ ೮,೦೭೬
* ಬರ್ಮ ಮತ್ತು ಜಾಪನೀಸ್ ಭಾಷೆಗಳೂ ಸೇರಿ ೧೩ ಭಾಷೆಗಳ ಹಸ್ತಪ್ರತಿಗಳು ೧,೫೬೮
* 'Local Tracts' ಎಂಬ ಸ್ಥಳಪುರಾಣ, ಕೈಫಿಯತ್, ಬಖೈರ್, ರಾಜರ ವಂಶಾವಳಿ ಮುಂತಾದುವನ್ನೊಳಗೊಂಡ ಬೃಹತ್ ಸಂಪುಟಗಳು (ಒಟ್ಟು ೨೦೭೦ ವೃತ್ತಾಂತಗಳು) ೨೬೪
* ಇವುಗಳ ಅನುವಾದಗಳನ್ನೊಳಗೊಂಡ ಸಂಪುಟಗಳು ೭೫
* ನಕ್ಷೆಗಳು (Plans) ೬೯
* ಚಿತ್ರಗಳು (Drawings) ೨,೬೩೦
* ಬೇರೆ ಬೇರೆ ಕಾಲದ, ದೇಶೀಯ ಮತ್ತು ವಿದೇಶೀಯ ಚಿನ್ನದ, ಬೆಳ್ಳಿಯ, ತಾಮ್ರದ ನಾಣ್ಯಗಳು ೬,೨೧೮
* ಬೆಳ್ಳಿ, ಕಂಚು, ಹಿತ್ತಾಳೆ, ತಾಮ್ರದ ಮೂರ್ತಿಗಳು : ೧೦೬
* ಅನೇಕ ಶಿಲಾಮೂರ್ತಿಗಳು, ಒಂದು ಹಳಗನ್ನಡ ಶಿಲಾಶಾಸನ (ಅಮರಾವತಿಯಲ್ಲಿದ್ದದ್ದು), ತಾಮ್ರ ಶಾಸನಗಳು ಕೆಲವು.
* ಹಳೆಯಕಾಲದ ತೂಕದ ಬಟ್ಟುಗಳು, ಮಣಿ, ಉಂಗುರ, ಉಂಡಿಗೆ ಇತ್ಯಾದಿ ಇನ್ನೂ ಅನೇಕ ಪ್ರಾಚ್ಯವಸ್ತುಗಳು ಮೆಕೆಂಜಿಯ ಸಂಗ್ರಹದಲ್ಲಿದ್ದವು.

ಆಧಾರ : ಎಚ್. ದೇವೀರಪ್ಪ; 'ಕನ್ನಡ ಹಸ್ತಪ್ರತಿಗಳ ಇತಿಹಾಸ', ಕ.ಸಾ.ಪ., ೧೯೭೭.

# ಗ್ರಂಥಸಂಪಾದನೆಗೆ ರೈಸ್ ಮತ್ತು ಕಿಟ್ಟೆಲ್‌ರ ಕೊಡುಗೆ

ಹೀ. ಚಿ. ಶಾಂತವೀರಯ್ಯ

ಗ್ರಂಥಸಂಪಾದನೆಯ ಇತಿಹಾಸದಲ್ಲಿ ಅಗ್ರಪೂಜೆ ಸಲ್ಲಬೇಕಾದುದು ಬೆಂಜಮಿನ್ ರೈಸ್ ಮತ್ತು ಫರ್ನೆಂಡಸ್ ಕಿಟ್ಟೆಲ್ ಅವರುಗಳಿಗೆ. ಪರದೇಶಿಗಳಾಗಿ ಈ ನಾಡಿಗೆ ಬಂದು, ಇಲ್ಲಿಯ ಭಾಷೆ ಕಲಿತು, ಹಲವಾರು ಗ್ರಂಥಗಳನ್ನು ಸಂಪಾದಿಸಿ ನಾಡು ಮತ್ತು ನುಡಿಗೆ ಕೀರ್ತಿ ತಂದುಕೊಟ್ಟ ಈ ಪಾಶ್ಚಾತ್ಯ ವಿದ್ವಾಂಸರ ಸೇವೆಯನ್ನು ಕನ್ನಡಿಗರೆಂದೂ ಮರೆಯುವಂತಿಲ್ಲ.

ರೆವರೆಂಡ್ ಬೆಂಜಮಿನ್ ಲೂಯಿಸ್ ರೈಸ್ ೧೮೮೩ರಲ್ಲಿ ಸಾಮಾನ್ಯ ಮತ ಪ್ರಚಾರಕರಂತೆ ಜರ್ಮನಿಯಿಂದ ಬಂದರು. ಬೆಂಗಳೂರಿಗೆ ಬಂದು ಒಂದೆರಡು ವರ್ಷಗಳಲ್ಲಿ ಕನ್ನಡ, ತಮಿಳು, ತೆಲುಗು, ಸಂಸ್ಕೃತ ಭಾಷೆಗಳನ್ನು ಚೆನ್ನಾಗಿ ಕಲಿತು, ೧೮೮೩ರಿಂದ ೧೮೮೭ರ ವರೆಗೆ ಅರ್ಧ ಶತಮಾನಗಳ ಕಾಲ ನಿರಂತರವಾಗಿ ಧರ್ಮ, ಶಿಕ್ಷಣ, ಸಾಹಿತ್ಯ ಮತ್ತು ಸಂಸ್ಕೃತಿ ಪ್ರಸಾರ ಕಾರ್ಯಗಳ ಕಾರಣಪುರುಷರಾಗಿ ಕೀರ್ತಿ ಸಂಪಾದಿಸಿದರು. ಮೊದಮೊದಲು ಧರ್ಮ ಪ್ರಚಾರದತ್ತ ಇದ್ದ ಗಮನ ಸಾಹಿತ್ಯ ಪ್ರಚಾರದತ್ತಲೂ ಹರಿಯಿತು. 'ಲೋಕಚರಿತ' ಇವರ ಮೊದಲ ಗ್ರಂಥ (೧೮೮೬). ಬೈಬಲ್ ಸಾಹಿತ್ಯಕ್ಕೆ ಅಪೂರ್ವವಾದ ಕಾಣಿಕೆ ಸಲ್ಲಿಸಿದ್ದಾರೆ. ಪ್ರಾಕ್ತನ ವಿಚಾರ ಪರಾಮರ್ಶೆ ಇಲಾಖೆಯ ಸ್ಥಾಪಕರಾಗಿ ಸಾಹಿತ್ಯ ಪರಿಶೋಧನೆ, ಶಾಸನ ಪರಿಷ್ಕರಣ ಮತ್ತು ಗ್ರಂಥ ಸಂಪಾದನೆಯ ಕಾರ್ಯಕ್ಕೆ ನಾಂದಿ ಹಾಕಿದರು. 'ಬಾಲ್ಯೋಪದೇಶ' (೧೮೫೮) 'ನೀತಿಚಿಂತಾಮಣಿ'ಯಂತೆ ಮೊದಲ ಕನ್ನಡ ಪಠ್ಯಪುಸ್ತಕ. ನಾಡಿನ ಶಾಸನ ಸಂಪತ್ತಿನ ನಿಧಿಗಳಾದ 'ಎಪಿಗ್ರಾಫಿಯಾ ಕರ್ಣಾಟಿಕಾ' ಸಂಪುಟಗಳನ್ನೂ ಪ್ರಕಟಿಸಿ ನಾಡಿಗೆ ಮಹೋಪಕಾರ ಮಾಡಿದರು. ಒಟ್ಟು ಸುಮಾರು ೩೦೨೨ ಶಾಸನಗಳನ್ನು ಸಂಗ್ರಹಿಸಿ ಸಂಪಾದಿಸಿ ಹನ್ನೆರಡು ಸಂಪುಟಗಳಲ್ಲಿ ಪ್ರಕಟಿಸಿದರು. ರೈಸ್ ಅವರ ಪರಿಶ್ರಮಕ್ಕೆ ತಕ್ಕಂತೆ ಬ್ರಿಟಿಷ್ ಸರ್ಕಾರ "ಕಂಪ್ಯಾನಿಯನ್ ಆಫ್ ಇಂಡಿಯನ್ ಎಂಪೈರ್" (C. I. E.) ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿತು.

ಕನ್ನಡ ಸಾಹಿತ್ಯ ಚರಿತ್ರೆಯ ಆದ್ಯಗ್ರಂಥ 'ಕವಿರಾಜಮಾರ್ಗ' ಬೆಳಕಿಗೆ ಬಂದುದೂ ರೈಸ್ ಅವರ ಅಪರಿಮಿತ ಪರಿಶ್ರಮದಿಂದ. ಕವಿರಾಜಮಾರ್ಗದ ಮೇಲೆ ಏಷಿಯಾಟಿಕ್ ಸೊಸೈಟಿ ಜರ್ನಲ್‌ನಲ್ಲಿ ಒಂದು ಲೇಖನವನ್ನು ಬರೆದು ಇಡೀ ವಿಶ್ವದ

ಗಮನವನ್ನು ಸೆಳೆದರು. ೧೮೯೮ರಲ್ಲಿ ಕಾಶೀನಾಥ್ ಪಾಠಕ್ ಅವರು ರೈಸ್ ಅವರ ನೆರವಿನಿಂದ ಅದನ್ನು ಪರಿಷ್ಕರಿಸಿ ಪ್ರಕಟಿಸಿದರು.

The *Kaviraja Marga* is the oldest Kannada work that has yet been discovered. It was little known to the public before it was first introduced to Oriental Scholars by Rev. Rice in a paper contributed to *Asiatic Society Journal* in July 1883[1]

**ಕರ್ಣಾಟಕ ಭಾಷಾಭೂಷಣ:** ಮೈಸೂರು ಸರ್ಕಾರಿ ಮುದ್ರಣಾಲಯದಲ್ಲಿ ೧೮೮೪ರಲ್ಲಿ ಅಚ್ಚಾಗಿ ಪ್ರಕಟವಾಯಿತು. ಮುನ್ನುಡಿ XLIV, ೯೬ ಪುಟಗಳಷ್ಟು ಗ್ರಂಥ, ೨೨ ಪುಟಗಳಷ್ಟು ಅನುಬಂಧ, ತಿದ್ದುಪಡಿ, ಪರಿವಿಡಿ ಮತ್ತು ಹೆಸರಿನ ಅಕಾರಾದಿಯಿವೆ. ಮುನ್ನುಡಿಯಲ್ಲಿ ಸಂಕ್ಷಿಪ್ತ ಕನ್ನಡ ಸಾಹಿತ್ಯ ಮತ್ತು ಭಾಷಾಚರಿತ್ರೆಯಿದೆ. 'ಎ. ಬಿ. ಸಿ.' ಮೂರು ಓಲೆಗಳಿಂದ ಸಂಪಾದಿಸಲಾಗಿದೆ. ಇವು ಜೈನವೃತ್ತಿಗಳಾಗಿದ್ದುವಲ್ಲದೆ ವೀರಶೈವ, ಬ್ರಾಹ್ಮಣ ವೃತ್ತಿಗಳಲ್ಲಿ ಇರುವಂತೆ ಇವನ್ನು ಸಂಪಾದಿಸುತ್ತಿರುವಾಗ ಮೈಸೂರಿನಲ್ಲಿ ಅಳಸಿಂಗಾಚಾರಿ ಅವರು ಇದನ್ನು ಪುಸ್ತಕರೂಪದಲ್ಲಿ ಅಚ್ಚುಮಾಡಿ ಮೊದಲಿಗರಾಗಿದ್ದರು.[2] ಅದನ್ನು ನೋಡಿ ಈ ಆವೃತ್ತಿಯನ್ನು ತಯಾರಿಸಲಾಯಿತು. ಇದರಲ್ಲಿ ೧. ಸಂಜ್ಞಾವಿಧಾನ, ೨. ಸಂಧಿ, ೩. ವಿಭಕ್ತಿ, ೪. ಕಾರಕ, ೫. ಶಬ್ದರೀತಿ, ೬. ಸಮಾಸ, ೭. ತದ್ಧಿತ, ೮. ಆಖ್ಯಾತ, ೯. ಅವ್ಯಯ, ೧೦. ನಿಪಾತ ಎಂಬ ಪರಿಚ್ಛೇದಗಳಿವೆ. ಪ್ರತಿಯೊಂದು ಸೂತ್ರಕ್ಕೂ ಹೊಂದುವ ವಿವರಣೆಯನ್ನು ಕೊಟ್ಟು ಅರ್ಧಪುಟದಲ್ಲಿ ಇಂಗ್ಲಿಷ್ ಲಿಪಿಯಲ್ಲಿಯೇ ಬರೆದು, ಇಂಗ್ಲಿಷ್‌ನಲ್ಲಿ ಅರ್ಥ ಕೊಟ್ಟಿದ್ದಾರೆ. ಉಳಿದರ್ಧ ಪುಟದಲ್ಲಿ ಮೂಲಗ್ರಂಥವನ್ನು ಉಳಿಸಿಕೊಂಡು ಬಂದಿದ್ದಾರೆ.

ಉದಾಹರಣೆಗಾಗಿ :

### TADDHITA VIDHĀNAM

Sūtra 173—Tadasya Paṇyaṃ Śhilpaṃ niyogaschētyasminn igah

Vritti: Asya Pumsah tadvastu Paṇyaṃ Vyavaharah Śilpam krityam niyōgah adhikāraś chētyasmin arthē lingāt, Parathah iga pratyayō bhavathi

Prayōga: tāmbuligam, gandigam, davasigam, Shilpe: Patasaligam, Paḍavanaligam, Pattaligam, telligam. Niyōge: bandārigam, bānasigam, kotārigam.

(The affix iga is used to form words denoting one's trade, art or office).

## ತದ್ಧಿತ ವಿಧಾನಂ

ಸೂತ್ರ || ತದಸ್ಯ ಪಣ್ಯಂ ಶಿಲ್ಪಂ ನಿಯೋಗಶ್ಚೇತ್ಯಸ್ಮಿನ್ನಿಗಃ || ೧೭೩ ||

ವೃತ್ತಿ || ಅಸ್ಯ ಪುಂಸಃ ತದ್ವಸ್ತು ಪಣ್ಯಂ ವ್ಯವಹಾರಃ ಶಿಲ್ಪಂ ಕೃತ್ಯಂ ನಿಯೋಗಃ ಅಧಿಕಾರಶ್ಚೇತ್ಯಸ್ಮಿನ್ನರ್ಥೇ ಲಿಂಙ್ಗತ್ಪರತಃ ಇಗ ಪ್ರತ್ಯಯೋ ಭವತಿ

ಪ್ರಯೋಗ || ಪಣ್ಯೇ ತಂಬುಲಿಗಂ | ಗಂದಿಗಂ | ದವಸಿಗಂ | || ಶಿಲ್ಪೇ || ಪಟಸಾಲಿಗಂ | ಪಡವಂದಿಗಂ | ಪತ್ತಳಿಗಂ | ತೆಲ್ಲಿಗಂ || ನಿಯೋಗೇ || ಬಂಡಾರಿಗಂ | ಬಾಣಸಿಗಂ | ಕೊಟಾರಿಗಂ ||

ತಾತ್ಪರ್ಯ || ಅದು ಈತನಿಗೆ ವ್ಯವಹಾರವೆಂತಲೂ ಕೃತ್ಯವೆಂತಲೂ ಅಧಿಕಾರವೆಂತಲೂ ಹೇಳಬೇಕಾದರ್ಥವಲ್ಲಿ ಲಿಂಗಕ್ಕೆ ಪರವಾಗಿ ಇಗ ಪ್ರತ್ಯಯ ಬರುವುದು. ನಾಗವರ್ಮ ನನ್ನು ಕನ್ನಡದ ಪ್ರಾಚೀನ ವೈಯಾಕರಣ ಎಂದು ಕರೆದಿದ್ದಾನೆ.[3]

**ಕರ್ಣಾಟಕ ಶಬ್ದಾನುಶಾಸನ** (೧೮೯೦) ಒಟ್ಟು ೭೦೦ ಪುಟಗಳು. ೫೧ ಪುಟಗಳಷ್ಟು ಸುದೀರ್ಘವಾದ ಮುನ್ನುಡಿಯಲ್ಲಿ ಸಂಕ್ಷಿಪ್ತ ಸಾಹಿತ್ಯ ಚರಿತ್ರೆ ಮತ್ತು ವ್ಯಾಕರಣಶಾಸ್ತ್ರವನ್ನು ಪ್ರತಿಪಾದಿಸಲಾಗಿದೆ. ೫೯೨ ಸೂತ್ರಗಳು. ಅವುಗಳ ವೃತ್ತಿ ವ್ಯಾಖ್ಯಾನಗಳ ಮೂಲವನ್ನು ಕೊಟ್ಟು ಪುನಃ ಅದನ್ನೇ (ಭಾಷಾಭೂಷಣದಂತೆ) ಇಂಗ್ಲಿಷ್ ಲಿಪಿಯಲ್ಲಿ ಕೊಡಲಾಗಿದೆ. ಕೊನೆಯಲ್ಲಿ ೮೨ ಪುಟ ಶಬ್ದಕೋಶ ಮತ್ತು ೧೯ ಪುಟ ಪರಿವಿಡಿಗಳಿವೆ. ಕನ್ನಡದ ಅಮೂಲ್ಯವಾದ ಈ ಗ್ರಂಥವನ್ನು ಅಂದಿನ ಮೈಸೂರು ಅರಸರಾದ ಚಾಮರಾಜ ಒಡೆಯರಿಗೆ ಅರ್ಪಣೆ ಮಾಡಲಾಗಿದೆ.

ಓಲೆಯಲ್ಲಿದ್ದ ಈ ಗ್ರಂಥವನ್ನು ಶ್ರವಣಬೆಳಗೊಳದ ಬ್ರಹ್ಮಸೂರಿ ಶಾಸ್ತ್ರಿ, ಚಾಮರಾಜನಗರದ ಬ್ರಹ್ಮಸೂರಿಪಂಡಿತ ಮತ್ತು ಮೈಸೂರಿನ ಬಿ. ಮಲ್ಲಪ್ಪನವರ ಸಹಕಾರದಿಂದಲೂ ಮಂಗಳೂರಿನ ರೆ. ಎಫ್. ಕಿಟ್ಟೆಲ್ ಅವರ ಸಹಾಯದಿಂದಲೂ ಸಿದ್ಧಪಡಿಸಿ ಪ್ರಕಟಿಸಿದ್ದಾರೆ.[4] ಕರ್ಣಾಟಕ ಭಾಷಾ ಭೂಷಣದ ಮುನ್ನುಡಿಯಲ್ಲಿ ಕೊಟ್ಟಂತೆ ಇಲ್ಲೂ ಕನ್ನಡ ಸಾಹಿತ್ಯ ಚರಿತ್ರೆಯ ವಿವರವಿದೆ. ಈ ಎರಡು ಶಾಸ್ತ್ರ ಗ್ರಂಥಗಳನ್ನು ಸಂಪಾದಿಸಿ ಕನ್ನಡ ಭಾಷಾ ಚರಿತ್ರೆಗೆ ಆದಿಪುರುಷರಾದರು ರೈಸ್.

**ಪಂಪರಾಮಾಯಣ** (೧೮೭೪) ೯೬ ಪುಟಗಳ ದೀರ್ಘವಾದ ಮುನ್ನುಡಿ. ಕಥಾಸಾರವನ್ನು ಇಂಗ್ಲಿಷಿನಲ್ಲಿ ಕೊಡಲಾಗಿದೆ. ೧೮೭೦ ರಲ್ಲಿ ಡಾ|| ವಿ. ವೇಬರ್ ಮತ್ತು ಡಾ|| ಎ. ಸಿ. ಬರ್ನೆಲ್ ಅವರು ಸಂಪಾದಿಸಿದ್ದನ್ನು ಮುಂದುವರಿಸಿ ರೈಸ್ ಅವರು ಶಾಸ್ತ್ರೋಕ್ತವಾಗಿ ಸಂಪಾದಿಸಿ ಮೊದಲ ೫ ಆಶ್ವಾಸಗಳನ್ನು ೧೮೭೮ರಲ್ಲಿ ಪ್ರಕಟಿಸಿದರು. ಅದನ್ನು ಮದರಾಸು ವಿಶ್ವವಿದ್ಯಾನಿಲಯದ ಬಿ. ಎ. ಪರೀಕ್ಷೆಯ ಪಠ್ಯವಾಗಿ ಗೊತ್ತುಪಡಿಸಲಾಯಿತು.[5] ಮೂರು ಓಲೆಗಳಿಂದ ಸಂಪಾದಿಸಲಾಗಿದೆ. ರೆ.ಫ. ಕಿಟ್ಟೆಲ್ ಅವರು ಒದಗಿಸಿದ ಪ್ರತಿಯೇ (೧೪೨೮) ಅತೀ ಪ್ರಾಚೀನವಾದುದು.[6]

ಪರಿಷ್ಕೃತ ಪ್ರತಿಯನ್ನು ಸಿದ್ಧಪಡಿಸುವಾಗ ಇತರ ಹಸ್ತಪ್ರತಿಗಳಿಂದ ಅನೇಕ ತಿದ್ದುಪಡಿ ಪಾಠಾಂತರಗಳನ್ನು ಶೋಧಿಸಲಾಯಿತು, ಗ್ರಂಥವನ್ನು ಕುರಿತು ಸಂಪೂರ್ಣ ವಿಮರ್ಶೆಯನ್ನು ಪ್ರಕಟಿಸಲಾಯಿತು. 'ಪಂಪರಾಮಾಯಣ' ಕನ್ನಡ ಕಾವ್ಯಗಳಲ್ಲಿ ಸಂಪಾದಿತವಾದ ಮೊದಲನೆಯ ಗ್ರಂಥ. ಅಂತೇ ತನ್ನ ಅಗ್ರತನವನ್ನು ಇಂದೂ ಉಳಿಸಿಕೊಂಡಿವೆ. ತಾವು ಪರಿಶೀಲಿಸಿದ ಪ್ರತಿಗಳಿಂದ ಪಾಠಾಂತರಗಳನ್ನು ಪ್ರಸ್ತುತ ಪ್ರತಿಯಲ್ಲಿ ಗುರುತಿಸಿದ್ದರೆ 'ಪಂಪರಾಮಾಯಣ' ವೈಶಿಷ್ಟ್ಯಪೂರ್ಣ ಗ್ರಂಥವಾಗಿರುತ್ತಿತ್ತು. ಹದಿನಾರು ಆಶ್ವಾಸಗಳ ಈ ಗ್ರಂಥ ಇಂದಿಗೂ ಸುಂದರವಾದ ಮುದ್ರಣ ವಿನ್ಯಾಸವನ್ನು ಪಡೆದಿದೆ.

**ಪಂಪಭಾರತ** (೧೮೯೮) 'ಪಂಪಕವಿ' ಎಂಬ ಲೇಖನವನ್ನು ೧೮೮೨ ರಾಯಲ್ ಏಷಿಯಾಟಿಕ್ ಸೊಸೈಟಿ ಜರ್ನಲ್‌ನಲ್ಲಿ ಬರೆದು ಜನರಿಗೆ ಕುತೂಹಲವನ್ನು ಕೆರಳಿಸಿ ೧೮೯೮ ರಲ್ಲಿ 'ಪಂಪಭಾರತ'ವನ್ನು ಸಂಪಾದಿಸಿ ಪ್ರಕಟಿಸಿದರು.[7] ಹದಿನಾಲ್ಕು ಆಶ್ವಾಸಗಳ ಸಮಗ್ರಕಾವ್ಯವನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪಾಠಾಂತರಗಳನ್ನು ಕೊಟ್ಟು ಅಲ್ಲಲ್ಲಿ—ಈ ಪದ್ಯವು ಖಚರಪ್ಲುತ ವೃತ್ತದ ಲಕ್ಷಣಕ್ಕೆ ಸರಿಯಾಗಿಲ್ಲ,[8] ಈ ಪದ್ಯವನ್ನು ಕೆಳಗೆ ಕಂಡಂತೆ ತಿದ್ದಿದರೆ ಸರಿಯಾಗಬಹುದೆಂದು ತೋರುತ್ತದೆ[9]—ಎಂಬ ಟಿಪ್ಪಣಿಗಳೊಡನೆ ಪ್ರಕಟವಾಗಿದೆ.

ಆಸೇತೋಮಹವಾನೀರಟನಿಟಂಕಾಂಕಿತಾಖಂಡಾ
ದಾಮೊದ್ಯಾಸಾಬ್ಧಿ ದುಗ್ಧಂಪವಧವಳಕಳಂ ಕಂದರಾನ್ಮಂದವಾದ್ರೀ
ಆಚಂದ್ರಾರ್ಕ ಪ್ರತಿತೋಽಪಯ ಗಿರಿಶಿಖರಾಸ್ಯೋದಯಃ ಸೈಕಹೇತೊ
ಸೈಲೇಳಾ ಕಲ್ಪಕಾಳಂ ಕ್ಷಿತಿಪಳಯಿ ಮುಪಂ ಪಾತು ವಿಕ್ರಾಂತತುಂಗಂ

(ಪಂಪ ಭಾ. ೧೪–೨೭) ಎಂಬುದನ್ನು

ಆಸೇತೋರಾಮ ಚಾಪಾಟನಿಕಟ[ಯುಗ] ಟಂಕಾಂಕಿತಖಂಡ ಖಂಡಾ
ದಾಪೀಯೂಷಾಬ್ಧಿ ದುಗ್ಧಪ್ಲವ ಧವಳ ಕನತ್ಕಂದರಾನ್ಮಂದರಾದ್ರೇ
ಆಚಂದ್ರಾರ್ಕ ಪ್ರತಿತೋಽಭಯ ಗಿರಿಶಿಖರಾತ್ xದಯಸ್ತೈಕಹೇತೋ
ಶೈಲೇಳಾಕಲ್ಪಕಾಳಂ ಕ್ಷಿತಿವಲಯಮಿದಂ ಪಾತು ವಿಕ್ರಾಂತತುಂಗಃ

ಎಂದು ತಿದ್ದಿದ್ದಾರೆ.[10]

ಕನ್ನಡದ ಆದಿಕವಿ, ಅಗ್ರಕವಿ, ಮಹಾಕವಿಯ ಕೃತಿಯಾದ 'ವಿಕ್ರಮಾರ್ಜುನ ವಿಜಯಂ'ವನ್ನು ಪ್ರಕಟಿಸಿ, ಕನ್ನಡ ಸಾಹಿತ್ಯ ದೇವಿಗೆ ಸಿರಿಮುಡಿಯನ್ನು ಕಟ್ಟಿದರು.

**ಅಮರಕೋಶ** (೧೮೮೩): ಭಾರತದಲ್ಲಿ ನೂರಾರು ಜನ ವಿದ್ವಾಂಸರು ಪ್ರಕಟಿಸಿದ್ದರೂ ರೈಸ್ ಅವರ ಅಮರಕೋಶ ಬಹು ಜನಪ್ರಿಯ ಕೋಶವಾಗಿ ಕೀರ್ತಿ ಪಡೆಯಿತು. ಅದರ ಜನಪ್ರಿಯತೆಗೆ ಸಾಕ್ಷಿಯೆಂದರೆ ೧೮೯೫ ರೊಳಗಾಗಿ ಮೂರು

ಬಾರಿ ಪ್ರಕಟವಾಯಿತು. ತ್ರಿಕಾಂಡಕ್ಕೂ, ಇಂಗ್ಲಿಷ್ ಅರ್ಥ ಮತ್ತು ವಿವರಣೆಗಳ ಜೊತೆಗೆ ಕನ್ನಡ ಅರ್ಥ, ಮುನ್ನುಡಿ, ಅಕಾರಾದಿಗಳು ಈ ಗ್ರಂಥಕ್ಕೆ ಪೂರಕವಾಗಿವೆ.

ಯಸ್ಯಜ್ಞಾನ ದಯಾಸಿಂಧೋರಗಾಧಸ್ಯಾನಘಾಗುಣಾಃ
ಸೇವ್ಯತಾಮಕ್ಷಯೋ ಧೀರಾ ಸ್ಸಶ್ರಿಯೈಚಾಮೃತಾಯಚ ||೧||

"Praise O ye learned, that Eternal Pure Being who is an ocean of wisdom and love for, the sake of well-being and salvation"

ಲೂಯಿ ರೈಸ್ ಅವರು ಅಮರಕೋಶವನ್ನು ಪಂಡಿತರ ನೆರವಿನಿಂದ ಸಂಪಾದಿಸಿ ಇಂಗ್ಲಿಷಿನಲ್ಲಿ ಅರ್ಥವನ್ನು ಸೇರಿಸಿ ಪ್ರಕಟಿಸಿದರು. ಅದರ ನಾಲ್ಕನೆಯ ಆವೃತ್ತಿ ೧೯೨೭ರಲ್ಲಿ ಪ್ರಕಟವಾಯಿತು.[11]

ಬಹುಭಾಷಾ ಪಂಡಿತವರ್ಯರಾದ ರೈಸ್ ಅವರು ಸುಮಾರು ಅರ್ಧಶತ ಮಾನಕ್ಕೂ ಹೆಚ್ಚಾಗಿ ನಾಡು ಮತ್ತು ನುಡಿಗಾಗಿ ದುಡಿದ ರಸಋಷಿ. ಈ ಪಾಶ್ಚಾತ್ಯ ವಿದ್ವಾಂಸರನ್ನು ನಾವು ಮರೆಯುವುದಾದರೂ ಹೇಗೆ?

ರೆ. ಫರ್ನಾಂಡಿಸ್ ಕಿಟ್ಟಲ್ ಅವರಂತಹ ಬಹುಶ್ರುತ ಕನ್ನಡ ವಿದ್ವಾಂಸನು ದೇಶೀಯ ಹಾಗೂ ವಿದೇಶೀಯರಲ್ಲಿ ಅಪುರೂಪ. ಕನ್ನಡ ಸಾಹಿತ್ಯದ ಬಗ್ಗೆ ಕಿಟ್ಟೆಲ್ ಅವರು ಕೈಕೊಂಡ ಕಾರ್ಯಗಳು ಈ ನಾಡಿನ ಚರಿತ್ರೆಗೆ ನಾಂದಿಯಾಗಿವೆ. ಅಂತೆಯೇ 'ಕನ್ನಡದ ಜನಕ' ಎಂಬ ಖ್ಯಾತಿಗೆ ಭಾಜನರಾಗಿದ್ದಾರೆ. ಜರ್ಮನಿಯಲ್ಲಿ (೧೮೩೨) ಹುಟ್ಟಿ ಕ್ರೈಸ್ತಧರ್ಮ ಪ್ರಚಾರಕರಾಗಿ ೧೮೫೩ರಲ್ಲಿ ಮಂಗಳೂರಿಗೆ ಬಂದು ನೆಲಸಿದರು. ೧೮೯೨ರ ವರೆಗೆ ಸುಮಾರು ನಲವತ್ತು ವರ್ಷಗಳ ಕಾಲ ನಾಡಿನ ಜೀವನಾಡಿಯಾಗಿ ಕನ್ನಡ ಭಾಷೆ, ಸಾಹಿತ್ಯ, ನಿಘಂಟು, ವ್ಯಾಕರಣ ಮೊದಲಾದವುಗಳ 'ತಂದೆ' ಎಂದೆನಿಸಿ ಕೊಂಡರು. ಉಭಯ ಭಾಷಾ ವಿದ್ವಾಂಸರು, ವಿನೀತರು ಮತ್ತು ಸಮಾಜ ಸುಧಾರಕ ರಾಗಿ 'ಕನ್ನಡ ಕಣ್ಮಣಿ'ಯಾದರು. ಧರ್ಮಪ್ರಚಾರಕರಾಗಿದ್ದುಕೊಂಡೇ ವಿಶೇಷ ವಾದ ಸಾಹಿತ್ಯ ಪ್ರಚಾರಕರಾದರು. ಅವರು ಕನ್ನಡಕ್ಕೆ ಸಲ್ಲಿಸಿರುವ ಸೇವೆ ಅಮೋಘ ವಾದುದು. 'ಕಾವ್ಯಮಾಲೆ' (೧೮೫೫), 'ಬೈಬಲ್ ಲೇಖನಗಳು' (೧೮೬೩), ಇವು ಗಳ ಜೊತೆಗೆ 'ಸಣ್ಣ ಕರ್ಣಾಟಕ ಕಾವ್ಯಮಾಲೆ' (೧೮೫೮), 'ಕರ್ಣಾಟಕ ಕಾವ್ಯ ಮಂಜರಿ' (೧೮೭೭), 'ಕನ್ನಡ ವ್ಯಾಕರಣ' (೧೮೯೮) ಗ್ರಂಥಗಳನ್ನು ಪ್ರಕಟಿಸಿದರು.

**ಶಬ್ದಮಣಿದರ್ಪಣ** (೧೮೭೧) : ಕನ್ನಡ ಭಾಷೆಗೆ ಹಿರಿಯತನವನ್ನು ತಂದು ಕೊಟ್ಟ 'ಶಬ್ದಮಣಿದರ್ಪಣ'ವನ್ನು ಗ್ಯಾರೆಟ್ (೧೮೬೮), ಕಿಟ್ಟೆಲ್ (೧೮೭೨), ಪಂಜೆ ಮಂಗೇಶರಾವ್ (೧೯೨೦), ಕನ್ನಡ ಸಾಹಿತ್ಯ ಪರಿಷತ್ತು (೧೯೨೦), ವೆಂಕಟರಾವ್–ಶೇಷ ಅಯ್ಯಂಗಾರ್ (೧೯೩೯), ಡಿ. ಎಲ್. ನರಸಿಂಹಾಚಾರ್ (೧೯೫೯) ಮೊದಲಾದ ವಿದ್ವಾಂಸರುಗಳು ಬಹಳ ಪರಿಶ್ರಮದಿಂದ ಪರಿಶೋಧಿಸಿ

ಪ್ರಕಟಿಸಿದ್ದಾರೆ. ಆದರೂ ಅವರ ಜನಪ್ರಿಯತೆ ಉಳಿದದ್ದು ಕಿಟ್ಟೆಲ್ ಅವರ ಪ್ರಕಟನೆಯಿಂದ. ಜಾನ್ ಗ್ಯಾರೆಟ್ ಅವರ ಆದರ್ಶವನ್ನು ಅನುಸರಿಸಿ ಕಿಟ್ಟೆಲ್ ಅವರು ಒಂಬತ್ತು ಹಸ್ತಪ್ರತಿಗಳ ಸಹಾಯದಿಂದ ಸಮರ್ಥವಾಗಿ ಸಂಪಾದಿಸಿ ಸೂತ್ರಗಳ ತಾತ್ಪರ್ಯ, ವೃತ್ತಿ ಮತ್ತು ಟೀಕೆಯೊಡನೆ ಇಂಗ್ಲಿಷ್‌ಗೆ ಅನುವಾದಿಸಿ ಅರ್ಥವನ್ನು ಕೊಟ್ಟಿದ್ದಾರೆ. ಇಂಗ್ಲಿಷ್ ವ್ಯಾಖ್ಯೆ, ಅನುವಾದಗಳೊಂದೊಡಗೂಡಿದ 'ಶಬ್ದಮಣಿದರ್ಪಣ' ಎಲ್ಲ ಭಾಷಾ ಪಂಡಿತರ ಮನ್ನಣೆಗೆ ಬಂದು ವಿಶ್ವವಿಖ್ಯಾತಿಯನ್ನು ಪಡೆಯಿತು. ಪೀಠಿಕೆ, ಅಕ್ಷರ ಸಂಜ್ಞಾಪ್ರಕರಣ, ಸಂಧಿಪ್ರಕರಣ, ನಾಮಪ್ರಕರಣ, ಸಮಾಸ ಪ್ರಕರಣ, ತದ್ಧಿತ ಪ್ರಕರಣ, ಆಖ್ಯಾತ ಪ್ರಕರಣ, ಧಾತು ಪ್ರಕರಣ, ಅಪಭ್ರಂಶ ಪ್ರಕರಣ, ಅವ್ಯಯ ಪ್ರಕರಣ ಮತ್ತು ಪ್ರಯೋಗಸಾರ ಎಂಬ ಹನ್ನೊಂದು ಪ್ರಕರಣಗಳಿವೆ. ಉದಾಹರಣೆಗೆ:

ಕುಳದ ನಿಯಾಮದೊಳೆಂದುಂ
ಕ್ಷಳಕ್ಕೆ ಲಾಕ್ಷರವಿಕಲ್ಪಮಿಲ್ಲ ವಿಕಲ್ಪಂ।
ಕ್ಷಳನಲ್ಲದಿಲ್ಲ ಸಂಸ್ಕೃತ
ದೊಳಾ ಲಕಾರಕ್ಕೆ ಪೇೞ್ದಿನವಜಾಂ ಕ್ಷಳನಂ ॥೧೫॥[12]

The Samskrita ಲ್ must take the form of ಳ್ (ಕ್ಷಳಂ) to be in Alliteration (ನಿಯಾಮಂ, ಪ್ರಾಸಂ) with tha Kannada ಳ್ (ಕುಳಂ)*

* in Samskrita the letter ಳ್ is a substitute for the letter ಡ್. According to Kesava this ಳ್ is not ಕ್ಷಳ. That ಳ್ which only in a few instances is optionally used for Samskrita ಲ್ is termed ಕ್ಷಳ by him-ಕಮಳ or ಕಮಲ, ಜಳ or ಜಲ, The so-called ಕುಳ or the Kannada ಳ್ which in its form and pronunciation is the same as Kesava's ಕ್ಷಳ appears in words adduced by him such as ಪಳಿದ, ಓಕುಳಿ, ಅಳಿಯ. See also ಸೂತ್ರ 16.

ಸುರುಳ್-ಸಂಕೋಚನೇ, to contract, shrivel, ಮುಸುಳ್-ವಿಗತ ಪ್ರಭಯಾಂ to be deprived of shine, grow dim.

[ಇದುವರೆಗೆ ಕಿಟ್ಟೆಲ್ ಅವರ 'ಶಬ್ದಮಣಿದರ್ಪಣ' ನಾಲ್ಕು ಬಾರಿ ಪ್ರಕಟವಾಗಿದೆ.]

**ಛಂದೋಂಬುಧಿ** (೧೮೭೫): ನಾಗವರ್ಮನ ಛಂದೋಂಬುಧಿಯನ್ನು ಕುರಿತು 'ಕಾವ್ಯಮಾಲೆ'ಯ ಮುನ್ನುಡಿಯಲ್ಲಿ ೧೬ ಪುಟ ಲೇಖನ ಬರೆದು, ೧೮೬೨ರಲ್ಲಿ ಆರಂಭಿಸಿ ೧೮೭೫ರಲ್ಲಿ ಸಂಪಾದಿಸಿ ಪ್ರಕಟಿಸಿದರು. ವೃತ್ತಿ. ಟೀಕೆಗಳನ್ನು ಇಂಗ್ಲಿಷಿ

ನಲ್ಲಿ ವಿವರಿಸಿ, ಸಾಹಿತ್ಯಚರಿತ್ರೆಯ ವಿಚಾರವಾಗಿ ಸುಮಾರು ೫೦ ಪುಟಗಳ ಮುನ್ನುಡಿ ಬರೆದಿದ್ದಾರೆ. ಅಕಾರಾದಿ, ಶಬ್ದಕೋಶಗಳಿಂದ 'ಛಂದೋಂಬುಧಿ' ಶಾಸ್ತ್ರಾಭ್ಯಾಸಿಗಳಿಗೆ ಆಕರಗ್ರಂಥವಾಗಿದೆ. ಹಲವಾರು ಮುದ್ರಣಗಳು ಬಂದರೂ ಕಿಟ್ಟೆಲ್‌ರ ಮುದ್ರಣವನ್ನು ಸರಿಗಟ್ಟುವ ಸಂಪಾದನೆಯಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು.

**ಕನ್ನಡ-ಇಂಗ್ಲಿಷ್ ನಿಘಂಟು** (೧೮೯೪) : ರೆ. ರೀವ್ ಅವರು ೧೮೩೦ ರಚಿಸಿದ್ದ ಕನ್ನಡ-ಇಂಗ್ಲಿಷ್ ನಿಘಂಟನ್ನು ಆಧಾರವಾಗಿಟ್ಟುಕೊಂಡು, ಭಾರತದ ದೇಶೀಯ ಭಾಷೆಗಳಲ್ಲಿ ಆದರ್ಶವೂ ಅನುಕರಣೀಯವೂ ಆದ ನಿಘಂಟನ್ನು ರಚಿಸಿ ಕನ್ನಡಕ್ಕೆ ಮಹತ್ತಾದ ನಿಧಿಯನ್ನು ತಂದುಕೊಟ್ಟರು. ಶಬ್ದ, ಅರ್ಥ, ಪ್ರಯೋಗ, ನಿಷ್ಪತ್ತಿ, ನಾಣ್ಣುಡಿ, ಗಾದೆ ಮೊದಲಾದುವುಗಳನ್ನಿತ್ತು ನಿಘಂಟು ಸರ್ವಸುಂದರವಾಗುವಂತೆ ಶ್ರಮಿಸಿದ್ದಾರೆ. ೧೭೫೨ ಪುಟಗಳ ಈ ಬೃಹತ್ ನಿಘಂಟು ಇಡೀ ವಿಶ್ವದ ಮನ್ನಣೆಗೆ ಪಾತ್ರವಾಗಿ ಕನ್ನಡಕ್ಕೆ ಕೀರ್ತಿಯ ಕಿರೀಟ ತಂದುಕೊಟ್ಟಿತು. ಕಿಟ್ಟೆಲ್ ಅವರ ಅಸಾಧಾರಣ ಸೇವೆಗಾಗಿ ಅಂದಿನ ಕೊಡಗು ಸರ್ಕಾರವು 'ಡಾಕ್ಟರೇಟ್' ಪ್ರಶಸ್ತಿಯನ್ನಿತ್ತು ಗೌರವಿಸಿತು. ಕಿಟ್ಟೆಲ್‌ರವರು ಸಂಪಾದಿಸಿದ 'ಶಬ್ದಮಣಿದರ್ಪಣ', 'ಛಂದೋಂಬುಧಿ' ಮತ್ತು 'ನಿಘಂಟು'ಗಳು ನೂರಾರು ಜನರ ಡಾಕ್ಟರೇಟ್ ಪದವಿಗಳಿಗೆ ಆಗರವಾಗಿವೆಯೆಂಬುದನ್ನು ನೆನೆದರೆ ಅವುಗಳ ಹಿರಿಮೆ ಗೊತ್ತಾಗುತ್ತದೆ.

ಉದಾ : **ಮಣ್** Maṇ. (Śmd. 58) = ಮಣ್ಣು. earth, clay, mud, soil, ground (ಮೃತ್, ಮೃತ್ತಿಕೆ Hlā., Nr., ಮಣ್, ಮೃತ್ತಿಕೆ Mr. 92.; T.; M. ಮಣ್, ಮಣ್ಣು Te. ಮನ್ನು) ಒಳ್ಳಿತಹ ಮಣ್ (ಮೃತ್ಸೆ Mr. 92). ಮಣ್ಣ ಮಡಿಕೆ (ಉಷ್ಟಿಕೆ Hlā.). ಮಣ್ಣಮಡಕೆ (ಮೃಣ್ಮಯ ಪಾತ್ರೆ. Nn. 85). ಪೊನ್ನಿಂ ಸಮನಿಸುಗುಮಲ್ತೆ ಪೆಣ್ಣಿಂ ಮಣ್ಣುಂ ? (Śmd. 84). See Bp. 47, 1; 52, 10; 60, 49; Bh. 1, 20, 60. ಮಣ್ಣುಣಿ-ಉಣಿ = ಮಣ್ಣುಳಿ an earth worm (My ; T.)-ಮಣ್ಣುಳಿ-ಉಳಿ = ಮಣ್ಣುಣಿ. (My.; T.)-ಮಣ್ಣುಳಿಗ-ಉಳಿಗ a snake (or worm) that feeds on earth (ಮಣ್ಣೊಳ್ ಜೀವಿಸುವ ಪಾವು Śmd. 237) ಮಣ್ಣುಕ್ಕ ಹಾವು = ಮಣ್ಣ-a blind worm (B. 2, 26. 27).[13]

"ಶಬ್ದಪಾರಮಾರ್ಗಮಶಕ್ಯಂ"[14] ಎಂಬ ಮಾತನ್ನು ಶಕ್ಯಗೊಳಿಸಿದ ಮಹಾಮಹಿಮರೆಂದರೆ ರೈಸ್ ಮತ್ತು ಕಿಟ್ಟೆಲ್ ಅವರುಗಳು. ಇಬ್ಬರೂ ಕನ್ನಡದ ಎರಡು ಕಣ್ಣುಗಳು. ಕನ್ನಡದ ಕಣ್ಮಣಿಗಳಾದ ಈ ಸುಪುತ್ರರು ಕನ್ನಡ ಗ್ರಂಥ ಸಂಪಾದನೆಗೆ ಸಲ್ಲಿಸಿದ ಸೇವೆ ಚಿರಸ್ಮರಣೀಯವಾದುದು. ಅವರನ್ನು ಸ್ಮರಿಸದೆ ಯಾರೂ ಗ್ರಂಥ ಸಂಪಾದನೆ, ಶಾಸ್ತ್ರಗ್ರಂಥಗಳನ್ನು ಸಂಪಾದಿಸುವುದು ಸಾಧ್ಯವೇ ಇಲ್ಲ. ರೈಸ್, ಕಿಟ್ಟೆಲ್ ಅವರ ನೆನಹು ಸದಾ ಕನ್ನಡಿಗರಲ್ಲಿ ಹಸಿರಾಗಿ ಇರುತ್ತದೆ.

## ಟಿಪ್ಪಣಿಗಳು (ಸಂದರ್ಭಸೂಚಿ)


1. ಕವಿರಾಜಮಾರ್ಗ, ಪಾಠಕ್ ಮುನ್ನುಡಿ. ೨.
2. ಕರ್ಣಾಟಕ ಭಾಷಾಭೂಷಣ, ಮುನ್ನುಡಿ. iv ಅಡಿಟಿಪ್ಪಣಿ.
3. ,, ,, ಪುಟ ೧
4. ಕರ್ಣಾಟಕ ಶಬ್ದಾನುಶಾಸನ, ಮುನ್ನುಡಿ, ಪುಟ ೨
5. ಪಂಪರಾಮಾಯಣ, ಮುನ್ನುಡಿ, ಪುಟ ೧
6. ,, ,,
7. ಪಂಪಭಾರತ, ಪೀಠಿಕೆ. ಪುಟ ೧
8. ,, ೭–೬೩ ಅಡಿಟಿಪ್ಪಣಿ
9. ,, ೧೪–೨೭ ,,
10. ,, ,,
11. ಅಮರಕೋಶ, ಮೈಸೂರು ವಿಶ್ವವಿದ್ಯಾನಿಲಯ, ೧೯೭೦.
    ಪ್ರಕಾಶಕರ ಮಾತು, ಪುಟ v
12. ಶಬ್ದಮಣಿದರ್ಪಣ, ಪುಟ ೧೨
13. ಕನ್ನಡ–ಇಂಗ್ಲಿಷ್ ನಿಘಂಟು ಪುಟ ೧೧೯೨
14. ಶಬ್ದಮಣಿಪರ್ಪಣ (ಕನ್ನಡ ಸಾಹಿತ್ಯ ಪರಿಷತ್ತು) ಸೂತ್ರ ೧೯೬


## ಗ್ರಂಥಋಣ


1. ಕರ್ಣಾಟಕ ಭಾಷಾಭೂಷಣ
2. ,, ಶಬ್ದಾನುಶಾಸನ
3. ಶಬ್ದಮಣಿದರ್ಪಣ
4. ಕವಿರಾಜಮಾರ್ಗ
5. ಪಂಪರಾಮಾಯಣ
6. ಪಂಪಭಾರತ
7. ಅಮರಕೋಶ : ರೈಸ್. ಮೈಸೂರು ವಿಶ್ವವಿದ್ಯಾನಿಲಯ
8. ಕನ್ನಡ–ಇಂಗ್ಲಿಷ್ ನಿಘಂಟು : ರೆ. ಫಾ. ಕಿಟ್ಟೆಲ್
9. ಕನ್ನಡ ಸಾಹಿತ್ಯ ಚರಿತ್ರೆ : ಡಾ|| ರಂ. ಶ್ರೀ. ಮುಗಳಿ
10. ಸಿರಿಗನ್ನಡ ಚರಿತ್ರಕೋಶ : ವೆಂಕಟೇಶ ಸಾಂಗ್ಲಿ
11. ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ : ಐ. ಮಾ. ಮುತ್ತಣ್ಣ
12. ಕನ್ನಡ ಸಾಹಿತ್ಯ ಪರಿಚಯ : ಶ್ರೀ. ಚಿ. ಶಾಂತವೀರಯ್ಯ


—o—

# ಗ್ರಂಥಸಂಪಾದನೆಗೆ ರಾ. ನರಸಿಂಹಾಚಾರ್ಯರ ಕೊಡುಗೆ

ಡಾ|| ಎನ್. ಅನಂತರಂಗಾಚಾರ್

ಪ್ರಾಚೀನ ಗ್ರಂಥಗಳಲ್ಲಿ ನಾನಾ ಕಾರಣಗಳಿಂದ ಆಗಬಹುದಾದ ಅಪ ಪಾಠಗಳನ್ನು ವಿವಿಧ ಪರಂಪರೆಯ ಹಸ್ತಲಿಖಿತಪ್ರತಿಗಳ ಸಹಾಯದಿಂದ ಮೂಲ ಗ್ರಂಥಕಾರನ ಪಾಠಕ್ಕೆ ಸಮಾನವಾಗುವಂತೆ ಪರಿಷ್ಕರಿಸಿ ಗ್ರಂಥದ ಪೂರ್ಣ ಮೌಲ್ಯ ಮಾಪನ ಮಾಡಿ ವಾಚಕರಿಗೆ ಒದಗಿಸುವುದು ಗ್ರಂಥಸಂಪಾದನೆಯ ಮುಖ್ಯ ಉದ್ದೇಶ. ಈ ಕಾರ್ಯವು ಭಾರತದಲ್ಲಿ ವೇದಗಳ ಕಾಲದಿಂದಲೂ ಬೇರೆ ಬೇರೆ ರೂಪದಲ್ಲಿ ರೂಢಿಯಲ್ಲಿದ್ದರೂ ಅದಕ್ಕೆ ಪ್ರತ್ಯೇಕವಾದ ಶಾಸ್ತ್ರದ ಗೌರವ ಮೊನ್ನೆ ಮೊನ್ನೆಯವರೆಗೆ ದೊರೆತಿರಲಿಲ್ಲ. ಕೆಲವು ಶತಮಾನಗಳಿಂದ ಪಾಶ್ಚಾತ್ಯ ವಿದ್ವಾಂಸರು ಈ ಕಾರ್ಯವನ್ನು ವಿಶೇಷವಾಗಿ ಬೆಳಸಿ ಅದಕ್ಕೆ ಒಂದು ವಿಶೇಷ ಸ್ಥಾನವನ್ನು ಕಲ್ಪಿಸಿ ಆ ವಿಷಯವಾಗಿ ಸ್ವತಂತ್ರಗ್ರಂಥಗಳನ್ನು ರಚಿಸಿದರು. ಅಂತಹವರಲ್ಲಿ ಎಡ್ವಿನ್ ಸಾಂಡಿಸ್ ಮತ್ತು ಪಾಲ್ ಮಾಸ್‌ರನ್ನು ಜ್ಞಾಪಿಸಿಕೊಳ್ಳಬಹುದು.

ಪಾಶ್ಚಾತ್ಯರ ಸಂಸರ್ಗವನ್ನು ಪಡೆದ ಭಾರತೀಯರು ಈ ಶಾಸ್ತ್ರದ ತತ್ವಗಳನ್ನು ಭಾರತೀಯ ಗ್ರಂಥಗಳಿಗೂ ಅಳವಡಿಸಲು ಪ್ರಾರಂಭಿಸಿದರು. ಇವರಲ್ಲಿ ಬಹು ಪ್ರಸಿದ್ಧರಾದವರು ದಿವಂಗತ. ವಿ. ಎಸ್ ಸುಕ್ಥಂಕರವರು. ಇವರು ಪುಣೆಯ ಭಂಡಾರಕರ್ ಪ್ರಾಚ್ಯ ಸಂಶೋಧನಾ ಸಂಸ್ಥೆಯ ಆಶ್ರಯದಲ್ಲಿ ನಡಸಿದ ಮಹಾ ಭಾರತ ಸಂಸ್ಕರಣ ಕಾರ್ಯದಲ್ಲಿ ಗ್ರಂಥಸಂಪಾದನಾ ತತ್ವವನ್ನು ಬಹು ಯಶಸ್ವಿ ಯಾಗಿ ಉಪಯೋಗಿಸಿಕೊಂಡು ಅಲ್ಲಿಯ ಅಪಾರವಾದ ಪರಿಶ್ರಮದ ಆಧಾರದಮೇಲೆ *Critical studies in the Mahabharata* ಎಂಬ ಸಂಪುಟವನ್ನು ಪ್ರಕಟಿಸಿ ದರು. ಇವರನ್ನು ಅನುಸರಿಸಿ ಡಾ|| ಕೆ. ಎಂ. ಕತ್ರೆಯವರು *Introduction to Indian Textual Criticism* ಎಂಬ ಗ್ರಂಥವನ್ನು ರಚಿಸಿದರು. ಈ ಗ್ರಂಥಗಳು ಭಾರತದ ಅನೇಕ ಭಾಷೆಗಳಲ್ಲಿ ಗ್ರಂಥಸಂಪಾದನೆಯನ್ನು ಶಾಸ್ತ್ರೀಯ ರೀತಿಯಲ್ಲಿ ನಡಸಲು ಪ್ರೇರೇಪಿಸಿದುದಲ್ಲದೆ ಭಿನ್ನಭಾಷೆಗಳಲ್ಲಿ ಈ ವಿಷಯಕವಾದ ಗ್ರಂಥಗಳನ್ನು ರಚಿಸಲು ಪ್ರೇರಕವಾದುವು.

ಈ ಶಾಸ್ತ್ರದ ಪ್ರಕಾರ ಗ್ರಂಥಸಂಪಾದನಾ ಕಾರ್ಯವು ಸಾಧನಸಂಗ್ರಹ, ವರ್ಗೀಕರಣ, ಪಾಠಸಂಕಲನ, ಗ್ರಂಥಪರಿಷ್ಕರಣ, ಮೌಲ್ಯಮಾಪನ ಎಂಬ ಭಾಗ ಗಳಲ್ಲಿ ನಡೆಯುತ್ತದೆ. ಈ ಒಂದೊಂದು ಭಾಗದಲ್ಲಿಯೂ ಅನುಸರಿಸಬೇಕಾದ

ಪ್ರತ್ಯೇಕ ನಿಯಮಗಳುಂಟು. ಅವುಗಳನ್ನು ಶ್ರದ್ಧೆಯಿಂದ ಪಾಲಿಸಿದರೆ ಬಹುಮಟ್ಟಿಗೆ ಮೂಲಪಾಠವನ್ನು ನಿಷ್ಕರ್ಷಿಸಲು ಸಾಧ್ಯವಾಗುತ್ತದೆ. ಇವುಗಳಲ್ಲಿ ಕೊನೆಯದಾದ ಮೌಲ್ಯಮಾಪನ ಬಹುಮುಖ್ಯವಾದುದು. ಈ ಭಾಗವನ್ನು ಸಂಪಾದಕನು ಬಹು ದಕ್ಷತೆಯಿಂದ ಸಾಧಿಸಬೇಕು. ಇದರಿಂದ. ವಾಚಕರಿಗೆ ವಿಶೇಷ ಪ್ರಯೋಜನವಾಗುವುದು. ಈ ಭಾಗವು ಸಾಮಾನ್ಯವಾಗಿ ಗ್ರಂಥದ ಉಪೋದ್ಘಾತ ರೂಪದಲ್ಲಿರುತ್ತದೆ. ಈ ಭಾಗದಲ್ಲಿ ಸಾಧನಗಳ ವಿವರಣೆ, ಪ್ರತಿಗಳ ಸಾಮಾನ್ಯ ಪರಿಚಯ, ಅವುಗಳ ಪ್ರಾಮುಖ್ಯ, ವೈಶಿಷ್ಟ್ಯ, ಪೂರ್ಣವೇ ಅಪೂರ್ಣವೇ, ಅವುಗಳು ಸಿಕ್ಕಿದ ಸ್ಥಳ, ಲಿಪಿಕಾರ, ಅವನ ವಿಷಯ, ಪ್ರತಿಗಳ ಸಂಕೇತ, ಲಿಪಿವೈಚಿತ್ರ್ಯ, ಯಾರಿಗೋಸ್ಕರ ಯಾರಿಂದ ಪ್ರತಿಯಾಯಿತು, ಯಾವಾಗ, ಪ್ರಸ್ತುತ ಗ್ರಂಥಕ್ಕೆ ಪ್ರಮಾಣವಾಗಿರಬಹುದಾದ ಮೂಲ, ವ್ಯಾಖ್ಯಾನ, ಸಂಗ್ರಹ, ಪರಿವರ್ತನ ಮುಂತಾದುವುಗಳ ಪರಿಚಯ, ಅನುಸರಿಸಿರುವ ಪರಿಷ್ಕರಣನಿಯಮ, ಗ್ರಂಥಕರ್ತನ ಕಾಲ, ದೇಶ, ಮತ, ಯೋಗ್ಯತೆ, ಬಿರುದು, ಕವಿಯು ಉದಾಹರಿಸಿರುವ ಇತರ ಕವಿಗಳು, ಅವರ ಗ್ರಂಥಗಳು, ಇವನ್ನು ಉದಾಹರಿಸಿರುವ ಮುಂದಿನ ಗ್ರಂಥಕಾರರು, ಅವರ ಪರಿಚಯ, ಗ್ರಂಥದ ಆದ್ಯಂತ ಭಾಗಗಳು, ಗ್ರಂಥದ ಸಂಧ್ಯಂತದ ಗದ್ಯ, ಐತಿಹಾಸಿಕ ವಿಷಯ ವ್ಯಾಖ್ಯಾನಗಳ ವಿವರಣ, ವ್ಯಾಖ್ಯಾನಕಾರರ ಚರಿತ್ರೆ, ಈ ಗ್ರಂಥಕ್ಕೂ ಇವುಗಳಿಗೂ ಇರುವ ಸಂಬಂಧ, ಸಾಹಿತ್ಯದಲ್ಲಿ ಕವಿಯ ಮತ್ತು ಆತನ ಗ್ರಂಥದ ಸ್ಥಾನ, ಅವನ ಇತರ ಗ್ರಂಥಗಳು, ಇತರ ಗ್ರಂಥಗಳ ಮೇಲೆ ಇವನ ಪ್ರಭಾವ, ಪದ್ಯಕಾವ್ಯವಾದರೆ ಪದ್ಯಗಳ ಅಕಾರಾದಿ, ಪರಿಭಾಷಾ ವಿವರಣೆ, ಶಬ್ದಕೋಶ ಮೊದಲಾದವು ಇರಬೇಕೆಂದು ಇತ್ತೀಚಿನ ಸಂಶೋಧನೆಯಿಂದ ಸೂಚಿತವಾಗಿದೆ. ಇವೆಲ್ಲವೂ ಕಳೆದ ೫೦ ವರ್ಷಗಳಿಂದೀಚಿನ ಸಂಶೋಧನೆಯ ಅನುಭವದಿಂದ ರೂಪಿತವಾದುವು. ಆದರೆ ಈಗ ಸುಮಾರು ಒಂದು ಶತಮಾನಕ್ಕಿಂತ ಹಿಂದೆಯೇ ಯಾವ. ಪೂರ್ವಾಧಾರವೂ ಇಲ್ಲದೆ ಸ್ವತಃ ಈ ನಿಯಮಗಳನ್ನು ಕಂಡುಹಿಡಿದು ಅವುಗಳನ್ನು ಬಹು ಶಾಸ್ತ್ರೀಯವಾಗಿ ತಮ್ಮ ಗ್ರಂಥಗಳ ಮೂಲಕ.ಪ್ರತಿಪಾದಿಸಿದ ಕೀರ್ತಿ ರಾ. ನರಸಿಂಹಾಚಾರ್ಯರದು. ಕನ್ನಡ ಗ್ರಂಥಸಂಪಾದನೆಗೆ ಅವರ ಕೊಡುಗೆ ಅಮೂಲ್ಯವಾದುದು.

ಆಚಾರ್ಯರು ಕರ್ಣಾಟಕ ಮಾತೆಯ ಆರಾಧಕರಲ್ಲಿ ಅಗ್ರೇಸರರು. ಕನ್ನಡಕ್ಕೆ ಜನತೆಯಿಂದ ಮಾನ್ಯತೆಯೇ ಇಲ್ಲದ ಕಾಲದಲ್ಲಿ ನಾಡನುಡಿಯ ಸೇವೆಯಲ್ಲಿ ಬದ್ಧಕಂಕಣರಾಗಿ ಜೀವಮಾನವನ್ನೆಲ್ಲಾ ಆ ಕಾರ್ಯಕ್ಕಾಗಿ ಮುಡಿಪಾಗಿಟ್ಟು ಕನ್ನಡ ಸಾಹಿತ್ಯದ ವಿಸ್ತಾರವನ್ನೂ ವೈಪುಲ್ಯವನ್ನೂ ಮೊತ್ತಮೊದಲು ಪ್ರಚಾರಮಾಡಿದ ಮಹಾನುಭಾವರವರು. ಕನ್ನಡದಲ್ಲಿ ವಿದ್ವತ್ತೆಂದರೇನು ಎಂಬುದನ್ನು ಪ್ರಪ್ರಥಮವಾಗಿ ತೋರಿಸಿಕೊಟ್ಟವರವರು. ಸಂಶೋಧನೆ ಎಂಬುದು ಪಾಶ್ಚಾತ್ಯ ವಿದ್ವಾಂಸರ ಪ್ರತ್ಯೇಕ ಸ್ವತ್ತು ಎಂದಿದ್ದ ತಪ್ಪು ಭಾವನೆಯನ್ನು.ಅವರು ಸುಳ್ಳಾಗಿಸಿದರು. ಕನ್ನಡದ ವಿವಿಧ ಕ್ಷೇತ್ರಗಳಲ್ಲಿ ಅವರು ಕೆಲಸ ಮಾಡಿದ್ದಾರೆ. ಅವರು ಸಾಹಿತಿಗಳು,

ಭಾಷಾಂತರಕಾರರು, ಶಾಸನತಜ್ಞರು, ನಾಣ್ಯ ಶಾಸ್ತ್ರಪ್ರವೀಣರು, ಕಲಾಭಿಜ್ಞರು, ಸ್ವಯಂ ಗ್ರಂಥಕರ್ತರು. ಎಲ್ಲವಕ್ಕಿಂತ ಹೆಚ್ಚಾಗಿ ಉಚ್ಚ ಸಂಶೋಧಕರು ಮತ್ತು ಗ್ರಂಥಸಂಪಾದಕರು.

ಅವರು ಕ್ರಿ. ಶ. ೧೮೬೦ರಲ್ಲಿ ಜನಿಸಿ ೧೯೩೬ರಲ್ಲಿ ಪರಂಧಾಮವನ್ನೈದಿದರು. ೧೮೯೪ ರಲ್ಲಿ ಭಾಷಾಂತರಕಾರರಾಗಿ ಅವರು ಪ್ರಾರಂಭಿಸಿದ ಸಾಹಿತ್ಯಸೇವೆ ಅವರ ಜೀವಮಾನ ಪರ್ಯಂತ ಅವಿಚ್ಛಿನ್ನವಾಗಿ ಸಾಗಿತು. ಅವರ ಸಂಶೋಧನಾ ಕಾರ್ಯ ಪ್ರಾರಂಭವಾದುದು ೧೮೯೫ರಲ್ಲಿ. ಅವರ ಮೇಲಧಿಕಾರಿಗಳಾಗಿದ್ದ ಲೂಯಿ ರೈಸರವರು ಕೈಗೊಂಡಿದ್ದ 'ಪಂಪ ಭಾರತ'ದ ಪರಿಷ್ಕರಣ ಕಾರ್ಯದಲ್ಲಿ, ಆ ಸಂಬಂಧವಾದ ಪಾಠ ಸಂಸ್ಕರಣ, ಮತ್ತು ಕರಡು ತಿದ್ದುವಿಕೆಯ ಬಹುಭಾಗ ಅವರಿಂದಲೇ ನಡೆಯಿತು.

ಅವರ ನಿಜವಾದ ಗ್ರಂಥಸಂಪಾದನ ಶಕ್ತಿ ಬೆಳಕಿಗೆ ಬಂದುದು ಅವರು ೧೯೦೩ರಲ್ಲಿ ೨ನೆಯ ನಾಗವರ್ಮನ 'ಕಾವ್ಯಾವಲೋಕನ' ಮತ್ತು 'ಕರ್ಣಾಟಕ ಭಾಷಾಭೂಷಣ' ಎಂಬ ಗ್ರಂಥಗಳನ್ನು ಪ್ರಕಟಿಸಿದಾಗ. ಈ ಎರಡು ಗ್ರಂಥಗಳೂ ಕನ್ನಡದ ಉದ್ದಾಮ ಲಕ್ಷಣ ಗ್ರಂಥಗಳು. ಇಲ್ಲಿಯ ಸಂಪಾದನಾಕಾರ್ಯ ಬಹು ಉತ್ತಮ ಮಟ್ಟದ್ದಾಗಿದೆ. ಮೇಲೆ ತಿಳಿಸಿರುವ ಆಧುನಿಕ ಕಾಲದ ಗ್ರಂಥಸಂಪಾದನಾ ತಂತ್ರಗಳೆಲ್ಲ ಇಲ್ಲಿ ಬಹು ಶಾಸ್ತ್ರೀಯವಾಗಿ ಉಪಯುಕ್ತವಾಗಿವೆ. ಇವುಗಳ ಸಂಪಾದನಾಕಾರ್ಯದಲ್ಲಿ ಸಂಪಾದಕರು ಉಪಲಬ್ಧವಾದ ಎಲ್ಲ ಪ್ರತಿಗಳನ್ನೂ ಉಪಯೋಗಿಸಿಕೊಂಡಿದ್ದಾರೆ. ಅವುಗಳ ಸ್ವರೂಪವನ್ನೂ ವೈಶಿಷ್ಟ್ಯವನ್ನೂ ತಿಳಿಸಿದ್ದಾರೆ. ಪುಟದಡಿಯಲ್ಲಿ ಅವುಗಳ ಪಾಠಾಂತರಗಳನ್ನೆಲ್ಲ ಸೂಚಿಸಿದ್ದಾರೆ. (ಪ್ರತಿಗಳ ಸಂಕೇತವನ್ನು ಪಾಠಾಂತರಗಳ ಪಕ್ಕದಲ್ಲಿ ಕೊಟ್ಟಿಲ್ಲದಿರುವುದರಿಂದ ಪಾಠಗಳು ಯಾವ ಪ್ರತಿಗಳವೆಂದು ತಿಳಿಯುವುದು ಕಷ್ಟವಾಗಿದೆ.) ಪ್ರಾರಂಭದಲ್ಲಿ ೫೪ ಪುಟಗಳ ದೀರ್ಘವಾದ (ಇಂಗ್ಲಿಷ್ ಭಾಷೆಯ) ಉಪೋದ್ಘಾತವಿದೆ. ಇದರಲ್ಲಿ ಸಂಪಾದಕರು ಗ್ರಂಥಕರ್ತನ ಜೀವನ ಚರಿತ್ರೆ, ಕಾಲ, ದೇಶ, ಮತ, ಅದೇ ಹೆಸರಿನ ಇತರ ಗ್ರಂಥಕಾರರು, ಅವರ ಗ್ರಂಥಗಳು, ಪ್ರಸಕ್ತ ಗ್ರಂಥಕಾರನ ಗ್ರಂಥಗಳು, ಅವುಗಳ ಪ್ರತ್ಯೇಕ ಪರಿಚಯ, ಅವುಗಳೊಂದೊಂದಕ್ಕೂ ಆಕರವಾಗಿರಬಹುದಾದ ಸಂಸ್ಕೃತ ಮೂಲಗ್ರಂಥಗಳು, ಅವುಗಳ ಕರ್ತೃ, ಅವರ ಕಾಲ, ಮತ ಮೊದಲಾದ ವಿವರಗಳು, ಅವರಿಂದ ಪ್ರಸಕ್ತ ಗ್ರಂಥಕಾರನು ಉಪಯೋಗಿಸಿಕೊಂಡಿರುವ ಭಾಗ, ಅವರ ತತ್ವಗಳು, ಅವನ್ನು ಪ್ರಸಕ್ತ ಗ್ರಂಥಕಾರನು ಉಪಯೋಗಿಸಿಕೊಂಡಿರುವ ರೀತಿ, ಸಂವಾದಿ ಸೂತ್ರಗಳು, ಲಕ್ಷ್ಯೋದಾಹರಣೆಗಳ ಆಕರ, ಛಾಯಾರೂಪವಾಗಿರುವ ಭಾಗ, ಅವುಗಳ ಆಕರ, ಗ್ರಂಥಕರ್ತನ ಸ್ವಂತ ರಚನಾ ಭಾಗ, ಕನ್ನಡ ಲಕ್ಷಣ ಗ್ರಂಥಗಳು ಮುಂದೆ ಬಂದ ಲಾಕ್ಷಣಿಕರು ಮತ್ತು ವೈಯಾಕರಣಿಗಳು, ಅವರ ಮೇಲೆ ಗ್ರಂಥಕರ್ತನ ಪ್ರಭಾವ, ಆಕರ ಸಿಕ್ಕದಿರುವ ಭಾಗಗಳ ಮೂಲದ ಸೂಚನೆ, ಕನ್ನಡ ಸಾಹಿತ್ಯದಲ್ಲಿ ಪ್ರಸಕ್ತ ಗ್ರಂಥ ಮತ್ತು ಗ್ರಂಥಕಾರನ ಸ್ಥಾನ ಮೊದಲಾದವುಗಳನ್ನು ಸೂಕ್ತ ಆಧಾರಗಳಿಂದ ವಿವರಿಸಿದ್ದಾರೆ. ಗ್ರಂಥಾಂತ್ಯದಲ್ಲಿ ಕೊಟ್ಟಿರುವ ಲ

ಪರಿಶಿಷ್ಟಗಳು ಗ್ರಂಥಸಂಪಾದನಾ ದೃಷ್ಟಿಯಿಂದ ಬಹು ಉಪಯುಕ್ತವಾಗಿವೆ. ಈ ಸಂಪಾದಿತ ಕೃತಿಗಳನ್ನು ಕುರಿತು ರೈಸ್‌ರವರು ಇದುವರೆಗೆ ಸಂಪಾದಿತವಾಗಿರುವ ಕನ್ನಡ ಗ್ರಂಥಗಳಲ್ಲಿ ಇದರ ಮಟ್ಟಕ್ಕೆ ಯಾವುದೂ ಬರಲಾರದೆಂದು ಕೊಂಡಾಡಿದ್ದಾರೆ.

ಆಚಾರ್ಯರು ೧೯೦೬ರಿಂದ ೧೯೨೨ರ ವರೆಗೆ ಪ್ರಾಚ್ಯ ಸಂಶೋಧನಾಲಯದ ಮುಖ್ಯಾಧಿಕಾರಿಗಳಾಗಿದ್ದರು. ಆ ಕಾಲದಲ್ಲಿ ಆವರ ನೇತೃತ್ವದಲ್ಲಿ ವಿವಿಧ ಭಾಷೆಯ ೫೦೦೦ ಹೊಸ ಶಾಸನಗಳು ಸಂಪಾದಿತವಾದುವು, ೪೦೦೦ ನಾಣ್ಯಗಳು ಸಂಶೋಧಿತವಾದುವು, ೧೦೦ ಕನ್ನಡ–ಸಂಸ್ಕೃತ ಗ್ರಂಥಗಳು ಪ್ರತಿಮಾಡಲ್ಪಟ್ಟವು. ಇವುಗಳೊಂದೊಂದರಲ್ಲಿಯೂ ಅವರ ಸಂಶೋಧನಾ ಶಕ್ತಿಯು ಪ್ರದರ್ಶಿತವಾಗಿದೆ. ಅವರು ಅಧಿಕಾರಾವಧಿಯಲ್ಲಿ ಸಾವಿರಾರು ಕನ್ನಡ, ಸಂಸ್ಕೃತ ಗ್ರಂಥಗಳನ್ನು ಅವಲೋಕಿಸಿದ್ದಾರೆ. ಅವುಗಳಲ್ಲಿ ಐತಿಹಾಸಿಕ ದೃಷ್ಟಿಯಿಂದ ಸಂಸ್ಕೃತದ ಭಾಸನ 'ಸ್ವಪ್ನವಾಸವದತ್ತ' ಮತ್ತು 'ಯೌಗಂಧರಾಯಣ', ಕನ್ನಡದ 'ಲೋಕವಿಭಾಗ' ಮತ್ತು 'ಕಲ್ಯಾಣಕಾರಕ' ವಿಶೇಷ ಗಮನಾರ್ಹವಾದುವು.

ಕನ್ನಡ ಗ್ರಂಥಸಂಪಾದನಾ ದೃಷ್ಟಿಯಿಂದ ಅವರ 'ಕರ್ಣಾಟಕ ಕವಿಚರಿತೆ'ಯ ಮೂರು ಸಂಪುಟಗಳು ಬಹು ಚಿರಸ್ಮರಣೀಯವಾದುವು. ಇವು ಅವರ ಅಖಂಡ ಜೀವನದ ದುಡಿಮೆಯ ಫಲವೆಂದು ಹೇಳಬಹುದು. ಇವುಗಳಲ್ಲಿ ಅವರು ೧೧೧೮ ಕವಿಗಳ ಮತ್ತು ಸುಮಾರು ೫೦೦೦ ಗ್ರಂಥಗಳ ವಿಷಯವಾಗಿ ವಿಮರ್ಶೆ ಮಾಡಿದ್ದಾರೆ. ಸಾಹಿತ್ಯ ಪ್ರಪಂಚದಲ್ಲಿ ಇಷ್ಟು ಗ್ರಂಥಗಳನ್ನು ಅವಲೋಕಿಸಿರುವವರಿಲ್ಲವೆಂದೇ ಹೇಳಬಹುದು. ತಮ್ಮ ಗ್ರಂಥದಲ್ಲಿ ಅನುಸರಿಸಿರುವ ಸಂಪಾದನಾ ತಂತ್ರವನ್ನು ತಾವೇ ಸ್ಪಷ್ಟಪಡಿಸಿದ್ದಾರೆ. ಅದು ಈ ಕ್ರಮದಲ್ಲಿದೆ: ಮೊದಲು ಕವಿಯ ಹೆಸರು, ಅದರ ಪಕ್ಕದಲ್ಲಿ ವರ್ಷಸಂಖ್ಯೆ (ಸೂಚಿತವಾದ ವರ್ಷಗಳೆಲ್ಲ ಕ್ರಿಸ್ತಶಕಕ್ಕೆ ಅನ್ವಯಿಸುತ್ತವೆ), ಕೆಲವು ಕಡೆ ಈ ಸಂಖ್ಯೆಯ ಹಿಂದೆ ಸುಮಾರು ಎಂಬರ್ಥವನ್ನು ಸೂಚಿಸುವ 'ಸು.' ಎಂಬಕ್ಷರವಿದೆ. ತರುವಾಯ ಕವಿಯ ದೇಶ, ವಂಶ, ಮತ, ಗುರು, ಪೋಷಕ, ಬಿರುದು ಮೊದಲಾದ ಜೀವನದ ವೃತ್ತಾಂತ ವಿಷಯಗಳು ಹೇಳಿವೆ. ಅನಂತರ ವಿಚಾರಪೂರ್ವಕವಾಗಿ ಕಾಲವಿಮರ್ಶೆ ಮಾಡಿದೆ. ಕವಿಯು ಸ್ತುತಿಸಿರುವ ಪುರಾಣ ಕವಿಗಳು, ಕವಿಯನ್ನು ಸ್ತುತಿಸಿರುವ ಇತರ ಕವಿಗಳು, ಕವಿಯ ಕವಿತಾದ್ಯೋತಕವಾದ ಕೆಲವು ಪದ್ಯಗಳ ಉದ್ಧರಣ, ಕವಿಕೃತವಾದ ಒಂದೊಂದು ಕೃತಿಯ ಸ್ವರೂಪ, ಪ್ರತಿಪಾದ್ಯ ವಿಷಯ, ಕಥಾಗರ್ಭ, ಆಶ್ವಾಸಸಂಖ್ಯೆ, ಇಷ್ಟದೇವತಾಸ್ತುತಿ, ಗುರುಪರಂಪರೆ, ಆಶ್ವಾಸಾಂತ್ಯ ಗದ್ಯ, ಗ್ರಂಥದ ಬಂಧ, ಗ್ರಂಥ ರಚನೆಗೆ ಕಾರಣ, ಲಿಪಿಕಾರನ ಹೆಸರು, ಪ್ರತಿಮಾಡಿದ ಕಾಲ, ಯಾರಿಗೋಸ್ಕರ, ಮೊದಲಾದ ವಿಷಯಗಳು ಸ್ಪಷ್ಟವಾಗಿ ನಿರೂಪಿತವಾಗಿವೆ. ಇವುಗಳಲ್ಲಿ ಉಪಲಬ್ಧವಿಲ್ಲದ ವಿಷಯಗಳನ್ನು ಬಿಟ್ಟಿರುವುದು ಅನಿವಾರ್ಯದ ವಿಷಯ.

ಇವುಗಳ ಜೊತೆಗೆ ಪ್ರತಿಯೊಂದು ಸಂಪುಟದ ಉಪೋದ್ಘಾತದಲ್ಲಿ ಉಕ್ತವಾಗಿರುವ ವಿಷಯಗಳು ಬಹು ಉಪಯುಕ್ತವಾಗಿವೆ ಮೊದಲನೆಯ ಸಂಪುಟವ ಅವತರಣಿಕೆಯಲ್ಲಿ ಪಂಚದ್ರಾವಿಡ, ದ್ರಾವಿಡ ಭಾಷೆಗಳ ಪ್ರಾಚೀನತೆ, ಅವು ಪ್ರಚಾರದಲ್ಲಿರುವ ದೇಶಗಳು, ಇತರ ದ್ರಾವಿಡ ಭಾಷೆಗಳು, ದ್ರಾವಿಡರ ನಾಗರಿಕತೆ, ದ್ರಾವಿಡ ಮತ್ತು ಗೌಡ ಭಾಷಾವರ್ಗಗಳ ಪರಸ್ಪರ ಸಂಬಂಧ, ಗ್ರಾಂಥಿಕ ದ್ರಾವಿಡ ಭಾಷೆ, ಕನ್ನಡ ಭಾಷೆ, ಕರ್ಣಾಟಕ ಶಬ್ದದ ವ್ಯುತ್ಪತ್ತಿ, ಆ ಶಬ್ದದ ಪೂರ್ವಪ್ರಯೋಗಗಳು, ಅವರ ವಿಪರೀತಾರ್ಥ, ಕನ್ನಡ ನಾಡಿನ ಪ್ರಾಚೀನತೆ, ಕನ್ನಡ ಭಾಷೆಯ ಪ್ರಾಚೀನತೆ, ಕನ್ನಡ ವರ್ಣಮಾಲೆ, ಕನ್ನಡ ಶಬ್ದಗಳು, ಕನ್ನಡ ಭಾಷೆಯ ಅವಸ್ಥಾಭೇದಗಳು, ಕನ್ನಡ ಸಾಹಿತ್ಯದ ಪ್ರಾಚೀನತೆ, ಕನ್ನಡ ಕವಿಗಳು, ಕನ್ನಡ ಗ್ರಂಥಗಳು, ಕನ್ನಡ ಭಾಷೆಗೆ ಪ್ರೋತ್ಸಾಹ ಮೊದಲಾದ ವಿಷಯಗಳನ್ನೂ ಎರಡನೆಯ ಸಂಪುಟದಲ್ಲಿ ಇಲ್ಲಿಯ ಕೆಲವು ಭಾಗಗಳ ವಿವರಗಳೂ ಜೊತೆಗೆ ಕನ್ನಡ ಸಾಹಿತ್ಯಕ್ಕೆ ರಾಜರ ಪ್ರೋತ್ಸಾಹ, ದಕ್ಷಿಣೋತ್ತರ ಮಾರ್ಗಗಳು ಮೊದಲಾದುವನ್ನೂ ಮೂರನೆಯ ಸಂಪುಟದಲ್ಲಿ ಒಂದೆರಡನೆಯ ಸಂಪುಟದಲ್ಲಿ ಸೂಚಿತವಾಗಿರುವ ಕವಿಗಳ ವಿಷಯವಾಗಿ ಬಂದಿರುವ ಆಕ್ಷೇಪಣೆಗಳಿಗೆಲ್ಲ ಸೂಕ್ತ ಉತ್ತರಗಳನ್ನೂ ಕೊಟ್ಟಿದ್ದಾರೆ.

ಇವರ 'ಶಾಸನಪದ್ಯಮಂಜರಿ' ಕಾಲಾನುಗುಣವಾಗಿ ಸಂಕಲಿತವಾಗಿರುವ ಪದ್ಯ ಸಂಗ್ರಹ. ಇಲ್ಲಿರುವ ಗ್ರಂಥಪಾಠ ಬಹುಮಟ್ಟಿಗೆ ಶುದ್ಧವಾಗಿದೆ. ಒಂದೊಂದು ಸಂಗ್ರಹದ ಕಡೆಯಲ್ಲಿಯೂ ಸೂಕ್ತ ಟಿಪ್ಪಣಿಗಳಿರುವುದರಿಂದ ಬಹು ಉಪಯುಕ್ತವಾಗಿದೆ.

ಇವುಗಳೆಲ್ಲ ಗ್ರಂಥಸಂಪಾದನಾ ದೃಷ್ಟಿಯಿಂದ ಎಷ್ಟು ಕ್ರಮಬದ್ಧವಾಗಿವೆಯೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅವರು ಉತ್ತಮ ಸಂಪಾದಕರಾಗಿದ್ದುದಕ್ಕೆ ಅವರಲ್ಲಿದ್ದ ಪ್ರಧಾನ ಗುಣಗಳು ಅವರ ವಿದ್ವತ್ತು ತಾಳ್ಮೆ ಮತ್ತು ನಿಷ್ಪಕ್ಷಪಾತವಾದ ಮನೋಭಾವ. ಅವರು ಕನ್ನಡ, ಸಂಸ್ಕೃತ, ತೆಲುಗು ಮತ್ತು ಇಂಗ್ಲಿಷು ಭಾಷೆಗಳಲ್ಲಿ ಪ್ರವೀಣರು. ಅವರ ದುಡಿಮೆ ಅನನುಕರಣೀಯ. ಅವರ ವಿಮರ್ಶೆಯಲ್ಲಿ ಪೂರ್ವಗ್ರಹವಿಲ್ಲ. ಯಾವ ಶಾಸ್ತ್ರದ ವಿಷಯದಲ್ಲಿಯೂ ಕೊನೆಯ ಮಾತಿಲ್ಲ. ಹೊಸ ಹೊಸ ಸಾಧನ ಸಾಮಗ್ರಿಗಳು ಸಿಕ್ಕಿದಂತೆಲ್ಲ ಅವು ಬದಲಾಯಿಸತಕ್ಕವೇ ಎಂಬುದು ಅವರಿಗೆ ಗೊತ್ತು. ಯಾರ ಮನಸ್ಸನ್ನು ನೋಯಿಸುವ ಮನೋಭಾವವೂ ಅವರಿಗಿಲ್ಲ. ಆದರೂ ಸತ್ಯವನ್ನು ಘಂಟಾಘೋಷವಾಗಿ ಘೋಷಿಸುವುದರಲ್ಲಿ ಹಿಂಜರಿಯುವುದಿಲ್ಲ. ಹಾಗೇಯೇ ತಿಳಿಯದುದನ್ನು ತಿಳಿಯಿತೆಂದು ಒಪ್ಪಿಕೊಳ್ಳುವುದಕ್ಕಾಗಲಿ, ತಪ್ಪಾದುದನ್ನು ತಿದ್ದಿಕೊಳ್ಳುವುದಕ್ಕಾಗಲಿ ಸರ್ವದಾ ಸಿದ್ಧವಾದವರು. ಪೂರ್ಣವಾದ ಆಧಾರವು ಸಿಕ್ಕುವವರೆಗೆ ಯಾವ ಸಿದ್ಧಾಂತವನ್ನೂ ಅಂಗೀಕಾರ ಮಾಡುವವರಲ್ಲ. ಅವರು 'ಸಾಹಿತ್ಯ ಸಾಮ್ರಾಜ್ಯದಲ್ಲಿ ಮತ ಧರ್ಮ, ಸಿರಿ, ಬಡತನ ಮುಂತಾದ ಭಾವನೆಗಳಿಗೆ ಎಡೆಯುಲ್ಲ'ವೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಅವರ ಉತ್ಸಾಹ, ಸೌಜನ್ಯ, ಕಾರ್ಯನಿಷ್ಠೆ

ಮೊದಲಾದುವು ಅವರು ಸಂಪಾದಿಸಿರುವ ಗ್ರಂಥಗಳಲ್ಲಿ ಖಚಿತವಾಗಿ ಪ್ರದರ್ಶಿತವಾಗಿವೆ. ಆದುದರಿಂದಲೇ ಅವರ ಸಮಕಾಲೀನರಾದ ಪೌರಸ್ತ್ಯ ಪಾಶ್ಚಾತ್ಯ ವಿದ್ವಾಂಸರುಗಳೂ ಪತ್ರಿಕೆಗಳವರೂ ಅವರ ಪಾಂಡಿತ್ಯವನ್ನೂ ಅವರಿಂದ ಸಂಪಾದಿತವಾದ ಕೃತಿಗಳ ಮೇಲ್ಮೆಯನ್ನೂ ಮುಕ್ತಕಂಠದಿಂದ ಹೊಗಳಿದ್ದಾರೆ. ಯಾವ ಪೂರ್ವ ಆದರ್ಶ ಅಥವಾ ಮಾದರಿಗಳಿಲ್ಲದಿದ್ದರೂ ತಮ್ಮದೇ ಆದ ತಂತ್ರವನ್ನು ರೂಪಿಸಿಕೊಂಡು ಅದನ್ನು ಬಹು ಶಾಸ್ತ್ರೀಯ ರೀತಿಯಲ್ಲಿ ಅನುಷ್ಠಾನಕ್ಕೆ ತಂದು ಆದರ್ಶ ಸಂಪಾದಕರಾಗಿದ್ದಾರೆ. ನಾಗವರ್ಮನು ಕವಿಗಳಿಗೆ ಆವಶ್ಯಕವೆಂದು ಸೂಚಿಸಿರುವ 'ಪ್ರತಿಭಾನಂ ಕಾವ್ಯವಿದ್ಯಾಪ್ರಚಯ ಪರಿಚಯಂ, ವೃದ್ಧಸೇವಾನುರಾಗಂ, ಸತತಾಭ್ಯಾಸ ಪ್ರಯತ್ನಂ'—ಇವು ನಾಲ್ಕು ಗುಣಗಳು ಗ್ರಂಥಸಂಪಾದಕನಿಗೂ ಆವಶ್ಯಕವೆಂಬುದನ್ನು ತಮ್ಮ ಅನುಷ್ಠಾನದಿಂದ ಪ್ರಚುರಪಡಿಸಿ ಗ್ರಂಥಸಂಪಾದನಾ ಪ್ರಪಂಚಕ್ಕೆ ಅಮೋಘ ಸೇವೆಯನ್ನು ಸಲ್ಲಿಸಿದ್ದಾರೆ. 'ಪ್ರಾಕ್ತನ ವಿಮರ್ಶ ವಿಚಕ್ಷಣ' ಎಂಬ ಅವರ ಪ್ರಶಸ್ತಿ ಅಕ್ಷರಶಃ ಸತ್ಯವಾಗಿದೆ.

—o—



ವೀರಗಲ್ಲಿನ ಒಂದು ದೃಶ್ಯ



# ಗ್ರಂಥಸಂಪಾದನೆಗೆ ಎಂ. ಎ. ರಾಮಾನುಜ ಅಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ ಅವರ ಕೊಡುಗೆ

ಎಂ..ಎ. ಸಿಂಗಮ್ಮ

ಬೆಟ್ಟದ ಮೇಲೊಂದು ದೇಗುಲ, ಗತವೈಭವದ ಚಿಹ್ನೆಗಳಿಂದ ಕೂಡಿದೆ. ಸುತ್ತಲೂ ಮುಳ್ಳುಪೊದೆಗಳು ತುಂಬಿ ಯಾರೂ ಹತ್ತಿರ ಸುಳಿಯದಂತಾಗಿದೆ. ಅಂತಹ ದೇಗುಲಕ್ಕೆ ಮೂವರು ಭಕ್ತಶಿಖಾಮಣಿಗಳು ಬಂದು ದುರ್ಗಮ ಮಾರ್ಗವನ್ನು ಸುಗಮ ಮಾಡಿ ಆ ದೇಗುಲದ ಸೊಬಗನ್ನೂ ದೇಗುಲದೊಡತಿಯಾದ ಕರ್ನಾಟಕ ಮಾತೆಯ ದರ್ಶನವನ್ನೂ ತಾವೂ ಮಾಡಿ ಇತರರಿಗೂ ಮಾಡಿಸಿದರು. ಅವರೇ ಎಂ. ಎ. ರಾಮಾನುಜ ಅಯ್ಯಂಗಾರ್, ಎಸ್. ಜಿ. ನರಸಿಂಹಾಚಾರ್ ಮತ್ತು ಆರ್. ನರಸಿಂಹಾಚಾರ್. ಕನ್ನಡವೆಂದರೆ ಮೂಗುಮುರಿಯುತ್ತಿದ್ದ ಪರಭಾಷಾ ವ್ಯಾಮೋಹಿಗಳಾದ ಕನ್ನಡಿಗರಿಗೆ ಕನ್ನಡದ ಅಪಾರ ಸಾರಸ್ವತ ಸಂಪತ್ತನ್ನು ತೋರಿಸಿ ಅವರ ಕಣ್ಣು ತೆರೆಯುವಂತೆ ಮಾಡಿದವರು ಎಂ. ಎ. ರಾಮಾನುಜ ಅಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್. ಕನ್ನಡಕ್ಕೆ ಕೊಂಚವೂ ಪ್ರೋತ್ಸಾಹ ವಿಲ್ಲದಿದ್ದ ಕಾಲದಲ್ಲಿ ಕನ್ನಡ ಗ್ರಂಥಗಳ—ಅದರಲ್ಲೂ ಹಳಗನ್ನಡ ಗ್ರಂಥಗಳ—ಪ್ರಕಟನಕಾರ್ಯವನ್ನು ಕೈಗೊಂಡ ಎಂಟೆರ್ದೆಯ ಧೀರರು ಇವರು.

ಮೈಸೂರಿನ ಸದ್ವಿದ್ಯಾಮಂದಿರದಲ್ಲಿ ಸಂಸ್ಕೃತದ ವಿಖ್ಯಾತ ವಿದ್ವಾಂಸರಾದ ಆಸೂರಿ ಅನಂದಾಳ್ವಾರರು ಮತ್ತು ಪಂಡಿತ ಕೊಮಾರಸ್ವಾಮಿ ತಿರುಮಲಾಚಾರ್ಯರು ಸಂಸ್ಕೃತದ ಧಾರ್ಮಿಕ, ಸಾಹಿತ್ಯಿಕ ಗ್ರಂಥಗಳನ್ನು ಕನ್ನಡ ಅರ್ಥಾನುವಾದ, ವಿವರಣೆ, ವ್ಯಾಖ್ಯಾನಗಳೊಡನೆ 'ಆರ್ಯಮತ ಸಂಜೀವಿನಿ' ಎಂಬ ಮಾಸಪತ್ರಿಕೆಯ ಮುಖಾಂತರ ಭಾಗಶಃ ಮುದ್ರಿಸಿ ಪ್ರಕಟಿಸುತ್ತಿದ್ದರು. ಇವರ ಸಮೀಪ ಸಂಬಂಧಿಗಳಾದ ರಾಮಾನುಜ ಅಯ್ಯಂಗಾರ್‌ರವರು ಆ ಮುದ್ರಣಶಾಲೆಯಲ್ಲಿ ಮುದ್ರಣಕಲೆಯ ಪೂರ್ಣಪರಿಚಯ ಮಾಡಿಕೊಂಡದ್ದಲ್ಲದೆ ಓಲೆಗರಿ ಗ್ರಂಥಗಳ ವ್ಯಾಸಂಗದಿಂದ ಹಿಡಿದು ಗ್ರಂಥಪ್ರಕಟನೆಯವರೆಗೆ ಎಲ್ಲ ವಿಷಯಗಳನ್ನೂ ಅರಿತರು. ಇದರಿಂದ ಕನ್ನಡ ಗ್ರಂಥಸಂಪಾದನೆಯ ಕಡೆ ಅವರ ಗಮನ ಹೋಯಿತು. ಕೆಲಕಾಲದಲ್ಲಿ ತಾವೇ 'ಆರ್ಯಮತ ಸಂಜೀವಿನಿ'ಯ ಸಂಪಾದಕರಾಗಿ ಅದರ ಮೂಲಕ ಕೆಲವು ಪುರಾತನ ಮತ್ತು ಅದ್ಯತನ ಕನ್ನಡ ಗ್ರಂಥಗಳನ್ನು ಭಾಗಶಃ ಪ್ರಕಟಿಸುತ್ತಾ ಬಂದರು. ಈ

ಕಾರ್ಯದಲ್ಲಿ ಅವರ ಆಪ್ತಬಂಧು ಎಸ್. ಜಿ. ನರಸಿಂಹಾಚಾರ್ಯರು ನೆರವಾದರು. ಕಾರಣಾಂತರದಿಂದ 'ಆರ್ಯಮತ ಸಂಜೀವಿನಿ' ಕೆಲವೇ ವರ್ಷಗಳಲ್ಲಿ ನಿಂತುಹೋಯಿತು.

ರಾಮಾನುಜ ಅಯ್ಯಂಗಾರ್ಯರ ಕನ್ನಡಾಭಿಮಾನ ಅವರನ್ನು ಸುಮ್ಮನಿರಗೊಡಲಿಲ್ಲ. ಅಮೂಲ್ಯವಾದ ಪುರಾತನ ಹಳಗನ್ನಡ ಗ್ರಂಥಗಳ ಕಡೆ ಅವರ ದೃಷ್ಟಿ ತಿರುಗಿತು. ನರಸಿಂಹಾಚಾರ್ಯರೊಡನೆ ಓಲೆಗರಿ ಪ್ರತಿಗಳ ಸಂಗ್ರಹಕ್ಕಾಗಿ ಮೂರು ವರ್ಷಗಳ ಕಾಲ ಕನ್ನಡ ನಾಡಿನ ಮೂಲೆಮೂಲೆಗಳಲ್ಲೆಲ್ಲಾ ಸಂಚರಿಸಿದರು. ಈ ಕಾರ್ಯ ಸುಲಭವಲ್ಲ. ಮನೆಯ ಆಸ್ತಿ ಎಂದು, ಮನೆಯ ಸರಸ್ವತಿ ಎಂದು ಎಲ್ಲರೂ ಪೂಜೆಗೆ ಇಡುತ್ತಿದ್ದರೇ ಹೊರತು ಯಾರೂ ಕೊಡುತ್ತಿರಲಿಲ್ಲ. ಅವರನ್ನು ಕಾಡಿ ಬೇಡಿ ನಾನಾ ಪರಿಯಲ್ಲಿ ಮನವೊಲಿಸಿ, ಕೇಳಿದಷ್ಟು ಹಣಕೊಟ್ಟು, ದೇಹಶ್ರಮವನ್ನು ಲಕ್ಷ್ಯ ಮಾಡದೆ, ಧನವ್ಯಯಕ್ಕೆ ಹಿಂತೆಗೆಯದೆ ಪ್ರಾಚೀನ ಗ್ರಂಥಗಳ ಭಂಡಾರವೊಂದನ್ನು ಕೊನೆಗೂ ಸಿದ್ಧಪಡಿಸಿಕೊಂಡರು. ಮುಟ್ಟಿದರೆ ಮುರಿಯುವ ಹಳೆಯ ತಾಳೆಯೋಲೆಗಳನ್ನು ನಾಜೂಕಾಗಿ ಬಿಡಿಸಿ ಸೊಪ್ಪಿನ ರಸ ಅಥವಾ ಇಜ್ಜಲು ಪುಡಿ ಸವರಿ ಮೋಡಿ ಅಕ್ಷರಗಳನ್ನು ಬಿಡಿಸಿ ಓದುವುದು, ಒಂದೇ ವಾಕ್ಯವೆಂಬಂತೆ ಬರೆದಿರುವ ಇಡೀ ಗ್ರಂಥದಲ್ಲಿ ಪದ್ಯಗಳನ್ನು ಮತ್ತು ಅವುಗಳ ಪಾದಗಳನ್ನು ಬಿಡಿಸುವುದು, ಅಗಣಿತ ಅಕ್ಷರಲೋಪ, ಅಕ್ಷರಸೇರ್ಪಡೆಗಳನ್ನು ತಿದ್ದಿಕೊಳ್ಳುವುದು ಬಲು ಕಷ್ಟ. ಒಂದು ತಾಳೆಯೋಲೆಯ ವಾಚನಕ್ಕೆ ಅರ್ಧದಿನವಾದರೂ ಸಾಲದು. ಈ ಶ್ರಮಕಾರ್ಯಕ್ಕೆ ಪಾಂಡಿತ್ಯದ ಜೊತೆಗೆ ಅಸಾಮಾನ್ಯ ಉತ್ಸಾಹ, ತಾಳ್ಮೆ, ಸಹನೆ ಇರಬೇಕು. ಅಚ್ಚಿಗೆ ಮೂಲಪ್ರತಿ ಸಿದ್ಧಗೊಳಿಸುವುದು ಹೊಸ ಗ್ರಂಥರಚನೆಗಿಂತ ಹೆಚ್ಚಿನ ಶ್ರಮ. ಇಂತಹ ಪ್ರತಿಸಂಪಾದನ, ಪರಿಷ್ಕರಣ, ಪ್ರಕಟನದ ಕಡುಕಷ್ಟಕಾರ್ಯಕ್ಕೆ ಕೈಹಾಕಿದ ರಾಮಾನುಜ ಅಯ್ಯಂಗಾರ್ಯರು, ನರಸಿಂಹಚಾರ್ಯರೊಡನೆ ೧೮೯೨ರಲ್ಲಿ 'ಕರ್ಣಾಟಕ ಕಾವ್ಯಮಂಜರಿ' ಎಂಬ ಮಾಸಪತ್ರಿಕೆಯನ್ನು ಆರಂಭಿಸಿ ಅದರಲ್ಲಿ ಪ್ರಾಚೀನ ಗ್ರಂಥಗಳನ್ನು ಭಾಗಶಃ ಪ್ರಕಟಿಸುತ್ತಾ ಬಂದರು. ಕನ್ನಡ ಪ್ರಪಂಚದಲ್ಲಿ ಏಕಮೇವಾ-ದ್ವಿತೀಯವಾದ ಈ ಪತ್ರಿಕೆ ಉನ್ನತ ಧ್ಯೇಯ, ಸಾಹಿತ್ಯ ಪ್ರೌಢಿಮೆಗಳಿಂದೊಡಗೂಡಿ ನಿಯತಕಾಲಕ್ಕೆ ಹೊರಬೀಳುತ್ತಾ ಸುಮಾರು ೫-೬ ವರ್ಷಗಳ ಕಾಲ ನಡೆದು ಎಲ್ಲ ವಿದ್ವಾಂಸರ ಮೆಚ್ಚುಗೆ ಗಳಿಸಿತು. ಇದರ ಮೂಲಕ ಸುಮಾರು ೨೫ ಹಳಗನ್ನಡ-ನಡುಗನ್ನಡ ಕಾವ್ಯರತ್ನಗಳು ಬೆಳಕಿಗೆ ಬಂದುವು. ವಿದ್ಯಾಭ್ಯಾಸ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ ಭಾಭಾ ಸಾಹೇಬರು ಇವರ ಕಾರ್ಯವನ್ನು ಮೆಚ್ಚಿ, ಸರ್ಕಾರದಿಂದ ಸಹಾಯಧನ ಕೊಡಿಸಿದ್ದಲ್ಲದೆ, ಶಾಲಾ ಕಾಲೇಜುಗಳ ಪುಸ್ತಕ ಭಂಡಾರಗಳಿಗೆ ಪತ್ರಿಕೆಯನ್ನು ಕೊಳ್ಳುವ ಏರ್ಪಾಡನ್ನೂ ಮಾಡಿದರು. ೧೮೯೭ರಲ್ಲಿ ಈ ಪತ್ರಿಕೆಗೆ ಸಂಬಂಧಿಸಿದ್ದ ಕೊಮಾರಸ್ವಾಮಿ ತಿರುಮಲಾಚಾರ್ಯರ ನಿಧನದಿಂದ ಪತ್ರಿಕೆ ನಿಂತುಹೋಯಿತು.

ರಾಮಾನುಜ ಅಯ್ಯಂಗಾರ್ಯರು ಸುಲಭವಾಗಿ ಸೋಲುವವರಲ್ಲ. ೧೮೯೯ರಲ್ಲಿ ನರಸಿಂಹಾಚಾರ್ಯರೊಡನೆ ಮತ್ತೆ ‘ಕರ್ಣಾಟಕ ಕಾವ್ಯ ಕಲಾನಿಧಿ’ ಎಂಬ ಹೆಸರಿನಲ್ಲಿ ಇದೇ ಮಾದರಿಯ ಮಾಸಪತ್ರಿಕೆ ಪ್ರಾರಂಭಿಸಿದರು. ಈ ಎರಡು ಪತ್ರಿಕೆಗಳ ಮಧ್ಯಂತರಕಾಲ ಒಂದು ವರ್ಷ–ಮೂರು ತಿಂಗಳು. ಈ ಕಾಲದಲ್ಲಿ ಕರ್ಣಾಟಕದ ಮೂಲೆ ಮೂಲೆಗಳಿಂದ ಪತ್ರಿಕೆಯನ್ನು ಮುಂದುವರಿಸುವಂತೆ ಪತ್ರಗಳು ಬರುತ್ತಿದ್ದವು. ಅಷ್ಟು ಜನಪ್ರಿಯವಾಗಿತ್ತು ಪತ್ರಿಕೆ. ‘ಕರ್ಣಾಟಕ ಕಾವ್ಯ ಕಲಾನಿಧಿ’ ಪತ್ರಿಕೆಯಲ್ಲಿ ಪ್ರಾಚೀನ ಕಾವ್ಯಗಳ ಜೊತೆಗೆ ಕೆಲವು ನವೀನ ಕೃತಿಗಳೂ ಪ್ರಕಟವಾದುವು. ೧೯೦೭ರಲ್ಲಿ ಎಸ್. ಜಿ. ನರಸಿಂಹಾಚಾರ್ಯರು ಅಕಾಲಮರಣಕ್ಕೆ ತುತ್ತಾದುದು ರಾಮಾನುಜ ಅಯ್ಯಂಗಾರ್ಯರ ಬಲಗೈ ಮುರಿದಂತಾಯಿತು. ಆದರೂ ಅವರು ಧೃತಿಗೆಡದೆ ಏಕಾಂಗಿಯಾಗಿ ಸು. ೧೯೧೬ರ ವರೆಗೆ ಪತ್ರಿಕೆಯನ್ನು ನಡೆಸಿಕೊಂಡು ಬಂದರು.

೧೯೨೦ರ ಸುಮಾರಿನಲ್ಲಿ ‘ಕಲಾನಿಧಿ’ಯ ಪುಸ್ತಕಗಳು, ಬಿಡಿ ಫಾರಂಗಳು, ಇತರ ಉಪಯುಕ್ತ ಗ್ರಂಥಗಳು, ಕಾರ್ಯಾಲಯದ ಕಾಗದಪತ್ರಗಳು ಇದ್ದ ಕಟ್ಟಡ ಅಗ್ನಿಗೆ ಆಹುತಿಯಾದುವು. ಅಯ್ಯಂಗಾರ್ಯರಿಗೆ ಆದ ದ್ರವ್ಯನಷ್ಟ ಅಪಾರ. ಅವರಿಗಾದ ಸಾರಸತ್ವ ಸಂಪತ್ತಿನ ಹಾನಿಗೆ ಬೆಲೆಕಟ್ಟಲು ಸಾಧ್ಯವೆ? ಅವರ ಮನಸ್ಸಿಗಾದ ಆಘಾತ ವರ್ಣಿಸಲಳವಲ್ಲ. ಆದರೂ ಅವರ ಸಾಹಿತ್ಯಸೇವೆ ನಿಲ್ಲಲಿಲ್ಲ.

ಕೆಲಕಾಲದ ನಂತರ ಸರ್ಕಾರದಿಂದ ದೊರೆಯುತ್ತಿದ್ದ ಪ್ರೋತ್ಸಾಹಧನವೂ ಸದಸ್ಯತ್ವವೂ ಕಾರಣಾಂತರದಿಂದ ಸಂಪೂರ್ಣವಾಗಿ ನಿಂತುಹೋಗಲು ಅಯ್ಯಂಗಾರ್ಯರು ಬೇರೆ ದಾರಿಯಿಲ್ಲದೆ ‘ಕಲಾನಿಧಿ’ ಪತ್ರಿಕೆಯನ್ನು ನಿಲ್ಲಿಸಿಬಿಟ್ಟರು. ಆದರೆ ಸ್ವಂತವಾಗಿ ‘ಆರ್ಯಮತ ಸಂಜೀವಿನಿ’, ‘ಕಾವ್ಯಮಂಜರಿ’, ‘ಕಾವ್ಯಕಲಾನಿಧಿ’ ಪತ್ರಿಕೆಗಳಲ್ಲಿ ತಾವು ಈವರೆಗೆ ಭಾಗಭಾಗವಾಗಿ ಪ್ರಕಟಿಸಿದ್ದ ಎಲ್ಲ ಗ್ರಂಥಗಳನ್ನೂ ಕವಿಕಾವ್ಯ ವಿಚಾರಾದಿ ವ್ಯಾಸಂಗ ಸಾಮಗ್ರಿಯಿಂದ ಕೂಡಿದ ಬಿಡಿಪುಸ್ತಕಗಳಾಗಿ ಪ್ರಕಟಿಸಿದರು. ಇವುಗಳಲ್ಲಿ ಹಲವು ಪಂಡಿತ ಪರೀಕ್ಷೆ, ಮೈಸೂರು ವಿಶ್ವವಿದ್ಯಾನಿಲಯದ ಪ್ರೌಢಪರೀಕ್ಷೆಗಳಿಗೆ ಪಠ್ಯವಾದುವು. ಬೊಂಬಾಯಿ, ಮದ್ರಾಸು ವಿಶ್ವವಿದ್ಯಾನಿಲಯಗಳಲ್ಲೂ ‘ಕಾವ್ಯ ಕಲಾನಿಧಿಯ’ ಪುಸ್ತಕಗಳು ಪೂರ್ಣವಾಗಿ ಅಥವಾ ಭಾಗಶಃ ವ್ಯಾಸಂಗಕ್ಕೆ ನಿಯಮಿತವಾಗಿದ್ದವು. ‘ಗದಾಯುದ್ಧ’, ‘ಶ್ರೀರಾಮಾಶ್ವಮೇಧ’, ‘ಕಬ್ಬಿಗರ ಕಾವ’ ಮೊದಲಾದ ಕೆಲವಾರು ಗ್ರಂಥಗಳು ಮೂರು ಮೂರು ಮುದ್ರಣಗಳನ್ನು ಕಂಡವು.

ಇವರಿಬ್ಬರೂ ಸೇರಿ ಬೆಳಕಿಗೆ ತಂದ ಗ್ರಂಥಗಳಲ್ಲಿ ಸಾಹಿತ್ಯದ ಎಲ್ಲಾ ಪ್ರಕಾರಗಳನ್ನೂ ಕಾಣಬಹುದು. ಕನ್ನಡ ವಚನ ಕಾದಂಬರಿ, ಚಿಕದೇವರಾಯ ವಂಶಾವಳಿ, ಅಭ್ಯುತ್ತ ರಾಮಾಯಣ, ಶ್ರೀ ರಾಮಾಶ್ವಮೇಧ ಮೊದಲಾದ ಗದ್ಯಗ್ರಂಥಗಳೂ; ರಾಘವಾಂಕನ ಹರಿಶ್ಚಂದ್ರಕಾವ್ಯ, ಶ್ರೀ ರಾಮಪಟ್ಟಾಭಿಷೇಕ ಇತ್ಯಾದಿ ಪದ್ಯಕಾವ್ಯಗಳೂ; ರನ್ನನ ಗದಾಯುದ್ಧ ಮತ್ತು ಅಜಿತತೀರ್ಥಪುರಾಣ ತಿಲಕ, ದುರ್ಗಸಿಂಹನ ಪಂಚತಂತ್ರ, ಮುಂತಾದ ಚಂಪೂಗ್ರಂಥಗಳೂ; ಕನಕದಾಸನ ಮೋಹನ ತರಂಗಿಣೀ,

ಸಂಚಿ ಹೊನ್ನಮ್ಮನ ಹದಿಬದೆಯ ಧರ್ಮ, ತಿರುಮಲಾರ್ಯನ ಕರ್ಣವೃತ್ತಾಂತ ಕಥೆಯೇ ಆದಿಯಾದ ಸಾಂಗತ್ಯಗಳೂ ಇವೆ. ಆ ಕಾಲದ ಏಕೈಕ ನಾಟಕವಾದ ಸಿಂಗರಾರ್ಯನ ಮಿತ್ರವಿಂದಾಗೋವಿಂದ, ಸುಪ್ರಸಿದ್ಧ ಅಲಂಕಾರಶಾಸ್ತ್ರವಾದ ಅಪ್ರತಿಮ ವೀರಕ್ಕಚರಿತೆಗಳನ್ನು ಕನ್ನಡ ಜನತೆಗಿತ್ತ ಹಿರಿಮೆ ಇವರಿಗೆ ಸಲ್ಲತಕ್ಕದ್ದು. ಇಷ್ಟೇ ಅಲ್ಲದೆ ನಾಗವರ್ಮನ ಛಂದೋಂಬುಧಿ, ನಂದಿಕವಿಯ ನಂದೀ ಛಂದಸ್ಸು, ಸುಂದರ ಗೀತಗಳ ಗೀತಗೋಪಾಲ, ಹರಿಹರನ ಪಂಪಾಶತಕವೇ ಆದಿಯಾದ ಕೆಲವು ಶತಕಗಳು, ಅಪೂರ್ವ ನಿಘಂಟುಗಳು ಈ ಪ್ರಕಟನೆಯಲ್ಲಿ ಸೇರಿವೆ. ಹೀಗೆ ಸುಮಾರು ೭೫ ಉದ್ಗ್ರಂಥಗಳನ್ನು ನಾಡಿಗಿತ್ತ ಕೀರ್ತಿ ಇವರದು. ಇಷ್ಟಲ್ಲದೆ ಈ ಕೃತಿಗಳಲ್ಲಿ ಜಾತಿ ಮತಗಳ ಪಕ್ಷಪಾತವಾಗಲಿ, ಉತ್ತಮ ಮಧ್ಯಮವೆಂಬ ಭೇದವಾಗಲಿ ಇಲ್ಲ. ಕೇವಲ ಕನ್ನಡ ಸಾಹಿತ್ಯಪ್ರಸಾರದ ಧ್ಯೇಯದಿಂದ ಮುನ್ನಡೆದ ಈ ಮಾಲೆಯ ಪುಸ್ತಕಗಳಲ್ಲಿ ಜೈನಗ್ರಂಥಗಳಿವೆ, ವೈದಿಕ ಗ್ರಂಥಗಳಿವೆ, ವೀರಶೈವ ಗ್ರಂಥಗಳಿವೆ, ಇತರ ಗ್ರಂಥಗಳೂ ಇವೆ. ಇಂತಹ ನಿಷ್ಪಕ್ಷಪಾತ, ಸಮತೋಲನ ದೃಷ್ಟಿ ಅಂದಿನ-ಇಂದಿನ ಎಲ್ಲರಿಗೂ ಮಾರ್ಗದರ್ಶಕ, ಅನುಕರಣೀಯ. ಇದು ಈ ಕನ್ನಡ ಯೋಗಿಗಳ ಕರ್ಮಯೋಗ, ಕನ್ನಡ ಕಾಯಕ.

ರಾಮಾನುಜ ಅಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ ಇಬ್ಬರೂ ಕುಲೀನ ಶ್ರೀವೈಷ್ಣವ ಮನೆತನದಲ್ಲಿ ಜನಿಸಿದರು. ಇಬ್ಬರೂ ಸದ್ವಿದ್ಯಾಶಾಲೆಯ ಸ್ಥಾಪಕರೂ ಶ್ರೇಷ್ಠ ಪಂಡಿತರೂ ಆದ ಪೆರಿಯಸ್ವಾಮಿ ತಿರುಮಲಾಚಾರ್ಯರಲ್ಲಿ ಸಂಸ್ಕೃತ ಕಲಿತರು. ತಮ್ಮ ಅಪಾರ ಸಂಸ್ಕೃತ ಮತ್ತು ತಮಿಳಿನ ಜ್ಞಾನ ಸಂಪತ್ತಿನ ನೆರವಿನಿಂದ ಸ್ವಪ್ರಯತ್ನದಿಂದ ಕನ್ನಡವನ್ನು ಆಳವಾಗಿ ಅಭ್ಯಸಿಸಿದರು. ಇಬ್ಬರೂ ಸ್ವತಃ ಕವಿಗಳು, ಪಂಡಿತರು. ಇವರುಗಳ ಇಂಗ್ಲಿಷ್ ಭಾಷಾಜ್ಞಾನ, ಅದರ ಮೇಲಿನ ಪ್ರಭುತ್ವ ಉನ್ನತಮಟ್ಟದ್ದು. ಮನೆಯ ಮಾತು ತಮಿಳಾದ ಇವರ ಕನ್ನಡ ಸೇವೆ ಅತ್ಯಮೋಘ.

೧೮೬೯ರಲ್ಲಿ ಜನಿಸಿದ ಅಯ್ಯಂಗಾರ್ಯರು ಜ್ಯೋತಿಶ್ಶಾಸ್ತ್ರ, ಗಣಿತಶಾಸ್ತ್ರಗಳಲ್ಲಿ ಮದರಾಸಿನಲ್ಲಿ ಪಾಂಡಿತ್ಯ ಪಡೆದು ಮೈಸೂರಿನ ವೆಸ್ಲಿಯನ್ ಮಿಷನ್ ಸ್ಕೂಲಿನಲ್ಲಿ ಗಣಿತದ ಅಧ್ಯಾಪಕರಾಗಿಯೂ, ಮೈಸೂರು ವಿದ್ಯಾಭ್ಯಾಸ ಇಲಾಖೆಯಲ್ಲಿ ಕನ್ನಡ ಭಾಷಾಪರಿವರ್ತಕರಾಗಿಯೂ, ಮೈಸೂರು ಮಹಾರಾಣಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿಯೂ ಸೇವೆ ಸಲ್ಲಿಸಿದರು. ತಮ್ಮ ಉದ್ಯೋಗದ ಜೊತೆಜೊತೆಯಲ್ಲಿ ಗ್ರಂಥಪ್ರಕಟನಕಾರ್ಯವನ್ನೂ ನಡೆಸಿದರು. ಅವರ ಸ್ವಂತ ರಚನೆಗಳೊಂದೊಂದೂ ಆಳವಾದ ಪಾಂಡಿತ್ಯದ ಪ್ರತೀಕ. ವೇದಾಂತ ವಿಚಾರವನ್ನೊಳಗೊಂಡ 'ಪ್ರಮಾಣ ಪ್ರಮೇಯ ವಿವೇಕ' ಮತ್ತು 'ಬಾಗಿಲು ಭದ್ರ'; ಹಳಗನ್ನಡ ಕಾವ್ಯಾಭ್ಯಾಸಿಗಳಿಗೆ ಇಂದಿಗೂ ಬಹು ಉಪಯುಕ್ತವಾಗಿರುವ 'ಕವಿಸಮಯ' ಮತ್ತು 'ಕವಿಕಾರ್ಯ ಪ್ರಶಂಸೆ'; ಜನ್ನನ ಯಶೋಧರ ಚರಿತೆ ಆಧಾರಿತ ಗದ್ಯಗ್ರಂಥ 'ಸುವ್ರತ', ಪ್ರಬಂಧ ರಚನೆಯ



ಕೈಪಿಡಿಯಂತಿರುವ ‘ಪ್ರಬಂಧಾವಳಿ’, ‘ಆದಿಪರ್ವ’ ಮತ್ತು ‘ಸಭಾಪರ್ವ’ ಮುಂತಾದುವು ಇವರ ಶ್ರೇಷ್ಠ ಕೃತಿಗಳು. ‘ಕಾವ್ಯ ಕಲಾನಿಧಿ’ಯಲ್ಲಿ ಇವರು ಸಂಪಾದಿಸಿದ ಗ್ರಂಥಗಳ ಆದಿ-ಅಂತ್ಯಗಳಲ್ಲಿ ಕೊಟ್ಟಿರುವ ವಿವರಗಳು ಇವರ ನಿಶಿತ ಪಾಂಡಿತ್ಯ, ಸೂಕ್ಷ್ಮದೃಷ್ಟಿ, ನಿಷ್ಕೃಷ್ಟ ವಿಷಯ ಪ್ರತಿಪಾದನೆಗಳಿಗೆ ಸಾಕ್ಷಿ. ರನ್ನನ ‘ಗದಾಯುದ್ಧ’ದ ಸುದೀರ್ಘ ಪೀಠಿಕೆಯಲ್ಲಿ ಬರುವ ‘ಕವಿ ರನ್ನನ ಜೀವನ ಚರಿತ್ರೆ’, ‘ಗ್ರಂಥ ವಿಮರ್ಶೆ’ (ಅಜಿತ ಪುರಾಣದ ವಿಮರ್ಶೆಯನ್ನೂ ಒಳಕೊಂಡಿದೆ) ಭಾಗ ರನ್ನ ಸಾಹಿತ್ಯಾಭ್ಯಾಸಿಗಳಿಗೆ ಒಂದು ಕೈಗನ್ನಡಿ. ‘ಗದಾಯುದ್ಧ’ ಮತ್ತು ಇತರ ಕೆಲವು ಗ್ರಂಥಗಳಿಗೆ ಇಂಗ್ಲಿಷಿನಲ್ಲೂ ಮುನ್ನುಡಿ ಬರೆದಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರ ಇಂಗ್ಲಿಷ್ ಭಾಷಣಗಳ ಸಂಕಲನವನ್ನು ಅವರ ಇಚ್ಛೆಯಂತೆ ಕನ್ನಡಕ್ಕೆ ಭಾವಾನುವಾದ ಮಾಡಿ ಅವರಿಂದ ಪುರಸ್ಕೃತರಾದರು. ಮಕ್ಕಳಿಗಾಗಿ ಅನೇಕ ಕಥೆಗಳನ್ನು ಭಾಷಾಂತರಿಸಿದ್ದಲ್ಲದೆ ಚೇತೋಹಾರಿಯಾದ ಶಾಲಾಪುಸ್ತಕಗಳನೇಕವನ್ನೂ ಸಿದ್ಧಪಡಿಸಿಕೊಟ್ಟಿದ್ದರು. ಆಜೀವಪರ್ಯಂತ ಕನ್ನಡಕ್ಕಾಗಿ ದುಡಿದ ಇವರು ೧೯೩೭ರಲ್ಲಿ ಸ್ವರ್ಗಸ್ಥರಾದರು.

ಎಸ್. ಜಿ. ನರಸಿಂಹಾಚಾರ್ಯರು ವರಕವಿ. ಶ್ರೀರಂಗಪಟ್ಟಣದಲ್ಲಿ ಉಪಾಧ್ಯಾಯರಾಗಿ, ಮೈಸೂರು ವಿದ್ಯಾಇಲಾಖೆಯಲ್ಲಿ ಕನ್ನಡ ಭಾಷಾ ಪರಿವರ್ತಕರಾಗಿ, ಓರಿಯಂಟಲ್ ಲೈಬ್ರರಿಯಲ್ಲಿ ಹಳಗನ್ನಡ ಗ್ರಂಥಗಳ ಸಂಪಾದಕರಾಗಿ ಕಾರ್ಯಮಾಡಿದವರು. ಕಾಳಿದಾಸನ ರಘುವಂಶದ ಭಾಗಾನುವಾದ ‘ದಿಲೀಪ ಚರಿತೆ’ ಮತ್ತು ‘ಅಜನೃಪ ಚರಿತೆ’, ಷಟ್ಪದಿ ಕಾವ್ಯಗಳು, ‘ಉತ್ತರರಾಮ ಚರಿತೆ’ಯ ಮೊದಲ ಮೂರು ಅಂಕಗಳ ಪದ್ಯಸಹಿತ ಅನುವಾದ ಇವರ ಸಂಸ್ಕೃತ ಜ್ಞಾನದ ದ್ಯೋತಕ. ಶಾಲಾವಿದ್ಯಾರ್ಥಿಗಳಗಾಗಿ ಅನೇಕ ಮನೋರಂಜಕ ಮತ್ತು ಬೋಧಪ್ರದ ಪುಸ್ತಕಗಳನ್ನು ಸಿದ್ಧಪಡಿಸಿದವರು. ಮದ್ರಾಸ್ ಸರ್ಕಾರದ Inspector Marsdenರವರ ಇಂಗ್ಲಿಷ್ ಪುಸ್ತಕಗಳನ್ನೂ, Steadರವರ ‘Books for the Bairns’ ಎಂಬ ಕೆಲವು ಪುಸ್ತಕಗಳನ್ನೂ ಕನ್ನಡಕ್ಕೆ ತಂದವರು. ೪೦ ಕಂದಪದ್ಯಗಳ ಇವರ ‘ಪ್ರೋಷಿತ ಪ್ರಿಯಾ ಸಮಾಗಮ’ ಕಾವ್ಯ Thomas Parnellನ ‘The Hermit’ ಎಂಬ ಪದ್ಯದ ಸರಳ ಸುಂದರ ಅನುವಾದ. ಚಾಮರಾಜ ಒಡೆಯರು ಗತಿಸಿದಾಗ ರಚಿಸಿದ ೭ ಷಟ್ಪದಿಗಳ ಇವರ ‘ಆಶುಕವಿತೆ’ ಹೃದಯಸ್ಪರ್ಶಿ. ಆರ್. ನರಸಿಂಹಾಚಾರ್ಯರ ‘ಕರ್ಣಾಟಕ ಕವಿಚರಿತೆ’ಯ ಮೊದಲನೆಯ ಸಂಪುಟ ಸುಪುಷ್ಟವಾಗಿ, ನಿಖರವಾಗಿ ಹೊರಬರಲು ಇವರ ಸಹಕಾರ, ಪಾಂಡಿತ್ಯ ಮುಖ್ಯಕಾರಣ. ಪುರಾತನ ಕಾವ್ಯಗಳ ಸಾರಭಾಗಗಳನ್ನೊಳಗೊಂಡು, ಬಹುಕಾಲ ಪಠ್ಯವಾಗಿದ್ದ ‘ಪದ್ಯಸಾರ’ ಮತ್ತು ‘ಪದ್ಯಸಂಗ್ರಹ’ಗಳ ಸಂಕಲನಕಾರರು ಇವರು. ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರಿಗೂ, ಕಾದಂಬರಿಕಾರ ಬಿ. ವೆಂಕಟಾಚಾರ್ಯರಿಗೂ ಅನೇಕ ಪದ್ಯಗಳನ್ನು ಬರೆದುಕೊಟ್ಟವರು.

ಇವರನು ಬಹುಮುಖ ಪ್ರತಿಭೆ. ೧೯೦೭ರಲ್ಲುಂಟಾದ ಇವರ ಅಕಾಲಿಕ ಮರಣ ಕನ್ನಡ ಸಾಹಿತ್ಯಕ್ಕೆ ತುಂಬಲಾರದ ನಷ್ಟ.

ಈ ಇಬ್ಬರು ಮಹನೀಯರೂ ಕನ್ನಡದ ಬುಡವನ್ನು ಕರ್ಣಾಟಕದಲ್ಲಿ ಸುಭದ್ರ ವಾಗಿ ನಿಲ್ಲಿಸಲು, ಕನ್ನಡದ ಅಭಿಮಾನವನ್ನು ಕನ್ನಡಿಗರಲ್ಲಿ ತುಂಬಲು ಮಾಡಿದ ನಿಸ್ವಾರ್ಥ ಸೇವೆ ಅಷ್ಟಿಷ್ಟಲ್ಲ. ರಾಮಾನುಜ ಅಯ್ಯಂಗಾರ್ಯರು ಗತಿಸಿದ ತರುಣದಲ್ಲಿ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು 'ಕನ್ನಡದ ಸುಪ್ರಸಿದ್ಧ ಕಾವ್ಯಗಳನ್ನು ಬರೆದ ರನ್ನ, ಜನ್ನ, ಪೊನ್ನರು ಹಿಂದಿನ ರತ್ನತ್ರಯರಾದರೆ ಕನ್ನಡ ಸಾಹಿತ್ಯ ಪ್ರಕಾಶಕ್ಕಾಗಿ ದುಡಿದ ಎಂ. ಎ. ರಾಮಾನುಜ ಅಯ್ಯಂಗಾರ್ಯರು, ಎಸ್. ಜಿ. ನರಸಿಂಹಾಚಾರ್ಯರು, ಆರ್. ನರಸಿಂಹಾಚಾರ್ಯರು ಇಂದಿನ ರತ್ನತ್ರಯರು' ಎಂದರು ; ಆ ಮಾತು ನಿಜಕ್ಕೂ ಅತಿಶಯೋಕ್ತಿಯಲ್ಲ.

## ಕರ್ಣಾಟಕ ಕಾವ್ಯಕಲಾನಿಧಿಯಲ್ಲಿ ಪ್ರಕಟವಾದ ಗ್ರಂಥಗಳು

**ಚಂಪೂ ಗ್ರಂಥಗಳು :**

೧. ರನ್ನನ ಗದಾಯುದ್ಧ
೨. ರನ್ನನ ಅಜಿತ ತೀರ್ಥಂಕರ ಪುರಾಣ ತಿಲಕ
೩. ನಾಗಚಂದ್ರನ ಮಲ್ಲಿನಾಥ ಪುರಾಣ
೪. ದುರ್ಗಸಿಂಹನ ಪಂಚತಂತ್ರ
೫. ಹರಿಹರದೇವನ ಗಿರಿಜಾಕಲ್ಯಾಣ
೬. ನೇಮಿಚಂದ್ರನ ಲೀಲಾವತೀ ಪ್ರಬಂಧ
೭. ನೇಮಿಚಂದ್ರನ ಅರ್ಧನೇಮಿ ಪುರಾಣ
೮. ಅಗ್ಗಳದೇವನ ಚಂದ್ರಪ್ರಭ ಪುರಾಣ
೯. ಜನ್ನನ ಶಾಸನಗಳ ಸಂಗ್ರಹ
೧೦. ಜನ್ನನ ಯಶೋಧರ ಚರಿತೆ
೧೧. ಕಮಲಭವನ ಶಾಂತೀಶ್ವರ ಪುರಾಣ
೧೨. ಆಂಡಯ್ಯನ ಕಬ್ಬಿಗರ ಕಾವ
೧೩. ಚಾವುಂಡರಾಯನ ಅಭಿನವ ದಶಕುಮಾರ ಚರಿತೆ
೧೪. ಅಭಿನವ ವಾದಿವಿದ್ಯಾನಂದನ ಕಾವ್ಯಸಾರ
೧೫. ತಿರುಮಲಾರ್ಯನ ಚಿಕದೇವರಾಜ ವಿಜಯಂ
೧೬. ಚಿಕುಪಾಧ್ಯಾಯನ ದಿವ್ಯಸೂರಿ ಚರಿತೆ
೧೭. ಗೋಪಾಲ ಪ್ರಸಾದಿಯ ಚಿಕದೇವೇಂದ್ರ ವಂಶಾವಳಿ

**ಷಟ್ಪದೀ ಗ್ರಂಥಗಳು :**

೧. ರಾಘವಾಂಕನ ಹರಿಶ್ಚಂದ್ರ ಕಾವ್ಯ
೨. ಗುಬ್ಬಿ ಮಲ್ಲಣಾರ್ಯನ ಭಾವಚಿಂತಾರತ್ನ
೩. ಭಾಸ್ಕರನ ಜೀವಂಧರ ಚರಿತೆ
೪. ಮಂಗರಸನ ಜಯನೃಪ ಕಾವ್ಯ
೫. ಕನಕದಾಸನ ನಳಚರಿತ್ರೆ

೬. ಗುರುಲಿಂಗಪ್ರಭುವಿನ ಭಿಕ್ಷಾಟನ ಚರಿತೆ
೭. ಕುಮಾರ ವಾಲ್ಮೀಕಿಯ ಮೈರಾವಣ ಕಾಳಗ
೮. ತಿರುಮಲೆ ವೈದ್ಯನ ಉತ್ತರ ರಾಮಾಯಣಂ
೯. ಮುದ್ದಣನ ಶ್ರೀರಾಮ ಪಟ್ಟಾಭಿಷೇಕ
೧೦. ಗೋಪಕವಿಯ ನಂದಿಮಹಾತ್ಮ್ಯಂ
೧೧. ಕೋನಯ್ಯನ ಗಯಚರಿತ್ರೆ

**ಗದ್ಯಗ್ರಂಥಗಳು :**

೧. ತಿರುಮಲಾರ್ಯನ ಚಿಕದೇವರಾಯ ವಂಶಾವಳಿ
೨. ಚಿಕುಪಾಧ್ಯಾಯನ ವಿಷ್ಣು ಪುರಾಣ
೩. ಕನ್ನಡ ವಚನಕಾದಂಬರಿ– ಪೂರ್ವಭಾಗ
೪. ಭಾಳಲೋಚನನ ಬತ್ತೀಸಪುತ್ತಳೀ ಕಥೆಗಳು
೫. ಮುದ್ದಣನ ಶ್ರೀರಾಮಾಶ್ವಮೇಧ
೬. ಮುದ್ದಣನ ಅದ್ಭುತ ರಾಮಾಯಣ

**ನಾಟಕ :**

೧. ಸಿಂಗರಾರ್ಯನ ಮಿತ್ರವಿಂದಾ ಗೋವಿಂದ

**ನಾಟಕಗದ್ಯಾನುವಾದಗಳು :**

೧. ಉತ್ತರರಾಮ ಚರಿತ್ರಕಥೆ
೨. ಮುಮ್ಮಡಿ ಕೃಷ್ಣರಾಜ ಒಡೆಯರ ಶಾಕುಂತಳ ನವೀನ ಟೀಕೆ
೩. ವತ್ಸರಾಜ ಕಥೆ
೪. ಪ್ರಬೋಧ ಚಂದ್ರೋದಯ ನಾಟಕ ಕಥೆ

**ಶತಕಗಳು :**

೧. ಹರಿಹರದೇವನ ಪಂಪಾಶತಕ
೨. ಸುಭಾಷಿತ ಮುಕ್ತಕ ಶತಕ (ಸಂಕಲಿತ)
೩. ರತ್ನಾಕರನ ರತ್ನಾಕರ ಶತಕ
೪. ರತ್ನಾಕರನ ಅಪರಾಜಿತೇಶ್ವರ ಶತಕ
೫. ವರ್ಧಮಾನ ಸ್ವಾಮಿ ಶತಕ

**ಅಲಂಕಾರ ಗ್ರಂಥಗಳು :**

೧. ಉದಯಾದಿತ್ಯಾಲಂಕಾರ
೨. ತಿರುಮಲಾರ್ಯನ ಅಪ್ರತಿಮ ವೀರಚರಿತೆ

**ರಸಗ್ರಂಥ**

೧. ಕವಿಕಾಮನ ಶೃಂಗಾರ ರತ್ನಾಕರ

**ನಿಘಂಟುಗಳು :**

೧. ಕರ್ಣಾಟಕ ನಿಘಂಟು
೨. ಚತುರಾಸ್ಯ ನಿಘಂಟು
೩. ಶಬ್ದಸಾರ ನಿಘಂಟು (ಗದ್ಯ)
೪. ಸೂರ್ಯಕವಿಯ ಕವಿಕಂಠಹಾರ
೫. ಕರ್ಣಾಟಕ ಸಂಜೀವನವೆಂಬ ಜಟಿಕುಳ ನಿಘಂಟು

**ಛಂದಸ್ಸು :**

೧. ನಾಗವರ್ಮನ ಛಂದೋಂಬುಧಿ
೨. ನಂದಿಕವಿಯ ನಂದಿಛಂದಸ್ಸು

**ವ್ಯಾಕರಣ :**

೧. ನಾಗವರ್ಮನ ಶಬ್ದಸ್ಮೃತಿ

**ಸಾಂಗತ್ಯಗಳು :**

೧. ಕನಕದಾಸನ ಮೋಹನ ತರಂಗಿಣಿ
೨. ತಿರುಮಲಾರ್ಯನ ಕರ್ಣವೃತ್ತಾಂತ ಕಥೆ
೩. ಸಂಚಿಹೊನ್ನಮ್ಮನ ಹದಿಬದೆಯ ಧರ್ಮ
೪. ಕೃಷ್ಣಗೋಪೀವಿಲಾಸ
೫. ಸಂಜಕವಿಯ ಕಪೋತವಾಕ್ಯ

**ಕೀರ್ತನೆಗಳು :**

೧. ಚಿಕದೇವರಾಯನ ಗೀತಗೋಪಾಲ
೨. ಭಗವದ್ಗೀತಾರ್ಥ ಪ್ರತಿಪಾದನ
೩. ಗಜೇಂದ್ರ ಮೋಕ್ಷ
೪. ಧ್ರುವಚರಿತ್ರೆ

**ಮತಗ್ರಂಥಗಳು :**

೧. ವೇದಾಂತವಿವೇಕಸಾರ
೨. ಚಿಕದೇವರಾಯ ಬಿನ್ನಪಂ
೩. ಜೀವೇಶ್ವರ ಸಾಂಗತ್ಯ

**ಎಂ. ಎ. ರಾಮಾನುಜ ಅಯ್ಯಂಗಾರ್ಯರ ಗ್ರಂಥಗಳು :**

೧. ಮಹಾಭಾರತ ಕಥಾಪ್ರಸಂಗ– ಆದಿಪರ್ವ
೨. ಮಹಾಭಾರತ ಕಥಾಪ್ರಸಂಗ– ಸಭಾಪರ್ವ
೩. ಕವಿಸಮಯಂ
೪. ಸುವ್ರತ
೫. ಕವಿಕಾರ್ಯ ಪ್ರಶಂಸೆ
೬. ಪ್ರಮಾಣ ಪ್ರಮೇಯ ವಿವೇಕ
೭. ಪ್ರಬಂಧಾವಳಿ

—೦—

ತಿಂತಿಣಿಯಾಗೆ ನಟ್ಟ ಕಣೆಯೊಳ್ ನೆಲೆಸುಟ್ಟವೆ ಮೆಯ್ಯೊಳೆತ್ತಮಿ-
ತ್ತಂ ತೆಱೆದಿರ್ದ ಪುಣ್ಗಳ್ ಎನೆ ಪಕ್ಕಿರದಂತಿರೆ 'ನೋಡಿ ಕರ್ಣನಂ' ಎಂ-
ಬಂತೆವೊಲಿರ್ದನ್ **ಅಟ್ಟವಣೆಕೋಲ್ಗ**ಳ ಮೇಲೆಸೆದಿರ್ದ ವೀರಸಿ-
ದ್ಧಾಂತದ ಶಾಸನಂ ಬರೆದ **ಪೊತ್ತ**ಗೆಯಂತಮರಾಪಗಾತ್ಮಜಂ.

–ಪಂಪಭಾರತ (೧೧–೪೬)

**ಅಟ್ಟವಣೆ** – ಪುಸ್ತಕವನ್ನಿಡುವುದಕ್ಕೆ ಕೋಲುಗಳಿಂದ ಮಾಡಿದ ಪೀಠ ವಿಶೇಷ (ಪಂಪಭಾರತದ ನಿಘಂಟು). (ಹಿಂದಿನಕಾಲದಲ್ಲಿ) ಓದುವಾಗ ಪುಸ್ತಕವನ್ನು ಇಟ್ಟುಕೊಳ್ಳುವುದಕ್ಕೆ ಉಪಯೋಗಿಸುತ್ತಿದ್ದ, ಸಾಮಾನ್ಯವಾಗಿ ನಾಲ್ಕು ಕಾಲುಗಳನ್ನು ಜೋಡಿಸಿ ಮಾಡಿದ ಪೀಠ ; ಅಂಥ ಪೀಠದ ಪಾದ. ಕನ್ನಡ ನಿಘಂಟು, ಸಂ. ೧, ಪು. ೧೧೪)

**ಟ(ಠ)ವಣೆಕೋಲ್** ಎಂಬ ಪದವೂ ಮೇಲಿನ ಅರ್ಥದಲ್ಲಿ ಕಾವ್ಯದಲ್ಲೂ ಶಾಸನಗಳಲ್ಲೂ ಪ್ರಯೋಗವಾಗಿದೆ. –ಸಂ.

# ಗ್ರಂಥಸಂಪಾದನೆಗೆ ಚನ್ನಪ್ಪ ಉತ್ತಂಗಿ ಅವರ ಕೊಡುಗೆ

**ಪಂಡಿತ ಕೆ. ಪಿ. ಶಿವಲಿಂಗಯ್ಯ**

**ಪೀಠಿಕೆ :**

ಕನ್ನಡವ ಕನ್ನಡಿಸಿ ಕನ್ನಡಿಗರೆಲ್ಲರಿಗೆ
ಕನ್ನಡದ ಕನ್ನಡಿಯದೇನೆಂದು ತೋರಿ
ಕನ್ನಡವು ಕನ್ನಡಿಯು ತಾ ಬೇರೆಯಲ್ಲ–ಈ
ಕನ್ನಡಿಯ ನೋಡದನು ಕನ್ನಡಿಗನಲ್ಲ ;
ಎನ್ನುತ್ತ ಬೆಳಗಿದನು ಕನ್ನಡದ ಜಾಣ !
ಕನ್ನಡವು ಕನ್ನಡಿಯು ಸರ್ವಜ್ಞ ಕಾಣ !!
........ಗುಂಪು ಕಬ್ಬಿಗರೆಲ್ಲ ಇಂತು ತಮ್ಮನು ತೋರೆ
ಗುಂಪನಗಲಿದ ಕವಿಯು ನಮ್ಮ ತೋರಿದನೆಮಗೆ

ಬಸವಪ್ರಮಥಾದಿಗಳು ಪೊಸತು ಕವಿಮಾರ್ಗವನು
ಎಸಗದಿದ್ದರೆ ವಚನ ವಸುಧೆಗುಪನಿಷದಾಗಿ
ಒಸೆದು ಬರುತಿರಲಿಲ್ಲ ; ಆ ವಚನಗನ್ನಡವನ್ನು
ಮಿಸುನಿಗನ್ನಡಿಮಾಡಿ ವಿಷಯದಾಶೆಯ ಕಳೆದು
ಹೊಸತು ಹೃದಯವ ಕೊಡುವ ಕುಶಲ ಕಬ್ಬಿಗನೋರ್ವ
ಬಸವನ ಶಿಶುವಿರ್ದು ವಸುಧೆಗೀಶ್ವರನಾದ

ಜಗವ ಕೋರುವ ಕಣ್ಣು ಮೊಗನ ನೋಡಲು ತನ್ನ
ಬಗೆಯ ಕನ್ನಡಿ ತಾನು ಜಗಕೆ ಬಂದಾ ತೆರದಿ
ಮಿಗಿಲು ಕವಿಗಳು ಪೆರರ ಹೊಗಳಿ ಸಕ್ಕದಕೊಲಿದು
ಉಗಿದ ಕನ್ನಡವನ್ನು ಮೊಗದ ಕನ್ನಡಿ ಮಾಡಿ
ನಗುತ ನಿಜವನು ತೋರಿ ನಗಿಸಿ ಕೊಳೆಯನು ಕಳೆವ
ಸೊಗಸುಗನ್ನಡ ಕವಿಯು ಜಗಕೆ ಮೈದೋರಿದನು.

ಇದು, ತನ್ನ ಹುಟ್ಟಿನ ಬಗೆಗೇ ಅಸಾಂಪ್ರದಾಯಿಕವಾಗಿರಬಹುದೆಂದು ತೋರಿದರೂ ಮುಚ್ಚಿಡದೆ ಜಗತ್ತಿಗೆ ಸಾರಿದ ಪ್ರಾಮಾಣಿಕ–ಕನ್ನಡ ಕವಿಯ ಬಗೆಗೆ, ಪ್ರಾಮಾಣಿಕ ಸಂಶೋಧಕನೊಬ್ಬ ಬರೆದದ್ದು.[2]

ಆ ಪ್ರಾಮಾಣಿಕ ಕವಿ ಬೇರೆ ಯಾರೂ ಅಲ್ಲ; ಪಂಡಿತ–ಪಾಮರರೆಲ್ಲರಿಗೂ ಪ್ರಿಯನೆನಿಸಿರುವ ಸರ್ವಜ್ಞ ಮೂರ್ತಿ. ಸಂಶೋಧಕರಾದರೊ 'ತಿರುಳ್ಗನ್ನಡದ ತಿರುಕ'ನೆಂದು ತಮ್ಮನ್ನೇ ಕರೆದುಕೊಂಡ ಚನ್ನಪ್ಪ ಉತ್ತಂಗಿ ಅವರು, ಬಹುಶಃ ಉತ್ತಂಗಿಯವರು ಶ್ರದ್ಧಾಪೂರ್ಣಶ್ರಮವಹಿಸಿ ಸರ್ವಾರ್ಪಣಭಾವದಿಂದ ಸರ್ವಜ್ಞವಚನಗಳನ್ನು ಸಂಪಾದಿಸದೇ ಹೋಗಿದ್ದ ಪಕ್ಷದಲ್ಲಿ ಇಂದಿಗೂ ನಮಗೆ ಆತನ ಕೃತಿಗಳ ಸಮಗ್ರಚಿತ್ರ ದೊರಕುತ್ತಿತ್ತೋ ಇಲ್ಲವೋ ಹೇಳಲಾರೆ.

**ಉತ್ತಂಗಿಯವರ ಸಾಹಿತ್ಯಾವೃತ್ತಿ**: "ಉಜ್ವಲ ಮೂರ್ತಿಯಾದ ಸರ್ವಜ್ಞನ ಕಾಲ, ದೇಶ, ಮತ, ಜನನ, ಜೀವನ ಸಂದೇಶ, ವ್ಯಕ್ತಿತ್ವ ಈ ವಿಷಯಗಳನ್ನು ಕೂಲಂಕಷವಾಗಿ ತಿಳಿಯಲಿಚ್ಛಿಸುವವರು **ಉತ್ತಂಗಿಯವರ ಸಾಹಿತ್ಯಾವೃತ್ತಿಯ** (Library Edition) ಗ್ರಂಥವನ್ನು ಮನಮುಟ್ಟ ಪರಿಶೀಲಿಸತಕ್ಕದ್ದು" ಎಂದಿದ್ದಾರೆ ದಿ|| ಬಿ. ಶಿವಮೂರ್ತಿ ಶಾಸ್ತ್ರಿಗಳು.[3]

'ಸರ್ವಜ್ಞ'ನೆಂಬವನು ಗರ್ವದಿಂದಾದವನೆ ?
ಸರ್ವರೊಳಗೊಂದೊಂದು ನುಡಿಗಲಿತು ವಿದ್ಯದ
ಪರ್ವತವೆ ಆದ ಸರ್ವಜ್ಞ ||

ಒರ್ರೋರ್ವರೊಳಗೊಂದು ನುಡಿಗಲಿತುದು ತನಗೆ ಅವಮಾನವೇನಲ್ಲ; ಅದನ್ನು ಬಹಿರಂಗಪಡಿಸುವುದರಲ್ಲಿ 'ಮಾನ'ವೇನೂ ಕಿಂಚಿತ್ತೂ ಹೋಗುವುದಿಲ್ಲ! ಜನಸಾಮಾನ್ಯರಿಗೆಲ್ಲ ಸುಪರಿಚಿತವಾದ 'ಸೋಮೇಶ್ವರಶತಕ'ದ ಪದ್ಯವೂ ಈ ಮಾತನ್ನೇ ಪುಷ್ಟೀಕರಿಸುತ್ತದೆಯಲ್ಲವೆ?

ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ಕೇಳುತುಂ |
ಕೆಲವಂ ಮಾಳ್ಪವರಿಂದ ಕಂಡು ಕೆಲವಂ ಸುಜ್ಞಾನದಿಂ ನೋಡುತಂ ||
ಕೆಲವಂ ಸಜ್ಜನಸಂಗದಿಂದಱಿಯಲ್ 'ಸರ್ವಜ್ಞನಪ್ಪಂ' ನರಂ |
ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀ ಚೆನ್ನಸೋಮೇಶ್ವರಾ ||

ಇದರಿಂದ ಬಹುಶ್ರುತನಾದವನಿಗೆ ಸರ್ವಜ್ಞತ್ವ ಪ್ರಾಪ್ತಿಯಾಗತಕ್ಕದ್ದೆಂದರಿಯಬಹುದಾಗಿದೆ. ಇನ್ನು 'ಸ್ವರ್ವಜ್ಞ' ಎಂದು ಹೆಸರಿಸಿಕೊಂಡಿದ್ದಾನಲ್ಲ ಅಂದರೆ ಅದೊಂದು ಮುದ್ರಿಕೆ ಅಥವಾ ಅಂಕಿತ. ನಾವು 'ಕಾವ್ಯನಾಮ' ಎಂದು ಇಟ್ಟುಕೊಳ್ಳುತ್ತೇವಲ್ಲ ಹಾಗೆ!

"ಸರ್ವಜ್ಞ ಎಂಬುದು ಎಲ್ಲವನ್ನೂ ತಿಳಿದ ಜ್ಞಾನಸ್ವರೂಪವಾದ ಭಗವಂತನನ್ನು ಮನಸ್ಸಿನಲ್ಲಿಟ್ಟುಕೊಂಡು ಉಪಯೋಗಿಸುವ ಅಂಕಿತವಾಗಿ ಕಾಣುತ್ತದೆ." ಇದು ಎ. ಆರ್. ಕೃಷ್ಣಶಾಸ್ತ್ರಿಗಳ ಅಭಿಮತ.[4]

"ನಮಗೆ ತೋರುವಂತೆ ಸರ್ವಜ್ಞ ಇದು ಅವನ ಹೆಸರಲ್ಲವೆಂಬುದೇನೋ ದಿಟ. ಆದರೆ ಅದು ಬರೀ ದೇವರ ಅಂಕಿತವಾಗಿರದೆ ಅವನಿಗೆ ಜನತೆ ಕೊಟ್ಟ ವ್ಯಕ್ತಿತ್ವ

ನಿವರ್ತಕವಾದ ಬಿರುದೂ ಆಗಿರಬೇಕು" ಎಂದು ಅಭಿಪ್ರಾಯಪಟ್ಟಿದ್ದಾರೆ ಸಾಹಿತ್ಯ ಚರಿತ್ರಕಾರರು.[5]

ತಿರಿದಿಹರೆ ಕೂಳಕ್ಕು ಕೆರೆದಿಹರೆ ಬೋಳಕ್ಕು
ಕರೆದಿಹರೆ ಅಡ್ಡಹೆಸರಕ್ಕು–ನಿಜವಿರಲು
ಸ್ಥಿರಗೊಳ್ಳಲಕ್ಕು ಸರ್ವಜ್ಞ

ಹೀಗೆ ಆತನೇ ಸ್ಥಿರವಾಗುಳಿದ ತನ್ನ ಅಡ್ಡಹೆಸರಿನ (ಅಂಕಿತದ) ಬಗೆಗೆ ಸಾರಿ ಹೇಳಿದ್ದಾನೆ.

ಆತನ ಪೂರ್ವೋತ್ತರಗಳಾಗಲಿ, ಕಾಲಾದಿ ವಿಷಯಗಳಾಗಲಿ ಈ ಲೇಖನದ ವ್ಯಾಪ್ತಿಗೆ ಬರತಕ್ಕವಲ್ಲವಾಗಿ, ಗ್ರಂಥಸಂಪಾದನೆಯ ಕಡೆಗೇ ಹೆಚ್ಚು ಲಕ್ಷ್ಯವನ್ನೀಯಲಾಗಿದೆ.

**ಚನ್ನಪ್ಪ ಉತ್ತಂಗಿಯವರು ಸರ್ವಜ್ಞಪ್ರಪಂಚವನ್ನು ಪ್ರವೇಶಿಸಿದ ಬಗೆ:** ಚನ್ನಪ್ಪನವರಲ್ಲಿ ವಿದೇಶೀ ಪಾದ್ರಿಗಳು ಕೆಲವರು ಕನ್ನಡವನ್ನು ಕಲಿಯುತ್ತಿದ್ದರು. ಅವರಿಗೆ ಸರ್ವಜ್ಞನ ವಚನಗಳಲ್ಲಿ ತೀವ್ರವಾದ ಆಸಕ್ತಿಯುಂಟಾಗಿ, ಆ ಮಹಾನುಭಾವನನ್ನು ಕುರಿತು ಹಲವು ಹನ್ನೊಂದು ಪ್ರಶ್ನೆ ಕೇಳುತ್ತಿದ್ದರು. ಆಗ ಗೊತ್ತಾಯಿತಂತೆ ಉತ್ತಂಗಿಯವರಿಗೆ 'ನಾನು ಸರ್ವಜ್ಞನನ್ನು ಬಿಟ್ಟರೂ ಸರ್ವಜ್ಞನು ನನ್ನನ್ನು ಬಿಡಲೊಲ್ಲನು' ಎಂದು ! ಎಲ್ಲಿ ಹೋದರೂ ಅವನ ಸಂಬಂಧವಾದ ಯೋಚನೆಗಳೇ ಅವರ ತಲೆಯೊಳಗೆ ತುಂಬಿ ಆ ಮಿಶನರಿಯವರು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುವ ಮೊದಲು ಅವನ ಗ್ರಂಥವನ್ನೇ ಶೋಧಿಸಬೇಕೆಂದು ನಿಶ್ಚಯಮಾಡಿಕೊಂಡರಂತೆ. ಮರುದಿನ ಎಂದಿನಂತೆ ಕನ್ನಡವನ್ನು ಹೇಳಿಕೊಡಲಿಕ್ಕೆ ಇವರು ಮಿಶನರಿಗಳಲ್ಲಿಗೆ ಹೋದಾಗ ಮಹಾರಾಷ್ಟ್ರದಲ್ಲಿ ಕೆಲಸ ಮಾಡುತ್ತಿದ್ದ 'ನೆಲ್ಸನ್ ಫ್ರೇಜರ್' ಎಂಬವರು ಸರ್ವಜ್ಞನ ವಚನಗಳನ್ನು ಆಂಗ್ಲ ಭಾಷೆಗೆ ಪರಿವರ್ತಿಸುತ್ತಿದ್ದುದನ್ನು ಕಂಡರು. ಕಷ್ಟಕರವಾದ ಈ ಕೆಲಸವು ಸಾಂಗವಾಗಿ ಸಾಗುವಂತೆ ಅವರು ಸರ್ವಜ್ಞಪದ್ಯಗಳ ಒಂದು ವರ್ಣಾನುಕ್ರಮಣಿಕೆಯನ್ನು ಮಾಡಿದ್ದಲ್ಲದೆ ಅವನ ಕೋಶರಚನೆಗೂ ಪ್ರಯತ್ನಿಸುತ್ತಿದ್ದುದು ಇವರಿಗೆ ತಿಳಿಯಿತು. ಇದರಿಂದ ಚನ್ನಪ್ಪನವರಲ್ಲಿ ಅಪೂರ್ವ ಜಾಗ್ರತೆಯುಂಟಾಗಿ ಅವರೂ ಅದೇ ಪದ್ಧತಿಯನ್ನನುಸರಿಸಿ ಕೆಲಸ ಮಾಡಬೇಕೆಂಬ ಹವ್ಯಾಸವು ಹುಟ್ಟಿತು.

**ಪರಕೀಯರು ಸರ್ವಜ್ಞನನ್ನು ಗುರುತಿಸಿದ ಬಗೆ:** ಇದೇ ಸಮಯಕ್ಕೆ ಕಲ್ಕತ್ತಾದಿಂದ (ಕೆಲಸದ ನಿಮಿತ್ತ) ವರ್ಗವಾಗಿ ಧಾರವಾಡಕ್ಕೆ ರೈಲ್ವೆ ಅಧಿಕಾರಿಯೊಬ್ಬರು ಬಂದರು. ಅವರು ಹೋದಹೋದಲ್ಲಿ ತಾವು ಕಂಡ ವೈಚಿತ್ರ್ಯಗಳನ್ನು ಬರೆದಿಡುವ ಹವ್ಯಾಸವುಳ್ಳವರಾಗಿದ್ದರು. ಕನ್ನಡಿಗರ ಆಚಾರ–ವಿಚಾರಗಳನ್ನು ತಿಳಿಯಲು ಯತ್ನಿಸುತ್ತಿದ್ದ ಅವರು ಹೇಗೋ ಸರ್ವಜ್ಞನ ವಿಷಯವನ್ನು ಕೇಳಿ ಅವನ

ವಿಚಾರಗಳನ್ನು ಮೆಚ್ಚಿಕೊಂಡರು. ಮಾತ್ರವಲ್ಲ, ಅವನದೊಂದು ಗ್ರಂಥವನ್ನು ಕೊಂಡುಕೊಂಡು ತಮಗೆ ಕನ್ನಡವು ಬಾರದ್ದರಿಂದ ಅನೇಕರ ಸಹಾಯವನ್ನು ಕೇಳುತ್ತಿದ್ದರು. ಯಾರೂ ತಮ್ಮ ಸಮಯವನ್ನು ಆಕಡೆಗೆ ವ್ಯಯಮಾಡಲು ಸಿದ್ಧರಿಲ್ಲದುದನ್ನು ಕಂಡ ಆತ ವ್ಯಾಕುಲಚಿತ್ತರಾಗಿದ್ದರು. ಒಂದು ದಿನ ಆ ವಿಷಯವನ್ನು ಉತ್ತಂಗಿಯವರಲ್ಲಿ ಹೇಳಿಕೊಂಡರು. ಇವರು ಅವರಿಗೆ ಸಹಾಯಮಾಡುವುದಾಗಿ ಒಪ್ಪಿ ವಾರಕ್ಕೊಮ್ಮೆ ಇಬ್ಬರೂ ಕೂಡಿ ಸರ್ವಜ್ಞಾಧ್ಯಯನ ಮಾಡತೊಡಗಿದರು. ಹಾಗೆ ತಿಳಿದುಕೊಂಡ ಪದ್ಯಗಳನ್ನು ಇಂಗ್ಲಿಷಿನಲ್ಲಿ ಇವರು ಭಾಷಾಂತರಿಸಿ ಕೊಡುವುದು, ಅವುಗಳನ್ನು ಆತ ಬಂಗಾಲಿ ಭಾಷೆಯಲ್ಲಿ ಪುನಃ ಪದ್ಯರೂಪವಾಗಿ ರಚಿಸಿ ಕಲ್ಕತ್ತದ ಒಂದು ವರ್ತಮಾನ ಪತ್ರಿಕೆಯಲ್ಲಿ ಪ್ರಸಿದ್ಧಪಡಿಸುವುದು ಹೀಗೆ ನಡೆಯುತ್ತಿದ್ದಿತು. ಸರ್ವಜ್ಞನ ವಿಚಾರಗಳಿಗೆ ಮಾರುಹೋದ ಆ ವಂಗಬಂಧು ಒಂದು ದಿನ ಚನ್ನಪ್ಪನವರೊಂದಿಗೆ ಸಂಭಾಷಿಸುವಾಗ ಸರ್ವಜ್ಞಗ್ರಂಥವನ್ನು ವಿವಿಧ ಹಿಟ್ಟುಗಳಿಂದ ತುಂಬಿ ತಯಾರಿಸಿ ತಂದಿಟ್ಟ ತಬಕಕ್ಕೆ (ತಾಟು = ತಟ್ಟೆ) ಸರಿಮಾಡಿ ಹೇಳಿದರಂತೆ. ಅಷ್ಟೇ ಅಲ್ಲ, ಅದು ಕನ್ನಡದ ಸೌಂದರ್ಯದ ಸೊಬಗಿನಿಂದ ಮೆರೆಯುತ್ತ ತಿರುಳುಗನ್ನಡದ ತನಿಗಂಪನ್ನು ಬಹುದೂರದವರೆಗೆ ಬೀರುತ್ತ ಕಂಗೊಳಿಸುವ ಕರ್ನಾಟಕದ ಹೂದೋಟವೆಂದೂ ಅದರಲ್ಲಿ ಕೆಲವು ದಿವಸ ತಿರುಗಾಡಿದರೆ ಸಾಕು ತನ್ನಂಥ ಪರದೇಶಸ್ಥನ ವಸ್ತ್ರಗಳಾದರೂ ಸುವಾಸಿಸದಿರಲಾರದೆಂದೂ ಒಮ್ಮೆ ಕನ್ನಡಿಗನೊಬ್ಬ ಆ ಅಧಿಕಾರಿಗೆ ಹೇಳಿದನಂತೆ. ಇದನ್ನೂ ಆತ ಉತ್ತಂಗಿಯವರಿಗೆ ತಿಳಿಸಿದರು. ಆವಾಗ ಈ ತಿರುಳ್ಗನ್ನಡದ ತಿರುಕನ ಮನಸ್ಸು ಹೇಗಾಗಿರಬೇಕು? ಊಹಿಸಿದರೆ ಸಾಕು. ನಿಜವಾಗಿಯೂ ತುಂಬ ಕಸಿವಿಸಿಯಾಯಿತಂತೆ!

**ಉತ್ತಂಗಿಯವರು ಕಂಕಣಬದ್ಧರಾದುದು:** ಸಾವಿರಾರು ಮೈಲು ದೂರದಿಂದ ಬಂದು ಸ್ವಲ್ಪ ಕನ್ನಡವನ್ನಭ್ಯಾಸಮಾಡಿದ ಆ ವಿಲಾಯತಿಯ ಮಿಶನರಿಯವರೂ ನೂರಾರು ಮೈಲಿ ದೂರದಿಂದ ಬಂದು ಏನೂ ಕನ್ನಡವನ್ನರಿಯದ ಆ ವಂಗಬಂಧುವೂ ತಮ್ಮ ದೇಶದ ಕವಿಯಲ್ಲದ ಸರ್ವಜ್ಞನ ವಿಷಯಕ್ಕೆ ಇಷ್ಟು ಪ್ರಯಾಸ ಪಡುತ್ತಿರಲು ಕರ್ನಾಟಕಸ್ಥರೂ ಕನ್ನಡಿಗರೂ ಸರ್ವಜ್ಞನ ಜಿಲ್ಲೆಯಲ್ಲಿ ಜನಿಸಿದವರೂ ಆದ ಉತ್ತಂಗಿಯವರು ಈ ವಿಷಯದಲ್ಲಿ ನಿಶ್ಚಿಂತರಾಗಿ ಕುಳಿತುಕೊಳ್ಳುವುದು ಸುತರಾಂ ಸರಿಯಲ್ಲವೆನಿಸಿತು. ಆ ದಿವಸದಿಂದಲೇ ಶ್ರೀಯುತರು ಸರ್ವಜ್ಞನ ಸೇವೆಗೆ ಕಂಕಣಬದ್ಧರಾದರು. ಗ್ರಂಥಶುದ್ಧೀಕರಣದ ಯೋಚನೆಗೊಳಗಾದರು. ಹಾಗೂ ತರ್ಜುಮೆಯ ಕೆಲಸವನ್ನು ನಿಲ್ಲಿಸಿ ಗ್ರಂಥಸಂಶೋಧನೆಗೆ ಕೈಹಚ್ಚಿದರು. ಅಂತೂ ಯಾವುದೋ ಒಂದು ಅವ್ಯಕ್ತ ಶಕ್ತಿ ಉತ್ತಂಗಿಯವರನ್ನು ಸರ್ವಜ್ಞಪ್ರಪಂಚಕ್ಕೆ ಸೆಳೆದೊಯ್ದಿತು!

**ಹಸ್ತಪ್ರತಿ-ಓಲೆಪ್ರತಿಗಳಿಗಾಗಿ ಪಟ್ಟಪಾಡು:** ಕಂಡಕಂಡವರ ಕಡೆ ಕೈಚಾಚಿದ ಉತ್ತಂಗಿಯವರಿಗೆ ನಿರಾಶೆಯೇ ಕಾದಿತ್ತು! ಮಠಮಾನ್ಯಗಳಿಗೆಲ್ಲ ವಿಶೇಷ

ನಾಗಿ ವೀರಶೈವ ಮಠಗಳಿಗೆ ಹೋಗಿ ಕಾಡಿ ಬೇಡಿದರು!! ಕೆಲವೆಡೆಗಳಲ್ಲಿ ಸಿಕ್ಕಿದ ಹಸ್ತಪ್ರತಿಗಳನ್ನು ಸಂಗ್ರಹಿಸಿದರು.

ಮದ್ರಾಸು ವಿಶ್ವವಿದ್ಯಾನಿಲಯದಲ್ಲಿ ಅಭ್ಯಾಸ ಮಾಡುತ್ತಿದ್ದು ಸಂಸ್ಕೃತ ವಿಭಾಗ ದಲ್ಲಿ ಬಹುಮಾನದ ಪದಕ ಪಡೆದ ಕನ್ನಡಾಭಿಮಾನಿ ಸ್ನೇಹಿತರೊಬ್ಬರು ಧಾರವಾಡಕ್ಕೆ ಬಂದು ಚನ್ನಪ್ಪನವರು ಕಲಿಸುತ್ತಿದ್ದ ಶಾಲೆಯಲ್ಲಿಯೇ ಶಿಕ್ಷಕೋದ್ಯೋಗ ವಹಿಸಿ ಕೊಂಡರು. ಅವರ ಸಹಕಾರದಿಂದ ಸರ್ವಜ್ಞವಚನಗಳ ಸಂಪಾದನಾ ಕಾರ್ಯ ನಿರ್ವಹಿಸುತ್ತಿದ್ದಾಗ ಎಂಟೇ ತಿಂಗಳೊಳಗಾಗಿ ಬೇರೆ ಕಡೆಗೆ ವರ್ಗವಾಯ್ತು.

ಧಾರವಾಡ ಟ್ರೇನಿಂಗ್ ಕಾಲೇಜಿನ ಕನ್ನಡ ಪಂಡಿತರಾಗಿದ್ದ ಶ್ರೀ ಮೂರ್ತಾಚಾರ್ಯ ಕಟ್ಟಿ ಅವರು ಕೈಬರಹದ ಪ್ರತಿಗಳನ್ನು ದೊರಕಿಸಿ, ಅವುಗಳನ್ನು ಪರಿಶೀಲಿಸುವ ಕಾರ್ಯದಲ್ಲಿ ಕೂಡ ಕೈಲಾದ ಸಹಾಯ ಮಾಡಲು ಮುಂದೆ ಬಂದರು. ಯಾವಾಗ ಮಠಮಾನ್ಯಗಳಲ್ಲಿ ಸಾಕಷ್ಟು ಹಸ್ತಪ್ರತಿಗಳು ದೊರೆಯಲಿಲ್ಲವೋ ಆಗ ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ಯರೊಡನೆ ಪತ್ರವ್ಯವಹಾರ ನಡೆಸಿದರು. ಅವರು ಉತ್ತಂಗಿಯವರಿಗೆ ಉತ್ತರ ಬರೆದು ತಾವು ಎಲ್ಲ ಪ್ರತಿಗಳನ್ನೂ ಎರವಲಾಗಿ ಕೊಟ್ಟವರು ಪುಣ್ಯಾತ್ಮರುಗಳಿಗೆ ಹಿಂದಿರುಗಿಸಿದ್ದಾಗಿಯೂ, ಈ ಕೆಲಸವನ್ನು ಒಂದು ವರ್ಷದ ಹಿಂದೆಯೇ ಕೈಕೊಂಡಿದ್ದ ಮ|| ರಾ|| ರಾಮಚಂದ್ರರಾವ ಹನುಮಂತ ದೇಶಪಾಂಡೆ, ಎಂ. ಎ., ಅವರು ಸಮೀಪದಲ್ಲಿಯೇ ಇರುವದರಿಂದ ಅವರ ಸಹಾಯ ಕೇಳಲು ಸಲಹೆ ಮಾಡಿದರು. ಅದರಂತೆ ಪ್ರಾರ್ಥಿಸಿದಾಗ ಅವರಲ್ಲಿದ್ದ ಒಂದು ಕೈಬರಹದ ಪ್ರತಿಯನ್ನು ಕೊಟ್ಟರು. ಆದರೆ ಅದು 'ಕಾಲಜ್ಞಾನಗ್ರಂಥ'ವೆಂದು ಕಂಡು ಬಂತು.

ಮದ್ರಾಸಿನಿಂದ ತಮ್ಮ ಶಾಲೆಗೆ ಬಂದಿದ್ದು ಬೇರೆ ಕಡೆಗೆ ವರ್ಗವಾಗಿದ್ದ ಚನ್ನಪ್ಪನವರ ಹಳೆಯ ಸ್ನೇಹಿತರು, ಮದ್ರಾಸಿನಲ್ಲಿದ್ದ ಸ್ನೇಹಿತರ ಮುಖಾಂತರವಾಗಿ ಪ್ರಾಚ್ಯಕೋಶಾಲಯದಲ್ಲಿದ್ದ ಎರಡು ಪ್ರತಿಗಳನ್ನು ತರಿಸಿಕೊಟ್ಟರು. ಇದೇ ಸಮಯಕ್ಕೆ ಮೈಸೂರು ಪ್ರಾಚ್ಯಕೋಶಾಲಯದಿಂದಲೂ ಎರಡು ಪ್ರತಿಗಳು ದೊರೆತವು. ಅಂತೂ ಒಂದು ವರ್ಷದೊಳಗಾಗಿ ಬೇರೆಬೇರೆ ಕಡೆಯಿಂದ ಹತ್ತೆಂಟು ಪ್ರತಿಗಳು ಹಸ್ತಗತವಾದವು.

ಆ ಹಸ್ತಪ್ರತಿಗಳಿಗೂ ಆಗಲೇ ಮುದ್ರಣ ಕಂಡಿದ್ದ ಪ್ರತಿಗಳಿಗೂ ಅಜಗಜಾಂತರ (ವ್ಯತ್ಯಾಸ)ವಿದ್ದುದಲ್ಲದೆ, ಪದ್ಯಗಳ ಕ್ರಮಸಂಧಾನದಲ್ಲಿಯೂ ಬಹಳ ಅವ್ಯವಸ್ಥೆ ಇದ್ದುದು ಕಂಡುಬಂತು. ಅಂತೂ ಇಂತೂ ನಮಾಜು ಮಾಡಲು ಹೋಗಿ ಮಸೀದಿಯೇ ಕೊರಳಿಗೆ ಬಿದ್ದಂತಾಯಿತು! ಪರಸ್ಪರ ಗ್ರಂಥಗಳ ಪದ್ಯಗಳು ಸರಿಹೊಂದದ ಪ್ರಯುಕ್ತ ಕೆಲವು ಪ್ರತಿಗಳಿಗೆ ವರ್ಣಾನುಕ್ರಮಣಿಕೆಯನ್ನು ಮಾಡತೊಡಗಿದರು. ಇನ್ನು ವಿಷಯವಿಭಜನೆಯಲ್ಲಿ ಉತ್ತಂಗಿಯವರಿಗಾದ ಶ್ರಮವು ವರ್ಣಿಸಲಸದಳವಾದುದು.

**ಸತ್ಕಾರ್ಯಕ್ಕೆ ಶತವಿಘ್ನ :** ಈ ಎಲ್ಲ ಗೊಂದಲಗಳ ಮಧ್ಯದಲ್ಲಿ ದಿನದ ಕರ್ತವ್ಯವನ್ನು ತೀರಿಸಿಕೊಂಡು ರಾತ್ರಿಯ ವೇಳೆ ಮಕ್ಕಳುಮರಿಗಳ ಗದ್ದಲವಿಲ್ಲದ ಸಮಯದಲ್ಲಿ ಅಂದರೆ ಬೆಳಗಿನ ಝಾವ ೩-೪ ಗಂಟೆಗೇ ಎದ್ದು ಕೆಲಸಮಾಡತೊಡಗಿದ ಚನ್ನಪ್ಪನವರಿಗೆ ಒಂದೇ ಸಮನೆ ೩ ವರ್ಷ ದುಡಿಯುವಷ್ಟರಲ್ಲಿ ಮಿತಿಮೀರಿದ ದೇಹಾಲಸ್ಯವಾಯಿತು. ಅವರ ಜ್ಞಾನತಂತುಗಳು ತೀರ ಬಲಹೀನಾವಸ್ಥೆಗೆ ಸಂದವು. ಅದೇ ಸಮಯದಲ್ಲಿಯೇ ಗೃಹಕೃತ್ಯದ ಚುಕ್ಕಾಣಿಯೆನಿಸಿದ್ದ ಅವರ ತಂದೆಯವರು ತೀರಿಹೋದದ್ದು ಸಿಡಿಲುಬಡಿದಂತಾಯಿತು! ಹಿಂದೆಯೇ ಕೆಲವೇ ದಿವಸಗಳಲ್ಲಿ ತೀವ್ರ ಅಸ್ವಸ್ಥತೆಯುಂಟಾಯಿತು. ರೋಗವು ದಿನದಿನಕ್ಕೆ ಹೆಚ್ಚಿ ಮರಣಕ್ಕೆ ತುತ್ತಾಗುವ ನಿರೀಕ್ಷೆ ಹೆಚ್ಚಾಯಿತಂತೆ! ಆಗ ಉತ್ತಂಗಿಯವರ ಮನಸ್ಸಿನ ಕಸಿವಿಸಿಯನ್ನು ಊಹಿಸಿಯೇ ತಿಳಿಯಬೇಕಷ್ಟೆ. ಸರ್ವಜ್ಞ ಕಾರ್ಯಕ್ಕೋಸ್ಕರ ತನ್ನನ್ನು ಉಳಿಸೆಂದು ದೇವರಲ್ಲಿ ಮೊರೆಯಿಟ್ಟರು.

**ದೇವರ ದಯೆ :** ಭಕ್ತನ ಮೊರೆ ಭಗವಂತನಿಗೆ ಮುಟ್ಟಿತೇನೋ, ಅವನು ದಯೆತೋರಿದನೇನೊ ಎನ್ನುವಂತೆ ಒಂದೆರಡು ತಿಂಗಳಲ್ಲಿಯೇ ಕೊಂಚ ಗುಣಾಂಶವು ತೋರಹತ್ತಿತು. ಎಷ್ಟೇ ಆಗಲಿ, ಲೋಕಕಲ್ಯಾಣ ಕಾರ್ಯವಲ್ಲವೆ? ಕ್ರಮಕ್ರಮ ವಾಗಿ ಸುಧಾರಿಸಿಕೊಂಡರು. ಸರ್ವಶ್ರೀ ಯಶವಂತರಾವ ಜಠಾರ, ಮೂರ್ತಾಚಾರ್ಯ ಪಾವಟೆ, ಬೇಂದ್ರೆ ಮುಂತಾದ ವಿದ್ವನ್ಮಿತ್ರರ ಸಹಾಯವು ಗಮನಾರ್ಹ ಹಾಗೂ ಗಣನೀಯವಾಗಿ ದೊರೆತು ಉತ್ತಂಗಿಯವರ ಕನಸು ನನಸಾಗುವ ದಾರಿ ಸುಗಮ ಗೊಂಡಂತಾಯಿತು.

**ಪತ್ನಿಯ ನೆರವು :** ಈ ಮಹತ್ಕಾರ್ಯದಲ್ಲಿ ಸಹಕಾರಹಸ್ತ ನೀಡಿದ ಸುಶಿಕ್ಷಿತರೂ ಅಪಾರ ಜ್ಞಾಪಕಶಕ್ತಿಯಿದ್ದವರೂ (ಸ್ವಯಂ ಶಿಕ್ಷಕಿಯವರೂ) ಆಗಿದ್ದ ಚನ್ನಪ್ಪನವರ ಪತ್ನಿ ಸುಭಕ್ತಮ್ಮ (ಸರ್ವಜ್ಞನ ವಚನಗಳನ್ನು ವ್ಯವಸ್ಥಿತವಾಗಿ ವಿಂಗಡಿಸುವ ದಿಸೆಯಲ್ಲಿ) ಅಪಾರ ನೆರವನ್ನು ನೀಡಿದರು. ಈ ಅನಿಮಿತ್ತ ಸಹಾಯ ವನ್ನು ಕನ್ನಡಿಗರು ಎಂದೂ ಮರೆಯುವಂತಿಲ್ಲ.

**ಕನಸು ನನಸಾಯಿತು :** ಅಂತೂ ೧೯೨೪ರ ವಚನಗಳನ್ನುಳ್ಳ ಸರ್ವಜ್ಞ ಸಂಕಲನವು ೧೯೨೪ರ ರಲ್ಲಿ ಪ್ರಕಟವಾಯಿತು. ಅನಂತರ ಆ ಗ್ರಂಥವು ಅನೇಕ ಮುದ್ರಣಗಳನ್ನು ಕಂಡಿತು. ಕನ್ನಡಿಗರಿಗೆ ಸರ್ವಜ್ಞನ ಹಿರಿಮೆಯ ದರ್ಶನವಾಯಿತು.

ಈ ಮಹತ್ಸಾಧನೆಯನ್ನು ಕುರಿತು ಚನ್ನಪ್ಪನವರ ನುಡಿಗಳನ್ನೇ ಕೇಳಿರಿ : "ಸರ್ವಜ್ಞನ ವಚನಗಳೆಂಬ ಸುವಾಸನೆಯ ಸಣ್ಣಕ್ಕಿಕಾಳುಗಳು ಕನ್ನಡನಾಡಿನ ನಡು ಬೀದಿಯ ಮಣ್ಣಿನಲ್ಲಿ ಬೆರೆತು ಬಿದ್ದದ್ದೇ ನನಗೊಂದು ಹಬ್ಬವಾಯಿತು. ದಿನಾಲು ಅದನ್ನು ಮಣ್ಣಿನೊಡನೆ ಕಟ್ಟಿತಂದು, ಹಸನು ಮಾಡಿ ತೊಳೆದು, ಎಸರಿಟ್ಟು ಬಿಸಿ ಬೋನವನ್ನು ಬಸಿದಿಡಲು ಕೇಳುವುದೇನಿದೆ! ಬಡಿಸಿದರೆ ಮನೆಯಲ್ಲಿ ಗಮಗಮ ವಾಸನೆ!! ಬಾಯಲ್ಲಿ ಹಾಕಿಕೊಂಡರೆ ಬಹುರುಚಿ."[6]

**ಇ. ಪಿ. ರೈಸ್ ಅವರ ಅಭಿಮತ :** ಮಹಾರಾಷ್ಟ್ರಕ್ಕೆ ತುಕಾರಾಮನೂ, ತೆಲುಗು ನಾಡಿಗೆ ವೇಮನನೂ. ತಮಿಳಿನಲ್ಲಿ ಅವ್ವಾಯಿ ಅರುಣಗಿರಿನಾಥರೂ ಇರುವಂತೆ ಸರ್ವಜ್ಞನು ಕರ್ನಾಟಕಕ್ಕೆ ಇರುವನು.[7] ಈ ವಿಚಾರವನ್ನು ಪ್ರಸ್ತಾವನೆಯಲ್ಲಿ ಪ್ರಸ್ತಾವಿಸಿದ ಉತ್ತಂಗಿಯವರು 'ಸರ್ವಮತಗಳವರೂ ಬೋಧಪರವಾದ ಇವನ ಸುಭಾಷಿತಗಳನ್ನು ವರ್ಣಾಶ್ರಮಭೇದವಿಲ್ಲದೆ ಅತ್ಯಾದರದಿಂದ ಓದುತ್ತಿರುವರು' ಎಂದಿದ್ದಾರೆ.

ಇ. ಪಿ. ರೈಸರವರು ಆಯಾ ವಾಙ್ಮಯಗಳಲ್ಲಿ ಹೆಚ್ಚುಕಡಿಮೆ ಒಂದೇ ಸ್ಥಳವನ್ನು ಆಕ್ರಮಿಸಿಕೊಂಡಿರುವರೆಂದು ಹೇಳಿದಾಗ್ಯೂ ವೇಮನನಿಗೆ ತೆಲುಗಿನಲ್ಲಿಯೂ, ತುಕಾರಾಮನಿಗೆ ಮರಾಠಿಯಲ್ಲಿಯೂ ಇರುವ ಗೌರವವು ಕನ್ನಡದಲ್ಲಿ ಸರ್ವಜ್ಞನಿಗೆ ಇನ್ನೂ ಇರುವದಿಲ್ಲವೆಂದು ಹೇಳಬಹುದು. ಅವನ ಪದ್ಯಗಳು ಸಂಪೂರ್ಣವಾಗಿ ದೊರೆಯದಿರುವದೂ ಅಶುದ್ಧ ಮುದ್ರಣಗಳೂ ವಿಪರೀತ ಪಾಠಾಂತರಗಳೂ ಇದಕ್ಕೆ ಮುಖ್ಯ ಕಾರಣವೆಂದು ತಿಳಿದುಬರುತ್ತದೆ, ಎಂಬುದಾಗಿ ಈ ಸಂಶೋಧಕರು ಕೊಂಚ ನಿರಾಶೆಯ ಮಾತುಗಳನ್ನೇ ಹೊರಗೆಡವಿದ್ದಾರೆ.[8]

ಆದರೆ ನಮಗನ್ನಿಸುತ್ತದೆ, ಅಷ್ಟೊಂದು ನಿರಾಶೆಹೊಂದಬೇಕಾದ ಪ್ರಮೇಯವಿಲ್ಲ ವೆಂದು ; ಕಾರಣ, ಜನಸಾಮಾನ್ಯರಿಂದ ಹಿಡಿದು ಪಂಡಿತವರೇಣ್ಯರ ವರೆಗೆ ಬಹುತೇಕ ಎಲ್ಲ ಕನ್ನಡಿಗರ ಬಾಯಲ್ಲಿ ಸರ್ವಜ್ಞನ ಒಂದಿಲ್ಲೊಂದು ನುಡಿಯನ್ನು (ನುಡಿಗಟ್ಟು ಎಂದೇ ಹೇಳಬೇಕು) ಕಡೆಗೆ ಗಾದೆಯ ಮಾತಿನಂತೆ ಆದರೂ ಕೇಳುತ್ತಿದ್ದೇವಲ್ಲ ; ಅದೊಂದು ಪರಮ ಸೌಭಾಗ್ಯವಲ್ಲವೆ ? ಬಹುಶಃ ಉತ್ತಂಗಿಯವರು ಪರಿಶ್ರಮ ಪಡುತ್ತಿದ್ದ ಕಾಲದಲ್ಲಿ ಅಂದರೆ .ಅರ್ಧಶತಮಾನಕ್ಕೂ ಹಿಂದೆ ಆ ರೀತಿ ಇದ್ದಿರ ಬಹುದೆಂದು ತೋರುತ್ತದೆ. ಅವರ ಯಶಸ್ವೀ ಕಾರ್ಯಾಚರಣೆಯಿಂದ ಮೊದಲ್ಗೊಂಡು ಬೇರೆಬೇರೆ ಶೋಧಕರು ಹುಟ್ಟಿಕೊಂಡು ನಾನಾರೀತಿ ಶೋಧನೆ ಸಂಪಾದನೆಗಳನ್ನು ಮಾಡಿ ಆ ಮಹಾಮೂರ್ತಿಯ ದರ್ಶನವನ್ನು ಸಾಕಷ್ಟು ಚೆನ್ನಾಗಿಯೇ ನಾಡಿಗೆ ಮಾಡಿಕೊಟ್ಟಿದ್ದಾರೆ.

**ಮೂಲಪ್ರತಿಗಳ ವಿಚಾರ :** ಉತ್ತಂಗಿಯವರು ಸರ್ವಜ್ಞ ಪ್ರಪಂಚವನ್ನು ಪ್ರವೇಶಿಸುವ ಶುಭಾವಸರದಲ್ಲಿಯೇ ಕೆಲವು ಮೂಲಪ್ರತಿಗಳು ದೊರಕಿದ ರೀತಿಯನ್ನು ಮೇಲೆ ಸೂಚಿಸಲಾಗಿದೆ. ಈಗ ಉಳಿಕೆ ವಿವರವನ್ನು ಪ್ರಸ್ತಾಪಿಸಲಾಗುತ್ತದೆ :

ಸರ್ವಜ್ಞನು ಜೀವಂತನಿದ್ದಾಗ ಬರೆಯಲ್ಪಟ್ಟ ಓಲೆಯ ಪ್ರತಿಗಳಂತೂ ದೊರೆಯುವುದು ದುರ್ಲಭವೇ. ರೆವರೆಂಡ ಎಫ್. ಕಿಟಲ್ ಪಂಡಿತರಿಗೆ ಎರಡು ಕೈಬರಹದ ಪ್ರತಿಗಳು ದೊರೆತಿದ್ದಂತೆ ಅವರು ನಾಗವರ್ಮ-ಛಂದಸ್ಸಿಗೆ ಬರೆದ ವಾಙ್ಮಯ–ನಿಬಂಧದಿಂದ ತಿಳಿದುಬರುತ್ತದೆ.[9]

ಆರ್. ನರಸಿಂಹಾಚಾರ್ಯರು ನೂರಕ್ಕಿಂತ ಹೆಚ್ಚು ಓಲೆಯ ಪ್ರತಿಗಳನ್ನು ಶೋಧಿಸಿದ್ದಂತೆಯೂ ಶುದ್ಧವಾಗಿರುವದೊಂದು ಪ್ರತಿಯು ಮೈಸೂರು ರಾಜೂಟಿ

ಶಾಸ್ತ್ರಿಗಳ ಬಳಿಯಲ್ಲಿರುವಂತೆಯೂ ಅವರು ಉತ್ತಂಗಿಯವರಿಗೆ ಬರೆದ ಒಂದು ಪತ್ರದಿಂದ ತಿಳಿಯಿತು.

ಕ್ರಿ. ಶ. ೧೮೭೦ರಿಂದೀಚೆಗೆ ದೊರೆಯುವ ಕೆಲವು ಕೈಬರಹದ ಪ್ರತಿಗಳು ಅಷ್ಟರೊಳಗೆ ಅಚ್ಚಾಗಿದ್ದ ಮುದ್ರಣಗ್ರಂಥಗಳ ಯಥಾಪ್ರತಿಗಳಾಗಿದ್ದವು. ಕೆಲವರು ಈ ಹಸ್ತಪ್ರತಿಗಳನ್ನೇ ಮೂಲಪ್ರತಿಗಳೆಂದು ಭಾವಿಸಿದ್ದುಂಟು. ಸರ್ವಜ್ಞನ 'ಕಾಲಜ್ಞಾನ ತ್ರಿಪದಿ' ಎಂಬದೊಂದು ಕೈಬರಹದ ಗ್ರಂಥವೂ ದೊರೆತಿದ್ದಿತೆಂದು ಈ ಮೊದಲು ತಿಳಿಸಿದೆಯಷ್ಟೆ. ಈ ಹೆಸರಿನ ಎರಡು ಪ್ರತಿಗಳು ಸಿಕ್ಕಿದ್ದರಿಂದ ಪರಸ್ಪರ ತುಲನೆ ಮಾಡಲು ಸಾಧ್ಯವಾಯಿತಾದರೂ, ಅವೆರಡಕ್ಕೂ ಪದಸಂಖ್ಯೆಯಲ್ಲಿ ಸಾಕಷ್ಟು ಅಂತರವಿದ್ದುದು ಕಂಡುಬಂದಿತು. ಚನ್ನಪ್ಪ ಉತ್ತಂಗಿಯವರಿಗೆ ದೊರೆತ 'ಕಾಲಾಜ್ಞಾನ ಗ್ರಂಥ'ದಲ್ಲಿ ೬೭೨ ಪದ್ಯಗಳಿದ್ದವು. ಇವು ತ್ರಿಪದಿರೂಪವಾಗಿ ತೋರಿದರೂ ಛಂದೋಬದ್ಧವಾಗಿರದೆ ಶಿಥಿಲ ಪ್ರಾಸದಲ್ಲಿ ಹೇಳಿದ ಗದ್ಯ ವಚನಗಳಾಗಿದ್ದವು ! (ಬೇರೆಯವರಿಗೆ ದೊರೆತ) ಇನ್ನೊಂದರಲ್ಲಿ ೪೫೬ ಪದ್ಯಗಳಿದ್ದವು.

ಈ ಉಭಯ ಕಾಲಜ್ಞಾನ ಗ್ರಂಥಗಳ ಆರಂಭದಲ್ಲಿ 'ಬಸವ ನೀವು ನಿರೂಪಿಸಿದ ಕಾಲಜ್ಞಾನದ ಭಸಿತನಿಟ್ಟು ನಾ ನಿಮ್ಮ ಶಿಶುವೆಂದು ಪೇಳ್ವೆ' ಎಂಬುದಾಗಿಯೂ 'ಬಸವಾದಿ ಪ್ರಮಥರು ಕಲ್ಯಾಣದ ಅನುಭವ ಮಂಟಪದಲ್ಲಿ ಸರ್ವಜ್ಞ ಗಣೇಶ್ವರನಿಗೆ ನಿರೂಪಿಸಿದ ಕಾಲಜ್ಞಾನವು' ಎಂಬುದಾಗಿಯೂ ಹೇಳಿರುವದರಿಂದ ಈತನು 'ಬಸವ ಕಾಲಜ್ಞಾನ'ವನ್ನೇ ಅನುಸರಿಸಿದಂತೆ ತಿಳಿಯುತ್ತದೆ.

**ವಚನಗಳೆಂದು ಕರೆವ ರೂಢಿ:** ಸರ್ವಜ್ಞಮೂರ್ತಿ ತ್ರಿಪದಿಯಲ್ಲಿ ರಚಿಸಿದ ಈ ಕವನಗಳನ್ನು ಸರ್ವಜ್ಞನ ತ್ರಿಪದಿ ಎಂದೂ, ಸರ್ವಜ್ಞ ವಚನಗಳು ಎಂದೂ ಕರೆಯುವ ಸಂಪ್ರದಾಯವುಂಟು. ಉತ್ತಂಗಿಯವರಂತೂ ತಮ್ಮ ಸಂಶೋಧಿತ ಸರ್ವಜ್ಞ ಪದ್ಯಗಳ ಸಂಕಲನಕ್ಕೆ ವಚನಗಳೆಂದೇ ಹೆಸರಿಸಿದ್ದಾರೆ. ಪ್ರಾಯಶಃ ಬಸವೇಶ್ವರಾದಿ ಸಂತರ ವಚನಗಳನ್ನು ಹೋಲುವ ಈ ನುಡಿಮುತ್ತುಗಳನ್ನು ವಚನಗಳೆಂದೇ ಜನ ಕರೆದು ಗೌರವಿಸಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ ದಿ|| ಎಂ ಮರಿಯಪ್ಪ ಭಟ್ಟರು.[10] ಇವರೂ ಕೂಡ ತಮ್ಮ ಸಂಕಲನಕ್ಕೆ 'ಸರ್ವಜ್ಞ ವಚನ ಸಂಗ್ರಹ' ಎಂದೇ ನಾಮಕರಣಮಾಡಿರುತ್ತಾರೆ.

ವಚನಗಳೆಂದು ಕರೆಯುವಲ್ಲಿ ಸರ್ವಜ್ಞಕವಿಗೆ ಬಸವೇಶ್ವರರ ಬಗೆಗೆ ಇದ್ದ ಅಪಾರ ಭಕ್ತಿ–ಗೌರವಗಳೂ ಕಾರಣವಿದ್ದಿರಬೇಕೆನಿಸುತ್ತದೆ ; ಆತನದೊಂದು ತ್ರಿಪದಿ ನೋಡಿರಿ :

ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವದು
ಬಿಸಿಲಿಂಗೆ ಹಸುರೊಳೆಸೆದಿರ್ಪ ಹನಿಯಾರಿ
ಹುಸಿದು ಹೋದಂತೆ ಸರ್ವಜ್ಞ

**ಸರ್ವಜ್ಞ ವಚನಗಳ ಪ್ರತಿಕಾರರು:** ಸರ್ವಜ್ಞ ವಚನಗಳನ್ನು ಪ್ರತಿ ಮಾಡಿದವರಲ್ಲಿ ಜೈನರೂ, ಲಿಂಗಾಯತರೂ ಮುಖ್ಯರು. ಜೈನರು ಬರೆದ ಪ್ರತಿಗಳಲ್ಲಿ ನೈತಿಕ ಪದ್ಯಗಳ ಕಡೆಗೂ ಲಿಂಗಾಯತರು ಬರೆದ ಪ್ರತಿಗಳಲ್ಲಿ ಷಟ್ಸ್ಥಲಗಳ ಕಡೆಗೂ ವಿಶೇಷ ಒಲವಿದ್ದಂತೆ ತೋರುತ್ತದೆ. ಅವರವರು ಕ್ರಮವಾಗಿ 'ಶ್ರೀ ವೀತರಾಗಾಯ ನಮಃ', 'ಶ್ರೀ ಗುರುಬಸವಲಿಂಗಾಯನಮಃ' ಎಂದು ಗ್ರಂಥಾರಂಭಮಾಡಿರುವರು. ಇದುವರೆಗೆ ಲಿಖಿತವಾದ ಸರ್ವಜ್ಞನ ಕೈಬರಹದ ಪ್ರತಿಗಳನ್ನು ಮೂಲಸಂಗ್ರಹಗಳೆಂದೂ, ನೂತನಸಂಗ್ರಹಗಳೆಂದೂ ಎರಡು ಭಾಗಗಳಾಗಿ ವಿಭಾಗಿಸಬಹುದು ಎನ್ನುತ್ತಾರೆ ಉತ್ತಂಗಿಯವರು. ಮೂಲ ಸಂಗ್ರಹಗಳಲ್ಲಿನ ಎಲ್ಲ ಪದ್ಯಗಳೂ ಒಂದೇ ಕ್ರಮವನ್ನನುಸರಿಸಿ ಬರೆಯಲ್ಪಟ್ಟಿರುವುದರಿಂದ ಒಂದನ್ನೊಂದು ಹೋಲುತ್ತವೆ. ಆದರೆ ಎರಡನೆಯ ತೆರನ ಪ್ರತಿಗಳು ಸ್ವತಂತ್ರ ಕ್ರಮದಿಂದ ಬರೆಯಲ್ಪಟ್ಟಿದ್ದು ಪ್ರತಿಯೊಂದರಲ್ಲಿಯೂ ಹೊಸ ಹೊಸ ಪದ್ಯಗಳು ದೊರೆಯುತ್ತ ಹೋಗುತ್ತವೆ. ಇದರಿಂದ ಸರ್ವಜ್ಞನ ಕಾಲಾನಂತರದ ಕೆಲವು ವರ್ಷಗಳಲ್ಲಿ ಆಗ್ಗೆ ರೂಢಿಯಲ್ಲಿದ್ದ ಪದ್ಯಗಳ ಜತೆಗೆ ಅನೇಕ ಹೊಸ ಪದ್ಯಗಳುಂಟಾದವೆಂದೂ ಆರಂಭದಿಂದಲೇ ಸರ್ವಜ್ಞನ ಪದ್ಯ ಸಂಗ್ರಹದಲ್ಲಿ ಎರಡು ತೆರನ ಆವೃತ್ತಿಗಳು ಉದ್ಭವವಾದವೆಂದೂ ತಿಳಿದುಬರುತ್ತದೆ. ಉತ್ತಂಗಿಯವರಿಗೆ ಸಿಕ್ಕಿದ ಮೈಸೂರು ಮದ್ರಾಸು ಪ್ರಾಚ್ಯ ಕೋಶಾಲಯಗಳ ಪ್ರತಿಗಳಲ್ಲಿಯೂ ಇದೇ ತರಹದ ಭೇದವು ಕಂಡುಬರುತ್ತದೆ. ಬಹುಶಃ ಚನ್ನಪ್ಪನವರ ಸಂಪಾದನೆಗಿಂತ (ಅಂದರೆ ೧೯೨೪ರ) ಮುನ್ನ ಅಚ್ಚಾಗಿರುವ (ಸರ್ವಜ್ಞ ಪದ್ಯ) ಗ್ರಂಥಗಳೆಲ್ಲ ಈ ಎರಡು ತರಹದ ಕೈಬರಹದ ಪ್ರತಿಗಳ ಮಿಶ್ರಪಾಠವುಳ್ಳವು.

**'ಱ'ಕಾರ ಪ್ರಯೋಗ:** ಸರ್ವಜ್ಞ ವಚನಗಳ ಹಸ್ತಲಿಖಿತಗಳಲ್ಲಿ ಹಳಗನ್ನಡದ 'ಱ' ಎಂಬ ಅಕ್ಷರವು ಆಗಾಗ್ಗೆ ದೊರೆಯುವುದರಿಂದ (ಸರ್ವಜ್ಞನ) ಕಾಲವನ್ನು ತಿಳಿಯುವುವಕ್ಕೆ ಸಹಾಯವಾಗುವುದು. ಕನ್ನಡದ ಹಳೇ ಬರಹದ ಪದ್ಧತಿಯಂತೆ ಹಸ್ತಪ್ರತಿಗಳಲ್ಲಿ ಸೊನ್ನೆಯ ಬದಲಾಗಿ ಆಯಾ ವರ್ಗದ ಅನುನಾಸಿಕಗಳು ಬರುವುವಲ್ಲದೆ ಅ, ಆ ಎಂಬ ಸ್ವರಗಳನ್ನು ಬಿಟ್ಟು ಉಳಿದ ಎಲ್ಲ ಸ್ವರಗಳೂ ವ್ಯಂಜನಗಳಂವಲೇ (ಯಿ, ವು ಇತ್ಯಾದಿ?) ಬರೆಯಲ್ಪಟ್ಟಿವೆ. ಇದರಿಂದ ಈಗಿನ ಹಾಗೂ ಹಿಂದಿನ ಬರಹ ಪದ್ಧತಿಗೆ ಇರುವ ವ್ಯತ್ಯಾಸವು ತಿಳಿದುಬರುತ್ತದೆ.

**ಮುದ್ರಣ ಪ್ರತಿಗಳ ವಿಚಾರ:** ಸರ್ವಜ್ಞ ಪದ್ಯಗಳನ್ನು ಮೊದಲು ಮುದ್ರಿಸಿದವರು ಹುಚ್ಚಯ್ಯ ಹೊನ್ನಾಪುರಮಠ ಎಂಬುವರು; ಇಸವಿ ೧೮೬೮; ಶಿಲಾ ಮುದ್ರಣವಾದ (ಕಲ್ಲು-ಅಚ್ಚು) ಇದರಲ್ಲಿ ೨೨೪ ಪದ್ಯಗಳಿವೆ. ಇವರು ತಮಗೆ ಗೊತ್ತಿದ್ದ ಪದ್ಯಗಳನ್ನಷ್ಟೆ ಮುದ್ರಿಸಿರುವಂತೆ ತೋರುತ್ತದೆ.

ಮುಂದೆ ೧೮೬೮ರಲ್ಲಿ (ಮರು ವರುಷವೇ) ಬೆಂಗಳೂರಿನ ವೆಸ್ಲಿಯನ್ ಮಿಶನ್ನಿನವರದೊಂದು ಮುದ್ರಣವಾಗಿರುವದು. ಇದರಲ್ಲಿ ೧೧೦೫ ಪದ್ಯಗಳು ಮಾತ್ರ ಇವೆ.

ಇವುಗಳನ್ನು ಗಂಗಾಧರ ಮಡಿವಾಳೇಶ್ವರ ಎಂಬುವರು ೧೮೬೯ರಲ್ಲಿ ಛಾಪೆಯಾದ ಕನ್ನಡ ನಾಲ್ಕನೆಯ ಪುಸ್ತಕವಲ್ಲಿಯೂ, ಅವರ ಮಾರನೆಯ ವರ್ಷ ಅಂದರೆ ೧೮೭೦ ರಲ್ಲಿ ಛಾಪೆಯಾದ ಕನ್ನಡ ಆರನೆಯ ಪುಸ್ತಕದಲ್ಲಿಯೂ ಸೇರಿಸಿರುವರು.

ಇದೇ ಸುಮಾರಿಗೆ ಅಂದರೆ ೧೮೭೮ ರಲ್ಲಿ ಬಾಸೆಲ್ ಮಿಶನ್ನಿನ ಮಿಶನರಿಗಳಲ್ಲೊಬ್ಬರಾದ ರಿವರೆಂಡ್ ಜಿ. ವಿರ್ತರೆಂಬವರು 'ಪ್ರಾಕ್ಕಾವ್ಯಮಾಲಿಕೆ' ಎಂಬನೊಂದು ಕನ್ನಡ ಕಾವ್ಯಸಂಗ್ರಹವನ್ನು ಪ್ರಸಿದ್ಧಿಸಿರುವರು. ಇದರಲ್ಲಿ ೩೪೧ ಸರ್ವಜ್ಞ ಪದ್ಯಗಳಿವೆ. ಇವರು ಮಿಶನರಿಯ ಉದ್ದೇಶವನ್ನು ಮುಂದಿಟ್ಟುಕೊಂಡು ತಮಗೆ ಸರಿಕಂಡ ಪದ್ಯಗಳನ್ನು ಮಾತ್ರ ಆಯ್ಕೆಮಾಡಿರುವರು.

ಈ ಪ್ರಾಕ್ಕಾವ್ಯಮಾಲಿಕೆಯನ್ನು ಕೈಬರಹದ ಎರಡು ಪ್ರತಿಗಳನ್ನು ಆಧಾರ ಮಾಡಿಕೊಂಡು ಅದೇ ಮಿಶನ್ನಿನ ಪಂಡಿತ ಎಫ್. ಕಿಟಲ್ ಎಂಬ ಇನ್ನೊಬ್ಬ ಮಿಶನರಿಯವರು ತಾವು ರಚಿಸಿದ ಕರ್ನಾಟಕ ಕಾವ್ಯಮಾಲೆಯಲ್ಲಿಯೂ (೧೮೭೪) ಕನ್ನಡ-ಇಂಗ್ಲಿಷು ನಿಘಂಟಿನಲ್ಲಿಯೂ (೧೮೯೪) ಉದಾಹರಣೆಗಾಗಿ ಕೆಲವು ಪದ್ಯಗಳನ್ನು ಆರಿಸಿ ಕೊಟ್ಟಿರುವರು. ಈ ಪದ್ಯಗಳ ಸಂಖ್ಯೆಯು ಸುಮಾರು ೨೩೦ ಆಗುವುದು. ಇವರು ಇವುಗಳಲ್ಲಿ ಹಳಗನ್ನಡ 'ಱ ೞ' ಎಂಬ ಅಕ್ಷರಗಳನ್ನು ಲಕ್ಷಿಸಿ ಬರೆದಿರುವುದಲ್ಲದೆ ಅಲ್ಲಲ್ಲಿ ಆವರಣದಲ್ಲಿ ಕೆಲವು ಅರ್ಥಸೂಚಕ ಶಬ್ದಗಳನ್ನು ಸೇರಿಸಿರುವರು.

ಸನ್ ೧೮೮೧ ರಲ್ಲಿ ಮದ್ರಾಸು ಅಂಬಾ ಶಂಕರ ಮುದ್ರಾಕ್ಷರ ಶಾಲೆಯಲ್ಲಿ ಉಂತುಕಲ್ಲು ಗಿರಿಮಲ್ಲಯ್ಯನವರಿಂದ ಒಂದು ಗ್ರಂಥವು ಮುದ್ರಣವಾಗಿರುವುದು.

ಮುಂದೆ ೧೮೯೩ ರಲ್ಲಿಯೂ ಒಂದು ಗ್ರಂಥವು ಪ್ರಸಿದ್ಧವಾಗಿದೆ. ಆದರೆ ಇದು ೧೮೮೧ ರಲ್ಲಿ ಛಾಪೆಯಾದ ಗ್ರಂಥದ ಪುನರ್ಮುದ್ರಣವಾಗಿದ್ದು, ಇದರಲ್ಲಿರುವ ಪದ್ಯಸಂಖ್ಯೆ ಸರಿಯಾಗಿಲ್ಲ: ನೂರಾರು ಪದ್ಯಗಳು ಕಡಿಮೆಯಾಗಿವೆ.

ಅನಂತರ ೧೯೦೩ ರಲ್ಲಿ ಬಳ್ಳಾರಿ ಶಿವಲಿಂಗ ಶೆಟ್ಟರಿಂದ ಕರ್ನಾಟಕ ಬುಕ್ ಡಿಪೋದ ಮುದ್ರಾಕ್ಷರ ಶಾಲೆಯಲ್ಲಿ ಒಂದು ಗ್ರಂಥವು ಪ್ರಕಟವಾಗಿರುವುದು. ಇದು ೧೮೯೩ ರಲ್ಲಿ ಅಚ್ಚಾದ ಗ್ರಂಥದ ಪುನರ್ಮುದ್ರಣವಿರುವುದು. ಇದರ ಹೊರಗಡೆಯಲ್ಲಿ ೧೫೦೦ ಪದ್ಯಗಳಿದ್ದಂತೆ ಬರೆದಿದ್ದರೂ, ಇದು ಲೆಕ್ಕಿಸದೆ ಸುಮ್ಮನೆ ಛಾಪಿಸಿದ ಒಂದು ಅಂಕಿಯಾಗಿದೆ.

ಸನ್ ೧೯೦೬ ರಲ್ಲಿ ಬೆಂಗಳೂರು ಡಿ. ಜಿ. (ದೊಡ್ಡಬೆಲೆ ಇರಬಹುದೆ?) ನಾರಾಯಣ ಶಾಸ್ತ್ರಿಗಳಿಂದ ಮೂಲಗ್ರಂಥಕ್ಕೆ ಟೀಕಾ ತಾತ್ಪರ್ಯ ಸಹಿತವಾಗಿ ಬರೆದ ೨೨೦ ಪುಟಗಳ ಒಂದು ಗ್ರಂಥವಿರುವುದು. ಇದರಲ್ಲಿ ೧೧೫೬ ಪದ್ಯಗಳಿದ್ದಂತೆ ಅವರು ಹೇಳಿರುವರು. ಇದು ಅದೇ (ಶಿವಲಿಂಗಶೆಟ್ಟರ) ಕರ್ನಾಟಕ ಬುಕ್ ಡಿಪೋದಲ್ಲಿ ಮುದ್ರಣವಾದದ್ದು. ಆದರೆ ಪದ್ಯಗಳು ಕೆಟ್ಟುಹೋಗಿ ಅರ್ಥಮಾಡುವದಕ್ಕೆ ಕಷ್ಟ

ವಾದಲ್ಲಿ ಶಾಸ್ತ್ರಿಗಳು ಹೇಗಾದರೂ ಒಂದು ಅರ್ಥವನ್ನು ಜೋಡಿಸಿರುವದಲ್ಲದೆ ಅನೇಕ ಪದ್ಯಗಳಿಗೆ ಅಬದ್ಧವಾದ ಅರ್ಥ ಬರೆದಿರುವರು.

ಸನ್ ೧೮೭೮ ರಿಂದ ಪ್ರತಿ ೫-೬ ವರ್ಷಕ್ಕೊಮ್ಮೆ ಪುನಃ ಪುನಃ ಹೊಸದಾಗಿ ಅಚ್ಚಾಗಿದ್ದರೂ ಸರ್ವಜ್ಞ ಗ್ರಂಥವು ತಪ್ಪಿಲ್ಲದಂತೆ ಮುದ್ರಿತವಾಗುವ ಯತ್ನವು ೧೯೨೦ ರ ವರೆಗೆ ನಡೆದಂತೆ ಕಾಣಲಿಲ್ಲ.

೧೯೦೬ರಲ್ಲಿ ವಾಜಪೇಯ ಕೃಷ್ಣಯ್ಯನವರು ೮೨ ಪುಟಗಳಲ್ಲಿ ೬ ಪುಟಗಳಷ್ಟು ಮಾತ್ರವೇ ಮುದ್ರಣ ದೋಷಗಳಿಲ್ಲದಂತೆ ಛಾಪಿಸುವುದಕ್ಕೆ ಪ್ರಯತ್ನಿಸಿರುವರು.

೧೯೧೬ರಲ್ಲಿ 'ವೇಮಣ್ಣ-ಸರ್ವಜ್ಞ ಸಂವಾದ'ವೆಂಬ ಗ್ರಂಥವು ಬೆಂಗಳೂರು ಸಿಟಿ ಪ್ರೆಸ್ಸಿನವರಿಂದ ಪ್ರಸಿದ್ಧಿಸಲ್ಪಟ್ಟಿರುವುದು. ಇದರಲ್ಲಿ ತೆಲುಗು ಪದ್ಯಗಳನ್ನು ಬಿಟ್ಟು ಕೇವಲ ಕನ್ನಡ ಪದ್ಯಗಳು ಸುಮಾರು ೨೫೦ ಇರುವವು.

ಚನ್ನಪ್ಪ ಉತ್ತಂಗಿಯವರು ಈ ಸಾಹಸ ಕಾರ್ಯಕ್ಕೆ ಕೈಹಾಕಿ ಯಶಸ್ವಿಗಳಾಗುವವರೆಗೆ ಮುದ್ರಣವಾದ ಸರ್ವಜ್ಞಗ್ರಂಥಗಳಲ್ಲೆಲ್ಲ ೧೯೨೦ರಲ್ಲಿ ಬೆಂಗಳೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಕಂಪನಿಯವರಿಂದ ಪ್ರಸಿದ್ಧಿಸಲ್ಪಟ್ಟ ಗ್ರಂಥವೇ ಕೊನೆಯದು. ಇದಕ್ಕೆ 'ನೀತಿಸಾರ'ವೆಂದು ಹೆಸರು. ಇದು ಕರ್ನಾಟಕ ಗ್ರಂಥಾವಳಿಯ ತೃತೀಯ ಭಾಗ. ಮುದ್ರಣ ದೋಷಗಳ ದೃಷ್ಟಿಯಿಂದ ಈ ಗ್ರಂಥವು ಇತರ (ಹಿಂದಿನ) ಗ್ರಂಥಗಳಿಗಿಂತ ಉತ್ತಮವೆಂದು ಹೇಳಬಹುದಾಗಿದೆ.

ಆದರೆ ಗ್ರಂಥಕರ್ತರು (ಸಂಪಾದಕರು) ಪೂರ್ವದ ದೋಷಗಳನ್ನು ಪರಿಹರಿಸಲಿಕ್ಕೆ ಪ್ರಯತ್ನಿಸಿ ಕೆಲವೆಡೆಗಳಲ್ಲಿ ವಿಪರೀತವಾಗಿ ಪದ್ಯಗಳನ್ನು ಬದಲಾಯಿಸಿರುವದರಿಂದ ಅವುಗಳ ಸೌಂದರ್ಯವೇ ಕೆಟ್ಟುಹೋಗಿದೆ.

ಒಟ್ಟಾರೆ ತಹಲ್‌ವರೆಗೆ ಛಾಪೆಯಾದ ಸರ್ವಜ್ಞಗ್ರಂಥಗಳಲ್ಲಿ ಮುದ್ರಣ ದೋಷಗಳ ದೃಷ್ಟಿಯಿಂದ ಒಂದಕ್ಕಿಂತ ಒಂದು ಕೀಳಾಗಿರುವುದನ್ನು ಕಾಣಬಹುದು. ರ ಠ, ದ ಧ, ನ ಸ, ತ ಕ ಮುಂತಾದ ಅಕ್ಷರಗಳ ವ್ಯತ್ಯಾಸವಿಲ್ಲದೆ ಮುದ್ರಿಸಿರುವ ದೋಷಗಳಿಗಂತೂ ಲೆಕ್ಕವಿಲ್ಲ !

ಕೈಬರಹದ ಪ್ರತಿಗಳನ್ನು ಚೆನ್ನಾಗಿ ಶೋಧಿಸದೆಹೋದಾಗ ಬರಹದ ದೋಷದಿಂದ ತಪ್ಪುಗಳು ಹೇಗೆ ಒಳನುಗ್ಗುವವೆನ್ನುವುದಕ್ಕೆ ಉದಾಹರಣೆ :

ಅಂದಿನಾ ಪುಷ್ಪದತ್ತ ಒಂದೇವರುಷಿಯಾಗಿ !
ಮುಂದೇವಸಾಲೆ ಸರ್ವಜ್ಞನೆಂದೆನಿಸಿ ।
ನಿಂದವನು ನಾನೆ ಸರ್ವಜ್ಞ ॥ (ಬಳ್ಳಾರಿ ಮುದ್ರಣ)

ಅಂದಿನ ಪುಷ್ಪದತ್ತ ಮುಂದೇವರುಷಿಯಾಗಿ ।
ಸಂಕೇತವುಳದು ಸರ್ವಜ್ಞನೆಂದೆನಿಸಿ ।
ನಿಂದವನು ನಾನೆ ಸರ್ವಜ್ಞ ॥ (ಬೆಂಗಳೂರು 'ನೀತಿಸಾರ')

ಈ ಪದ್ಯದ (ಸರಿಯಾದ) ಮೂಲರೂಪ (ಉತ್ತಂಗಿಯವರ ಶೋಧನೆಯ ಪ್ರಕಾರ)

ಅಂದಿನ ಪುಷ್ಪದತ್ತ ಬಂದ ವರರುಚಿಯಾಗಿ ।
ಮುಂದವ ಸಾಲೆ ಸರ್ವಜ್ಞನೆಂದೆನಿಸಿ ।
ನಿಂದವನು ನಾನೆ ಸರ್ವಜ್ಞ ॥

ಇಲ್ಲಿ ಟೀಕಾಕಾರರು 'ಬಂದೇವರುಷಿಯಾಗಿ' ಎಂಬುದಕ್ಕೆ ಒಮ್ಮೆ ದೇವಸಭೆಯಲ್ಲಿ ಋಷಿಯಾಗಿದ್ದವನೆಂದು ಅರ್ಥಮಾಡಿದರೂ 'ಸಾಲೆಸರ್ವಜ್ಞ' ಎನ್ನುವುದಕ್ಕೆ ಯಾವ ಅರ್ಥಮಾಡಬೇಕೆಂದು ತಿಳಿಯದೇ ಹೋಗುವವದರಿಂದ ನೀತಿಸಾರಕರ್ತರು 'ಸಂದೇಹಮುಳಿದು' ಎಂಬುದಾಗಿ ತಿದ್ದಿರುವರು. 'ಸಾಲೆ ಸರ್ವಜ್ಞ'ನೆಂಬುದಕ್ಕೆ ಕಿಟಲ್ ಪಂಡಿತರು ಸಾಲೆಯಲ್ಲಿ ಕಲಿತವನೆಂದು ಅರ್ಥಮಾಡಿರುವರು. ಆದರೆ ಮೂಲಪ್ರತಿ (ಪದ್ಯ ೮) ನೋಡಿದರೆ ಕುಂಬಾರ ಸಾಲೆಯಲ್ಲಿ ಸರ್ವಜ್ಞನು ಬಾಲ್ಯವನ್ನು ಕಳೆದದ್ದರಿಂದ ಬಂದ ಹೆಸರೆಂದು ಸ್ಪಷ್ಟವಾಗುತ್ತದೆ.

**ಪದ್ಧತಿಗಳಾಗಿ ವಿಂಗಡಣೆ :** ಸಾಹಿತ್ಯಾಭ್ಯಾಸಿಗಳು ಸರ್ವಜ್ಞ ವಚನಗಳನ್ನು ಪದ್ಧತಿಗಳಾಗಿ ವಿಭಾಗಿಸಿರುತ್ತಾರೆ. ಕೆಲವು ಹಸ್ತಲಿಖಿತ ಪ್ರತಿಗಳಲ್ಲಿ ೨೭ ಪದ್ಧತಿಗಳೂ ಮತ್ತೆ ಕೆಲವು ಪ್ರತಿಗಳಲ್ಲಿ ೨೯ ಪದ್ಧತಿಗಳೂ ಇವೆ ಎಂಬುದಾಗಿ ಕವಿಚರಿತೆಕಾರರಾದ ರಾ. ನರಸಿಂಹಾಚಾರ್ಯರು ಹೇಳಿದ್ದಾರೆ.[11]

ಉತ್ತಂಗಿ ಚನ್ನಪ್ಪನವರಾದರೋ (ಅ) ಪಾರಮಾರ್ಥಿಕ ಪದ್ಯಗಳು ೧–೫೨೦, (ಆ) ನೈತಿಕ ಪದ್ಯಗಳು ೫೨೧–೧೪೨೭ ಮತ್ತು (ಇ) ಲೌಕಿಕ ಪದ್ಯಗಳು ೧೪೨೮–೧೯೨೮–ಹೀಗೆ ಪ್ರಮುಖವಾಗಿ ಮೂರು ಭಾಗಗಳಾಗಿ ವಿಂಗಡಿಸಿರುತ್ತಾರೆ.

ಶುದ್ಧ ಪಾಠಗಳನ್ನನುಲಕ್ಷಿಸಿ ಗುರುಪದ್ಧತಿ, ಲಿಂಗಪದ್ಧತಿ, ಇಷ್ಟಲಿಂಗಪದ್ಧತಿ, ದೈವಪದ್ಧತಿ, ಭಕ್ತಪದ್ಧತಿ, ಮಹೇಶ್ವರ ಪದ್ಧತಿ, ಜ್ಞಾನಪದ್ಧತಿ, ಯೋಗಪದ್ಧತಿ, ಶಿವಯೋಗ ಪದ್ಧತಿ, ದಾನಪದ್ಧತಿ, ರಾಜನೀತಿ ಪದ್ಧತಿ, ಸಂಗಪದ್ಧತಿ, ವಿಧಿವಶ ಪದ್ಧತಿ, ಬ್ರಾಹ್ಮಣ ಪದ್ಧತಿ, ಜೈನ ಪದ್ಧತಿ, ಮೂರ್ಖರ ಪದ್ಧತಿ, ಕಾಲಜ್ಞಾನ ಪದ್ಧತಿ, ಲೇಸು ಪದ್ಧತಿ, ಹೊಲ್ಲಪದ್ಧತಿ (ಮೊದಲ ಮುದ್ರಣ ಪ್ರತಿಯ ಪ್ರಕಾರ ಲೇಸುಪದ್ಧತಿಯಲ್ಲಿಯೇ ಹೊಲ್ಲ ಪದ್ಧತಿಯೂ ಸೇರಿಹೋಗಿರುತ್ತವೆ), ನೀತಿ ಪದ್ಧತಿ, ಜ್ಯೋತಿಷ ಪದ್ಧತಿ, ದೇಶಪದ್ಧತಿ, ಸ್ತ್ರೀವರ್ಣನಪದ್ಧತಿ, ಸ್ತ್ರೀಸ್ತುತಿ ಪದ್ಧತಿ, ಸ್ತ್ರೀನಿಂದಾ ಪದ್ಧತಿ, ಜಾರರ ಪದ್ಧತಿ, ಜಾರೆಯರ ಪದ್ಧತಿ, ವೇಶ್ಯಾ ಸ್ತ್ರೀ ಪದ್ಧತಿ, ರಸವಾದ ಪದ್ಧತಿ, ಅನ್ನ ಪದ್ಧತಿ, ವೈದ್ಯ ಪದ್ಧತಿ, ಬೆಡಗಿನ ಪದ್ಧತಿ–ಎಂಬುದಾಗಿ ೩೨ ಪದ್ಧತಿಗಳನ್ನು ಗುರುತಿಸಿರುತ್ತಾರೆ ಉತ್ತಂಗಿಯವರು.

ಇವುಗಳ ಜತೆಗೆ 'ಓನಾಮ ಪದ್ಧತಿ' ಎಂಬೊಂದು ಪದ್ಧತಿಯನ್ನು, ದಿವಗಂತ ಪಂಜೆಯವರು ಸೂಚಿಸಿರುವರು. "ಸರ್ವಜ್ಞನು ಅಲ್ಲಲ್ಲಿ ಹೇಳಿರುವ ಶಿಕ್ಷಣದ ಸೂಕ್ತಿಗಳನ್ನು, ಕ್ರೋಢೀಕರಿಸಿ ಸರ್ವಜ್ಞನ ಓನಾಮಪದ್ಧತಿಯೆಂದೂ ಹೆಸರಿಟ್ಟು

ಓದಿದರೆ, ಆತನು ಸಾಹಿತಿಗಳನ್ನು ತಲೆದೂಗಿಸತಕ್ಕ ಕವಿಯೂ ಅಲ್ಲದೆ ಈಗಿನ ಶಾಲಾ ಉಪಾಧ್ಯಾಯರು ಮನ್ನಿಸತಕ್ಕ ಶಿಕ್ಷಣತಜ್ಞನೂ ಮನಶ್ಶಾಸ್ತ್ರಜ್ಞನೂ ಆಗಿದ್ದನೆಂದು ಖಂಡಿತವಾಗಿ ಹೇಳಬಹುದು" ಎಂದಿದ್ದಾರೆ ಪಂಜೆಯವರು.[12]

**ನಿಜಪದ್ಯಗಳ ಬಗೆಗೆ ವಿವೇಚನೆ:** "ನಿಜಪದ್ಯಗಳನ್ನು ವಿವೇಕಿಸಿ ತಿಳಿಯುವುದು ದುಸ್ಸಾಧ್ಯವಾಗಿದ್ದರೂ ಒಂದು ತೆರದ ಸೂತ್ರವನ್ನನುಸರಿಸಿ ಇದನ್ನು ನಿಶ್ಚಯಿಸಿರುವೆವು. ವಿಶೇಷ ವಿರೂಪ ಹೊಂದದೆ ಕೈಬರಹದ ಹಾಗೂ ಅಚ್ಚಾದ ಎಲ್ಲ ಪತ್ರಗಳಲ್ಲಿ (ಪುಸ್ತಕಗಳಲ್ಲಿ) ದೊರೆಯುವವು ಕವಿಕೃತವೆಂದು ತಿಳಿಯಲ್ಪಟ್ಟವೆ" ಎಂದಿರುವರು ಉತ್ತಂಗಿ.[13]

ಉತ್ತಂಗಿಯವರ ನಿಶ್ಚಿತದ ಪ್ರಕಾರ— .

| | | |
|---|---|---|
| * | ಸರ್ವಜ್ಞಕೃತ ಪದ್ಯಗಳು | ೧೩೪೭ |
| + | ಅನ್ಯಕೃತ ಪದ್ಯಗಳು | ೫೩೮ |
| ‖ | ಕಂಠಸ್ಥ ಹಾಗೂ ನವೀನ ಪದ್ಯಗಳು (ಇವರಲ್ಲಿ ಸರ್ವಜ್ಞಕೃತವಾದವು ಕೆಲವಿರಬಹುದು) | ೩೮ |
| ? | ಸಂಶಯಾತ್ಮಕ | ೫ |
| | ಒಟ್ಟು | ೧೯೨೮೧೪ |

**ಪರಮಾರ್ಥ ಎಂಬ ಅಂಕಿತದ ವಿಚಾರ:** 'ಪರಮಾರ್ಥ' ಗ್ರಂಥವನ್ನು ಪ್ರಕಟಿಸಿ ಆ ಹೆಸರಿಗೇ ಮಹತ್ವಕೊಟ್ಟಿರುವ ಹಿರಿಯ ಸಂಶೋಧಕರಲ್ಲೊಬ್ಬರಾದ ಡಾ॥ ಎಲ್. ಬಸವರಾಜು ಅವರ ಮಾತುಗಳು: " ಸರ್ವಜ್ಞನ ವಚನಗಳ ಸುಧಾರಿತ ಪರಿಷ್ಕರಣವೊಂದನ್ನು ತರಬೇಕೆಂದು ನಾನು ಸಂಕಲ್ಪಿಸಿದೆ. ಹತ್ತಾರು ಓಲೆಯ ಪ್ರತಿಗಳನ್ನೂ ಕಾಗದದ ಪ್ರತಿಗಳನ್ನೂ ಸಂಗ್ರಹಿಸಿದೆ. ಆ ಪ್ರತಿಗಳಲ್ಲಿ ವೆಂಕನೆಂಬವನು ಕ್ರಿ. ಶ. ೭–೩–೧೬೩೬ ರಂದು ನಕಲು ಮಾಡಿಕೊಂಡಿದ್ದ ಒಂದು ಓಲೆಯ ಗ್ರಂಥ ದೊರೆತುದರಿಂದ ನನ್ನ ಸಂಪಾದನ ಕಾರ್ಯಕ್ಕೆ ವಿಶ್ವಾಸಾರ್ಹವಾದೊಂದು ಪ್ರಾಚೀನತಮ ಆಧಾರ ಲಭಿಸಿದಂತಾಯಿತು. ಅಲ್ಲಿನ ತಪ್ಪುಗಳನ್ನು ತಿದ್ದಲು ಅದೇ ಸಂಪ್ರದಾಯಕ್ಕೆ ಸೇರಿದ ಮತ್ತೆ ಕೆಲವು ಪ್ರತಿಗಳೂ ಲಭ್ಯವಾದುದು ನನ್ನ ಪುಣ್ಯವಷ್ಟೇ ಅಲ್ಲ, ಕನ್ನಡ ನಾಡಿನ ಪುಣ್ಯವೆಂದೇ ಹೇಳಬೇಕು.

"ಆ ಪ್ರಾಚೀನತಮ ಪ್ರತಿಯಲ್ಲಿ ಸಿಕ್ಕಿದ (೯೩೭ ವಚನ) ಅಷ್ಟನ್ನು ನಾನು ನಿಜವಚನಗಳೆಂದು ಗಣನೆ ಮಾಡಿದೆ. ಮತ್ತು ಅಲ್ಲಿ ಆ ವಚನಗಳನ್ನು ಇಡಿಯಾಗಿ 'ಪರಮಾರ್ಥ'ವೆಂದು ಕರೆದಿರುವುದನ್ನು ಗಮನಿಸಿ ಈ ಗ್ರಂಥಕ್ಕೆ 'ಪರಮಾರ್ಥ' ಎಂದೇ ಹೆಸರಿಟ್ಟೆ. ಇದು ಸರ್ವಜ್ಞನ ಕೃತಿಸಮಷ್ಟಿಗೆ ಅನ್ವಯಿಸುವ ಏಕೈಕ ನಾಮಧೇಯ.[15]

... ಇಲ್ಲಿ 'ವೆಂಕ' ನಾಗಲಿ, ಆತನದೇ ಆದ ಸಂಪ್ರದಾಯಕ್ಕೆ ಸೇರಿದ ಪ್ರತಿಕಾರ

(ಅವನ ಮೊಮ್ಮಗ 'ವೆಂಕ' ನಿರಬಹುದಲ್ಲ*)ನಾಗಲಿ 'ಪರಮಾರ್ಥ' ಅಂತ ಕರೆದಾಕ್ಷಣಕ್ಕೆ, ಬೇರೆ ಪ್ರತಿಗಳಲ್ಲಿ 'ಸರ್ವಜ್ಞ' ಎಂದಿರುವುದು ಸರಿಯಲ್ಲವೆಂದು ಸಮರ್ಥಿಸಲು ಆಧಾರವೇನೋ ನಮಗೆ ಅರ್ಥವಾಗುವುದಿಲ್ಲ. ಅಲ್ಲದೆ 'ಸರ್ವಜ್ಞ', 'ಪರಮಾರ್ಥ' ಈಯೆರಡರ ಅರ್ಥದಲ್ಲಿ ಏನು ವ್ಯತ್ಯಾಸವೆನ್ನುವುದೂ ತಿಳಿಯುವುದಿಲ್ಲ.

ಎರಡೂ ಎಲ್ಲಬಲ್ಲವನಾದ, ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆದ 'ಭಗವಂತ'ನೆಂದೇ ತಾನೆ ಅರ್ಥವಾಗುವುದು?

**ಉಪಸಂಹಾರ:** ಸಮಾಜವನ್ನು ತನ್ನ ನಿರ್ಭಿಡೆಯ ವಚನಗಳಿಂದ ಶುದ್ಧೀಕರಣ ಮಾಡಲುಜ್ಜುಗಿಸಿದ ಸರ್ವಜ್ಞಮೂರ್ತಿ ನಿಜಕ್ಕೂ ಒಬ್ಬ ಕ್ರಾಂತಿಪುರುಷನೇ ಸರಿ. ವಚನಗಳ ಹಾಗೂ ದಂತಕಥೆಗಳ ಆಧಾರದ ಮೇಲೆ ಸರ್ವಜ್ಞನು ಬಸವರಸ–ಮಾಳ(ಕುಂಬಾರಗಿತ್ತಿ)ಯರ ಮಗನೆಂದೂ ಧಾರವಾಡ ಜಿಲ್ಲೆಯ ಮಾಸೂರು ಗ್ರಾಮದವನೆಂದೂ ಹೇಳಲಾಗುತ್ತಿದೆ. ಕ್ರಿ.ಶ. ೧೬೦೦ರ ಸುಮಾರಿನಲ್ಲಿದ್ದ ಸಂಪಾದನೆಯ ಸಿದ್ಧವೀರಣಾಚಾರ್ಯನು ಸರ್ವಜ್ಞನ ಆಚರಣೆಯ ಸಂಬಂಧದ ವಚನಗಳನ್ನು ಸಂಗ್ರಹಿಸಿರುವುದರಿಂದ ಸರ್ವಜ್ಞನ ಕಾಲ ೧೬೦೦ಕ್ಕಿಂತ ಸ್ವಲ್ಪ ಹಿಂದೆ ಇದ್ದಿರಬೇಕೆಂದು ಅಭಿಪ್ರಾಯಪಡಬೇಕಾಗುತ್ತದೆ. ಸರ್ವಜ್ಞಗ್ರಂಥದ ಓಲೆಯ ಪ್ರತಿಗಳಲ್ಲಿ 'ಱ' ಅಕ್ಷರದ ಬಳಕೆ ಇರುವುದರಿಂದ ಮೇಲಿನ ಅಭಿಪ್ರಾಯವನ್ನು ಒಪ್ಪಬೇಕಾಗುತ್ತದೆ. ೧೮ನೆಯ ಶತಮಾನಕ್ಕೆ ಸಂಬಂಧಿಸಿದ ಶ್ರೀರಂಗಪಟ್ಟಣ ಪತನ, ಉಗಿಬಂಡಿ, ತಂತಿ ತಾರು ಮುಂತಾದ ವಿಷಯಗಳನ್ನು ಕುರಿತಾದ ತ್ರಿಪದಿಗಳು ಪ್ರಕ್ಷಿಪ್ತಗಳೇ ಸರಿ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಇನ್ನು ಸರ್ವಜ್ಞನ ಮತ—ಆತನ ಒಲವು ವೀರಶೈವದ ಕಡೆಗೆ ವಾಲಿ ಶಿವಸರ್ವೋತ್ತಮತ್ವವನ್ನು ನಂಬಿಕೊಂಡ ವೀರಶೈವವೆನ್ನುವುದಕ್ಕೆ ಆತನ ವಚನಗಳಲ್ಲಿ ಸಾಕಷ್ಟು ಸಾಕ್ಷ್ಯಗಳಿರುತ್ತವೆ.

ಕವಿವರ್ಯ ಬೇಂದ್ರೆಯವರೆಂದಂತೆ ಸರ್ವಜ್ಞನ ಜಾತಿ–ಮಾನವ ಜಾತಿ, ಅವನ ಮತ–ದೇವ ಮತ, ಅವನ ಕಾಲ–ಸರ್ವಕಾಲ. ಹೀಗೆ ತಿಳಿಯದೆ ವಾದ ಚರ್ಚೆ

* ಲೇಖಕರ ಆಶಯವನ್ನು ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ, ಈ ಪ್ರತಿಕಾರ ಕೆಳದಿ ಲಿಂಗಣ್ಣ ಕವಿಯ ತಂದೆ ವೆಂಕ ಇಲ್ಲವೆ ಮಗ ವೆಂಕಣ್ಣ ಆಗಿರಬಹುದು. ಕಾಲದೃಷ್ಟಿಯಿಂದ ತಂದೆ ವೆಂಕನೇ ಇರಬಹುದು ಎನ್ನಬೇಕಾಗುತ್ತದೆ. ಕೆಳದಿ ಮ್ಯೂಸಿಯಮ್ಮಿನ ತಾಡಪತ್ರ ಗ್ರಂಥಸಂಗ್ರಹದಲ್ಲಿ ಸುಮಾರು ೫೦ ಸರ್ವಜ್ಞ ಪದ್ಯಗಳುಳ್ಳ ಒಂದೇ ಗರಿ ಸಿಕ್ಕಿದೆ. ಆದರೆ ಇದರಲ್ಲಿ ಯಾವ ಪದ್ಯದಲ್ಲೂ 'ಪರಮಾರ್ಥ' ಅಂಕಿತವಿಲ್ಲ. ಆದ್ದರಿಂದ, 'ಪರಮಾರ್ಥ' ಪದ್ಯ ಸಂಗ್ರಹದ ವೆಂಕ ಯಾರು, ಎಲ್ಲಿಯವನು, ಎನ್ನುವುದು ವಿಚಾರಣೀಯವಾಗಿಯೇ ಉಳಿಯುತ್ತದೆ. ಉತ್ತಂಗಿಯವರ ಸಂಗ್ರಹದಲ್ಲೂ ಕೆಲವು ಪದ್ಯಗಳಿಗೆ 'ಪರಮಾರ್ಥ' ಅಂಕಿತ ಇರುವುದು ಸೋಜಿಗದ ಸಂಗತಿ. ಈ ವಿಚಾರದಲ್ಲಿ ಇನ್ನೂ ಸಂಶೋಧನೆಗೆ ಅವಕಾಶ ಇದೆ—ಸಂ.

ಗಳಿಗಾಗಿ ಎಳೆದಾಡಿದರೆ ಹೂವಿನ ಸುಗಂಧವರಿಯುವ ಹಸುಳೆ ಪಕಳೆಗಳ ಹಿಚುಕಾಡಿದಂತೆ ಆ ಸಂಭ್ರಮು.[16]

ಚನ್ನಪ್ಪ ಉತ್ತಂಗಿಯುವರ ಮುಹತ್ಸಾಧನೆಗೆ ಅವರ ೧೦೭ ಪುಟಗಳಷ್ಟು ವಿಸ್ತಾರವಾದ ಅವರ ಉಪ್ರೋದ್ಘಾತವೇ ಸಾಕ್ಷಿ. ಅದೇ ಒಂದು ಪ್ರತ್ಯೇಕ ಗ್ರಂಥವಾಗಿ ಪ್ರಕಟವಾದರೆ ನಮ್ಮಂಥ ಸಂಶೋಧನಾಕಾಂಕ್ಷಿಗಳಿಗೆ ಅತ್ಯಂತ ಪ್ರಿಯವಾದ ಗಣನೀಯ ಕೃತಿಯೆನಿಸೀತು.

## ಅನುಬಂಧ—೧

### ಗ್ರಂಥಶುದ್ಧೀಕರಣಕ್ಕೆ ದೊರೆತ ಆಧಾರಗಳು :

### ೧ ಓಲೆಯು ಪ್ರತಿಗಳು

A ಮದ್ರಾಸು ಸರಕಾರದ ಪ್ರಾಚ್ಯಕೋಶಾಲಯ (Govt. Oriental Mss. Library)ಯಲ್ಲಿ ದೊರೆತ ಒಂದು ಗ್ರಂಥ. ಇದಕ್ಕೆ 'ಸರ್ವಜ್ಞ ನೀತಿ' ಪದ್ಯಗಳೆಂದು ಹೆಸರು. ಪದ್ಯ ಸಂಖ್ಯೆ ೭೬೪. ಮಧ್ಯದ ಎರಡು ಪುಟಗಳು ಹುಳ ಮುಟ್ಟಿವೆ. ಕೆಲವೆಡೆಯಲ್ಲಿ ಪದ್ಯಗಳು ಸರ್ವಜ್ಞ ಎಂಬುದರ ಬದಲಿಗೆ ಪರಮಾರ್ಥವೆಂದು ಮುಗಿಯುವವು.

B ಅದೇ ಪ್ರಾಚ್ಯಕೋಶಾಲಯದಲ್ಲಿ ದೊರೆತ ಇನ್ನೊಂದು ಗ್ರಂಥ. ಇದಕ್ಕೆ 'ಸರ್ವಜ್ಞ ಪದ್ಯ'ಗಳೆಂದು ಹೆಸರು. ಇದರಲ್ಲಿರುವ ಪದ್ಯಗಳು ೬೯೯.

C ಮೈಸೂರು ಸರಕಾರದ ಪ್ರಾಚ್ಯಕೋಶಾಲಯದಲ್ಲಿ ದೊರೆತ ಒಂದು ಗ್ರಂಥ. ಇದರಲ್ಲಿರುವ ಪದ್ಯಗಳು ೬೯೯. ಆರಂಭದ ಪುಟವು ಹೋಗಿದೆ. ಅಚ್ಚಾದ ಪ್ರತಿಗಳಲ್ಲಿ ಕಾಲಜ್ಞಾನ, ಪೀಠಿಕಾ ಪದ್ಧತಿಗಳಿಗೆ ಸೇರುವ ಪದ್ಯಗಳು ಇದರಲ್ಲಿ ಕಾಣುವುದಿಲ್ಲ.

D ಮೇಲೆ ಹೇಳಿದ ಮೈಸೂರು ಪ್ರಾಚ್ಯಕೋಶಾಲಯದಲ್ಲಿ ದೊರೆತ ಇನ್ನೊಂದು ಗ್ರಂಥ. ಇದಕ್ಕೆ 'ಪರಮಾರ್ಥಿಕೆ' ಎಂದು ಹೆಸರು. ಇದರ ಪ್ರತಿ ಅಧ್ಯಾಯದ ಮೇಲ್ಗಡೆಯಲ್ಲಿ 'ಪದ್ಧತಿ' ಎಂಬುದರ ಬದಲಿಗೆ 'ಗುಣವರ್ಗ'ವೆಂದು ಶಿರೋಲೇಖವಿರುವುದು.

ಉದಾ : ಗುರು ವರ್ಗ, ಲಿಂಗ ಗುಣವರ್ಗ, ಯೋಗ ಗುಣವರ್ಗ ಇತ್ಯಾದಿ.

E ಬಾದಾಮಿಯಲ್ಲಿ ದೊರೆತ ಒಂದು ಗ್ರಂಥ. ಇದಕ್ಕೆ ಸರ್ವಜ್ಞ ಗಣೇಶ್ವರನು ನಿರೂಪಿಸಿದ ಕಾಲಜ್ಞಾನ ವಚನವೆಂದು ಹೆಸರು. ಇದು ಅಸಂಪೂರ್ಣವಾಗಿದೆ. ಅಂತೂ ಪದ್ಯಗಳು ೬೭೨. ಇದರಲ್ಲಿ ಬಸವನಿಂದೀಚೆಗೆ ಇರುವ ಕೆಲವು ಕಾಲಜ್ಞಾನ ನುಡಿಗಳೂ ವಿಜಯನಗರದ ನಾಶನ ಈ ವಚನರೂಪವಾಗಿ ಹೇಳಲ್ಪಟ್ಟಿವೆ.

F ಸವಲಗುಂದದಲ್ಲಿ ದೊರೆತ ಒಂದು ಗ್ರಂಥ. ಇದರಲ್ಲಿ ಸುಮಾರು ೩೦೦ ಪದ್ಯಗಳಿರುವುವು.

G ಸಂಪಾದನೆಯ ಸಿದ್ಧವೀರಣಾಚಾರ್ಯರು ಕೇಳಿಸಿದ ಸರ್ವಜ್ಞ ತ್ರಿಪದಿಗಳು. ಪದಗಳ ಸಂಖ್ಯೆ ೨೬೪. ಇವು ಸಾಧಾರಣವಾಗಿ ಸರ್ವಜ್ಞನ ಮೂರ್ತಿತ್ವವನ್ನು ಕುರಿತಿರುವ ಪದ್ಯಗಳೇ ಹೆಚ್ಚು.

## ೨ ಅಚ್ಚಾದ ಪ್ರತಿಗಳು

W ರೆವರೆಂಡ ಜಿ. ವಿರ್ತ ಕೃತ 'ಪ್ರಾಕ್ಕಾವ್ಯಮಾಲಿಕೆ' ಎಂಬ ಗ್ರಂಥದಲ್ಲಿ ಪುಟ ೨೯೪-೩೫೩ ವರೆಗೆ ದೊರೆಯುವ ಸರ್ವಜ್ಞ ತ್ರಿಪದಿಗಳು ೩೪೧. ಇದು ೧೮೭೮ರಲ್ಲಿ ಬಾಸೆಲ್ ಮಿಶನ್ನಿನ ಮುದ್ರಣಾಲಯದಲ್ಲಿ ಅಚ್ಚಾಗಿರುವದು.

M ಗಂಗಾಧರ ಮಡಿವಾಳೇಶ್ವರ ಇವರಿಂದ ಕನ್ನಡಿಸಲ್ಪಟ್ಟ ಆರನೆಯ ಪುಸ್ತಕದಲ್ಲಿ ದೊರೆಯುವ ಪದ್ಯಗಳು ೨೫೫. ಇದು ಬೆಂಗಳೂರು ವೆಸ್ಲಿಯನ್ ಮಿಶನ್ನಿನವರಿಂದ ೧೮೭೦ರಲ್ಲಿ ಮುದ್ರಣವಾಗಿರುವದು.

K ರೆವರೆಂಡ ಎಫ್. ಕಿಟ್ಟೆಲ್ ಕೃತ 'ಕರ್ನಾಟಕ ಕಾವ್ಯಮಾಲೆ' ಎಂಬ ಗ್ರಂಥದಲ್ಲಿ ಪುಟ ೧೮-೨೪೩ರ ವರೆಗೆ ಅಲ್ಲಲ್ಲಿ ಕೆಲವು ಪದ್ಯಗಳು ದೊರೆಯುವವು. ಇದು ೧೮೭೪ರಲ್ಲಿ ಅಚ್ಚಾದದ್ದು. ಅದೇ ಕಿಟ್ಟೆಲ್ ಪಂಡಿತರು ರಚಿಸಿದ ಪ್ರಸಿದ್ಧ ಕನ್ನಡ-ಇಂಗ್ಲಿಷ್ ನಿಘಂಟಿನಲ್ಲಿ ದೊರೆಯುವ ಪದ್ಯಗಳು ಸುಮಾರು ೨೫೦. ಇದು ೧೮೯೪ರಲ್ಲಿ ಅದೇ ಬಾಸೆಲ್ ಮಿಶನ್ನಿನವರಿಂದ ಅಚ್ಚಾಗಿದೆ.

G ಉಂತಕಲ್ಲು ಗಿರಿಮಲ್ಲಯ್ಯನವರಿಂದ ಪರಿಶೋಧಿಸಲ್ಪಟ್ಟು ೧೮೯೩ರಲ್ಲಿ ಚಿತ್ತೂರು ಅಪ್ಪಾಸ್ವಾಮಿ ಮುದಲಿಯರ ಮದ್ರಾಸ ಇವರ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚಾದದ್ದು. ಇದರಲ್ಲಿರುವ ಪದ್ಧತಿಗಳು ೨೯. ಪುಟ ೮೯. ಪದ್ಯ ಸು. ೧೨೩೪.

S ಬಳ್ಳಾರಿ ಶಿವಲಿಂಗ ಶೆಟ್ಟರಿಂದ ಕರ್ನಾಟಕ ಬುಕ್ ಡಿಪೋದ ಮುದ್ರಾಲಯದಲ್ಲಿ ೧೯೦೩ರಲ್ಲಿ ಮುದ್ರಿಸೋಣವಾಗಿದೆ. ಇದರಲ್ಲಿರುವ ಪದ್ಧತಿಗಳು ೩೪; ಪುಟ ೮೦; ಪದ್ಯಗಳು ೧೫೦೦.

R ಇದು ೧೯೦೬ರಲ್ಲಿ ವಾಜಪೇಯ ಕೃಷ್ಣಯ್ಯ ಹಾಗೂ ವೆಂಕಟಾದ್ರಿ ಅಯ್ಯನವರಿಂದ ಬೆಂಗಳೂರು ಬುಕ್ ಡಿಪೋದಲ್ಲಿ ಮುದ್ರಣವಾದದ್ದು. ಇದರಲ್ಲಿರುವ ಪದ್ಯಗಳು ೧೧೩೬.

N ಇದು ೧೯೦೬ರಲ್ಲಿ ಬೆಂಗಳೂರು ಡಿ. ಜಿ. ನಾರಾಯಣ ಶಾಸ್ತ್ರಿಗಳಿಂದ ಮೂಲ ಗ್ರಂಥಕ್ಕೆ ಸಟೀಕ ತಾತ್ಪರ್ಯ ಸಹಿತವಾಗಿ [illegible] ಕರ್ನಾಟಕ ಡಿಪೋದ ಮುದ್ರಣಾಲಯದಲ್ಲಿ ಅಚ್ಚಾದದ್ದು. ಇದರಲ್ಲಿರುವ ಪದ್ಯಗಳು ೧೧೦೬. ಪುಟ ೨೨೦.

V 'ವೇಮನ ಸರ್ವಜ್ಞ ಸಂವಾದ' ಇದು ರಾಮಲಿಂಗ ಕವಿಗಳಿಂದ ಪರಿಶೋಧಿಸಲ್ಪಟ್ಟು ಶ್ರೀ ವೆಂಕಟೇಶ ಪ್ರೆಸ್ ಬೆಂಗಳೂರಿನಲ್ಲಿ ೧೯೧೬ರಲ್ಲಿ ಮುದ್ರಣವಾದದ್ದು. ಇದರಲ್ಲಿ ತೆಲಗು ಕನ್ನಡ ಪದ್ಯಗಳು ಕೂಡಿ ೫೧೫ ಇರುವವು. ಕೇವಲ ಕನ್ನಡ ಪದ್ಯಗಳು ಸುಮಾರು ೨೫೦. ಇದರಲ್ಲಿ ಪದ್ಯಗಳು ಅಲ್ಲಲ್ಲಿ ಪುನರಾವರ್ತನೆಯಾಗಿವೆ.

P ಬೆಂಗಳೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಕಂಪನಿಯವರಿಂದ ಪ್ರಕಟಿಸಲ್ಪಟ್ಟದ್ದು. ಇವಕ್ಕೆ 'ನೀತಿಸಾರ' ಇಲ್ಲವೆ 'ಸರ್ವಜ್ಞ ಪದ'ಗಳೆಂದು ಹೆಸರು. ಇದು ೧೯೨೦ರಲ್ಲಿ ಮುದ್ರಣವಾಗಿದ್ದು, ಕರ್ನಾಟಕ ಗ್ರಂಥಾವಳಿಯ ತೃತೀಯ ಭಾಗಕ್ಕೆ ಸೇರುತ್ತದೆ.

## ಅನುಬಂಧ—೨

## ಉತ್ತಂಗಿಯವರು ಬಳಸಿರುವ ಸೂಚನಾ ಚಿಹ್ನಗಳು

* ಈ ಗುರುತು ಸರ್ವಜ್ಞಕೃತ ಪದ್ಯಗಳನ್ನು ಸೂಚಿಸುವದು. ಈಗ ನಿಜ ಪದ್ಯಗಳನ್ನು ಮಿಶ್ರಪದ್ಯಗಳಿಂದ ವಿವೇಕಿಸಿ ತಿಳಿಯುವದು ದುಸಾಧ್ಯವಾಗಿದ್ದರೂ ಒಂದು ತರದ ಸೂತ್ರವನ್ನನುಸರಿಸಿ ಇದನ್ನು ನಿಶ್ಚಯಿಸಿರುವೆವು. ವಿಶೇಷ ವಿರೂಪ ಹೊಂದದೆ ಕೈಬರಹದ ಹಾಗೂ ಅಚ್ಚಾದ ಎಲ್ಲ ಪ್ರತಿಗಳಲ್ಲಿ ದೊರೆಯುವ ಪದ್ಯಗಳು ಕವಿಕೃತವೆಂದು ತಿಳಿಯಲ್ಪಟ್ಟಿದೆ.

? ಈ ಗುರುತು ಏತತ್ಕೃತವೋ ಅನ್ಯಕೃತವೋ ಎಂದು ನಿಶ್ಚಯಿಸಿ ಹೇಳಲಿಕ್ಕೆ ಸಾಕಷ್ಟು ಆಧಾರವಿಲ್ಲದೆ ಸಂಶಯಾತ್ಮಕವಾಗಿ ಉಳಿದಿರುವ ಪದ್ಯಗಳನ್ನು ಸೂಚಿಸುವದು.

+ ಈ ಗುರುತು ಕೆಲವು ಪ್ರತಿಗಳಲ್ಲಿ ಮಾತ್ರವೇ ದೊರೆಯುವ ಪದ್ಯಗಳನ್ನು ಸೂಚಿಸುವದು. ಇವು ಬರವಣಿಗೆಯಿಂದಲೂ ಭಾಷಾಪ್ರಯೋಗದಿಂದಲೂ ತರುವಾಯದಲ್ಲಿ ಅಂತರ್ಗತವಾದ ಪದ್ಯಗಳೆಂದು ತಿಳಿಯುವದರಿಂದ ಅನ್ಯಕೃತಗಳೆಂದು ಹೇಳಬಹುದು. ಇವುಗಳ ಛಂದೋಬಂಧನವು ಶಿಥಿಲವಾಗಿದ್ದು ಮುಂಚೆ ಇದ್ದ ಪದ್ಯಗಳ ಅಭಿಪ್ರಾಯವನ್ನೇ ತಿರುತಿರುಗಿ ಬೇರೆಬೇರೆ ಪ್ರಾಸಗಳಲ್ಲಿ ಹೇಳಿರುವದರಿಂದ ಇವುಗಳು ಅನುಕರಣಪದ್ಯಗಳೆಂದು ತಿಳಿಯತಕ್ಕದ್ದು.

! ಈ ಗುರುತು ಇನ್ನೂ ಕಂಠಸ್ಥವಾಗಿ ಉಳಿದಿರುವ ಕೇವಲ ನವೀನ ಪದ್ಯಗಳನ್ನು ಸೂಚಿಸುವದು. ಇವುಗಳನ್ನು ಕೆಲವು ವರ್ಷಗಳಿಂದ ಸಂಗ್ರಹಿಸಿ ಇಲ್ಲಿ ಕೊಟ್ಟಿರುವೆವು. ಇವು ಅನ್ಯಕೃತಗಳೆಂದು ಸ್ಪಷ್ಟವಾಗುತ್ತಿದ್ದರೂ ಇವುಗಳಲ್ಲಿ ಕೆಲವು ಸರ್ವಜ್ಞಕೃತ ಪದ್ಯಗಳಿದ್ದು ಒಂದು ವೇಳೆ ಪಾಠಪರಂಪರೆಯಿಂದ ಉಳಿದುಬಂದಿದ್ದರೂ ಬಂದಿರಬಹುದು.

## ಅನುಬಂಧ—೩

ಚನ್ನಪ್ಪ ಉತ್ತಂಗಿ ಅವರಿಂದ ಸಂಶೋಧಿತವಾದ 'ಸರ್ವಜ್ಞ ವಚನಗಳು'
ಈ ಗ್ರಂಥದ ಸಂಪೂರ್ಣ ಸಂಗ್ರಹದ ವಿಶೇಷಾವೃತ್ತಿಗೆ (೧೯೩೪)

### ಫ. ಗು. ಹಳಕಟ್ಟಿಯವರ ಮುನ್ನುಡಿ

ಸರ್ವಜ್ಞನು ಕನ್ನಡ ಭಾಷೆಯಲ್ಲಿ ಒಬ್ಬ ಮಹತ್ವದ ಕವಿಯೆನಿಸಿಕೊಂಡಿರುತ್ತಾನೆ. ಇವನಷ್ಟು ಲೋಕಪ್ರಿಯ ಕವಿಯು ಕನ್ನಡದಲ್ಲಿ ಯಾರೂ ಆಗಿಹೋಗಿಲ್ಲೆಂದು ಹೇಳಿದರೆ ತಪ್ಪಾಗದು. ಇವನಲ್ಲಿರುವದೊಂದು ವಿಶೇಷತರವಾದ ಸಂಗತಿಯೇನೆಂದರೆ, ಇವನು ತನ್ನ ಕವಿತೆಗಳಲ್ಲಿ ನೈತಿಕ ಹಾಗೂ ಸಾಮಾಜಿಕ ವಿಷಯಗಳನ್ನು ಹೆಚ್ಚಾಗಿ ನಿರೂಪಿಸಿರುವನಲ್ಲದೆ ಅವುಗಳನ್ನು ವ್ಯವಹಾರಿಕ ರೀತಿಯಿಂದ ಬಹು ಸೊಗಸಾದ ಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಹೇಳುವನು. ಇದೇ ಅವನ ಲೋಕಪ್ರಿಯತೆಗೆ ಮುಖ್ಯಕಾರಣವೆಂದು ಹೇಳಬೇಕು.

ಈ ತರದ ಗ್ರಂಥಗಳು ಪಾಶ್ಚಿಮಾತ್ಯ ಭಾಷೆಯಲ್ಲಿ ಹೇರಳವಾಗಿರುವವು. ಇವುಗಳಲ್ಲಿ ಜಗತ್ತಿನ ನಾನಾ ತರದ ವ್ಯವಹಾರಗಳು ನಾನಾ ದೃಷ್ಟಿಯಿಂದ ವಿವೇಚಿಸಲ್ಪಟ್ಟಿರುತ್ತವೆ. ಇವರಂತೆಯೇ ಸರ್ವಜ್ಞನಾದರೂ ವ್ಯವಹಾರವನ್ನವಲಂಬಿಸಿ ತನ್ನ ನೈತಿಕ ತತ್ವಗಳನ್ನು ಬೋಧಿಸಿದ್ದಾನೆ. ಇವನು ಜಗತ್ತಿನಲ್ಲಿ ನಡೆಯುವ ನಾನಾ ವ್ಯವಹಾರಗಳನ್ನು ಬಹು ಚೆನ್ನಾಗಿಯೂ ಸೂಕ್ಷ್ಮವಾಗಿಯೂ ನಿರೀಕ್ಷಿಸಿರುವನು. ಇದಲ್ಲದೆ ಅವನು ಅವುಗಳ ಗುಣಾವಗುಣಗಳನ್ನು ಚೆನ್ನಾಗಿ ಅರಿತುಕೊಂಡು, ಅವುಗಳನ್ನು ಬಹು ಮಾರ್ಮಿಕ ರೀತಿಯಿಂದ ತನ್ನ ಉಕ್ತಿಗಳಲ್ಲಿ ವಿವರಿಸುತ್ತಾನೆ. ಇದರಲ್ಲಿ ಅವನ ಉದ್ದೇಶವು ಜನರಿಗೆ ಜಗತ್ತಿನ ನಿಜಸ್ಥಿತಿಯನ್ನು ತಿಳಿಸಿ, ಅವರನ್ನು ಯುಕ್ತ ಮಾರ್ಗಕ್ಕೆ ಹಚ್ಚುವದೇ ಇರುತ್ತದೆ. ಸರ್ವಜ್ಞನಂತೆಯೇ ವಚನಕಾರರಾದರೂ ತಮ್ಮ ಉಕ್ತಿಗಳಲ್ಲಿ ನೀತಿಯ ತತ್ವಗಳನ್ನು ಬೋಧಿಸಿದ್ದಾರೆ. ವಚನಕಾರರಿಗೂ ಸರ್ವಜ್ಞನಿಗೂ ಭಾಷಾಸಾಮ್ಯತೆ ಹಾಗೂ ವಿಚಾರಸಾಮ್ಯತೆ ಬಹಳ ಇರುತ್ತದೆ. ಧಾರ್ಮಿಕ ವಿಷಯದಲ್ಲಿ ಸರ್ವಜ್ಞನು ವಚನಕಾರರ ಅನುಯಾಯಿಯಾಗಿದ್ದರೂ ಇವನ ನಿರೂಪಣಾ ಪದ್ಧತಿಯಲ್ಲಿ ಮಾತ್ರ ಒಂದು ಮಹತ್ವದ ಅಂತರವು ತೋರಿಬರುತ್ತದೆ. ಅದೇನೆಂದರೆ ಸರ್ವಜ್ಞನು ತನ್ನ ನೀತಿಯ ತತ್ವಗಳನ್ನು ವ್ಯವಹಾರಿಕ ದೃಷ್ಟಿಯಿಂದ ವಿವೇಚಿಸಿದ್ದಾನೆ. ಆದರೆ ವಚನಕಾರರು ಕೇವಲ ಧಾರ್ಮಿಕ ದೃಷ್ಟಿಯಿಂದ ಅವುಗಳನ್ನು ವಿವೇಚಿಸಿದ್ದಾರೆ. ಇದರಿಂದ ಸರ್ವಜ್ಞನ ವಚನಗಳು ಹೆಚ್ಚಿಗೆ ವ್ಯಾಪಕ ಸ್ವರೂಪವನ್ನು ಹೊಂದಿ ಅವು ಎಲ್ಲ ಧರ್ಮದವರಿಗೂ ಪ್ರಿಯವಾಗಿವೆ.

ವಚನಕಾರರಂತೆಯೇ ಶತಕಕಾರರಾದರೂ ಕನ್ನಡದಲ್ಲಿ ನೀತಿಯ ತತ್ವಗಳನ್ನು ಬೋಧಿಸಿದ್ದಾರೆ. ಇವರಲ್ಲಿ ಸೋಮೇಶ್ವರ, ನಿಜಲಿಂಗ, ಮಾಯಿದೇವ, ಕನಕದಾಸ

ಮೊದಲಾದವರೇ ಮುಖ್ಯರಿರುವರು. ಇವರೆಲ್ಲರು ನೀತಿಯ ತತ್ವಗಳನ್ನು ತಮ್ಮ ಉಕ್ತಿಗಳಲ್ಲಿ ಸಾಮಾನ್ಯವಾಗಿಯೂ ಬಹು ಸೊಗಸಾಗಿಯೂ ವರ್ಣಿಸಿದ್ದಾರೆ. ಆದರೆ ಸಮಾಜದ ನಿಜಸ್ಥಿತಿಯನ್ನು ಕಂಡುಕೊಂಡು ಅದರ ಗುಣಾವಗುಣಗಳನ್ನು ವಿವರಿಸುವಲ್ಲಿ ಮಾತ್ರ ಸರ್ವಜ್ಞನು ಅವರೆಲ್ಲರಿಗೂ ಮಿಗಿಲಾದವನಾಗಿರುತ್ತಾನೆ. ಅವನು ಯಾವ ವಿಷಯವನ್ನು ತೆಗೆದುಕೊಂಡರೂ ತನ್ನ ನಾಮಕ್ಕೆ ಸರಿಯಾಗಿ ಅದರಲ್ಲಿ ತನ್ನ ಬಹುಶ್ರುತತ್ವವನ್ನು ತೋರಿಸಿದ್ದಾನೆ. ಮತ್ತು ಟೀಕಾತ್ಮಕ ರೀತಿಯಿಂದ ಅವುಗಳನ್ನು ಮರ್ಮಭೇದಕವಾಗಿ ವಿವೇಚಿಸಿದ್ದಾನೆ. ಆದ್ದರಿಂದ ಸರ್ವಜ್ಞನು ಕನ್ನಡದಲ್ಲಿ ಒಬ್ಬ ಮಹತ್ವದ ಟೀಕಾತ್ಮಕ ವಿವೇಚನಕಾರನಾಗಿ ಹೋಗಿರುವನೆಂದು ಹೇಳಬಹುದು.

ಅವನ ವಿವೇಚನಾ ಪದ್ಧತಿಯಾದರೂ ವಿಷಯಗಳನ್ನು ಮನಸ್ಸಿನಲ್ಲಿ ಬಹು ದೃಢವಾಗಿ ಮೂಡಿಸುವಂಥಾದ್ದಿರುತ್ತದೆ. ಇದಕ್ಕೆ ಅವನ ಭಾಷಾಸರಣಿಯು ಬಹು ಸೊಗಸಾಗಿರುವದೇ ಮುಖ್ಯ ಕಾರಣ. ಅವನ ವಾಕ್ಯಗಳಲ್ಲಿ ದೊಡ್ಡದೊಡ್ಡ ಗಡುಚಾದ ಶಬ್ದಗಳಾವವೂ ಇರುವದಿಲ್ಲ. ಯಾವಾಗಲೂ ಅವನು ಅಚ್ಚಗನ್ನಡ ಸಣ್ಣಸಣ್ಣ ಶಬ್ದಗಳನ್ನು ಪ್ರಯೋಗಿಸುವದುಂಟು. ಅಲ್ಲಲ್ಲಿ ಪ್ರಾಸುಗಳನ್ನು ಜೋಡಿಸುವ ಅವನ ಜಾಣ್ಮೆಯು ಬಹು ಮಿಗಿಲಾದದ್ದು. ಇದರಿಂದ ಅವನ ಪದ್ಯಗಳು ಅಚ್ಚುಕಟ್ಟಾಗಿಯೂ ಅಂದವಾಗಿಯೂ ಇವೆ. ಅವುಗಳನ್ನೋದಿದ ಕೂಡಲೆ ಅವು ಗಾದೆಯ ಮಾತುಗಳೋ ಏನೋ ಎಂಬಂತೆ ಭಾಸವಾಗುತ್ತದೆ. ಈ ಮೇರೆಗೆ ಸರ್ವಜ್ಞನು ಕನ್ನಡನಾಡಿನಲ್ಲಿ ಒಬ್ಬ ನೀತಿಜ್ಞನೂ, ವ್ಯವಹಾರವಿದನೂ, ಟೀಕಾಕಾರನೂ ಆಗಿಹೋಗಿದ್ದು ಕನ್ನಡ ವಾಙ್ಮಯದಲ್ಲಿ ಅವನು ಒಂದು ಅತ್ಯುಚ್ಚ ಪದವಿಯನ್ನು ಹೊಂದಿದ್ದಾನೆಂದು ಹೇಳತಕ್ಕದ್ದು.

ಇಂಥ ಸರ್ವಜ್ಞನ ವಚನಗಳನ್ನು ಬಹು ಕಷ್ಟಪಟ್ಟು ಶೋಧಿಸಿ, ಕನ್ನಡಿಗರ ಎದುರಿಗೆ ಮ||ರಾ||ರಾ|| ಚನ್ನಪ್ಪ ಉತ್ತಂಗಿ ಇವರು ಇಟ್ಟದ್ದಕ್ಕೆ ಕನ್ನಡಿಗರೆಲ್ಲರೂ ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಅಲ್ಪವೇ ಸರಿ. ಈ ಕಾರ್ಯದಲ್ಲಿ ತಮಗೆ ಒದಗಿದ ತೊಂದರೆಗಳನ್ನು ಅವರು ಈ ಗ್ರಂಥದಲ್ಲಿ ವಿವರಿಸಿದ್ದಾರೆ. ಅದನ್ನು ನೋಡಿ ಯಾರ ಮನಸ್ಸಾದರೂ ಕರಗದೆ ಇರದು. ಇಂಥ ಸಂಶೋಧನ ಕಾರ್ಯಗಳಲ್ಲಿ ಅತ್ಯಂತ ಮಾನಸಿಕ ಹಾಗೂ ಶಾರೀರಿಕ ಶ್ರಮವು ಬೀಳುತ್ತದೆ. ಇದನ್ನೆಲ್ಲ ಸಹಿಸಬೇಕಾದರೆ ಕೈಕೊಂಡ ಕಾರ್ಯದಲ್ಲಿ ನಿಚ್ಚಟವಾದ ನಿಷ್ಕಾಮ ಪ್ರೀತಿಯು ಬೇಕು. ಇಂಥ ಪ್ರೀತಿಯು ಗ್ರಂಥಕರ್ತರಲ್ಲಿ ಇದ್ದುದರಿಂದಲೇ ಅವರಿಂದ ಈ ಕಾರ್ಯವು ಸಿದ್ಧಿಗೆ ಹೋಗಿರುವದು. ಇದಕ್ಕಾಗಿ ಗ್ರಂಥಕರ್ತರು ಎಲ್ಲ ಕನ್ನಡಿಗರ ಹೊಗಳಿಕೆಗೆ ಅತ್ಯಂತ ಪಾತ್ರರಾಗಿರುವರು.

ಬಿಜಾಪುರ
ತಾ|| ೧೨-೬-೨೩

**ರಾ|| ಸಾಹೇಬ ಫ. ಗು. ಹಳಕಟ್ಟಿ**
**ಬಿ.ಎ., ಎಲ್.ಎಲ್.ಬಿ.**

## ಅಡಿಟಿಪ್ಪಣಿ

1. ಚನ್ನಪ್ಪ ಉತ್ತಂಗಿ: ಸರ್ವಜ್ಞ ವಚನಗಳ ಪ್ರಸ್ತಾವನೆಯಲ್ಲಿ ಅವರೇ ರಚಿಸಿದ ಪದ್ಯಗಳು.

1.ಅ ಡಾ|| ರಂ. ಶ್ರೀ ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ–ಐದನೆಯ ಮುದ್ರಣ ೧೯೭೧; ಪುಟ ೩೨೨

2. ಚ. ಉತ್ತಂಗಿ: ಅವರೇ ಸಂಪಾದಿಸಿದ ಸರ್ವಜ್ಞ ವಚನಗಳು–ಜನತಾ ಸಂಪುಟ-೧೯೬೦ ಪುಟ XXIII-XXIV.

3. ಅದೇ; ಪುಟ–XXXVIII.

4. ಎ. ಆರ್. ಕೃಷ್ಣಶಾಸ್ತ್ರಿ; ಸರ್ವಜ್ಞ ಕವಿ, ಪುಟ. ೭-೮

5. ಡಾ|| ರಂ. ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ–ಐದನೆಯ ಮುದ್ರಣ ೧೯೭೧; ಪುಟ ೩೨೩.

6. ಚನ್ನಪ್ಪ ಉತ್ತಂಗಿ: ಪುಟ ೨೮೨, ಜ್ಞಾನಗಂಗೋತ್ರಿ–ಕಿರಿಯರ ವಿಶ್ವಕೋಶ–೫–ಕಲೆ, ಸಾಹಿತ್ಯ; ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು.

7. E. P. Rice's Kan. Lit. Page 69.

8. ಚನ್ನಪ್ಪ ಉತ್ತಂಗಿ: ಪ್ರಸ್ತಾವನೆಯ ಅಡಿಟಿಪ್ಪಣಿ-ಪುಟ ೧, ಸರ್ವಜ್ಞನ ವಚನಗಳು, ಪ್ರಪ್ರಥಮ (ಸಂಶೋಧಿತ) ಮುದ್ರಣ ೧೯೨೪.

9. Kittel's Essay on Kan Lit.; Nagavarma's Prosody pp 73

10. ಎಂ. ಮರಿಯಪ್ಪ ಭಟ್ಟ: ಸರ್ವಜ್ಞ ವಚನ ಸಂಗ್ರಹ, ಪುಟ ೪ (ಮುನ್ನುಡಿ), ಸಾಹಿತ್ಯ ಅಕಾಡೆಮಿ, ದೆಹಲಿ, ಪ್ರಥಮ ಆವೃತ್ತಿ, ೧೯೭೧.

11. ಅದೇ; ಪುಟ ೫.

12. ಅದೇ; ಅದೇ.

12.ಅ ಸದರಿ ೫ನೆಯ ಅಡಿಟಿಪ್ಪಣಿಯಲ್ಲಿ ಹೀಗೆ ಗುರುತಿಸಿದೆ:
"ಉತ್ತಂಗಿಯವರು ಈ ಗ್ರಂಥವ ಒಂಬತ್ತು ಆವೃತ್ತಿಗಳನ್ನು ೧೯೫೭ರ ವರೆಗೆ ತಂದಿರುತ್ತಾರೆ. ಆವರು ಈ ಗ್ರಂಥದ ಮೇಲಿರುವ ಎಲ್ಲ ಹಕ್ಕುಗಳನ್ನೂ ಸರ್ಕಾರಕ್ಕೆ ವಹಿಸಿಕೊಟ್ಟಿದ್ದರಿಂದ ೧೯೬೦ರಲ್ಲಿ ಮೈಸೂರು ರಾಜ್ಯದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆಯವರು ಅವರು ಸಂಪಾದಿಸಿದ ಗ್ರಂಥವನ್ನೇ "ಜನತಾ ಸಂಪುಟ"ವಾಗಿ ಪ್ರಕಟಿಸಿದರು.

13. ಡಾ|| ಎಲ್. ಬಸವರಾಜು: ಪರಮಾರ್ಥ; ತಿದ್ದಿದ ಪುನರ್ಮುದ್ರಣ ೧೯೭೩, ನನ್ನ ಮಾತು, ಪುಟ–೬.

14. ಒಟ್ಟು ವಿವಕ್ಷೆ–ಲೇಖಕ ಮಾಡಿದ್ದು (ಕೆಪಿಶಿ)
A critical collection of Sarvajna Vachanas ...... with introduction—1924—Library Edition—ಚನ್ನಪ್ಪ ಉತ್ತಂಗಿ.

15. ಡಾ|| ಎಲ್. ಬಸವರಾಜು: ಪರಮಾರ್ಥ. ಪುಟ ೧೦.

16. ಎಂ. ಮರಿಯಪ್ಪ ಭಟ್ಟ: ಸರ್ವಜ್ಞ ವಚನ ಸಂಗ್ರಹ ಪುಟ ೩.

—o—

# ಗ್ರಂಥಸಂಪಾದನೆಗೆ ಟಿ. ಎಸ್. ವೆಂಕಣ್ಣಯ್ಯನವರ ಕೊಡುಗೆ

ಪ್ರೊ|| ಬಿ. ರಾಮಸ್ವಾಮಿ

ಸಾಹಿತ್ಯವಿಮರ್ಶೆ, ವ್ಯಾಕರಣ, ಛಂದಸ್ಸು, ಅಲಂಕಾರ, ಭಾಷಾ ಚರಿತ್ರೆ, ಭಾಷಾಶಾಸ್ತ್ರ, ನಿಘಂಟು ನಿರ್ಮಾಣ ಮುಂತಾದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಾರ್ಯನಿರತರಾಪವರಿಗೆ ಕವಿಕೃತಿಯ ಪರಿಶುದ್ಧಪಾಠದ ಆವಶ್ಯಕತೆ ಎಷ್ಟಿದೆ ಯೆಂಬುದು ವಿದ್ವಾಂಸರು ತಿಳಿದಿರುವ ವಿಷಯ. ನಮ್ಮ ಪೂರ್ವ ಸಾಹಿತ್ಯಸಂಪತ್ತು ಬಹುಮಟ್ಟಿಗೆ ಓಲೆಯಗರಿಯ ಮತ್ತು ಕಾಗದದ ಹಸ್ತಲಿಖಿತ ಪ್ರತಿಗಳಲ್ಲಿ ಉಳಿದುಕೊಂಡು ಬಂದಿವೆ. ಈ ಹಸ್ತ ಲಿಖಿತ ಪ್ರತಿಗಳಲ್ಲಿ ಅನೇಕ ಕಾರಣಗಳಿಂದ ಮೂಲಪ್ರತಿಯ ಪಾಠವು ಕೆಟ್ಟುಹೋಗಿರುವುದೂ ಅನೇಕ ಪಾಠಾಂತರಗಳಿರುವುದೂ ಬಹುಮಟ್ಟಿಗೆ ಕಂಡುಬರುತ್ತದೆ. ಆದ್ದರಿಂದ ಗ್ರಂಥಸಂಪಾದಕನು ಹಸ್ತಲಿಖಿತ ಪ್ರತಿಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿ ಕವಿಕೃತಿಗೆ ಅತ್ಯಂತ ಸಮೀಪವಾದ ಸಮರ್ಪಕವಾದ ಶುದ್ಧ ಪಾಠವನ್ನು ಒದಗಿಸಿಕೊಡಲು ಸರ್ವಪ್ರಯತ್ನ ಮಾಡಬೇಕಾಗುತ್ತದೆ. ಗ್ರಂಥಸಂಪಾದನೆ ಈಗ್ಗೆ ಸುಮಾರು ಒಂದು ಶತಮಾನದಿಂದಲೂ ನಡೆದುಬಂದು ಈಗ ಅದು ಒಂದು ಕಲೆಯೂ ಶಾಸ್ತ್ರವೂ ಆಗಿ ಪರಿಣಮಿಸಿದೆ.

ಹಸ್ತಲಿಖಿತ ಪ್ರತಿಗಳನ್ನು ಉಪಯೋಗಿಸಿಕೊಂಡು ಹಲವು ಉದ್ಗ್ರಂಥಗಳ ಸಂಪಾದನಾಕಾರ್ಯವನ್ನು ಕೈಕೊಂಡು ಪರಿಶುದ್ಧ ಪಾಠವನ್ನು ಗೊತ್ತುಮಾಡುವ ಪ್ರಯತ್ನಮಾಡಿ ಪರಿಷ್ಕರಿಸಿ ಮುದ್ರಣ ಮಾಡಿಸುವ ಮಹಾಕಾರ್ಯವನ್ನು ಸನ್ಮಾನ್ಯರಾದ ಎಫ್. ಕಿಟ್ಟೆಲ್, ಬಿ. ಎಲ್. ರೈಸ್. ಆರ್ ನರಸಿಂಹಾಚಾರ್ಯ, ಎಸ್. ಜಿ. ನರಸಿಂಹಾಚಾರ್ಯ, ಎಂ. ಎ. ರಾಮಾನುಜಯ್ಯಂಗಾರ್, ಬಿ. ಮಲ್ಲಪ್ಪ ಮೊದಲಾದ ವಿದ್ವಾಂಸರು ನಿರ್ವಹಿಸಿ ಸಾಹಿತ್ಯ ಪ್ರಪಂಚಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಕನ್ನಡ ಗ್ರಂಥಸಂಪಾದನೆಯ ಪ್ರಾರಂಭಕಾಲದಲ್ಲಿ ಕಾರ್ಯನಿರತರಾಗಿದ್ದ ಈ ವಿದ್ವಾಂಸರು ಗ್ರಂಥಸಂಪಾದನೆಯನ್ನು ತೃಪ್ತಿಕರವಾಗಿ ನಿರ್ವಹಿಸುವುದಕ್ಕೆ ಬೇಕಾದ ನೀತಿ ನಿಯಮಗಳನ್ನು ತಾವೇ ನಿರ್ಧರಿಸಿಕೊಂಡು ಶಾಸ್ತ್ರೀಯ ಗ್ರಂಥಸಂಪಾದನೆಗೆ ಪರಿಸರವನ್ನು ಸಿದ್ಧಪಡಿಸಿ ಮಾರ್ಗದರ್ಶಕರಾದರು.

ಮೊದಲ ಪೀಳಿಗೆಯ ಆ ಗ್ರಂಥಸಂಪಾದಕರ ಅನಂತರ ಗ್ರಂಥಸಂಪಾದನೆಯ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿರುವವರಲ್ಲಿ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು ಅಗ್ರಮಾನ್ಯರು. ಕವಿಹೃದಯವನ್ನು ತಿಳಿಯಬಲ್ಲ ಸಹೃದಯತೆ

ಕವಿ ಪ್ರಯೋಗವನ್ನು ಅರ್ಥಯಿಸಬಲ್ಲ ಪಾಂಡಿತ್ಯ ಇವೇ ಮೊದಲಾದ ಗ್ರಂಥಸಂಪಾದನ ಕಾರ್ಯವನ್ನು ನಿರ್ವಹಿಸುವುದಕ್ಕೆ ಬೇಕಾದ ಎಲ್ಲ ಶಕ್ತಿಗಳೂ ಗುಣಗಳೂ ಅವರಲ್ಲಿದ್ದುವು. ಮನಃಪ್ರಸನ್ನತೆ, ಶಾಂತಿ, ಸಮಾಧಾನಗಳ ಮೂರ್ತಸ್ವರೂಪ ರಾಗಿದ್ದರು ಅವರು.

ಶ್ರೀಮಾನ್ ವೆಂಕಣ್ಣಯ್ಯನವರು ಸಂಪಾದಿಸಿರುವ ಕೃತಿಗಳು ನಾಲ್ಕು: 'ಬಸವರಾಜದೇವರ ರಗಳೆ', 'ಹರಿಶ್ಚಂದ್ರಕಾವ್ಯ ಸಂಗ್ರಹ' 'ಕಾದಂಬರೀ ಸಂಗ್ರಹ' ಮತ್ತು 'ಸಿದ್ಧರಾಮ ಚಾರಿತ್ರ'. ಇವುಗಳಲ್ಲಿ 'ಬಸವರಾಜ ದೇವರ ರಗಳೆ'ಯನ್ನೂ 'ಕಾದಂಬರೀ ಸಂಗ್ರಹ'ವನ್ನೂ ಅವರು ಸ್ವತಃ ಸಂಪಾದಿಸಿದರು. 'ಹರಿಶ್ಚಂದ್ರಕಾವ್ಯ ಸಂಗ್ರಹ'ವನ್ನು ಶ್ರೀಮಾನ್ ಎ. ಆರ್. ಕೃಷ್ಣ ಶಾಸ್ತ್ರಿಗಳೊಡನೆಯೂ 'ಸಿದ್ಧರಾಮ ಚಾರಿತ್ರ'ವನ್ನು ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರೊಡನೆಯೂ ಸೇರಿ ಸಂಪಾದಿಸಿರುವರು.

ಹರಿಹರ ಕವಿಯ 'ಬಸವರಾಜದೇವರ ರಗಳೆ'ಯನ್ನು ಪ್ರೊ. ಬಿ. ಎಂ. ಶ್ರೀಕಂಠಯ್ಯನವರು "ಮೊದಲು ಕಂಡುಕೊಂಡು ಅದನ್ನು ಬೆಳಕಿಗೆ ತರಲು ಶ್ರೀಮಾನ್ ವೆಂಕಣ್ಣಯ್ಯನವರಿಗೆ "ಪ್ರೇರಣೆ ಪ್ರೋತ್ಸಾಹಗಳನ್ನಿತ್ತ"ರು. 'ಬಸವರಾಜ ದೇವರ ರಗಳೆ'ಯ ಪರಿಷ್ಕರಣಕ್ಕೆ "ಎರಡು ಹಸ್ತಪ್ರತಿಗಳನ್ನು ಆಧಾರವಾಗಿಟ್ಟು ಕೊಂಡಿತ್ತು. ಅವುಗಳಲ್ಲಿ ಒಂದು ಓಲೆಯ ಪ್ರತಿ (ಕ), ಇನ್ನೊಂದು ಕಾಗದದ ಪ್ರತಿ (ಖ)". ಓಲೆಯ ಪ್ರತಿಯ ಪಾಠವು ಉತ್ತಮವಾಗಿದ್ದುದರಿಂದ ಸಾಮಾನ್ಯವಾಗಿ ಅದರ ಪಾಠವನ್ನೇ ಅನುಸರಿಸಲಾಯಿತು. ಈಚೆಗೆ ಒಂದು ಕಾಗದದ ಹಸ್ತಪ್ರತಿಯನ್ನು ಶ್ರೀಮಾನ್ ಪಿ. ಜಿ. ಹಳಕಟ್ಟಿಯವರೂ ಮತ್ತೊಂದನ್ನು ಮದ್ರಾಸ್ ಓರಿಯಂಟಲ್ ಲೈಬ್ರರಿಯವರೂ ಒದಗಿಸಿಕೊಟ್ಟರು. ಈ ಗ್ರಂಥದ ಪುನರ್ಮುದ್ರಣವಾದಾಗ ಈ ಎರಡು ಪ್ರತಿಗಳ "ಸಹಾಯದಿಂದ ಗ್ರಂಥವನ್ನು ಅಲ್ಲಲ್ಲಿ ಸ್ವಲ್ಪ ಮಟ್ಟಿಗೆ ತಿದ್ದಿ ಪರಿಷ್ಕರಿಸಿದೆ".

'ಬಸವರಾಜ ದೇವರ ರಗಳೆ'ಯಲ್ಲಿ ದೊರೆಯುವ "ವಿಶೇಷ ಪ್ರಯೋಗಗಳೆಲ್ಲವೂ ಹರಿಹರನವೋ ಅಥವಾ ಗ್ರಂಥವನ್ನು ಪ್ರತಿಮಾಡಿದವರವೋ ನಿರ್ಧರಿಸುವುದು ಕಷ್ಟ." "ಹರಿಹರನ ಕಾಲದಲ್ಲಿ ಕನ್ನಡಭಾಷೆ ಹಳಗನ್ನಡ ರೂಪದಿಂದ ಹೊಸಗನ್ನಡ ರೂಪಕ್ಕೆ ತಿರುಗುತ್ತಿತ್ತು. ಹರಿಹರನೂ ಕೆಲವು ಹೊಸಗನ್ನಡ ರೂಪಗಳನ್ನು ಪ್ರಯೋಗಿಸಿರುವ" ಸಂಭವವುಂಟು. ಆದ್ದರಿಂದ ತಮಗೆ ತೋರಿದಂತೆ ಗ್ರಂಥಪಾಠವನ್ನು ತಿದ್ದದೆ ಹಸ್ತ ಪ್ರತಿಗಳಲ್ಲಿ ಕಂಡುಬರುವ ಪ್ರಯೋಗಗಳನ್ನು ಮಾನ್ಯಮಾಡಿ ಆ ರೂಪಗಳನ್ನೇ ಸಂಪಾದಕರು ಉಳಿಸಿದ್ದಾರೆ. ಇದಕ್ಕೆ ಉದಾಹರಣೆಯಾಗಿ 'ನೋವುತಂ', 'ನುಡಿವುತಂ', 'ಈವುತಂ' ಮೊದಲಾದ ರೂಪಗಳನ್ನು ಸೂಚಿಸಬಹುದು. ಹಾಗೆಯೇ "ಕುಡು, ಕೊಡು; ಬರ್ಪ, ಬಪ್ಪ; ಪಿಂಗು, ಹಿಂಗು; ಒಡೆ, ಅಡೆ; ಒಳ್, ಒಳು; ಅರ್, ಅರು; ಹೀಗೆ ಒಂದೇ ಪದದ ಅಥವಾ ಪ್ರತ್ಯಯದ ಭಿನ್ನರೂಪಗಳನ್ನು"

ಉಳಿಸಿರುವುದನ್ನು ನೋಡಬಹುದು. ಗದ್ಯಸ್ಥಲಗಳಲ್ಲಿ ಸಂದರ್ಭೋಚಿತವಾಗಿ ವಿರಾಮ ಸಂಜ್ಞೆಗಳನ್ನು ಉಪಯೋಗಿಸಿರುವುದೂ, ಗದ್ಯಪದ್ಯಸ್ಥಲಗಳೆರಡರಲ್ಲಿಯೂ ವಿಷಯಕ್ಕನುಗುಣವಾಗಿ ವಿಭಾಗಮಾಡಿರುವುದೂ ಓದುಗರಿಗೆ ಸಹಾಯಕವಾಗಿದೆ.

ಸಂಪಾದಿಸಿದ ಕೃತಿಯ ಪಾಠಪರಿಷ್ಕರಣವೇ ಅಲ್ಲದೆ ಕವಿಯ ಮತ್ತು ಕೃತಿಯ ಪರಿಚಯ, ಕೃತಿಯ ವಸ್ತು, ಭಾಷೆ, ಛಂದಸ್ಸುಗಳಿಗೆ ಸಂಬಂಧಿಸಿದ ವಿಷಯಗಳನ್ನೊಳಗೊಂಡ ಕಾವ್ಯವಿಮರ್ಶೆಯನ್ನೂ ಒದಗಿಸುವುದೂ ಗ್ರಂಥಸಂಪಾದಕನ ಕರ್ತವ್ಯ. ಅದರಂತೆ ಕವಿಗೂ ಕೃತಿಗೂ ಸಂಬಂಧಿಸಿದ ವಿವರಗಳನ್ನೂ ವಿಮರ್ಶೆಗಳನ್ನೂ ಗ್ರಂಥದ ಪೀಠಿಕೆಯಲ್ಲಿ ಯಥೋಚಿತವಾಗಿ ಸೇರಿಸಿ ಗ್ರಂಥಾಂತ್ಯದಲ್ಲಿ ಕೆಲವು ಕಠಿನ ಪದಗಳ ಅರ್ಥವನ್ನೂ ಕೊಟ್ಟು 'ಬಸವರಾಜ ದೇವರರಗಳೆ'ಯ ಸಂಪಾದನಾ ಕಾರ್ಯವನ್ನು ಶ್ರೀಮಾನ್ ವೆಂಕಣ್ಣಯ್ಯನವರು ಆದರ್ಶಪ್ರಾಯವಾಗಿ ನಿರ್ವಹಿಸಿದ್ದಾರೆ.

ಶ್ರೀಮಾನ್ ವೆಂಕಣ್ಣಯ್ಯನವರು ಸಂಪಾದಿಸಿದ 'ಕರ್ಣಾಟಕ ಕಾದಂಬರೀ ಸಂಗ್ರಹ'ವು ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆಯಲ್ಲಿ ಎರಡನೆಯದು; ಕನ್ನಡ ಪ್ರಕಟನ ಸಮಿತಿಯ ಅಪೇಕ್ಷೆಯಂತೆ ಕನ್ನಡದ ಪೂರ್ವಸಾಹಿತ್ಯಕೃತಿಗಳಲ್ಲೊಂದನ್ನು "ಜನರಲ್ಲಿಯೂ ವಿದ್ಯಾರ್ಥಿವರ್ಗದಲ್ಲಿಯೂ ಹೆಚ್ಚು ಪ್ರಚಾರಕ್ಕೆ ತರುವುದಕ್ಕಾಗಿ", "ವಿದ್ಯಾರ್ಥಿಗಳ ಪಾಠಕ್ಕೆ ಅನುಕೂಲವಾಗಿರುವಂತೆ" ಸಿದ್ಧಪಡಿಸಿದ ಸಂಗ್ರಹ. ಈ ಸಂಗ್ರಹವನ್ನು ಸಿದ್ಧಪಡಿಸುವಲ್ಲಿ ಕರ್ಣಾಟಕ ಕಾದಂಬರಿಯ ಬೇರೆ ಹಸ್ತಲಿಖಿತ ಪ್ರತಿಗಳ ಅಭಾವದಿಂದಾಗಿ ಏಕೈಕ ಹಸ್ತಪ್ರತಿಯ ಆಧಾರದಿಂದ ಬಿ. ಮಲ್ಲಪ್ಪನವರಿಂದ ಮುದ್ರಿತವಾದ ಪ್ರತಿಯನ್ನೇ ಮೂಲಮಾತೃಕೆಯಾಗಿ ಸ್ವೀಕರಿಸಬೇಕಾಯಿತು. ಆದ್ದರಿಂದ ಈ ಸಂಗ್ರಹದ ಸಂಪಾದನಾ ಕಾರ್ಯಕ್ಕೆ ಮಿತಿಯೇರ್ಪಟ್ಟಿದೆ. ಅಚ್ಚಿನ ತಪ್ಪುಗಳಿದ್ದಲ್ಲಿ ತಿದ್ದುವುದು, ಕಥಾಸೂತ್ರಕ್ಕೆ ಅವಶ್ಯವಲ್ಲದ ಭಾಗಗಳನ್ನೂ ವರ್ಣನೆಗಳನ್ನೂ ಕೈಬಿಡುವುದು ಅಥವಾ ಸಂಗ್ರಹಿಸುವುದು, ಇವೇ ಅವರು ಮಾಡಬೇಕಾಗಿದ್ದ ಕಾರ್ಯ. ಆದರೆ ತಮ್ಮ ಕಾರ್ಯವನ್ನು ಅಷ್ಟಕ್ಕೇ ಮಿತಗೊಳಿಸಿಕೊಳ್ಳದೆ ಪಾಠಸಂದಿಗ್ಧತೆಯಿದ್ದೆಡೆಗಳಲ್ಲಿ ಸಂಸ್ಕೃತ ಗ್ರಂಥವನ್ನು ನೋಡಿ, ಕೆಲವೆಡೆಗಳಲ್ಲಿ ಮೂಲ ಹಸ್ತಲಿಖಿತಪ್ರತಿಯನ್ನು ನೋಡಿ, ಮತ್ತೆ ಕೆಲವೆಡೆಗಳಲ್ಲಿ ಮುದ್ರಿತಪ್ರತಿಯಲ್ಲಿ ಕೊಟ್ಟಿರುವ ಪಾಠಾಂತರಗಳನ್ನು ಪರಿಶೀಲಿಸಿ ಅಲ್ಲಲ್ಲಿ ಅವಶ್ಯವೆಂದು ತೋರಿದ ಪಾಠಪರಿಷ್ಕರಣವನ್ನೂ ಸಂಪಾದಕರು ಮಾಡಿದ್ದಾರೆ. "ಮುದ್ರಿತ ಗ್ರಂಥದಲ್ಲಿ ಜಬಾಕ್ಷರ ಪ್ರಯೋಗವಿಲ್ಲ ; ಳಕಾರವೇ ಕಂಡುಬರುತ್ತದೆ." ಈ ಸಂಗ್ರಹದಲ್ಲಿ "ಜಬವನ್ನು ಉಚಿತವಾದೆಡೆಗಳಲ್ಲಿ" ಬಳಸಲಾಗಿದೆ.

ಪೀಠಿಕೆಯಲ್ಲಿ ಕವಿ ಮತ್ತು ಕೃತಿ ವಿಚಾರ, ಮೂಲ ಸಂಸ್ಕೃತ ಕೃತಿ ಮತ್ತು ಕವಿ ವಿಚಾರ, ಕಥೆಯ ಸ್ವರೂಪ ಮತ್ತು ಸಾರಾಂಶ, ಮೂಲ ಸಂಸ್ಕೃತ ಕೃತಿಯ ಮತ್ತು ಪರಿವರ್ತನದ ವಿಮರ್ಶೆ, ಈ ವಿಷಯಗಳು ಉಚಿತ ರೀತಿಯಲ್ಲಿ ಸೇರಿವೆ. ಗ್ರಂಥಾಂತ್ಯದಲ್ಲಿ ಶಬ್ದಕೋಶವಿದೆ, 'ಕರ್ಣಾಟಕ ಕಾದಂಬರಿ'ಯಲ್ಲಿ ಇತರ ಚಂಪೂಕಾವ್ಯಗಳಲ್ಲಿರು

ವಂತೆ ಆಶ್ವಾಸ ವಿಭಾಗಗಳಿಲ್ಲ. ಮೂಲಕೃತಿಯಲ್ಲಿರುವಂತೆ ಪೂರ್ವಭಾಗ ಮತ್ತು ಉತ್ತರಭಾಗ ಎಂಬ ಎರಡು ಭಾಗಗಳು ಮಾತ್ರ ಇವೆ. ಪಾಠಕರ ಸೌಕರ್ಯಕ್ಕಾಗಿ ಈ ಸಂಗ್ರಹವನ್ನು ಎಂಟು ಪರಿಚ್ಛೇದಗಳಾಗಿ ವಿಂಗಡಿಸಿ ಉಚಿತವಾದ ಹೆಸರುಗಳನ್ನು ಕೊಟ್ಟಿದೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಕಟನ ಸಮಿತಿಯ ಅಧ್ಯಕ್ಷರೂ ಪ್ರಧಾನ ಸಂಪಾದಕರೂ ಆಗಿದ್ದ ಪ್ರೊ|| ಬಿ. ಎಂ. ಶ್ರೀಕಂಠಯ್ಯನವರು ಮುನ್ನುಡಿಯಲ್ಲಿ ಸೂಚಿಸಿರುವಂತೆ ಈ ಸಂಗ್ರಹವನ್ನು ಕಥಾಸರಣಿ ಕೆಡದಂತೆ; ಒಟ್ಟು ಕಥೆಯ ಸ್ವಾರಸ್ಯಕ್ಕೆ, ಪಾತ್ರನಿರೂಪಣಕ್ಕೆ ಭಂಗಬರದಂತೆ; ಕವಿಯ ವ್ಯಕ್ತಿತ್ವಕ್ಕೆ, ಅವನ ವಿಶೇಷ ಪ್ರತಿಭೆಗೆ ಲೋಪಬರದಂತೆ ಈ ಹಳಗನ್ನಡ ಚಂಪೂಕಾವ್ಯವನ್ನು ಶ್ರೀಮಾನ್ ವೆಂಕಣ್ಣಯ್ಯನವರು ಶ್ರೇಷ್ಠರೀತಿಯಲ್ಲಿ ಸಂಗ್ರಹಿಸಿ ಸಂಪಾದಿಸಿದ್ದಾರೆ.

ರಾಘವಾಂಕನ ಹರಿಶ್ಚಂದ್ರಕಾವ್ಯದ ಸಂಗ್ರಹವನ್ನು ಶ್ರೀಮಾನ್ ವೆಂಕಣ್ಣಯ್ಯನವರೂ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳೂ ಸಂಪಾದಿಸಿದ್ದಾರೆ. ಈ ಸಂಗ್ರಹದ ಗ್ರಂಥಪಾಠವನ್ನು ಬಹುಮಟ್ಟಿಗೆ ಶ್ರೀಮಾನ್ ವೆಂಕಣ್ಣಯ್ಯನವರೇ ಸಿದ್ಧಪಡಿಸಿರುವಂತೆ ತೋರುತ್ತದೆ. ಇದಕ್ಕಾಗಿ ಐದು ಪ್ರತಿಗಳನ್ನು ಉಪಯೋಗಿಸಿಕೊಂಡಿದ್ದಾರೆ. ಇವುಗಳಲ್ಲಿ ನಾಲ್ಕು ಓಲೆಯ ಪ್ರತಿಗಳು (ಕ, ಖ, ಗ. ಘ), ಒಂದು ಮುದ್ರಿತ ಪ್ರತಿ (ಪ). ಈ ಪೈಕಿ ಪ್ರಾಚೀನವೆಂದು ತೋರಿದ ಮದ್ರಾಸ್ ಓರಿಯಂಟಲ್ ಲೈಬ್ರರಿಯ 'ಕ', 'ಖ' ಎಂದು ನಿರ್ದೇಶಿಸಿರುವ ಓಲೆಯಪ್ರತಿಗಳ ಪಾಠವನ್ನು ಹೆಚ್ಚಾಗಿ ಅಂಗೀಕರಿಸಿದೆ. ಈ ಗ್ರಂಥದಲ್ಲಿ ಉಳಿಸಿಕೊಂಡಿರುವ "ಕೆಲವು ಶಬ್ದರೂಪಗಳು ಅಸಾಧುವೆಂದು ತೋರಬಹುದು." ಆದರೂ ಓಲೆಯ ಪ್ರತಿಗಳಲ್ಲಿ ಏಕಮತ್ಯವಿದ್ದ ಕಡೆಗಳಲ್ಲಿ ಅಂಥ ರೂಪಗಳನ್ನೇ ಸಾಮಾನ್ಯವಾಗಿ ಅಂಗೀಕರಿಸಿದ್ದಾಗಿ ಸಂಪಾದಕರು ತಿಳಿಸಿದ್ದಾರೆ. "ರಾಘವಾಂಕನ ಕಾಲಕ್ಕೆ ಕನ್ನಡ ಭಾಷೆಯ ರೂಪವು ಮಾರ್ಪಡುತ್ತಿತ್ತಾದ ಕಾರಣ" ದಿಂದಲೂ, "ಈ ರೂಪಗಳು ಆಗಲೇ ಬಳಕೆಗೆ ಬಂದಿರಬಹುದೆಂದು ಹೇಳಲು ಅವಕಾಶ" ವಿರುವುದರಿಂದಲೂ ಕನ್ನಡ ಭಾಷಾಶಾಸ್ತ್ರ ಪರಿಣತರಾದ ಸಂಪಾದಕರು ಹೀಗೆ ಮಾಡಿರುವುದರ ಔಚಿತ್ಯವನ್ನು ಕಂಡುಕೊಳ್ಳಬಹುದು.

ಹರಿಶ್ಚಂದ್ರ ಕಾವ್ಯದಲ್ಲಿ ೭೫೦ ಕ್ಕೂ ಹೆಚ್ಚು ಷಟ್ಪದಿಗಳೂ ಸುಮಾರು ೧೫೦ಕ್ಕೂ ಹೆಚ್ಚು ಸಾಲುಗಳಿರುವ ಒಂದು ರಗಳೆಯೂ ಇವೆ. ಈ ಮೂಲಕೃತಿಯನ್ನು ೩೨೨ ಷಟ್ಪದಿಗಳೂ ೫೪ ಸಾಲುಗಳ ಒಂದು ರಗಳೆಯೂ ಇರುವಂತೆ ಸಂಗ್ರಹಿಸಿದ್ದಾರೆ. ಆದರೂ ಕಥಾಸರಣಿ ಕೆಡದಂತೆ, ಒಟ್ಟು ಕಥೆಯ ಸ್ವಾರಸ್ಯಕ್ಕೆ, ಪಾತ್ರನಿರೂಪಣಕ್ಕೆ ಭಂಗಬರದಂತೆ, ಅನವಶ್ಯವಾದ, ಅತಿವಿಸ್ತಾರವಾದ ವರ್ಣನೆಗಳನ್ನು ಕೈಬಿಟ್ಟರೂ, ವರ್ಣನೆಯ ಮತ್ತು ವಿವರಣೆಯ ಸಾರವು ಕುಂದದಂತೆ ಇರುವುದರಿಂದ ಇದೊಂದು ಶ್ರೇಷ್ಠ ಕಾವ್ಯಸಂಗ್ರಹವಾಗಿದೆ. ರಾಘವಾಂಕನು ರಚಿಸಿದ ಕೃತಿ ಇಷ್ಟೇ ಇದ್ದಿತೇನೋ, ಇದೇ ಮೂಲಕೃತಿಯೇನೋ ಎನ್ನುವಷ್ಟರಮಟ್ಟಿಗೆ ಸಂಗ್ರಹಕಾರ್ಯವು

ಯುಕ್ತವಾಗಿದೆ. ಇದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಮೊದಲು ಸಿದ್ಧವಾದ ಕಾವ್ಯಸಂಗ್ರಹ.

ಈ ಸಂಗ್ರಹದಲ್ಲಿ ಸಂಪಾದಕರು ಮಾತೃಕೆಗಳ ಪಾಠಗಳನ್ನು ಪರಿಶೀಲಿಸಿ, ವಿಮರ್ಶಿಸಿ ಉಚಿತ ಪಾಠವನ್ನು ಗೊತ್ತುಮಾಡಿಕೊಂಡಿರುವ ರೀತಿಯನ್ನು ಕೆಲವು ಉದಾಹರಣೆಗಳಿಂದ ತಿಳಿಯಬಹುದು. ಮೂಲಕೃತಿಯಲ್ಲಿ ಹದಿನಾಲ್ಕು ಸ್ಥಲಗಳಿವೆ. ಸಂಗ್ರಹದಲ್ಲಿ ಒಂಬತ್ತು ಅಧ್ಯಾಯಗಳಿವೆ. (ಇವಕ್ಕೆ ಅಧ್ಯಾಯ ಅಥವಾ ಸ್ಥಲ ಎಂಬ ಹೆಸರನ್ನು ಕೊಟ್ಟಿಲ್ಲ. ಇಲ್ಲಿನ ವಿವೇಚನೆಗೆ 'ಸ್ಥಲ' ಎಂಬ ಸಂಕೇತವನ್ನಿಟ್ಟಿದೆ.)

ಸ್ಥಲ ೨. ಪದ್ಯ ೧೯. ೨ನೇ ಪಾದ–"ಮುನಿದು/ಪೊಡವಿ ನುಂಗುವಡೆ ಮನೆ '[ತಾಂ]'ಗುವುದೆ", ಪಾಠಾಂತರ 'ಕೂ' (ಗ. ಘ.), 'ತೂ' (ಪ). 'ತಾಂ'ಲಿಖಿತ ಪಾಠವನ್ನು ಪ್ರತಿಮಾಡುವಾಗ 'ಕೂ' ಎಂದಾಗಲಿ 'ತೂ'ಎಂದಾಗಲಿ ಓದಿಕೊಂಡು ಪ್ರತಿಕಾರನು ಬರೆಯುವ ಸಾಧ್ಯತೆಯುಂಟು. ಸಂಪಾದಕರು ಇಟ್ಟುಕೊಂಡಿರುವ ಪಾಠ ಚೆನ್ನಾಗಿದೆ.

ಸ್ಥಲ ೩. ಪದ್ಯ ೧೫. ೨ನೆಯ ಪಾದ–"ವರಾಹನೆ/ತ್ತಿದ 'ಡೋಜು'ಗಳ". ಪಾಠಾಂತರ: 'ದೋಣಿ' (ಖ, ಗ. ಘ.). 'ಡೋಜು'ವೇ ಸರಿಯಾದ ಪಾಠ.

ಸ್ಥಲ ೩. ಪದ್ಯ ೨೫. ೧ನೆಯ ಪಾದ– 'ವಿಷ'ವಮೃತವಾದಂತೆ". ಪಾಠಾಂತರ: 'ವುಗ್ರವಳ' (ಕ. ಖ), ವುಸಿಹಿಯಾ' (ಪ). ಒಪ್ಪಿಕೊಂಡಿರುವ ಪಾಠ ಚೆನ್ನಾಗಿದೆ.

ಸ್ಥಲ ೩. ಪದ್ಯ ೨೮. ೨ನೇ ಸಾಲು. "ವುಪನಿಷತ್ತುಗಳ/'ಗರವಟಿಗೆ'". ಪಾಠಾಂತರ: 'ಪುರವಣಿಗೆ' (ಖ. ಘ. ಪ.). ಉಳಿಸಿಕೊಂಡಿರುವ ಪಾಠ ಅರ್ಥವತ್ತಾಗಿದೆ.

ಸ್ಥಲ ೪. ಪದ್ಯ ೧೨, ೨ನೇ ಪಾದ–"ರುದ್ರಾಕ್ಷೆ 'ಗೋವ'". ಪಾಠಾಂತರಗಳು: 'ಗೊಯ್ದು' (ಕ. ಖ. ಗ. ಘ.), 'ಕೋವ' (ಪ.). ಕೊಟ್ಟಿರುವ ಪಾಠವೇ ಸರಿಯಾಗಿದೆ.

ಸ್ಥಲ ೬. ಪದ್ಯ ೭. ೪ನೇ ಪಾದ–"ಕತ್ತುರಿಯ ಸುಟ್ಟರಳ 'ಕುಜು'ಕಲಸುಗೆಯ್ದರೆ". ಪಾಠಾಂತರ: 'ಕರು' (?). 'ಕರುಕಲು' ಇದ್ದರೂ ಆಗಬಹುದೆಂದು ಸೂಚಿಸುವುದಕ್ಕಾಗಿ ಪ್ರಶ್ನ ಚಿಹ್ನೆಯಿಂದ ಕೂಡಿದ ಪಾಠಾಂತರವನ್ನು ಕೊಟ್ಟಿದ್ದಾರೆ.

ಸ್ಥಲ ೬. ಪದ್ಯ ೧೭. ೪ ನೇ ಪಾದ. "'ಎರೆವ'ದೀನಾನಾಥರಾನಂದವಡಗುತಿದೆ". ಪಾಠಾಂತರ: 'ಧರೆಯ' (ಕ. ಗ. ಘ.). ಉಳಿಸಿಕೊಂಡಿರುವ ಪಾಠ ಅರ್ಥಗರ್ಭಿತವಾಗಿದೆ.

ಸ್ಥಲ ೬. ಪದ್ಯ ೨೨. ೫ನೇ ಪಾದ–"ನಕ್ಷತ್ರಕನೆನಿಪ್ಪ ಮಾ/ನಿಸ'ನೆಕ್ಕಟಿ'ಕರೆದು. ಪಾಠಾಂತರ: 'ನೆಬ್ಬಿಸಿ' (ಕ. ಖ. ಗ. ಘ.). ಇಟ್ಟುಕೊಂಡಿರುವುದು ಒಪ್ಪುವಂತಿದೆ.

ಸ್ಥಲ ೭. ಪದ್ಯ ೧೦. ೬ನೇ ಪಾದ. "ಕೃತಕಾಗ್ನಿ ಹರಿದೋಡಿ ಭಾ/ '[ಪುರೆ]' ಬಟ್ಟೆಗೊಟ್ಟುದೆಂಬಾಗ". ಪಾಠಾಂತರ: 'ಸುರ' (ಪ.). ಸಂಪಾದಕರ ಪಾಠ ಸಂದರ್ಭೋಚಿತವಾಗಿದೆ,

ಸ್ಥಲ ೭. ಪದ್ಯ ೧೫. ೧ನೆಯ ಪಾದ—“ನಡೆ‘[ಯೂಡೆ]’ ಮದ್ದುವಿಷ ಪ್ರೇಮಲಿಂಗೆ ಹಿತನೆಂಬ ನುಡಿಯಂತೆ”. ಪಾಠಾಂತರ: ‘ನೋಡಿ’ (ಪ.). ಸಂಪಾದಕರ ಪಾಠ ಯುಕ್ತವಾಗಿದೆ.

ಸ್ಥಲ ೮. ಪದ್ಯ ೩೮. ೫-೬ನೇ ಪಾದಗಳು—“ಪುತ್ರನ ಶೋಕದುರಿಗೆ ‘ತನುವೇಪರಿಸಿ ವನಿತೆ ತಾ|ಮನನೊಂದು ಬೆಂದು ಬೇಗಾಗಿ ಚಿಂತಿಸುತ’ ತೂಕದ ಕೋಲ ತೊಳಿಯಾದಳು.” ಪಾಠಾಂತರ: “ಸರಿಯಾಗಳಿರಡಕ್ಕಲ್ಲದನಿಮಿತ್ತ ವಚನವ ಫಲಂ ಮಜಿಸಿದು ವನಿತೆ” (ಕ. ಖ. ಗ.). ಪಾಠಂತರಕ್ಕೆ ಕಾರಣವನ್ನು ಊಹಿಸುವುದು ಕಷ್ಟ. ಸಂಪಾದಕರು ‘ಘ’ ಮತ್ತು ‘ಪ’ ಪ್ರತಿಗಳ ಪಾಠವನ್ನು ಒಪ್ಪಿಕೊಂಡಿರುವಂತೆ ತೋರುತ್ತದೆ.

ಸ್ಥಲ ೮. ಪದ್ಯ ೫೦. ೫-೬ನೇ ಪಾದಗಳು—“ನಿನ್ನ ಮಗನಂ ಕೊಂದ ಪಾಪಿಯಾನೆಂದಾಡಿ| ‘ಯನ್ಯಾಯ’ದಿಂ ಸಾಪೆನೆಸುತ”. ಪಾಠಾಂತರ: ‘ಸನ್ಯಾಂಗ’ (ಕ.), ಸನ್ಯಂಗ (ಖ. ಗ. ಘ.). “ಯನ್ಯಾಯ” ಎಂಬುದು ‘ಪ’ ಪ್ರತಿಯ ಪಾಠವಿರಬೇಕು. ಅದಕ್ಕಿಂತ ‘ಸನ್ಯಂಗ’ ಎಂಬ ಪಾಠವನ್ನು ಇಟ್ಟುಕೊಳ್ಳುವುದು ಸರಿಯಾದೀತು. ಆದರೆ ‘ಸನ್ಯಂಗ’ ಎಂಬ ಮಾತಿನ ವ್ಯುತ್ಪತ್ತಿ ಮತ್ತು ಅರ್ಥ ಸಂದಿಗ್ಧವಾಗಿದೆ. ಸಂದರ್ಭಾನುಸಾರ ‘ಕದ್ದಮಾಲು’ ಎಂದು ಅರ್ಥ ಹೇಳಬೇಕು.

ಗ್ರಂಥಸಂಪಾದನ ಕಾರ್ಯದ ಉಳಿದ ಭಾಗವಾದ ಕವಿ ಚರಿತ್ರೆ, ಕವಿಯ ಕಾಲ ವಿಚಾರ, ಕವಿಯ ಕೃತಿಗಳು, ಕಾವ್ಯದ ಕಥಾಸಾರ, ಕೃತಿವಿಮರ್ಶೆ ಇತ್ಯಾದಿ ವಿಷಯಗಳನ್ನೊಳಗೊಂಡ ವಿಚಾರಪೂರಿತವಾದ, ಅತ್ಯಂತ ಉಪಯುಕ್ತವಾದ ಪೀಠಿಕೆಯನ್ನು ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ರಚಿಸಿದ್ದಾರೆ.

‘ಸಿದ್ಧರಾಮ ಚಾರಿತ್ರ’ವನ್ನು ಶ್ರೀಮಾನ್ ವೆಂಕಣ್ಣಯ್ಯನವರೂ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರೂ ಸೇರಿ ಸಂಪಾದಿಸಿದ್ದಾಗಿ ಕಂಡುಬರುತ್ತದೆ. ಈ ಕೃತಿಯನ್ನು ಸಂಪಾದಿಸುವ ನಿರ್ಧಾರದ ಹಿನ್ನೆಲೆಯನ್ನು ಗ್ರಂಥದ ಮುನ್ನುಡಿಯಲ್ಲಿ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಸ್ವಾರಸ್ಯವಾಗಿ ವಿವರಿಸಿದ್ದಾರೆ. ‘ಸಿದ್ಧರಾಮ ಚಾರಿತ್ರ’ದ ಬಗೆಗೆ “ಅದು ಒಳ್ಳೆಯ ಪುರಾಣ”, “ನಿಜವಾಗಿಯೂ ಅದು ಒಳ್ಳೆಯ ಕಾವ್ಯ” ಎಂಬ ಶ್ರೀಮಾನ್ ವೆಂಕಣ್ಣಯ್ಯನವರ ಉಚಿತವಾದ ಅಭಿಪ್ರಾಯವೇ ಅದನ್ನು ಸಂಪಾದಿಸಿ ಪ್ರಕಟಿಸಬೇಕೆಂಬ ಅವರ ನಿರ್ಧಾರಕ್ಕೆ ಮೂಲಕಾರಣ.

ಈ ಗ್ರಂಥದ ಪಾಠವನ್ನು ನಾಲ್ಕು ಪ್ರತಿಗಳ ಸಹಾಯದಿಂದ ಪರಿಷ್ಕರಿಸಿದೆ. ೧೮೮೩ರಲ್ಲಿ ಮುದ್ರಿತವಾಗಿದ್ದ (ಘ.) ಪ್ರತಿ, ಧಾರವಾಡದಿಂದ ತರಿಸಿಕೊಂಡ (ಕ.) ಪ್ರತಿ, ಮೈಸೂರು ಓರಿಯಂಟಲ್ ಲೈಬ್ರರಿಯ (ಗ.) ಪ್ರತಿ, ಮದರಾಸ್ ಓರಿಯಂಟಲ್ ಲೈಬ್ರರಿಯ (ಖ.) ಪ್ರತಿ, ಇವೇ ಆ ನಾಲ್ಕು ಪ್ರತಿಗಳು. (ಕ.), (ಗ.), (ಘ.)ಗಳು ಒಂದೇ ಪ್ರಾಚೀನ ಮೂಲದಿಂದ ಬೇರೆಬೇರೆ ಕಾಲಗಳಲ್ಲಿ ಹುಟ್ಟಿರುವಂತೆ ಕಾಣುತ್ತವೆ; (ಖ.)ಕ್ಕೆ ಬೇರೊಂದು ಮೂಲವಿರಬಹುದು. “ಈ ಪ್ರತಿಗಳಲ್ಲಿ

ಯಾವುದೂ ಸರ್ವರುದ್ಧವಾಗಿಲ್ಲ." ಯಾವ ಸಂದರ್ಭದಲ್ಲಿ ಯಾವ ಪ್ರತಿಗಳ ಅಥವಾ ಪ್ರತಿಯ ಪಾಠ ಉಚಿತವೆಂದು ಕಂಡುಬಂದಿದೆಯೋ ಅದನ್ನು ಇಲ್ಲಿ ಮೂಲವಾಗಿಟ್ಟುಕೊಂಡಿದೆ. ಆದ್ದರಿಂದ ಈಗ ಮುದ್ರಿತವಾಗಿರುವ ಪಾಠ ಎಲ್ಲ ಪ್ರತಿಗಳ ಗುಣಾಂಶಗಳನ್ನೊಳಕೊಂಡ ಮಿಶ್ರಪಾಠವಾಗಿದೆ (Eclectic text)" ಎಂದು ಈ ಗ್ರಂಥ ಸಂಪಾದನೆಯ ಕಾರ್ಯವನ್ನು ಕೊನೆಮುಟ್ಟಿಸಿದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಪೀಠಿಕೆಯಲ್ಲಿ ತಿಳಿಸಿದ್ದಾರೆ. ಈ ಗ್ರಂಥದ ಪಾಠಪರಿಷ್ಕರಣವನ್ನು ಮಾಡುವಷ್ಟರಲ್ಲಿ ಶ್ರೀಮಾನ್ ವೆಂಕಣ್ಣಯ್ಯನವರ ದೇಹಸ್ಥಿತಿ ವಿಷಮಿಸಿ ೨೪-೨-೧೯೩೯ರಂದು ಅವರು ಪರಂಧಾಮವನ್ನೈದಿದರು. ಅವರು ಪೂರ್ತಿ ಮಾಡಲಾಗದೆ ಬಿಟ್ಟ ಕೆಲಸವನ್ನು ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಪೂರ್ಣಗೊಳಿಸಿದರು; ಈ ಗ್ರಂಥದ ಪೀಠಿಕೆಯನ್ನು ಇವರೇ ಬರೆದಿದ್ದಾರೆ; ಗ್ರಂಥಾಂತ್ಯದಲ್ಲಿ ಅವಶ್ಯವಾದ ಟಿಪ್ಪಣಿಗಳನ್ನೂ ಶಬ್ದಕೋಶವನ್ನೂ ಒದಗಿಸಿದ್ದಾರೆ. ಒಟ್ಟಿನಲ್ಲಿ 'ಸಿದ್ಧರಾಮ ಚಾರಿತ್ರ'ದ ಸಂಪಾದನೆಯ ಕಾರ್ಯ ಬಹುಮಟ್ಟಿಗೆ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರಿಂದಲೇ ನೆರವೇರಿದೆಯೆಂದು ಹೇಳಬಹುದು.

'ಕುಮಾರವ್ಯಾಸ ಭಾರತ'ದ ಪೇಟೆ ಮುದ್ರಣಗಳ ನ್ಯೂನಾತಿರೇಕಗಳನ್ನೂ ಓರಿಯಂಟಲ್ ಲೈಬ್ರರಿಯಿಂದ ಪ್ರಕಟವಾದ ಮೊದಲ ಕೆಲವು ಪರ್ವಗಳ ಅಸಮರ್ಪಕ ಸಂಪಾದನಕ್ರಮವನ್ನೂ ಶ್ರೀಮಾನ್ ವೆಂಕಣ್ಣಯ್ಯನವರು ಕಂಡುಕೊಂಡಿದ್ದರು. ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ವತಿಯಿಂದ ಸಿದ್ಧವಾಗಬೇಕೆಂದು ನಿರ್ಣಯಿಸಿದ್ದ 'ಕುಮಾರವ್ಯಾಸ ಭಾರತ'ದ ಸಂಪಾದಕ ಸಲಹಾಸಮಿತಿಯ ಸದಸ್ಯರಾಗಿ ಕೆಲವು ಪರ್ವಗಳ ಸಂಪಾದಕರಿಗೆ ಸೂಕ್ತ ಸಲಹೆಗಳನ್ನಿತ್ತು ಸಹಾಯ ಮಾಡುತ್ತಿದ್ದರು. ಕನ್ನಡ ಸಾಹಿತ್ಯದ ಆ ಮೇರುಕೃತಿಯನ್ನು ಪರಿಷ್ಕರಿಸಿ ಸಿದ್ಧಪಡಿಸುವ ಮಹತ್ಕಾರ್ಯವನ್ನು ಪ್ರಾರಂಭಿಸಿ ಕಾರ್ಯತತ್ಪರರಾಗಿದ್ದರೆಂಬುದು ಅವರ ಶಿಷ್ಯವೃಂದದ ಹಲವರಿಗೆ ತಿಳಿದಿರುವ ವಿಷಯ. ಅವರ ಅಕಾಲ ಮರಣದಿಂದ ಅವರು ಕೈಕೊಂಡಿದ್ದ ಮಹಾಕಾರ್ಯವು ನೆರವೇರಲಿಲ್ಲ. ಅವರು ಇಚ್ಛಿಸಿದಂತೆ ಅದು ಸಿದ್ಧವಾಗಿದ್ದರೆ ಭಂಡಾರ್‌ಕರ್ ಓರಿಯಂಟಲ್ ಇನ್‌ಸ್ಟಿಟ್ಯೂಟಿನ ವತಿಯಿಂದ ಸಂಪಾದಿತವಾಗಿ ಪ್ರಕಟವಾಗಿರುವ ವ್ಯಾಸಭಾರತದಂತೆ ಕನ್ನಡ ಕುಮಾರವ್ಯಾಸ ಭಾರತವೂ ಅಧಿಕೃತ ರೂಪದಲ್ಲಿ ದೊರೆಯುವ ಸಾಧ್ಯತೆಯಿತ್ತು. ಶ್ರೀಮಾನ್ ವೆಂಕಣ್ಣಯ್ಯನವರ ಕನಸು ಇನ್ನೂ ಹಲವರ ಕನಸಾಗಿಯೇ ಉಳಿದಿದೆ.

ಶ್ರೀಮಾನ್ ವೆಂಕಣ್ಣಯ್ಯನವರು ಕೈಕೊಂಡು ನಿರ್ವಹಿಸಿದ ಗ್ರಂಥ ಸಂಪಾದನೆಯ ಕಾರ್ಯದಲ್ಲಿ ಅವರ ಶಿಷ್ಯಶ್ರೇಷ್ಠರಾದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರೂ, ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರೂ ಎಲ್ಲ ರೀತಿಯಲ್ಲಿಯೂ ಸಹಕರಿಸಿ ಗುರುವಿನ್ನಾಗೆ ನೆರವಾಗಿ ನಿಂತು ಸೇವೆ ಸಲ್ಲಿಸಿದರು. ಇದರಿಂದ ಕಾಲಕ್ರಮೇಣ ಅವರುಗಳೂ ಶ್ರೇಷ್ಠ ಗ್ರಂಥಸಂಪಾದಕರಾಗಲು ಅನುಕೂಲವಾಯಿತೆಂದು ಹೇಳಬಹುದು

ತಪ್ಪಾಗಲಾರದು. ಡಿ. ಎಲ್. ನರಸಿಂಹಾಚಾರ್ಯರು ಗ್ರಂಥಸಂಪಾದನೆ ಮಾಡಿದ್ದಲ್ಲದೆ ಗ್ರಂಥಸಂಪಾದಕರಿಗೆ ಮಾರ್ಗದರ್ಶಿಯಾಗಬಲ್ಲ 'ಕನ್ನಡ ಗ್ರಂಥಸಂಪಾದನೆ'ಯನ್ನೂ ರಚಿಸಿದರು.

ಶ್ರೀಮಾನ್ ವೆಂಕಣ್ಣಯ್ಯನವರು ಸಂಪಾದಿಸಿದ ರಗಳೆ, ಷಟ್ಪದಿ ಹಾಗೂ ಚಂಪೂಗ್ರಂಥಗಳ ಸಮೀಕ್ಷೆಯಿಂದ ಗ್ರಂಥಸಂಪಾದನೆಯಲ್ಲಿ ಅವರು ಅನುಸರಿಸಿದ ಸಂಪಾದನಾಕ್ರಮ, ಅವರು ಏರ್ಪಡಿಸಿಕೊಂಡಿದ್ದ ಮೂಲಸೂತ್ರಗಳ ಮತ್ತು ರೀತಿ ನೀತಿಗಳ ಪರಿಚಯವಾಗುತ್ತದೆ. ಕನ್ನಡ ಗ್ರಂಥಸಂಪಾದನೆಗೆ ಅವರ ಕೊಡುಗೆ ಏನೆಂಬುದರ ಅರಿವಾಗುತ್ತದೆ. ಅವರ ಪರಿಶ್ರಮದಿಂದ ಗ್ರಂಥಸಂಪಾದನೆಗೆ ಒಂದು ನಿರ್ದಿಷ್ಟ ಕ್ರಮ ಏರ್ಪಟ್ಟಿತು. ಅವರ ಸಂಪಾದಕತ್ವದಲ್ಲಿ ಪ್ರಕಟವಾದ ನಾಲ್ಕು ಗ್ರಂಥಗಳಲ್ಲದೆ ಅವರ ಶಿಷ್ಯರೂ ಗ್ರಂಥಸಂಪಾದನೆಯಲ್ಲಿ ಪರಿಣತರೂ ಆದ ಆ ಇಬ್ಬರು ವಿದ್ವನ್ಮಣಿಗಳೂ ಕನ್ನಡ ಗ್ರಂಥ ಸಂಪಾದನೆಗೆ ಶ್ರೀಮಾನ್ ವೆಂಕಣ್ಣಯ್ಯನವರ ಮಹತ್ವದ ಕೊಡುಗೆಗಳೇ ಎಂದು ಹೇಳಬಹುದು.

## ಪರಿಶಿಷ್ಟ

೧

### ಕನ್ನಡ ಮಹಾಭಾರತ ಪರಿಷ್ಕರಣ : ಟಿ.ಎಸ್. ವೆಂಕಣ್ಣಯ್ಯನವರ ಕನಸು

"ಗದುಗಿನ ಭಾರತ ವೆಂಕಣ್ಣಯ್ಯನವರ ಅಚ್ಚುಮೆಚ್ಚಿನ ಗ್ರಂಥ. ಅವರೇ ಅದನ್ನು ಅಚ್ಚುಕಟ್ಟಾಗಿ ಪ್ರಕಟಿಸಬೇಕೆಂಬ ಉದ್ದೇಶದಿಂದ ಭಾರತದ ಹಲವಾರು ಓಲೆಯ ಪ್ರತಿಗಳನ್ನು ಸಂಪಾದಿಸಿಟ್ಟಿದ್ದರು; ಭಾರತದ ಕೈಬರಹದ ಪ್ರತಿಯೊಂದನ್ನು ತಯಾರಿಸಿಟ್ಟಿದ್ದರು. ಸ್ವಲ್ಪ ಭಾಗ ಸಂಪಾದನಾ ಕಾರ್ಯವನ್ನೂ ನಡೆಸಿದ್ದರು. ಅವರು ತಯಾರಿಸಿಟ್ಟಿದ್ದ ಕೈಬರಹದ ಪ್ರತಿಯಲ್ಲಿ ಮೂರು ಪರ್ವಗಳು ಆದಿ, ಅರಣ್ಯ, ಉದ್ಯೋಗ—ಈಗ ದೊರೆತಿವೆ. ಈ ಸಂಗ್ರಹ ಅಚ್ಚಾದ ಮೇಲೆ ಅವು ದೊರೆತಕಾರಣ ಅವುಗಳ ಉಪಯೋಗ ಈ ಸಂಗ್ರಹಕ್ಕೆ ದೊರಕಲಿಲ್ಲ. ಈ ಸಂಗ್ರಹಕ್ಕೆ ಮತ್ತೊಮ್ಮೆ ಅಚ್ಚಾಗುವ ಸುಯೋಗ ದೊರಕಿದರೆ ಆಗ ಅದರ ಪೂರ್ಣ ಉಪಯೋಗವನ್ನು ಮಾಡಿಕೊಳ್ಳಲಾಗುವುದು. ಅದು ಏನೇ ಇರಲಿ, ವೆಂಕಣ್ಣಯ್ಯನವರಿಗೆ ಅತ್ಯಂತ ಪ್ರಿಯವಾದ ಈ ಕಾರ್ಯಕ್ಕೆ ಅವರ ಆಶೀರ್ವಾದ ಸಂಪೂರ್ಣವಾಗಿದೆ ಎಂದೇ ನಮ್ಮ ಭಾವನೆ."

ಮುನ್ನುಡಿ : ಕನ್ನಡ ಮಹಾಭಾರತ ; ಆದಿಪರ್ವ ಸಂಗ್ರಹ. ಸಂ : ತ.ಸು. ಶಾಮರಾಯ; ಎಚ್. ಎಂ. ಶಂಕರನಾರಾಯಣರಾವ್, ಡಿ. ವಿ. ಶೇಷಗಿರಿರಾವ್ ; ತ. ವೆಂ. ಸ್ಮಾರಕ ಗ್ರಂಥಮಾಲೆ. ಮೈಸೂರು]

* * *





"ಗದುಗಿನ ಭಾರತ ಕೈಬರಹದ ಪ್ರತಿಯಲ್ಲಿ ನಾಲ್ಕು ಪರ್ವಗಳು–ಆದಿ, ಅರಣ್ಯ, ವಿರಾಟ, ಉದ್ಯೋಗ–ಈಗ ದೊರೆತಿವೆ, ಸಭಾಪರ್ವದ ಪ್ರತಿ ದೊರಕಲಿಲ್ಲ."

[ಮುನ್ನುಡಿ : ಸಭಾಪರ್ವ ಸಂಗ್ರಹ, ಪ್ರಧಾನ ಸಂ : ತ. ಸು. ಶಾಮರಾಯ, ಬಿ.ಎ. ಆನರ್ಸ್]; ಮೊದಲನೆಯ ಮುದ್ರಣ ೧೯೪೮; ತಿದ್ದಿದ ಎರಡನೆಯ ಮುದ್ರಣ, ೧೯೪೮]

* * *

"ಈ ವರೆಗೆ ನಾಲ್ಕು ಪರ್ವಗಳ ಸಂಗ್ರಹಗಳನ್ನು ಪ್ರಕಟಿಸಿದ್ದೇವೆ. ಅರಣ್ಯ

x x x x x x ಈ ಸಂಗ್ರಹದಲ್ಲಿ ಪಾಠಾಂತರಗಳನ್ನು ಗುರುತು ಮಾಡುವ ತಂಟೆಗೆ ನಾವು ಹೋಗಿಲ್ಲ. ಆದರೂ........ ....ದಿವಂಗತ ವೆಂಕಣ್ಣಯ್ಯನವರು ಪ್ರತಿಮಾಡಿಸಿ ಇಟ್ಟಿರುವ ಪ್ರಾಚ್ಯಸಂಶೋಧನಾಲಯದ 'ಕ' ಪ್ರತಿಯನ್ನೂ, ಮೂರು ಓಲೆಯ ಪ್ರತಿಗಳನ್ನೂ ಬಳಸಿಕೊಂಡಿದ್ದೇವೆ."

[ಅರಿಕೆ : ಅರಣ್ಯ ಪರ್ವ ಸಂಗ್ರಹ ; ಪ್ರಧಾನ ಸಂ. ತ. ಸು. ಶಾಮರಾಯ ; ಪ್ರಥಮ ಮುದ್ರಣ, ೧೯೫೫]

* * *

"ವೆಂಕಣ್ಣಯ್ಯನವರು ಪ್ರತಿಮಾಡಿಸಿದ್ದ ಕೈ ಬರಹದ ಪ್ರತಿಯಲ್ಲಿ–ಆದಿ, ಅರಣ್ಯ, ಉದ್ಯೋಗ, ವಿರಾಟ–ಈಗ ದೊರೆತಿವೆ. ಈ ಉದ್ಯೋಗ ಪರ್ವದ ಪ್ರತಿಯಿಂದ ನಮ್ಮ ಕಾರ್ಯಕ್ಕೆ ತುಂಬ ನೆರವು ದೊರಕಿತು."

[ಮುನ್ನುಡಿ : ಉದ್ಯೋಗ ಪರ್ವ ಸಂಗ್ರಹ ; ಸಂ. ತ. ಸು. ಶಾಮರಾಯ, ಎಚ್. ಎಂ. ಶಂಕರನಾರಾಯಣರಾವ್. ಮೊ. ಮು : ೧೯೪೬ ; ನಾಲ್ಕನೆಯ ಪರಿಷ್ಕೃತ ಮುದ್ರಣ ೧೯೫೦]

೨

## 'ಕುಮಾರವ್ಯಾಸ ಪ್ರಶಸ್ತಿ : ಪ್ರೇರಕರು ವೆಂಕಣ್ಣಯ್ಯನವರು ಮತ್ತು ಪಂಜೆಯವರು.

ಈ ಕುಮಾರವ್ಯಾಸ ಪ್ರಶಸ್ತಿಯನ್ನು ಮೈಸೂರು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದವರು ಕೈಕೊಂಡು ಹಲವು ವರ್ಷಗಳಾದವು. ಮುನ್ನುಡಿಯಿಂದ ಹುಟ್ಟಿ ಇನ್ನು ಬೆಳಕು ಕಾಣುವ ಹೊತ್ತಿಗೆ ಕಾಲರಾಯನು ಇಬ್ಬರು ಸಾತ್ವಿಕ ಶಿರೋಮಣಿಗಳನ್ನು, ಇಡಿಯ ಕನ್ನಡ ನಾಡ ಭಕ್ತರನ್ನು, ಕನ್ನಡ ನುಡಿಯ ಹಿರಿಯ ನಾಯಕರನ್ನು ತನ್ನ ಕರಿಯ ನಾಲಿಗೆಯನ್ನು ಚಾಚಿ ನುಂಗಿಬಿಟ್ಟನು. ಇಬ್ಬರೂ

ಈ ಗ್ರಂಥಕ್ಕೆ ಪ್ರೇರಕರು ; ಅವಕ್ಕೆ ರೂಪಕೊಟ್ಟು, ಲೇಖನಗಳನ್ನು ಸಂಗ್ರಹಿಸಿ, ದ್ರವ್ಯವನ್ನೂ ಕೂಡಿಸಿ, ಅದರ ಜೊತೆಗೆ ಒಂದು ಸಂಪೂರ್ಣ ಮೂಲಗ್ರಂಥದ ಪ್ರಕಟನೆಗೆ ನೆರವಾಗುವ ಓಲೆ ಪ್ರತಿಗಳನ್ನು ಹುಡುಕಿ ತರಿಸಿ, ಅದರ ಒಂದು ಸಂಗ್ರಹರೂಪವನ್ನು ವಿಶ್ವವಿದ್ಯಾನಿಲಯಕ್ಕಾಗಿ ಸಿದ್ಧಪಡಿಸುವ ಪ್ರೇಮಕೈಂಕರ್ಯದಲ್ಲಿ ತೊಡಗಿದ್ದವರು ; ಕುಮಾರವ್ಯಾಸನ ಹೃದಯವನ್ನು ತಾವು ಹೊಕ್ಕು, ಕನ್ನಡಿಗರಿಗೆ ದಾರಿಯನ್ನು ಸವೆಸಿದವರು—ಕೀರ್ತಿಶೇಷರಾದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರೊಬ್ಬರು ; ಶ್ರೀ ಪಂಜೆ ಮಂಗೇಶರಾಯರೊಬ್ಬರು. ವೆಂಕಣ್ಣಯ್ಯನವರು ತಳಹದಿಯನ್ನು ಹಾಕಿ ವಿಮರ್ಶಕರನ್ನು ಕೂಡಿಸಿ, ಗ್ರಂಥವನ್ನು ಈ ರೂಪಕ್ಕೆ ತಂದರು. ಮಂಗೇಶರಾಯರು ನೂರು ರೂಪಾಯಿಗಳನ್ನು ಕಾಣಿಕೆಯಾಗಿ ಕೊಟ್ಟು ಸಲಹೆಗಳನ್ನು ಸೂಚಿಸಿ ಆಶೀರ್ವದಿಸಿದರು. ಅವರ ನಷ್ಟಕ್ಕಾಗಿ ಕಣ್ಣೀರಿಡುತ್ತಾ, ಅವರ ಸಹಕಾರಿಗಳಾದ ಸಾಹಿತಿಗಳಿಗೆ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಅರ್ಪಿಸುತ್ತ ಮುನ್ನುಡಿಕಾರನು ಈ ತನ್ನ ಹಿನ್ನುಡಿಯನ್ನು ಬರೆಯುತ್ತಿದ್ದಾನೆ.”

ಬಿ. ಎಂ. ಶ್ರೀಯವರ ಮುನ್ನುಡಿ: ಕುಮಾರವ್ಯಾಸ ಪ್ರಶಸ್ತಿ, ಕರ್ಣಾಟಕ ಸಂಘ, ಮಹಾರಾಜರವರ ಕಾಲೇಜು, ಮೈಸೂರು—೧೯೪೦.

೩

## ಪಂಪಭಾರತದ ಪರಿಷ್ಕರಣ : ವೆಂಕಣ್ಣಯ್ಯ ಮತ್ತು ‘ಶ್ರೀ’ಯವರ ಪಾತ್ರ

ಪಂಪಭಾರತವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಎರಡನೆಯ ಬಾರಿಗೆ ಸಂಪಾದನೆ ಮಾಡಿದ ದಿ॥ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಯಾವ ಯಾವ ವಿದ್ವಾಂಸರಿಂದ ಯಾವ ಯಾವ ಹಂತದಲ್ಲಿ ಯಾವ ಬಗೆಯಲ್ಲಿ ತಾವು ಸಹಾಯ ಪಡೆದರೆಂಬುವನ್ನು ಉಪೋದ್ಘಾತದಲ್ಲಿ ಸವಿವರವಾಗಿ, ಪ್ರಾಮಾಣಿಕವಾಗಿ ತಿಳಿಯ ಹೇಳಿದ್ದಾರೆ. ಮೊದಲ ಮುದ್ರಣವನ್ನು ರೈಸ್‌ರವರು ಮೈಸೂರು ಅರಮನೆಯ ಸರಸ್ವತೀ ಭಂಡಾರದ ತಾಳೆಯೋಲೆಯ ಪ್ರತಿ ಮತ್ತು ಪೂಣೆಯ ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನಲ್ಲಿರುವ ತಾಳೆಯೋಲೆಯ ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಪ್ರಕಟಪಡಿಸಿದ್ದರು. (ಪರಿಷತ್ತಿನ ಮುದ್ರಣದಲ್ಲಿ ಈ ಎರಡು ಹಸ್ತಪ್ರತಿಗಳಿಗೆ ಕ್ರಮವಾಗಿ ಖ, ಗ, ಎಂದೂ ಪ್ರಥಮ ಮುದ್ರಣದ ಪ್ರತಿಗೆ ಕ ಎಂದೂ ಸಂಕೇತ ಕೊಟ್ಟಿದೆ.) ‘ಗ’ ಪ್ರತಿಯನ್ನು ತರಿಸಿಕೊಳ್ಳುವುದರಲ್ಲಿ ಸಂಪಾದಕರು ವಿಫಲರಾದರು. ‘ಕ, ಖ’ ಪ್ರತಿಗಳ ಸಹಾಯದಿಂದಲೇ ಪರಿಷತ್ಪಂಡಿತರುಗಳಾದ ಮ॥ ರಾ॥ ಕಡಬದ ನಂಜುಂಡ ಶಾಸ್ತ್ರಿಗಳೂ ಮತ್ತು ತೋಗೆರೆ ನಂಜುಂಡ ಶಾಸ್ತ್ರಿಗಳೂ, ಈ ಸಂಪಾದಕನೂ ಸೇರಿ ಗ್ರಂಥವನ್ನು ತಿದ್ದುವ ಕೆಲಸಕ್ಕೆ ಪ್ರಾರಂಭ ಮಾಡಿದರು ; ಮೊದಲನೆಯ ಆಶ್ವಾಸದಲ್ಲಿಯೇ ಅನೇಕ ಸಂಶಯಗಳು ತಲೆದೋರಲು,

ಇತರ ಪಂಡಿತರುಗಳ ಸಹಾಯವಿಲ್ಲದೆ ಈ ಕಾರ್ಯವು ತೃಪ್ತಿಕರವಾಗಿ ನಡೆಯಲಾರದೆಂದು ತಿಳಿದು ಬಂದುದರಿಂದ, ಸಂಶಯಗಳುಳ್ಳ ಪದ್ಯಗಳನ್ನೆಲ್ಲಾ ಮುದ್ರಿಸಿ ಕರ್ನಾಟಕದ ೩೦ ಮಂದಿ ಪ್ರಸಿದ್ಧ ಪಂಡಿತರುಗಳಿಗೆ ಕಳಿಸಿ ಕೊಡಲಾಯಿತು (೧೯೨೨). ಅವರುಗಳು ಕಳಿಸಿಕೊಟ್ಟ ಸಲಹೆಗಳಲ್ಲಿ ಭಿನ್ನಾಭಿಪ್ರಾಯಗಳಿದ್ದುದರಿಂದ, "ಸಂಪಾದಕರಿಗೆ ವಿಶ್ವಾಸವಿದ್ದ ಎರಡು ಪ್ರತಿಗಳ ಸಹಾಯದಿಂದಲೇ ಮುಂದಣ ಕಾರ್ಯವನ್ನು ನಡೆಯಿಸಿ, ಒಂದು ಮಾತೃಕೆಯನ್ನು ಸಿದ್ಧಪಡಿಸಿದರು....... ಇಷ್ಟರಲ್ಲಿ ಹಿಂದೆ ಮಾಡಿದ ಪ್ರಯತ್ನಗಳ ಫಲವಾಗಿ, ಉತ್ತರ ಹಿಂದೂಸ್ಥಾನದಲ್ಲಿರುವ ಆರಾ ಎಂಬ ಸ್ಥಳದಲ್ಲಿಯ ಜೈನ ಪ್ರಾಚ್ಯಗ್ರಂಥಕೋಶಾಲಯದಲ್ಲಿ ಪಂಪಭಾರತದ ತಾಳೆಯೋಲೆಯ ಪ್ರತಿಯೊಂದಿರುವುದೆಂದು ತಿಳಿದು, ಆ ಪ್ರತಿಯನ್ನು ೧೯೨೪ನೆಯ ಇಸವಿ ಜುಲೈಯಲ್ಲಿ ತರಿಸಲಾಯಿತು.........ಆರಾ ಪ್ರತಿಯ ಸಹಾಯದಿಂದ ಪರಿಷತ್ಪಂಡಿತರು ಮ|| ರಾ|| ಕಡಬದ ನಂಜುಂಡಶಾಸ್ತ್ರಿಗಳೂ ಮ|| ರಾ|| ಟಿ. ಎಸ್. ವೆಂಕಣ್ಣಯ್ಯನವರೂ, ಸಂಪಾದಕನೂ ಸೇರಿ ಮೊದಲೆರಡು ಆಶ್ವಾಸಗಳನ್ನು ತಿದ್ದಿದರು. ಬಳಿಕ, "ಮೊದಲನೆಯ ಆಶ್ವಾಸವನ್ನು ತಾವು ತಿದ್ದಿರುವಂತೆ ಮುದ್ರಣ ಮಾಡಿಸಿ, ಹಿಂದೆ ಕಳುಹಿಸಿದ್ದಂತೆಯೇ ಅನೇಕ ಮಂದಿ ಪಂಡಿತರುಗಳಿಗೂ ಇತರ ವಿದ್ವಾಂಸರಿಗೂ ಕಳುಹಿಸಲಾಯಿತು." ಇವರುಗಳ ಪೈಕಿ ಅನೇಕ ಮಂದಿ ಉಪಯುಕ್ತ ಸಲಹೆಗಳನ್ನು ನೀಡಿದರು, "ಇಷ್ಟು ಮಟ್ಟಿಗೆ ತಳಹದಿಯನ್ನು ಹಾಕಿಕೊಂಡು.... ಮ|| ರಾ|| ಟಿ. ಎಸ್. ವೆಂಕಣ್ಣಯ್ಯನವರೂ, ಪರಿಷತ್ಪಂಡಿತರು ಮ|| ರಾ|| ಕಡಬದ ನಂಜುಂಡ ಶಾಸ್ತ್ರಿಗಳೂ, ಈ ಸಂಪಾದಕನೂ ಸೇರಿ ಪ್ರತಿ ಪಾಠವನ್ನೂ ವಿಶದವಾಗಿ ಚರ್ಚಿಸಿ ಮೂವರೂ ಒಪ್ಪಿದ ಪಾಠವನ್ನೂ, ಪಾಠಾಂತರವನ್ನೂ ಕೊಟ್ಟು ಮುದ್ರಣಕ್ಕೆ ಸಿದ್ಧಪಡಿಸಿದರು. ಆದುದರಿಂದ, ಈ ಮೂವರೂ ಗ್ರಂಥದ ಈಗಿನ ರೂಪಕ್ಕೆ ಉತ್ತರವಾದಿಗಳಾಗಿರುವರು. ಮುದ್ರಣ ಕಾರ್ಯವೆಲ್ಲವನ್ನೂ ಈ ಸಂಪಾದಕನಿಗೇ ವಹಿಸಿದರು; ಆದರೆ ಕಡೆಯ ಪ್ರೂಫನ್ನು ಮಾತ್ರ ಮ|| ರಾ|| ಬಿ. ಎಂ. ಶ್ರೀಕಂಠಯ್ಯನವರಿಗೆ ತೋರಿಸಿ ಅವರ ಸಲಹೆಗಳನ್ನು ಪಡೆದುಕೊಂಡೆವು. ಈ ಮಹನೀಯರು ತಮಗಿರುವ ಉತ್ಕಟವಾದ ಕನ್ನಡ ಭಾಷಾಪ್ರೇಮದಿಂದ ಪ್ರೂಫುಗಳೆಲ್ಲವನ್ನೂ ವಿಶದವಾಗಿ ನೋಡಿ ಬೆಲೆಯುಳ್ಳ ಅನೇಕ ಸಲಹೆಗಳನ್ನು ಕೊಟ್ಟುದಕ್ಕಾಗಿ ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ".

"ಈ ಕಾರ್ಯಕ್ಕೆ ಪ್ರಾರಂಭ ಮಾಡಿದಂದಿನಿಂದಲೂ ಇದುವರೆಗೂ ಆದರದಿಂದ ಸಹಾಯ ಮಾಡಿದ ನನ್ನ ಮಿತ್ರರುಗಳಾದ ಮ|| ರಾ|| ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರಿಗೂ, ಮ|| ರಾ|| ಟಿ. ಎಸ್. ವೆಂಕಣ್ಣಯ್ಯ, ಎಂ. ಎ. ಅವರಿಗೂ ಪಂಡಿತರು ಮ|| ರಾ|| ತೋಗೆರೆ ನಂಜುಂಡ ಶಾಸ್ತ್ರಿಗಳಿಗೂ, ಪಂಡಿತರು ಮ|| ರಾ|| ಕಡಬದ ನಂಜುಂಡ ಶಾಸ್ತ್ರಿಗಳಿಗೂ ನಾನು ಕೇವಲ ಕೃತಜ್ಞನಾಗಿದ್ದೇನೆ".

('ವಿಕ್ರಮಾರ್ಜುನ ವಿಜಯ'ದ ಉಪೋದ್ಘಾತದಿಂದ ಎತ್ತಿಕೊಟ್ಟಿರುವ ವಾಕ್ಯಗಳನ್ನು ಅವತರಣಿಕೆಯ ಚಿಹ್ನೆಗಳಲ್ಲಿ ಕೊಟ್ಟಿದೆ.—ಸಂ.)

# ಗ್ರಂಥಸಂಪಾದನೆಗೆ ಎ. ಆರ್. ಕೃ. ಅವರ ಕೊಡುಗೆ

---

ಶ್ರೀಮತಿ ಕೆ. ಶಾಂತಾ

ಪಾಠ ಪರಿಷ್ಕರಣದ ಮೂಲಕ ಕವಿಕೃತಿಯ ಮೂಲ ಪಾಠವನ್ನು ನಿಷ್ಕರ್ಷಿಸುವುದಕ್ಕೆ 'ಗ್ರಂಥಸಂಪಾದನೆ' ಎಂದು ಹೇಳಬಹುದು. ಇಲ್ಲಿ 'ಸಂಪಾದನೆ' ಎಂದರೆ ಬರುವ ಹಣವಲ್ಲ. ಗ್ರಂಥದ ಮೂಲಪಾಠದ 'ಹುಡುಕುವಿಕೆ' ಅಥವಾ 'ಪರಿಷ್ಕರಣ'ಕ್ಕೆ ಸಂಪಾದನೆ ಎಂದು ಹೆಸರು. ಇಂಗ್ಲಿಷಿನಲ್ಲಿ ಇದಕ್ಕೆ 'editing' ಎನ್ನುತ್ತಾರೆ, Textual Criticism ಎನ್ನುತ್ತಾರೆ.

ಈಗಾದರೆ ಗ್ರಂಥಸಂಪಾದನೆಗೆ ಒಂದು ಶಾಸ್ತ್ರ ಇದೆ; ಸಂಪ್ರದಾಯ ಇದೆ. ಸಂಪಾದಿತ ಪುಸ್ತಕಗಳ ಮಾರ್ಗದರ್ಶನಗಳಿವೆ; ಸಂಸ್ಥೆಗಳಿವೆ; ಸಹಾಯಕರಿದ್ದಾರೆ. ಹಿಂದೆ ಒಂದು ಗ್ರಂಥ ಸಂಪಾದನೆ ಮಾಡಬೇಕಾದರೆ ಇದ್ಯಾವುದರ ಸಹಾಯವೂ ಇರಲಿಲ್ಲ. ಇಂಥ ಸಹಾಯ ಇಲ್ಲದ ಕಾಲದಲ್ಲಿ ಡಾ|| ಎ. ಆರ್. ಕೃಷ್ಣಶಾಸ್ತ್ರೀ ಎಂ.ಎ. ಡಿ.ಲಿಟ್. ಅವರು, ೧೯೧೯ ರಿಂದ ೧೯೨೨ ರ ವರೆಗೆ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ರಿಸರ್ಚ್ ಸ್ಕಾಲರ್ (ಸಂಶೋಧನಾಧಿಕಾರಿ) ಆಗಿ ಕೆಲಸ ಮಾಡಿದರು. ಆ ಸಮಯದಲ್ಲಿ 'ಕೆಳದಿ ನೃಪವಿಜಯ', 'ಧರ್ಮಾಮೃತ' ಎಂಬ ಎರಡು ಗ್ರಂಥಗಳನ್ನು 'ಸಂಪಾದಿಸಿ'ದರು. ಅನಂತರ, 'ಹರಿಶ್ಚಂದ್ರ ಕಾವ್ಯ ಸಂಗ್ರಹ' ಮತ್ತು 'ಕವಿಜಿಹ್ವಾಬಂಧನ' ಎಂಬ ಗ್ರಂಥಗಳನ್ನು ಸಂಪಾದನೆ ಮಾಡಿದರು; ಕನ್ನಡ ಸಾಹಿತ್ಯ ಪರಿಷತ್ತಿನ 'ಪರಿಷತ್ ಪತ್ರಿಕೆ'ಗಳಲ್ಲಿ ಲೇಖನಗಳನ್ನು ಸಂಪಾದಕೀಯ ಟಿಪ್ಪಣಿಗಳನ್ನು ಬರೆಯುವುದರ ಜೊತೆಗೆ, ಪಾಂಡಿತ್ಯ ಪೂರ್ಣಲೇಖನಗಳನ್ನು 'ಸಂಪಾದಿಸಿ' ಪ್ರಕಟಿಸಿದರು.

ನಾನು ಎ. ಆರ್. ಕೃ. ಅವರ ಜೀವನ ಚರಿತ್ರೆಯನ್ನು ಬರೆಯಬೇಕೆಂದು ಹವಣಿಸಿಕೊಳ್ಳುತ್ತಿದ್ದಾಗ, ನಾನು ಸಂಗ್ರಹಿಸಿಕೊಂಡ ವಿಷಯಗಳು ಏನೇನೂ ಸಾಲದು ಎನಿಸಿತು. ಆ ಸಂದರ್ಭದಲ್ಲಿ ಡಿ. ವಿ. ಜಿ. ಯವರನ್ನು ಭೇಟಿಮಾಡಿದಾಗ ಅವರು "ನಿಮ್ಮ ಅಪ್ಪನನ್ನೇ ಕೇಳು, ಏನಾದರೂ ವಿಷಯವನ್ನು ಹೇಳುವಂತೆ" ಎಂದರು.

ಒಂದು ದಿನ ನಮ್ಮ ತಂದೆ 'ನಮ್ಮ' ಮನೆಗೆ ಬಂದಾಗ, "ಅಣ್ಣಯ್ಯಾ, ನಿನ್ನ ಬಯಾಗ್ರಫಿ ಬರೆಯೋಣ ಅಂತಿದೀನಿ. ಏನಾದರೂ ಹೇಳು" ಎಂದಾಗ, "ಹಾಳೋ ಕೆಲ್ಸಾ ಇಲ್ಲಾ! ನನ್ನಲ್ಲೇನಿದೇ ಅಂಥ ಬರೆಯುವಂತಹುದು" ಎಂದುಬಿಟ್ಟರು.

ನಾನು ಮುಖ ಪೆಚ್ಚು ಮಾಡಿಕೊಂಡು ಕೈಲಿ ಹಿಡಿದಿದ್ದ ಪೆನ್ನು, ಪೇಪರನ್ನು ಇಟ್ಟು ಬಂದೆ. ೫–೧೦ ನಿಮಿಷಗಳಾದನಂತರ ಅದೇನು ತೋರಿತೋ ಏನೋ "ಬೇಕಾದರೆ ಗುರುತು ಹಾಕಿಕೋ" ಎಂದು ಎರಡು ವಿಷಯಗಳನ್ನು ತಿಳಿಸಿದರು. ಒಂದು ಅವರ ತಾಯಿ ಸತ್ತಾಗ ಇದ್ದ ಮನೆಯ ವಾತಾವರಣ (ಈ ಸಂಗತಿಯನ್ನು ಅವರ ಜೀವನ ಚರಿತ್ರೆಯಲ್ಲಿ ಬರೆದಿದ್ದೇನೆ) ಮತ್ತು ಎರಡನೆಯದಾಗಿ, "ನಾನು ೧೯೧೯ರಿಂದ ೧೯೨೩ರ ವರೆಗೆ ಮೈಸೂರು ಓರಿಯಂಟಲ್ ಲೈಬ್ರರೀಲಿ ಸಂಶೋಧನಾ ಕಾರ್ಯಕರ್ತನಾಗಿ ಕೆಲಸಮಾಡುವಾಗ 'ಕೆಳದಿ ನೃಪವಿಜಯಂ' ಮತ್ತು 'ಧರ್ಮಾಮೃತ' ಎಂಬ ಎರಡು ಪುಸ್ತಕಗಳನ್ನು 'ಎಡಿಟ್' ಮಾಡಿದೆ" ಎಂದು ಹೇಳಿದರು. ಅದನ್ನು ಹಾಗೇ ಗುರುತು ಹಾಕಿಕೊಂಡಿದ್ದೆ. ಅವರ ಬಗ್ಗೆ ಬರೆಯಲು ಈಗ ಕಾಲ ಬಂದಿದೆ.

ಮೇಲೆ ಹೇಳಿದ ನಾಲ್ಕು ಗ್ರಂಥಗಳ ಪರಿಷ್ಕರಣ ಕಾಲದಲ್ಲಿ ಎ. ಆರ್. ಕೃ. ಅವರು ಯಾವ ಯಾವ ವಿಷಯಗಳನ್ನು ಪರಿಷ್ಕರಿಸಿದ್ದಾರೆ, ಹೇಗೆ ಪರಿಷ್ಕರಿಸಿದ್ದಾರೆ ಎನ್ನುವುದಕ್ಕೆ ಆ ಪುಸ್ತಕಗಳ ಮುನ್ನುಡಿಗಳೇ ಆಧಾರ.

**ಕೆಳದಿನೃಪವಿಜಯಂ :** 'ಕೆಳದಿ ನೃಪ ವಿಜಯಂ' ಕೆಳದಿಯ ಅರಸರ ಕತೆ. ಪುಸ್ತಕ ಹಳೆಯದು ಮತ್ತು ದೊಡ್ಡದು. ಇದರ ರಕ್ಷಾಕವಚದ ಮೇಲೆ Edited by R. Shama Shastry ಎಂದಿದ್ದರೂ, ವಾಸ್ತವವಾಗಿ ಇದನ್ನು ಸಂಶೋಧಿಸಿದವರು ಎ. ಆರ್. ಕೃ. ಅವರು. ಉಪೋದ್ಘಾತವನ್ನು ಎ. ಆರ್. ಕೃ. ಅವರೇ ಬರೆದಿದ್ದಾರೆ.

ಮೊದಲು ಕೆಳದಿ ಅರಸರ ವಂಶವೃಕ್ಷವನ್ನು ಚಿತ್ರಿಸಿದ್ದಾರೆ; ಕೆಳದಿಯ ಅರಸರಿಗೆ ಇಕ್ಕೇರಿಯ ಅರಸರು ಅಥವಾ ನಾಯಕರು, ಬಿದರೂರಿನ ಅರಸರು ಎಂದು ಏಕೆ ಹೆಸರು ಬಂತು ಎಂದು ತೋರಿಸಿದ್ದಾರೆ.

ಅವರಿಗೆ ಸಿಕ್ಕಿದ ಗ್ರಂಥಕ್ಕೆ ಪೀಠಿಕೆ ಇರಲಿಲ್ಲವಾದ ಕಾರಣ ಕವಿ ವಿಚಾರ ತಿಳಿಯಲು ಅಸಮರ್ಥರಾಗಿದ್ದಾಗ, ಕವಿ ಚರಿತ್ರೆ, ವಿಲ್ಸನ್ ಅವರ ಕೃತಿಯಿಂದ ಇದು ಚಿನ್ನ ಭಂಡಾರದ ನಾರಣಪ್ಪಯ್ಯ ಬರೆದಿದ್ದೆಂದು ತಿಳಿದುಬಂದು ನೋಡಿದಾಗ, ಅದು ಅವರು ಹೇಳಿದ ಚಂಪೂ ಗ್ರಂಥವಾಗಿರಲಿಲ್ಲ. ಮದರಾಸಿನ ಓರಿಯಂಟಲ್ ಲೈಬ್ರರಿಯಲ್ಲಿ ದೊರೆತ ಚಂಪೂಗ್ರಂಥದ ಕಡೆಯಲ್ಲಿದ್ದ ಕಂದ ಪದ್ಯದಲ್ಲಿ 'ಲಿಂಗಣ್ಣ' ಎಂಬ ಹೆಸರು ಕಂಡುಬಂದಿತು ; ಅದು ಬಹಳ ಹಳೆಯ ಕಡತವಾದ್ದರಿಂದ ಕವಿ 'ಲಿಂಗಣ್ಣ'ನೇ ಇರಬೇಕು ಎಂದು ತೀರ್ಮಾನಿಸಿದರು. ಅವರ ವಂಶಸ್ಥರು, ಅದೇ ಹೆಸರಿನವರು, "ಆತ ತಮ್ಮ ವಂಶಜನೆಂದೂ ಆತ ಬರೆದ ಇತರ ಕೃತಿಗಳನ್ನು ತೋರಿಸಿ ಪ್ರತಿಯೊಂದರಲ್ಲೂ 'ಲಿಂಗಣ್ಣ ಸೂರಿ' ಎಂದಿರುವುದನ್ನು ಕಾಣಿಸಿ, ಆತ ಹರಿತಸಗೋತ್ರೋದ್ಭವನಾದ ಲಿಂಗಣ್ಣ ಬ್ರಾಹ್ಮಣನೆಂದೂ, ಆತನ ಪದ್ಯದಿಂದ ತಂದೆ ವೆಂಕಪ್ಪನೆಂದೂ ಗೊತ್ತಾಗುತ್ತದೆ." ಎಂದೂ ವಿವರಿಸಿದರು. ಈ ಕವಿಯು 'ಕೆಳದೀ ವರಬಸವೇಂದ್ರಾಶ್ರಿತ' ಎಂದು ಹೇಳಿಕೊಂಡಿದ್ದಾನೆ. ರಾಜರಲ್ಲಿ ಇಬ್ಬರು ಬಸವಪ್ಪ ನಾಯಕರಿದ್ದರು.

ಒಬ್ಬನು ಶಕ ೧೬೩೦ರಿಂದ ೧೬೩೭ರ ವರೆಗಿದ್ದನು. ಎರಡನೆಯವನು ಶಕ ೧೬೬೩ರಿಂದ ೧೬೭೭ರ ವರೆಗಿದ್ದವನು. ಮೊದಲನೆಯವನು ಪಂಡಿತರಿಗೆ ಆಶ್ರಯದಾತನಾಗಿದ್ದನು. ಆದರೆ ಇದರಿಂದ ಲಿಂಗಣ್ಣ ಕವಿ ಆ ಕಾಲದಲ್ಲೇ ಇದ್ದನೆಂದು ಹೇಳಲಿಕ್ಕಾಗುವುದಿಲ್ಲ. ಕಾರಣ ಈ ಗ್ರಂಥದಲ್ಲಿ ಬರುವ ಕತೆ, ಶಕ ೧೬೮೫ರ ವರೆಗೂ ಹೇಳಿದೆ. ಇದರಿಂದ ಆತ ಎರಡನೆಯ ಬಸವಪ್ಪನ ಕಾಲದಲ್ಲೂ ಇದ್ದಿರಬಹುದು. ಇದರಿಂದ ಕಾಲ ಖಚಿತವಾಗಿಲ್ಲ. ಇನ್ನೊಂದು ಪ್ರತಿಯಲ್ಲಿ ಶಕ ೧೭೩೬ರಲ್ಲಿ ಮೆಕಂಜಿ ಸಾಹೇಬರು ಮುತ್ಸದ್ದಿ ನಾರಾಯಣರಾಯರ ಕೈಲಿ ಬರೆಸಿಕೊಂಡಿದ್ದರೆಂದು ಬರೆದಿದೆ. ಇದರಿಂದ ಈ ಕಾವ್ಯವು ಶಕ ೧೬೮೫ರ ಮೇಲೆ ೧೭೩೬ರ ಒಳಗೆ ಎಂದರೆ ಕ್ರಿ.ಶ. ೧೭೬೩ರಿಂದ ೧೮೧೪ರ ಒಳಗೆ ಹುಟ್ಟಿರಬಹುದೆಂದು ಹೇಳಬಹುದೆಂದು ಎ. ಆರ್. ಕೃ. ಅವರು ಕಾಲವನ್ನು ನಿರ್ಧರಿಸಿದ್ದಾರೆ.

ಹಿಂದಿನ ಕವಿಗಳು ಕವಿಗಳಾಗಿದ್ದರೇ ವಿನಾ ಚರಿತ್ರಕಾರರಾಗಿರಲಿಲ್ಲ. ಆದ್ದರಿಂದ ಚರಿತ್ರೆ ಪೂರ್ಣವಾಗಿ ತಿಳಿಯುವುದಿಲ್ಲ. 'ಕೆಳದಿ ನೃಪವಿಜಯ'ವೂ ಇಂಥ ಗ್ರಂಥವೇ ಆದರೂ ಇದರಲ್ಲಿ ಕಾವ್ಯಾಂಶಕ್ಕಿಂತಲೂ ಚರಿತ್ರಾಂಶವೇ ಹೆಚ್ಚಾಗಿದೆ.

ಮೊದಲಿನಿಂದ ಕಡೆಯವರೆಗೆ ಕೆಳದಿ ಅರಸರ ಕತೆ. ಪ್ರಾಸಂಗಿಕವಾಗಿ ಇತರ ದೊರೆಗಳ ಕತೆ ಬರುತ್ತದೆ. ಇದಕ್ಕೆ ಹೆಚ್ಚು ಗಮನ ಕೊಡಬೇಕಾಗಿಲ್ಲ. ಆದರೆ ವಿಜಯನಗರದ ವಿಷಯಕ್ಕೆ ಬರುವಾಗ ಮಾತ್ರ ಸತ್ಯಾಂಶಕ್ಕೆ ಹತ್ತಿರವಾಗಬೇಕಾದರೆ 'ಕೆಳದಿ ನೃಪವಿಜಯ'ದ ಮೂಲಕ್ಕೇ ಹೋಗಬೇಕು.

ಹಿಂದೆ ಹೇಳಿದ ಹಿರಿಯ ಬಸವಪ್ಪ ನಾಯಕನು 'ಶಿವತತ್ವರತ್ನಾಕರ' ಎಂಬ ಪುಸ್ತಕವನ್ನು ಬರೆದಿದ್ದಾನೆ. ಅದರಲ್ಲಿ ಕೆಳದಿಯ ರಾಜರ ಕತೆ ಬರುತ್ತದೆ. ಈ ಭಾಗದಲ್ಲಿ ಎ. ಆರ್. ಕೃ. ಅವರು ಎಸ್. ಕೃಷ್ಣಸ್ವಾಮಯ್ಯಂಗಾರ್ ಅವರ ಗ್ರಂಥವನ್ನು ನೋಡಿದ್ದಾರೆ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಸಿಕ್ಕಿದ 'ಶಿವತತ್ವರತ್ನಾಕರ'ದ ಪ್ರತಿಯಲ್ಲಿ ಕೆಳದಿಯ ಅರಸರಿಗೆ ಸಂಬಂಧಪಟ್ಟ ವಿಷಯಗಳೆಲ್ಲಾ ಸಂಪೂರ್ಣವಾಗಿ ಬಿಟ್ಟುಹೋಗಿದೆ. ಕಾರಣವೇನೋ ತಿಳಿಯದು ಎಂದಿದ್ದಾರೆ. 'ಶಿವತತ್ವರತ್ನಾಕರ' ನಾನಾ ಶಾಸ್ತ್ರಾರ್ಥಗಳನ್ನು ಒಳಗೊಂಡಿದೆ.

ವಿಜಯನಗರವು ಹಕ್ಕ ಬುಕ್ಕರಿಂದ ವಿದ್ಯಾರಣ್ಯರ ಸಹಾಯದಿಂದ ಸ್ಥಾಪಿಸಲ್ಪಟ್ಟಿತು. ಆ ಸ್ಥಳವನ್ನು ಆಯಲು ಕಾರಣ, ಅವರು ಬೇಟೆ ಆಡುತ್ತಿದ್ದಾಗ ಮೊಲ ಬೇಟೆನಾಯಿಯನ್ನು ಕಚ್ಚಿ ಅದೃಶ್ಯವಾದಾಗ ಅದು ತಕ್ಕ ಸ್ಥಳವೆಂದು ನಿರ್ಧರಿಸಿದರು. ಈ ಸಂಗತಿಯನ್ನು ಪೋರ್ಚುಗೀಸ್ ಚರಿತ್ರಕಾರ ನ್ಯೂನಿಸ್ ಸಹ ಇದೇ ರೀತಿ ಹೇಳುತ್ತಾರೆ. ರಾಜ್ಯ ಸ್ಥಾಪನೆಯ ಬಗ್ಗೆ ಭಿನ್ನಾಭಿಪ್ರಾಯ ಇದೆ. ಇವತ್ತಿನ ಚರಿತ್ರಲೇಖಕರೆಲ್ಲಾ ಕ್ರಿ. ಶ. ೧೩೩೬ರಲ್ಲಿ ರಾಜ್ಯ ಸ್ಥಾಪಿತವಾಯಿತೆಂದು ಒಪ್ಪಿಕೊಂಡಿದ್ದಾರೆ. ಅಲ್ಲಿಂದ ೨೦೦ ವರ್ಷಗಳಲ್ಲಿ ಅರಸರ ನಂತರ ಪ್ರಾರ್ಥನೆಯಾಯಿ

ಹೇಳಿದ್ದಾರೆ. ಈ ೧೫೦ ವರ್ಷಗಳಲ್ಲಿ ೧೩ ರಾಜರು ಆಗಿಹೋಗುತ್ತಾರೆ. ಈ ರಾಜರ ಕಾಲ, ಹೆಸರುಗಳನ್ನು ಎ. ಆರ್. ಕೃ. ಅವರು ಚರ್ಚಿಸಿದ್ದಾರೆ.

ಗ್ರಂಥದ ಉಪೋದ್ಘಾತದ XVನೆಯ ಪುಟದಲ್ಲಿ "ನಾನು ನೋಡಿದ ನಾಲ್ಕು ಪ್ರತಿಗಳಲ್ಲಿ ಒಂದರಲ್ಲಿಯೂ ಪೀಠಿಕಾ ಪ್ರಕರಣ ಕಂಡುಬರುವುದಿಲ್ಲ" ಎಂದಿರುವುದರಿಂದ ಅವರಿಗೆ ನಾಲ್ಕು ಪ್ರತಿಗಳು ದೊರೆತು ಅವುಗಳನ್ನು ಪರಿಷ್ಕರಿಸಿ 'ಪ್ರಸ್ತುತ ಗ್ರಂಥ'ವನ್ನು ನಿರ್ಮಿಸಿದ್ದಾರೆಂದು ತಿಳಿಯುತ್ತದೆ. ಕೃತಿಯಲ್ಲಿ ಅಲ್ಲಲ್ಲಿ ಮರಾಠಿ ಮತ್ತು ಹಿಂದೂಸ್ತಾನೀ ಪದಗಳ ಪ್ರಯೋಗ ಹೇಗೆ ನಡೆದಿದೆ ಎಂದು ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ.

ಗ್ರಂಥವು ಆರಂಭವಾದದ್ದು ಹೇಗೋ ಮುಗಿಯುವುದೂ ಸಹ ಹಾಗೆ. ಆದ್ದರಿಂದ ಪೀಠಿಕಾ ಮತ್ತು ಮಂಗಳ ಶ್ಲೋಕಾದಿಗಳಿಲ್ಲದ ಗ್ರಂಥ 'ಕೆಳದೀ ನೃಪವಿಜಯಂ' ; ಇದು ಎ. ಆರ್. ಕೃ. ಅವರ ನಿರ್ಣಯ.

**ಧರ್ಮಾಮೃತ :** ಎ. ಆರ್. ಕೃ. ಅವರು ಸಂಪಾದಿಸಿದ ಎರಡನೆಯ ಕೃತಿ ನಯಸೇನನ 'ಧರ್ಮಾಮೃತ'. ಇದು ಸಹ Edited by R. Shama Shastry ಎಂದಿದ್ದರೂ ವಾಸ್ತವವಾಗಿ ಕೆಲಸ ಮಾಡಿದವರು ಎ. ಆರ್. ಕೃ. ಅವರು. ೧೯೨೪ರಲ್ಲಿ ಪ್ರಕಟವಾಗಿದೆ. ಇದರ ಉಪೋದ್ಘಾತವೂ ಎ. ಆರ್. ಕೃ. ಅವರಿಂದ ಬರೆಯಲ್ಪಟ್ಟಿದೆ. ಅದರಲ್ಲಿ ನಿರೂಪಿತವಾಗಿರುವಂತೆ, ಅವರಿಗೆ ಮೂರು ಹಸ್ತಲಿಖಿತ ಪುಸ್ತಕಗಳು ಸಿಕ್ಕಿವೆ : ೧)ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ೬ನೆಯ ನಂಬರಿನ ಓಲೆಯ ಪುಸ್ತಕ (ಓ) ; ೨) ಅದೇ ಲೈಬ್ರರಿಯಲ್ಲಿರುವ ಎ ೩೭ ನೆಯ ನಂಬರಿನ ಕಾಗದದ ಪುಸ್ತಕ (ಕ) ; ೩) ಮೈಸೂರು ಜೈನ ಬೋರ್ಡಿಂಗ್ ಹೋಮಿನಲ್ಲಿರುವ ಶ್ರೀ ನೇಮಿಸಾಗರವರ್ಣಿ ಸ್ವಾಮಿಗಳು ಕೊಟ್ಟ ಓಲೆಯಪುಸ್ತಕ (ಗ) ; ಶ್ರವಣಬೆಳಗೊಳದ ಜೈನ ಮಠದಿಂದ ಒಂದು ಓಲೆಯ ಪ್ರತಿಯನ್ನು ತರಿಸಿ ನೋಡಲು ಅದು ಮೇಲೆ ಹೇಳಿದ ೨ನೆಯ ಪುಸ್ತಕವಂತೆಯೇ ಇತ್ತು. ಲೈಬ್ರರಿಯ ಎರಡು ಪುಸ್ತಕಗಳೂ ಹೆಚ್ಚು ವ್ಯತ್ಯಾಸ ವಿಲ್ಲದೆ ಇದ್ದವು. ಆದ್ದರಿಂದ ಮೂರನೆಯ ಪುಸ್ತಕ ಓಲೆಗರಿಯದು ಹೆಚ್ಚು ಶುದ್ಧವಾಗಿದ್ದರಿಂದ ಅದನ್ನು ಆಧಾರಪ್ರತಿಯಾಗಿ ಇಟ್ಟುಕೊಂಡಿದ್ದಾರೆ.

ಮುಂದೆ ಅವರು ಗ, ಕ, ಓ, ಪ್ರತಿಗಳಲ್ಲಿನ ವ್ಯತ್ಯಾಸವನ್ನು ಗುರುತಿಸಿದ್ದಾರೆ. 'ಗ' ಪ್ರತಿಯಲ್ಲಿ ಕಥಾವಸ್ತು ಹೆಚ್ಚು. 'ಕ' ಮತ್ತು 'ಓ'ದಲ್ಲಿ ಕಡಿಮೆ. ಇದರಲ್ಲಿ 'ಕ' ಮತ್ತು 'ಓ' ದಿಂದ 'ಗ' ಹುಟ್ಟಿತೇ, ಇಲ್ಲ 'ಗ' ದಿಂದ 'ಕ' ಮತ್ತು 'ಓ' ಹುಟ್ಟಿತೇ ಹೇಳುವುದು ಕಷ್ಟವಾಗಿದೆ ಎಂದಿದ್ದಾರೆ. ಅವರೂ 'ಗ' ದಿಂದ 'ಕ' ಮತ್ತು 'ಓ' ಪ್ರತಿಗಳು ಉದ್ಭವಿಸಿರಬಹುದೆಂದು ಹೇಳಿದ್ದಾರೆ.

ಇಷ್ಟು ಮೊದಲ ಸಂಪುಟಕ್ಕೆ ಎ. ಆರ್. ಕೃ. ಅವರು ಹೊಂದಿಸಿಕೊಂಡ ಗ್ರಂಥಸಂಪಾದನೆಯ ಪರಿಕರ ಸಾಮಗ್ರಿ.

‘ಧರ್ಮಾಮೃತ’ ಎರಡನೆಯ ಸಂಪುಟ ೧೯೨೬ ರಲ್ಲಿ ಪ್ರಕಟವಾಗಿದೆ. (೧೦ನೆಯ ಅಧ್ಯಾಯದಿಂದ ೧೪ನೆಯ ಅಧ್ಯಾಯದ ವರೆಗೆ)

ಉಪೋದ್ಘಾತದಲ್ಲಿ ನಯಸೇನನ ಹೆಸರು, ಬಿರುದು, ಮುಂತಾದ ಕವಿವಿಷಯಕ ಸಂಗತಿಗಳನ್ನು ಗುರುತಿಸಿದ್ದಾರೆ, ಗ್ರಂಥದ ಕೊನೆಯ ಒಂದು ಕಂದಪದ್ಯದಿಂದ ಆತನ ಸ್ಥಳ ಧಾರವಾಡದ ಜಿಲ್ಲೆಯ ಮುಳುಗುಂದವೆಂದು ಊಹಿಸಿದ್ದಾರೆ. ಆತನ ಕಾಲ ೧೨ನೇ ಶತಕದ ಆದಿ ಭಾಗವೆಂದು ‘ಧರ್ಮಾಮೃತ’ದ ಆಧಾರದಿಂದಲೇ ನಿರ್ಧರಿಸಿದ್ದಾರೆ.

ಧರ್ಮಾಮೃತ ‘ಅಣುವ್ರತ’ದ ಕತೆ. ಒಂದೊಂದು ಅಧ್ಯಾಯದಲ್ಲಿ ಒಂದೊಂದು ಕತೆ ಹೇಳಿದೆ. ನಯಸೇನನು ಉಪಯೋಗಿಸಿರುವ ಭಾಷೆಯಲ್ಲಿ ಱಳ ಕುಳ ಕ್ಷಳ ಗಳ ಸಮ್ಮಿಶ್ರಣ ಇದೆ, ಎಂದು ಹೇಳಿ ಕವಿಯ ಭಾಷಾ ಶೈಲಿಯನ್ನು ವಿಮರ್ಶಿಸಿದ್ದಾರೆ.

ಮುಂದೆ ಕಥಾ ಸಾರಾಂಶ ಇದೆ. ಇವುಗಳಲ್ಲಿ ಎ. ಆರ್. ಕೃ. ಅವರಿಗೆ ಸಂದೇಹ ತೋರಿದ ಕಡೆ ತಾವು ಪರಿಷ್ಕರಿಸಿದ ಗ್ರಂಥಪಾಠದಿಂದ.ಅವತರಣಿಕೆಗಳನ್ನು ಉಪಯೋಗಿಸಿದ್ದಾರೆ, ಉದಾಹರಣೆಗಳಿವೆ.

**‘ಹರಿಶ್ಚಂದ್ರ ಕಾವ್ಯ ಸಂಗ್ರಹ’**: ಎ. ಆರ್. ಕೃ ಅವರ ಇನ್ನೊಂದು ‘ಸಂಪಾದನೆ’ ‘ಹರಿಶ್ಚಂದ್ರ ಕಾವ್ಯಸಂಗ್ರಹ’. ಹರಿಶ್ಚಂದ್ರನ ಕತೆ ಸತ್ಯಕ್ಕಾಗಿ ಬದುಕಿದ ಒಬ್ಬ ಮಹಾರಾಜನ ಕತೆ. ಒಂದು ರೀತಿಯಲ್ಲಿ ಎ. ಆರ್. ಕೃ. ಅವರೂ ಸತ್ಯವ್ರತರಾಗೇ ಬಾಳಿದರು. ಸತ್ಯಪರಿಪಾಲನೆಯ ಕಾಲದಲ್ಲಿ ಜನಗಳಲ್ಲಿ ವಿರೋಧ ಕಟ್ಟಿಕೊಂಡು ಮುಖ ಕೆತ್ತಿಸಿಕೊಂಡಿದ್ದೂ ಉಂಟು. ಅಂಥ ವ್ಯಕ್ತಿ ಈ ಒಂದು ಕೃತಿಯನ್ನು ಮೆಚ್ಚಿಕೊಂಡಿದ್ದು ಅತಿಶಯವೇನಲ್ಲ !*

ಹರಿಶ್ಚಂದ್ರ ಕಾವ್ಯ ಸಂಗ್ರಹ ೧೯೩೧ ರಲ್ಲಿ ಮೊದಲ ಮುದ್ರಣವಾಗಿ ಇವತ್ತಿನ ವರೆಗೆ ಎಂಟು ಮುದ್ರಣಗಳನ್ನು ಕಂಡಿದೆ. ವಿಶ್ವವಿದ್ಯಾನಿಲಯದ ತರಗತಿಗಳಿಗೆ ಅನೇಕ ಸಲ ಪಠ್ಯಪುಸ್ತಕವಾಗಿ ನೇಮಕವಾದ ಈ ಗ್ರಂಥ ಪರಿಷ್ಕರಣವನ್ನು ಶ್ರೀ ಟಿ. ಎಸ್. ವೆಂಕಣ್ಣಯ್ಯನವರ ಜೊತೆಗೂಡಿ ಮಾಡಿದ್ದಾರೆ. ಪೀಠಿಕೆಯೆಲ್ಲವನ್ನೂ ಎ. ಆರ್. ಕೃ. ಅವರೇ ಬರೆದದ್ದು. ಪೀಠಿಕೆಯಲ್ಲಿ ಕವಿಕಾವ್ಯ ವಿಚಾರವಾಗಿ ಚರ್ಚಿಸಿದ್ದಾರೆ.

---

* ಆಗ ನಾನಿನ್ನೂ ಹೈಸ್ಕೂಲು ವಿದ್ಯಾರ್ಥಿನಿ. ನನಗೆ ಸುಮಾರು ೧೩–೧೪ ವರ್ಷ ಇರಬಹುದು. ತ. ಸು. ಶಾಮರಾಯರೂ, ಎಚ್. ಎಂ. ಶಂಕರನಾರಾಯಣರಾಯರೂ ಹರಿಶ್ಚಂದ್ರ ಕಾವ್ಯ ಸಂಗ್ರಹದ ಬಗ್ಗೆ ಸಂದೇಹ ಪರಿಹಾರ ಮಾಡಿಕೊಳ್ಳಲು ನಮ್ಮ ಮನೆಗೆ ಬರುತ್ತಿದ್ದರು. ಆಗ ಎ. ಆರ್. ಕೃ. ಅವರು ಯಾವುದೋ ಒಂದು ಭಾಗ ಓದುವಾಗ ಜೋರಾಗಿ ಅತ್ತದ್ದು ನನಗೆ ಜ್ಞಾಪಕವಿದೆ. ಆದರೆ ಆಗ ನನಗೆ ಏಕೆ ಅತ್ತದ್ದು ? ಯಾವ ಭಾಗ ಓದುತ್ತಿದ್ದರು ? ಯಾವ ಪುಸ್ತಕ ಓದುತ್ತಿದ್ದರು ? ಎನ್ನುವುದು ಗೊತ್ತಿರಲಿಲ್ಲ. ಆಗ ಅದನ್ನೆಲ್ಲಾ ತಿಳಿಯುವ ವಯಸ್ಸು ಆಗಿರಲಿಲ್ಲ,

ಕಾವ್ಯವನ್ನು ಬರೆದವನು ರಾಘವಾಂಕ; ರಾಘವಾಂಕನಿಗೆ ಹರಿಹರ ಸೋದರ ಮಾವ. ಇಬ್ಬರ ಕಾಲವೂ ಅನಿಶ್ಚಿತ. ಹರಿಹರನ ಕೃತಿಗಳ ಆಧಾರದಿಂದ ರಾಘವಾಂಕನು ಸುಮಾರು ಕ್ರಿ. ಶ. ೧೨೦೦ರ ಮೇಲೆ ಇದ್ದಿರಬಹುದೆಂದು ಊಹಿಸಿದ್ದಾರೆ. ರಾಘವಾಂಕನ ವಿಷಯ 'ಚನ್ನಬಸವ ಪುರಾಣ', 'ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರ', 'ಗುರುರಾಜ ಚಾರಿತ್ರ'ಗಳಿಂದ ತಿಳಿಯುತ್ತದೆ. ರಾಘವಾಂಕ ಹರಿಶ್ಚಂದ್ರ ಕಾವ್ಯ ಬರೆದಾಗ ಮಾವ ಹರಿಹರನು ಮಾನವರ ಸ್ತುತಿ ಮಾಡಿದ್ದಕ್ಕೆ ಶಿಕ್ಷೆ ಕೊಟ್ಟ ಪ್ರತೀತಿ ಇದೆ. ಆದರೆ ಹರಿಶ್ಚಂದ್ರ ಶಿವಭಕ್ತ. ಶಿವ ಭಕ್ತರ ಸ್ತುತಿ ಸಮ್ಮತ.

ರಾಘವಾಂಕನು ರಚಿಸಿರುವ ಗ್ರಂಥಗಳಲ್ಲಿ ಹರಿಶ್ಚಂದ್ರಕಾವ್ಯ, ವೀರೇಶಚರಿತ್ರೆ, ಸಿದ್ಧರಾಮ ಪುರಾಣ, ಸೋಮನಾಥ ಪುರಾಣಗಳು ಮಾತ್ರ ದೊರೆತಿವೆ. ಹರಿಶ್ಚಂದ್ರ ಕಾವ್ಯ ಬಿಟ್ಟು ಉಳಿದವು ಮಿಕ್ಕೀಯ ಗ್ರಂಥಗಳು. ಹರಿಶ್ಚಂದ್ರ ಕಾವ್ಯ ದಲ್ಲಿ ಮತಾಂಶಗಳು ವಿರಳವಾಗಿ, ಕಾವ್ಯಾಂಶ ನಿಬಿಡವಾಗಿದೆ.

ಮುಂದೆ, ಹರಿಶ್ಚಂದ್ರೋಪಾಖ್ಯಾನದ ಇತಿಹಾಸವನ್ನು ತಿಳಿಸಿದ್ದಾರೆ. ಇದಕ್ಕೆ ಎ. ಆರ್. ಕೃ ಅವರು ಮೂರು ವೈದಿಕಗ್ರಂಥಗಳನ್ನು ನೋಡಿದ್ದಾರೆ: ೧) ಐತರೇಯ ಬ್ರಾಹ್ಮಣ, ೨) ಸಾಂಖ್ಯಾಯನ ಶ್ರೌತ ಸೂತ್ರ, ೩) ವೇದಾರ್ಥ ದೀಪಿಕಾ. ಶ್ರೀಮದ್ಭಾಗವತವನ್ನೂ ನೋಡಿದ್ದಾರೆ. ಇವುಗಳಲ್ಲಿ ಯಾವುದರಿಂದಲೂ ಇತಿಹಾಸ ನಿರ್ಧರವಾಗುವಂತಿಲ್ಲ. ಯಾವುದಾದರೂ ಒಂದು ಶೈವ ಪುರಾಣವಾಗಿರಬಹುದೆಂದು ಊಹಿಸಿದ್ದಾರೆ. ಇವರ ಜೊತೆಗೆ ಸ್ಕಾಂದ ಪುರಾಣ, ದೇವೀ ಭಾಗವತವನ್ನೂ ನೋಡಿದ್ದಾರೆ.

ಪ್ರಾಚೀನ ಕವಿಗಳಿಗೆ ರಸ, ಅಲಂಕಾರ ಮುಖ್ಯವಾಗಿತ್ತು. ಆದ್ದರಿಂದ ಕಾವ್ಯದ ಮಧ್ಯದಲ್ಲಿ ಎಲ್ಲೂ ವಿಸ್ತಾರವಾದ ಧರ್ಮೋಪನ್ಯಾಸ ಇಲ್ಲ. ನೀತಿಯುಕ್ತ ವಾದ ಕಾವ್ಯ. ಇದಕ್ಕೆ ತಮ್ಮ ಅನುಭವದಿಂದ ನಾಲ್ಕು ಮಾತು ಹೇಳಿದ್ದಾರೆ: "ಕಷ್ಟ ಯಾರಿಗೂ ತಪ್ಪಿದ್ದಲ್ಲ. ಅದು ನಮ್ಮ ದುಷ್ಕರ್ಮದಿಂದ ಬರುತ್ತದೋ ವಿಧಿ ಯಿಂದ ಬರುತ್ತದೋ ಅಂತೂ ಕಷ್ಟ ಬರುತ್ತದೆ. ಅನಿರೀಕ್ಷಿತವಾಗಿ ಬರುತ್ತದೆ. ಅದು ಬಂದಾಗ ನಿರಾಶೆಗೂ ಚಾಪಲ್ಯಕ್ಕೂ ಒಳಗಾಗದೆ ಧರ್ಮದಲ್ಲಿದ್ದರೆ ಬೆಟ್ಟದ ಹಾಗೆ ಕವಿದದ್ದು ಮಂಜಿನ ಹಾಗೆ ಕರಗಿಹೋಗುತ್ತದೆ. ಆ ಕಷ್ಟದಿಂದ ಬರುವ ಶಿಕ್ಷಣಾನುಭವದಲ್ಲಿ ಮನುಷ್ಯನು ತನ್ನ ಲೋಪದೋಷಗಳನ್ನು ಕಳೆದುಕೊಂಡು ಪುಟಕ್ಕೆ ಹಾಕಿ ತೆಗೆದ ಚಿನ್ನದಂತಾಗುತ್ತಾನೆ. ಈ ಕಾವ್ಯ ಇದಕ್ಕೆ ನಿದರ್ಶನ" ಎಂದಿದ್ದಾರೆ.

ಮುಂದೆ ಶೈಲಿ ಮತ್ತು ಉಪಸಂಹಾರದಿಂದ ಪೀಠಿಕೆಯನ್ನು ಮುಕ್ತಾಯಮಾಡಿ ದ್ದಾರೆ. ಶೈಲಿ ಚಿರಪರಿಚಿತ ವಾರ್ಧಕ ಷಟ್ಪದಿ; ರಾಘವಾಂಕ ಷಟ್ಪದಿಯ ಪ್ರವರ್ತಕ.

ಕಾವ್ಯ ಸುಮಾರು ಏಳನೂರು ನಲವತ್ತು ವಾರ್ಧಕ ಷಟ್ಪದಿಯಲ್ಲಿದೆ. ಕಾವ್ಯವನ್ನು ಕೇವಲ ಮುನ್ನೂರು ಪದ್ಯಗಳಲ್ಲಿ ಭಟ್ಟಿಯಿಳಿಸಿದ್ದಾರೆ. ಆದರೆ ಯಾವು ದೊಂದೂ ಮುಖ್ಯ ಪದ್ಯವನ್ನು ಕೈಬಿಟ್ಟಿಲ್ಲ. ಕಾವ್ಯದ ಮೊದಲ ಅಧ್ಯಾಯದ ೪೯ ಪದ್ಯಗಳನ್ನು ೧೬ ಪದ್ಯಗಳಿಗೆ ಇಳಿಸಿದ್ದಾರೆ. ಎರಡನೆಯದಾದ ವಸಿಷ್ಠ ವಿಶ್ವಾಮಿತ್ರರ ಸಂವಾದ ಮುಖ್ಯವಾದ್ದರಿಂದ ೩೫ ಪದ್ಯಗಳನ್ನು ೨೧ ಪದ್ಯಕ್ಕಿಳಿಸಿದ್ದಾರೆ. ಬೇಟೆ ಪ್ರಸಂಗವನ್ನು ೯೧ ಪದ್ಯಗಳಿಂದ ೩೯ ಪದ್ಯಕ್ಕಿಳಿಸಿದ್ದಾರೆ. ಮೂಲ ಕಾವ್ಯದಲ್ಲಿ ಬರುವ ಪುರವಿಹಾರವನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ವಿಶ್ವಾಮಿತ್ರರ ಆಶ್ರಮ ವರ್ಣನೆ, ರಾಜ ರಾಣಿಯರ ಸಂಭಾಷಣೆ, ರಾಜ್ಯ ಸಮರ್ಪಣೆ, ಈ ಭಾಗ ಗಳಲ್ಲಿ ಮೂಲದ ಬಹು ಪದ್ಯಗಳನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ. ಸಂಗ್ರಹ ಕಾರ್ಯದಲ್ಲಿ ಎ. ಆರ್. ಕೃ ಅವರ ಕಾವ್ಯವಿವೇಕ, ಕಾವ್ಯಾಭಿರುಚಿಗಳು ಜಾಗ್ರತ ವಾಗಿ ಕೆಲಸಮಾಡಿವೆ. ಪೀಠಿಕೆಯಲ್ಲಿಯ ಗದ್ಯಶೈಲಿ ಆದರ್ಶಪ್ರಾಯವಾದುದೆಂದು ಹೇಳಬಹುದು.

**ಕವಿಜಿಹ್ವಾಬಂಧನ :** ಎ. ಆರ್. ಕೃ. ಅವರ ನಾಲ್ಕನೆಯ ಸಂಪಾದಿತ ಕೃತಿ ಈಶ್ವರ ಕವಿಯ 'ಕವಿಜಿಹ್ವಾಬಂಧನ'. ಇದರ ಮೊದಲ ಮುದ್ರಣ ೧೯೫೨ರಲ್ಲೂ, ಎರಡನೆಯ ಮುದ್ರಣ ೧೯೫೭ ರಲ್ಲೂ ಆಗಿವೆ.

ಈ ವೇಳೆಗೆ ೧೫ ವರ್ಷಗಳ ಹಿಂದೆ, ಎ. ಆರ್. ಕೃ. ಅವರಿಗೆ ಬೆಂಗಳೂರು ವಿಶ್ವೇಶ್ವರಪುರದಲ್ಲಿದ್ದ ಶ್ರೀ ಕವಿ ಲಿಂಗಣ್ಣಯ್ಯನವರ ಬಳಿ ಗ್ರಂಥ ಸಿಕ್ಕಿತು. ಇವರು 'ಕೆಳದಿ ನೃಪವಿಜಯ'ದ ಕರ್ತೃ ಲಿಂಗಣ್ಣ ಕವಿಯ ವಂಶಿಕರು. ಆದ್ದರಿಂದ ಅವರ ಬಳಿ ಇರಲು ಸಾಧ್ಯವಾಯಿತು. ಈ ಗ್ರಂಥದೊಂದಿಗೆ ಇನ್ನೂ ಕೆಲವು ಲಕ್ಷಣ ಗ್ರಂಥಗಳಿದ್ದವಂತೆ. ೧೫ ವರ್ಷ ಆ ಹಸ್ತಪ್ರತಿ ಎ. ಆರ್. ಕೃ. ಅವರ ಬಳಿ ಇತ್ತು ; ಬಳಿಕ ಸಂಪಾದಿತವಾಗಿ ಹೊರಬಿತ್ತು. ಆ ವರೆಗೆ ಎ. ಆರ್. ಕೃ. ಅವರಿಗೆ ಈ ಗ್ರಂಥದ ಪರಿಚಯ ರಾ. ನರಸಿಂಹಾಚಾರ್ಯರ 'ಕವಿಚರಿತೆ'ಯಿಂದ, ಕಿಟ್ಟೆಲ್ ಸಂಪಾದಿತ 'ಛಂದೋಂಬುಧಿ'ಯ ಪೀಠಿಕೆಯಿಂದ, ರೈಸ್ ಸಂಪಾದಿತ 'ಶಬ್ದಾನು ಶಾಸನದ' ಪೀಠಿಕೆಯಿಂದ ಆಗಿತ್ತು.

ನರಸಿಂಹಾಚಾರ್ಯರ ಪ್ರತಿ ಅಸಮಗ್ರ ಎಂದು ಅವರೇ ಹೇಳಿದ್ದಾರೆ. ರೈಸ್, ಕಿಟ್ಟೆಲ್ ಅವರ ಪ್ರತಿಗಳು ಹೇಗಿದ್ದುವೋ ಎ. ಆರ್. ಕೃ. ಅವರಿಗೆ ಗೊತ್ತಿಲ್ಲ. ಎಚ್. ಶೇಷಯ್ಯಂಗಾರ್ಯರು ಉಪಯೋಗಿಸಿಕೊಂಡ 'ಖ' ಪ್ರತಿ ನರಸಿಂಹಾಚಾರ್ಯರದ್ದು ಇರಬಹುದು ಎಂದು ಊಹೆ. ಎ. ಆರ್. ಕೃ. ಅವರಿಗೆ 'ಮ' ಪ್ರತಿ (ಮದರಾಸ್ ಪ್ರತಿ), ಮತ್ತು 'ಧಾ' ಪ್ರತಿ (ಧಾರವಾಡ ಪ್ರತಿ), 'ಬೆಂ' ಪ್ರತಿ (ಬೆಂಗಳೂರು ಪ್ರತಿ), ಇವು ದೊರೆತುವು 'ಧಾ' ಪ್ರತಿಯ ಮಂಗಳ ಪದ್ಯ 'ಶ್ರೀ ಮದ್ಗಂಗಾ ತರಂಗಾಂಕಿತ.... ಕಲ್ಲಿನಾಥಖ್ಯಲಿಂಗಂ' ಎಂಬುದನ್ನು ನೋಡಿ. ಅದು ಓರಿಯಂಟಲ್ ಲೈಬ್ರರಿಯ

ಪ್ರತಿಯಲ್ಲಿಲ್ಲದಿದ್ದರಿಂದ, ಅದನ್ನು ಸಂಪಾದಿಸುವ ಯೋಜನೆ ಬಂತು. ಪೀಠಿಕೆಯಲ್ಲಿ ವಿವೇಚಿಸಿರುವ ಮುಖ್ಯಾಂಶಗಳು ಹೀಗಿವೆ.

ಪೀಠಿಕೆ ಪು. viii ಕವಿಯ ಹೆಸರು 'ನಿಡುವಣಿ' ಎಲ್ಲಿದೆ ಎಂಬುದು ಪರಿಹಾರ ಕಾಣದ ಹೋದಂತ ಸಮಸ್ಯೆ. ಪು. xi -ಸಿಕ್ಕಿದ ಪ್ರತಿಗಳ ಪದ್ಯಗಳ ಎಣಿಕೆ; ಪು-xiii-ಕವಿ ಕೇಶಿರಾಜನ ಶಕಟರೇಫ 'ಱ' ಉಪಯೋಗಿಸಿಲ್ಲ. ಮುಂದೆ, ಕವಿಯಾರು? ಕವಿಯ ಕಾಲ, ಮತ, ಭೀಮಣ ಕವಿಯ ವಿಚಾರ, ಗ್ರಂಥದ ಪದ್ಯಲಕ್ಷಣ, 'ಪಡಿ'ಯ ವಿಚಾರ ಇವುಗಳನ್ನು ನಿರ್ವಹಿಸಿದ್ದಾರೆ.

'ಕವಿಜಿಹ್ವಾಬಂಧನ' ನಾನಾ ಶಾಸ್ತ್ರಗಳನ್ನು ತಿಳಿಸುತ್ತದೆ. 'ಕವಿಜಿಹ್ವಾ ಬಂಧನ'ವೆಂದರೆ ಕವಿಯ ನಾಲಿಗೆಗೆ ಛಂದಸ್ಸಿನ ಕಟ್ಟು ಒಂದೇ ಅಲ್ಲ. ಲಕ್ಷಣಶಾಸ್ತ್ರ ಸಮುದಾಯಕ್ಕೆ ಸೇರುವ ಮಿಕ್ಕೆಲ್ಲ ಶಾಸ್ತ್ರಗಳ ಕಟ್ಟೂ ಎಂದು ತಿಳಿಯಬೇಕು, ಎಂಬುದು ಎ. ಆರ್. ಕೃ. ಅವರ ಅಭಿಮತ.

'ಕವಿಜಿಹ್ವಾಬಂಧನ' ಚಿಕ್ಕದಾದರೂ ಲಕ್ಷಣಗ್ರಂಥ ವಿಚಾರಗಳೆಲ್ಲ ಅಡಕ ವಾಗಿವೆ. ಎ. ಆರ್. ಕೃ. ಅವರಿಗೆ ಎಲ್ಲಾ ಲಕ್ಷಣಗ್ರಂಥಗಳ ಪರಿಚಯ ಇದ್ದದ್ದರಿಂದ ಇದನ್ನು ಸಂಪಾದಿಸುವುದು ಸುಲಭವಾಯಿತು. ಪಾಠ ಪರಿಷ್ಕರಣದ ಬಗ್ಗೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು :

ಪುಟ ೧೮, ೪ನೆಯ ಸಾಲು : ಸಂಕ್ಷರಂ' ಅರ್ಥವಾಗದ ಪದ. ಅದನ್ನು ಅವರು 'ಸಾಕ್ಷರಂ' ಎಂದು ತಿದ್ದಿದ್ದಾರೆ. 'ಸ' ಅಕ್ಷರಕ್ಕೆ ಇಳಿ ಕೊಡುವಾಗ ಲಿಪಿಕಾರನ ಕೈತಪ್ಪಿನಿಂದ 'ಸಾಕ್ಷರಂ' 'ಸಂಕ್ಷರಂ' ಆಗಿರಬಹುದು (ಾ ಇಳಿಯ ಸೊನ್ನೆ 'ಬಿಂದು' ಎಂಬ ಭ್ರಾಂತಿಗೆ ಕಾರಣವಾಗಿದೆ.) ಪುಟ ೧೪, ೨೨ನೇ ಸಾಲು : 'ಗುಡುಸು' ಎನ್ನುವುದನ್ನು 'ಗಂಡಸು' ಎಂದು ತಿದ್ದಿದ್ದಾರೆ. 'ಗ' ಪಕ್ಕದಲ್ಲಿ ಸೊನ್ನೆ (ಬಿಂದು) ಬರೆಯುವಾಗ ಅದು 'ಗ'ಕ್ಕೆ ಕೊಂಬಿನಂತೆ ಕೈತಪ್ಪಿನಿಂದ ಆಗಿರಬಹುದು, ಎಂದು ತಿದ್ದಿದ್ದಾರೆ. ಆ ಪದ್ಯದ ಅರ್ಥ 'ಗುಡುಸು'ಗೆ ಹೊಂದದೆ 'ಗಂಡಸು'ಗೆ ಹೊಂದ ಬಹುದೆಂದು ಎ. ಆರ್. ಕೃ. ಅವರ ಊಹೆ ಸರಿಯಾಗಿದೆ. ಜೊತೆಗೆ ಈ ಪದ್ಯ 'ಧಾ' ಪ್ರತಿಯಲ್ಲಿ ಇಲ್ಲ ಎಂದೂ ತಿಳಿಸಿದ್ದಾರೆ. (ಇದು ಪ್ರಕ್ಷೇಪವಾಗಿರಬಹುದೇ?)

ಈ ರೀತಿ ತಮಗೆ ಸಿಕ್ಕಿದ ಬೆಂಗಳೂರು ಪ್ರತಿಯ ಜೊತೆಗೆ, ಮದ್ರಾಸ್ ಪ್ರತಿ, ಧಾರವಾಡ ಪ್ರತಿಗಳ ಜೊತೆ ಹೋಲಿಕೆ ಮಾಡಿ ತಮಗೆ ಸರಿಕಂಡ ಕವಿಜಿಹ್ವಾ ಬಂಧನ'ದ ಪಾಠವನ್ನು ತಮ್ಮ ಬಹುಶ್ರುತ ಪಾಂಡಿತ್ಯದಿಂದ ಪರಿಷ್ಕರಿಸಿ ಸಂಪಾದಿಸಿ ಸಿದ್ದಾರೆ. 'ಕವಿಜಿಹ್ವಾಬಂಧನ' ಪ್ರಸಿದ್ಧವಾದ ಕೃತಿ ಅಲ್ಲದಿದ್ದರೂ ಗ್ರಂಥಸಂಪಾದನೆಯ ದೃಷ್ಟಿಯಿಂದ ಗಮನಾರ್ಹವಾದ ಕೃತಿ.

ಎ. ಆರ್. ಕೃ. ಅವರ ಪ್ರತಿಭೆ, ಪಾಂಡಿತ್ಯಕ್ಕೆ ಮೇಲಿನ ನಾಲ್ಕು ಗ್ರಂಥಗಳ 'ಗ್ರಂಥಸಂಪಾದನೆ' ನಿದರ್ಶನ, ಗ್ರಂಥಸಂಪಾದನೆ ವಿಧಾನಕ್ಕೆ ಇವು ಮಾದರಿಯಾಗಬಲ್ಲ ಕೊಡುಗೆ. ಎ. ಆರ್. ಕೃ. ಅವರು ಮೊದಲ ಎರಡು ಗ್ರಂಥಗಳನ್ನು ಸಂಪಾದನೆ

ಮಾಡಿದ ಕಾಲಕ್ಕೆ ಗ್ರಂಥಸಂಪಾದನಾ ಶಾಸ್ತ್ರದ ನಿಯಮಗಳು ನಮ್ಮ ದೇಶದ ವಿದ್ವತ್ ಪ್ರಪಂಚಕ್ಕೆ ಪರಿಚಿತವಾಗಿರಲಿಲ್ಲ. ಆವರೆಗೆ ಸಂಪಾದಿತವಾಗಿದ್ದ ಗ್ರಂಥಗಳೇ ಪೂರ್ವನಿದರ್ಶನಗಳಾಗಿದ್ದವು. ಇವುಗಳ ಮಾದರಿ ನೆರವಿಗೆ ಬಂದಿವೆ, ಅದರಲ್ಲಿ ಸಂಶಯವಿಲ್ಲ. ದಿವಂಗತ ವೆಂಕಣ್ಣಯ್ಯನವರ ಆಪ್ತಮಿತ್ರರಾದ ಎ. ಆರ್. ಕೃ. ಅವರು ಅವರಂತೆಯೇ ಗ್ರಂಥಸಂಪಾದನೆಯಲ್ಲಿ ತಮ್ಮ ದಾರಿಯನ್ನು ತಾವೇ ಗುರುತಿಸಿಕೊಂಡು ಮುನ್ನಡೆದಿದ್ದಾರೆ! ಇತರರಿಗೆ ದಾರಿತೋರಿದ್ದಾರೆ. 'ಕನ್ನಡದ ಅಶ್ವಿನೀದೇವತೆಗಳು' ಎಂದು ಖ್ಯಾತನಾಮರಾದ ವೆಂಕಣ್ಣಯ್ಯ, ಎ. ಆರ್. ಕೃ. ಗ್ರಂಥಸಂಪಾದನಾ ಕ್ಷೇತ್ರದಲ್ಲಿಯೂ ಕೈಹಿಡಿದು ನಡೆದವರು. 'ವಚನಭಾರತ'ವನ್ನು ಬರೆಯುವ ವೇಳೆಗೆ ಎ. ಆರ್. ಕೃ. ಗ್ರಂಥಸಂಪಾದನಾ ಶಾಸ್ತ್ರದಲ್ಲೂ ಪ್ರಭುತ್ವ ಪಡೆದಿದ್ದರು ಎನ್ನುವುದಕ್ಕೆ ಅದರ ದೀರ್ಘವಾದ ಪೀಠಿಕೆಯೇ ನಿದರ್ಶನ. ಈ ಕೃತಿ ರಚನೆಯಾದ ಮೇಲೆ ಅವರು ಗ್ರಂಥಸಂಪಾದನಾ ಕಾರ್ಯಕ್ಕೂ ಮನಸ್ಸು ಕೊಟ್ಟಿದ್ದರೆ ಈ ಕ್ಷೇತ್ರಕ್ಕೆ ಇನ್ನೂ ಹೆಚ್ಚಿನ ಪ್ರಯೋಜನ ದೊರಕುತ್ತಿತ್ತು. ದೊರೆತಷ್ಟರಿಂದ ನಾವು ತೃಪ್ತಿಪಡಬೇಕಾಗಿದೆ.

—o—

# ಗ್ರಂಥಸಂಪಾದನೆಗೆ ಶಿ. ಶಿ. ಬಸವನಾಳರ ಕೊಡುಗೆ

ಡಾ॥ ಪಿ. ವಿ. ನಾರಾಯಣ

ಶಿ. ಶಿ. ಬಸವನಾಳರು ಕನ್ನಡ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ಉದ್ದಾಮ ಪಾಂಡಿತ್ಯವನ್ನು ಪಡೆದಿದ್ದವರು. ಅವರ ವಿದ್ವತ್ತಿನ ಜೊತೆಗೆ ರಸಪ್ರಜ್ಞೆ ಕೂಡಿದ್ದುದರಿಂದ ಅವರ ಬರಹಗಳಲ್ಲಿ ಶುಷ್ಕಪಾಂಡಿತ್ಯವು ಕಾಣಿಸುವುದಿಲ್ಲ. ಅವರ ವಿದ್ವತ್ತು ಮತ್ತು ಸೌಂದರ್ಯಪ್ರಜ್ಞೆಗಳು ಹಿನ್ನೆಲೆಯಲ್ಲಿ ಸದಾ ಎಚ್ಚರವಾಗಿದ್ದುದರಿಂದ ಅವರು ಸಂಪಾದಿಸಿ ಪ್ರಕಟಿಸಿದ ಕಾವ್ಯಗಳು ಆಯಾ ಕವಿಯ ಮೂಲ ಪಾಠಕ್ಕೆ ತುಂಬ ಹತ್ತಿರವಾದ ಸ್ವರೂಪವನ್ನು ಪಡೆದುಕೊಂಡು ಅವನ ಆಶಯವು ಓದುಗರನ್ನು ತಲುಪಲು ಸಾಧ್ಯವಾಯಿತು. ಇವರ ಪ್ರಯತ್ನದಿಂದಾಗಿ ಅನೇಕ ಪ್ರಾಚೀನ ಕವಿಗಳ ಕಾವ್ಯಗಳು ಕಾಲದಿಂದಾದ ಪಾಠದೋಷಗಳಿಂದ ಪಾರಾದುವು; ಅದರಿಂದಾಗಿ ಆಯಾ ಕವಿಗಳ ಸಾಹಿತ್ಯಕ ಸ್ಥಾನವು ನಿರ್ಧರಿತವಾಗಲು ಸಾಧ್ಯವಾಯಿತು. ಪ್ರಾಚೀನ ಕವಿಗಳ ಕಾವ್ಯವನ್ನು ಮೂಲಸ್ವರೂಪಕ್ಕೆ ಹತ್ತಿರವಾದ ರೀತಿಯಲ್ಲಿ ಪರಿಷ್ಕರಿಸಿ ಓದುಗರಿಗೆ ಒದಗಿಸುವ ಸಂಪಾದಕನು ತಾನೇ ಮೊದಲು ಕವಿಯನ್ನು ಅರ್ಥಮಾಡಿಕೊಂಡಿರದಿದ್ದರೆ ಈ ಸಂಪಾದನಾ ಕೆಲಸವು ಸಾಧ್ಯವಾಗದು. ಬಸವನಾಳರು ಸಂಪಾದಿಸಿದ ಕಾವ್ಯಗಳು ಈ ರೀತಿಯಲ್ಲಿ ಜನರಿಗೆ ಸಿಕ್ಕಿವೆ; ಅವುಗಳನ್ನು ಸರಿಯಾದ ನಿಟ್ಟಿನಲ್ಲಿ ಅರ್ಥೈಸಲು ಅವರ ಪ್ರಸ್ತಾವನೆ, ಅರ್ಥಕೋಶಗಳು ಸಹಾಯಕವಾಗಿವೆ.

ಬಸವನಾಳರು ಸಂಪಾದಿಸಿದ ಗ್ರಂಥಗಳಲ್ಲಿ ಪ್ರಸಿದ್ಧ ಪ್ರಾಚೀನ ಕವಿಗಳ ಕಾವ್ಯಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದರೂ, ಕೆಲವು ಶಾಸ್ತ್ರಗ್ರಂಥಗಳೂ ಸೇರಿವೆ. ಅವುಗಳ ಪರಿಷ್ಕರಣದಲ್ಲಿ ಕಾಣುವ ಅವರ ಪಾಂಡಿತ್ಯವು ಎಂಥವರನ್ನೂ ಬೆರಗುಗೊಳಿಸುವಂಥದು. ಜೊತೆಗೆ ಪ್ರತಿಯೊಂದು ಅಂಶದಲ್ಲಿಯೂ ಅತ್ಯಂತ ಎಚ್ಚರದಿಂದ ಸಂಪಾದನಾಕಾರ್ಯವನ್ನು ನಿರ್ವಹಿಸಿದ ಅವರ ರೀತಿ ಆದರ್ಶಪ್ರಾಯವಾದುದು. 'ಬಸವಣ್ಣನವರ ವಚನಗಳು', ಚಾಮರಸನ 'ಪ್ರಭುಲಿಂಗಲೀಲೆ', ಹರಿಹರನ 'ರಕ್ಷಾಶತಕ–ಪಂಪಾಶತಕ'ಗಳು, ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ', ಷಡಕ್ಷರಿಯ 'ಶಬರಶಂಕರ ವಿಲಾಸ' ಇತ್ಯಾದಿ ಕಾವ್ಯಗಳನ್ನಲ್ಲದೆ ಸರ್ಪಭೂಷಣ ಶಿವಯೋಗಿ ಕೃತ 'ಕೈವಲ್ಯಕಲ್ಪವಲ್ಲರಿ' ಹಾಗೂ ಬಾಲಲೀಲಾ ಮಹಾಂತೇಶ್ವರ ಶಿವಯೋಗಿ ವಿರಚಿತ 'ಕೈವಲ್ಯದರ್ಪಣ'ಗಳಂತಹ ಮತೀಯ–ಧಾರ್ಮಿಕ ವಿಚಾರವನ್ನುಳ್ಳ ಗ್ರಂಥಗಳನ್ನೂ; ಶ್ರೀಪು ಶಂಕರನಾರಾಯಣ ಅವರೊಂದಿಗೆ ನಾಗವರ್ಮನ 'ಕಾವ್ಯಾವಲೋಕನ'ವನ್ನೂ;

ಭಟ್ಟಾಕಳಂಕನ 'ಕರ್ಣಾಟಕ ಶಬ್ದಾನುಶಾಸನ'ಕ್ಕೆ ಕುಂಡಲಗಿರಿಯಾಚಾರ್ಯರು ಹಾಗೂ ಮ. ಪ್ರ. ಪೂಜಾರರು ರಚಿಸಿದ 'ಪ್ರಕಾಶಿಕೆ'ಯಂತಹ ಶಾಸ್ತ್ರಗ್ರಂಥವನ್ನೂ ಅವರು ಅತ್ಯಂತ ಪರಿಶ್ರಮದಿಂದ ಸಂಪಾದಿಸಿಕೊಟ್ಟಿದ್ದಾರೆ. ಇವುಗಳಲ್ಲಿ ಮುಖ್ಯವಾದ ಕೆಲವು ಗ್ರಂಥಗಳ ಪರಿಷ್ಕರಣ ರೀತಿಯನ್ನು ಪರಿಶೀಲಿಸಿದರೆ ಬಸವನಾಳರ ಗ್ರಂಥ ಸಂಪಾದನಾಕಾರ್ಯದ ಸ್ಥೂಲ ಪರಿಚಯವಾಗಬಹುದು.

೧೯೩೪ರಲ್ಲಿ ಬಸವನಾಳರು ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'ವನ್ನು ಸಂಪಾದಿಸಿ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಮೂಲಕ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಹದಿನಾರನೆಯ ಶತಮಾನದ ಕೊನೆಯಲ್ಲಿ ರಚಿತವಾದ ಈ ಕಾವ್ಯವು ವೀರಶೈವ ಪುರಾಣಗಳಲ್ಲಿ ಮುಖ್ಯವಾದವುಗಳಲ್ಲಿ ಒಂದಾಗಿದೆ. ಸುಮಾರು ೩೯೦೦ ವಾರ್ಧಕ ಷಟ್ಪದಿಗಳನ್ನುಳ್ಳ ಈ ಪುರಾಣವು ವೀರಶೈವ ಪುರಾಣದ ಎಲ್ಲ ಅಂಶಗಳನ್ನೊಳಗೊಂಡ ಕಾವ್ಯ. ಅದನ್ನು ಬಸವನಾಳರು ತುಂಬ ಸುಂದರವಾದ ಆವೃತ್ತಿಯಾಗಿ ಪ್ರಕಟಿಸಿದ್ದಾರೆ. ಆಕರ್ಷಕವಾದ ಮುದ್ರಣವಲ್ಲದೆ, ಹಲವಾರು ವರ್ಣಚಿತ್ರಗಳನ್ನೂ ಒಳಗೊಂಡ ಈ ಗ್ರಂಥ ಪ್ರಕಾಶನದ ಅಚ್ಚುಕಟ್ಟಿಗೆ ಮಾದರಿಯಾಗಿದೆ. ಈ ಗ್ರಂಥದ ಪರಿಷ್ಕರಣಕ್ಕೆ ಸಂಪಾದಕರು ಐದು ಅಚ್ಚಾದ ಪ್ರತಿಗಳನ್ನೂ, ಐದು ಕಾಗದದ ಹಸ್ತಪ್ರತಿಗಳನ್ನೂ, ಮೂರು ತಾಳೆಗರಿಯ ಪ್ರತಿಗಳನ್ನು ಬಳಸಿಕೊಂಡಿದ್ದಾರೆ. ತಮಗೆ ಒಪ್ಪಿತವಾದ ಪಾಠಗಳನ್ನು ಮುಖ್ಯಗ್ರಂಥದಲ್ಲಿ ಅಳವಡಿಸಿ ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾರೆ. ಗ್ರಂಥದ ಪ್ರಾರಂಭದಲ್ಲಿ ಪ್ರಸ್ತಾವನೆ ಹಾಗೂ ದೀರ್ಘವಾದ ಕಥಾಸಾರವನ್ನು ಬರೆದಿರುವುದರ ಜೊತೆಗೆ ಕೊನೆಯಲ್ಲಿ ಐವತ್ತು ಪುಟಗಳಷ್ಟು ಶಬ್ದಕೋಶವನ್ನೂ ರಚಿಸಿಕೊಟ್ಟಿದ್ದಾರೆ.

ಪ್ರಾರಂಭದಲ್ಲಿರುವ ಪ್ರಸ್ತಾವನೆಯಲ್ಲಿ ಸಂಪಾದಕರು ಹಲವಾರು ವಿಷಯಗಳನ್ನು ಚರ್ಚಿಸಿದ್ದಾರೆ. ಕವಿಯ ಕಾಲ, ಹಿನ್ನೆಲೆ, ಗ್ರಂಥವಿಮರ್ಶೆ, ಇತರ ಕಾವ್ಯಗಳೊಡನೆ ಚೆನ್ನಬಸವ ಪುರಾಣದ ಹೋಲಿಕೆ, ಅದರ ಮೇಲೆ ಆಗಿರುವ ಇತರ ಕಾವ್ಯಗಳ ಪ್ರಭಾವ, ಇತ್ಯಾದಿ. ಜೈಮಿನಿ ಭಾರತ–ಚೆನ್ನಬಸವ ಪುರಾಣಗಳಲ್ಲಿ ಬರುವ ಅನೇಕ ಪದ್ಯಗಳಲ್ಲಿರುವ ಸಾಮ್ಯವನ್ನು ಗುರುತಿಸಿದ್ದಾರೆ. ಈ ಕಾವ್ಯಗಳೆರಡೂ ಒಂದೇ ಕಾಲದಲ್ಲಿ ರಚಿತವಾದವು. ಆದರೆ ವಿರೂಪಾಕ್ಷ ಪಂಡಿತನು ತನ್ನ ಕಾವ್ಯರಚನೆಯ ಕಾಲವನ್ನು ಸ್ಪಷ್ಟವಾಗಿ ಹೇಳಿರುವಂತೆ ಲಕ್ಷ್ಮೀಶನು ಹೇಳಿಲ್ಲದಿರುವುದರಿಂದ ಯಾರ ಪ್ರಭಾವವು ಯಾರ ಮೇಲಾಗಿದೆ ಎಂದು ನಿಖರವಾಗಿ ಹೇಳುವಂತಿಲ್ಲ. ಜೈಮಿನಿ ಭಾರತದಂತೆ ಚೆನ್ನಬಸವ ಪುರಾಣವು ಏಕೆ ಜನಪ್ರಿಯತೆಯನ್ನು ಗಳಿಸಲಿಲ್ಲ ಎಂಬ ಅಂಶಕ್ಕೆ ಕಾರಣವನ್ನು ಹುಡುಕುವ ಸಂಪಾದಕರ ರೀತಿಯು ವಸ್ತುನಿಷ್ಠತೆಯಿಂದ ಆಲೋಚಿಸುವ ಬಗೆಯನ್ನು ತೋರಿಸುತ್ತದೆ. ಚೆನ್ನಬಸವ ಪುರಾಣದ ವಿಷಯವು ವಿಶೇಷವಾಗಿ ವೀರಶೈವ ಓದುಗರಿಗೆ ಹೆಚ್ಚಾಗಿ ತಟ್ಟುವಂತಹ ವಿಷಯ. ಆದ್ದರಿಂದ ಅದರ ಓದು ವ್ಯಾಪಕವಾಗಲಿಲ್ಲವೆಂದು ಅವರು ಹೇಳುವುದು ಸರಿಯಾದುದಾಗಿ ಕಾಣುತ್ತದೆ.

ಕಾವ್ಯದ ಬಗ್ಗೆ ವಿಮರ್ಶೆಯ ಹಲವು ಮಾತುಗಳನ್ನಾಡಿ, ಅವರ ಕಾವ್ಯಾತ್ಮಕತೆಯ ಪರಿಶೀಲನೆಯನ್ನು ಬಸವನಾಳರು ಮಾಡುತ್ತಾರೆ. ಕೊನೆಗೆ ಈ ಕವಿಯ ಸ್ಥಾನನಿರ್ದೇಶನವನ್ನು ಮಾಡಲು ಈ ಮಾತುಗಳನ್ನಾಡುತ್ತಾರೆ: "ಒಟ್ಟಿನಲ್ಲಿ ಈ ಕವಿಯು ಪಂಪ-ರನ್ನ ಷಡಕ್ಷರದೇವರೊಡನೆ ಪ್ರಥಮಶ್ರೇಣಿಯ ಕವಿಮಾಲಿಕೆಯಲ್ಲಿ ಸೇರಲು ತಕ್ಕವನಲ್ಲವೆಂದರೂ ಲಕ್ಷ್ಮೀಶ-ಕುಮಾರವ್ಯಾಸರ ಮಾಲಿಕೆಯಲ್ಲಿ ಸೇರಲಿಕ್ಕೆ ಆವ ಸಂದೇಹವೂ ಇಲ್ಲವೆನ್ನಬಹುದು." (ಪ್ರಸ್ತಾವನೆ: ಪು. ೧೫) ಆದರೆ ಈ ಬಗ್ಗೆ ನಮಗೆ ಸಂದೇಹವಿದೆ; ಅದೂ ಈ ಹೇಳಿಕೆಯ ಎರಡೂ ಅಂಶಗಳಲ್ಲಿ ಮೊದಲನೆಯದಾಗಿ ಷಡಕ್ಷರಿಯನ್ನು ಪಂಪ-ರನ್ನರೊಡನೆ ಸೇರಿಸಿರುವುದು; ಎರಡನೆಯದು ಕುಮಾರವ್ಯಾಸನನ್ನು ಕೆಳಗಿನ ಪಂಕ್ತಿಯಲ್ಲಿ ಕುಳ್ಳಿರಿಸಿರುವುದು. ಪ್ರಾಯಶಃ ಚಂಪೂಕವಿಗಳನ್ನು ಒಂದು ಪಂಕ್ತಿಯಲ್ಲೂ ಷಟ್ಪದಿಕವಿಗಳನ್ನು ಕೆಳಗಿನ ಸಾಲಿನಲ್ಲಿಯೂ ಸೇರಿಸುತ್ತಿದ್ದಾರೆ ಎನ್ನಿಸುತ್ತದೆ. ಅವರ ಈ ಸಮೀಕರಣ ನಮಗೆ ಸಮ್ಮತವಲ್ಲ; ಅದು ಅವರ ಅಭಿಪ್ರಾಯ, ಅಷ್ಟೆ.

ಅವರು ಸಂಪಾದಿಸಿರುವ 'ಬಸವಣ್ಣನವರ ಷಟ್‌ಸ್ಥಲದ ವಚನಗಳು' ಎಂಬ ಗ್ರಂಥವು ಅವರ ಸಂಪಾದನಾಸಾಮರ್ಥ್ಯದ ಎಲ್ಲ ಅಂಶಗಳನ್ನು ಒಳಗೊಂಡು, ಅಂತರ್ದೃಷ್ಟಿ-ಪ್ರತಿಭೆಗಳ ಫಲದಿಂದ ಉಂಟಾಗಿರುವ ಕೃತಿಯಾಗಿದೆ. ನಮ್ಮ ದೃಷ್ಟಿಯಲ್ಲಿ ಈ ವಚನಸಂಕಲನವು ವಚನಗಳತ್ತ ಹೊಸ ದೃಷ್ಟಿಯಿಂದ ನೋಡುವುದನ್ನೇ ನಮಗೆ ಕಲಿಸಿತು ಎನಿಸುತ್ತದೆ. ಮೊದಲು ಸಣ್ಣದಾಗಿ ಪ್ರಕಟವಾಗಿದ್ದ ಈ ಗ್ರಂಥವು ೧೯೬೨ ರಲ್ಲಿ ವಿಸ್ತೃತವಾಗಿ ಹೊರಬಂದಿತು. ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯಿಂದ ಬೆಳಕುಕಂಡ ಈ ಆವೃತ್ತಿಯು ಐದು ಟೀಕಿನ ವಚನಗಳ ಕಟ್ಟುಗಳು, ೩ ಕೋರಿ ಕಾಗದದ ಪ್ರತಿಗಳು, ೧೫ ತಾಳೆಗರಿಗಳ ಪ್ರತಿಗಳು-ಹೀಗೆ ಒಟ್ಟು ೨೩ ಮಾತೃಕೆಗಳ ಸಹಾಯದಿಂದ ಸಿದ್ಧವಾಗಿರುವಂಥದು. ಈ ಗ್ರಂಥದಲ್ಲಿ ೪೮ ಪುಟಗಳ ಪ್ರಸ್ತಾವನೆ, ೧೭ ಪುಟಗಳ ಬಸವಣ್ಣನವರ ಜೀವನ ಚರಿತ್ರೆ, ಕೊನೆಗೆ ವಚನಗಳ ಅಕಾರಾದಿ, ಶಬ್ದಕೋಶ, ಅನುಬಂಧ ರೂಪದಲ್ಲಿ ಬೇರೆ ಬೇರೆ ಆಕರಗಳಲ್ಲಿ ಸಿಕ್ಕುವ ಬಸವಣ್ಣನ ವಚನಗಳು-ಇವೆಲ್ಲ ಸೇರ್ಪಡೆಯಾಗಿವೆ.

ಗ್ರಂಥದ ಪ್ರಸ್ತಾವನೆಯಂತೂ ತುಂಬ ಉಪಯುಕ್ತವಾದುದಾಗಿದೆ; ಆಳವಾದ ಒಳನೋಟವನ್ನು ಒಳಗೊಂಡಿದೆ. ಈ ಪ್ರಸ್ತಾವನೆಯಲ್ಲಿ ಮೊದಲು ವಚನಗಳಿಗೂ ಪ್ರಪಂಚದ ಇಂತಹ ಹಲವು ಕೃತಿಗಳಿಗೂ ಇರುವ ಸಾಮ್ಯವನ್ನು ಸಂಪಾದಕರು ಗುರುತಿಸುತ್ತಾರೆ. ಮುಂದೆ ಗ್ರಂಥದಲ್ಲಿನ ವಚನಗಳ ಪಾಠನಿರ್ಧಾರಕ್ಕೆ ತಾವು ಅನುಸರಿಸಿದ ಮಾರ್ಗವನ್ನು ವಿವರಿಸುತ್ತಾರೆ. ಬಸವಣ್ಣನ ವಚನಗಳಲ್ಲಿ ಬಳಕೆಯಾಗಿರುವ ಶಬ್ದಗಳ ರೂಪ, ಶಬ್ದಪ್ರಯೋಗಗಳ ವ್ಯಾಕರಣ ವೈಶಿಷ್ಟ್ಯ ಇತ್ಯಾದಿ [illegible] [illegible] ವಚನಗಳಿಗೆ ತಮ್ಮದೇ ಆದ ಅಭಿವ್ಯಕ್ತಿಸ್ವರೂಪವಿರುವುದನ್ನು ಎತ್ತಿ ತೋರಿಸುತ್ತವೆ. ವಚನಗಳ ಮುದ್ರಣವನ್ನು ಹೊಸ ರೀತಿಯಿಂದ ಮಾಡಿಸಿದ್ದಾರೆ

ರಿಚರ್ಡ್ ಜಿ. ಮೌಲ್ಟನ್ ಅವರು ಬೈಬಲ್‌ನ ಮುದ್ರಣದಲ್ಲಿ ಅನುಸರಿಸಿದ ಮಾರ್ಗದಿಂದ ಸ್ಫೂರ್ತಿಗೊಂಡು ವಚನಗಳನ್ನು ಅರ್ಥಾನುಸಾರಿಯಾದ ಸಾಲುಗಳಾಗಿ ಒಡೆದು, ಅರ್ಥಸ್ಪಷ್ಟತೆಗೆ ತಕ್ಕ ವಿರಾಮ ಚಿಹ್ನೆಗಳನ್ನು ಉಪಯೋಗಿಸಿ ಅವುಗಳ ಆಂತರ್ಯವು ಹೆಚ್ಚು ಎದ್ದು ಕಾಣುವಂತೆ ಮಾಡಿದ್ದಾರೆ. ಹೀಗೆ ರೂಪಸಾಮ್ಯದ ತಳಹದಿಯ ಮೇಲೆ ಕಂಡ ಷಟ್ಪದಿ ಪದ್ಯಗಳನ್ನು ಬೇರೆ ರೀತಿಯಿಂದ ಸಾಲುಗಳನ್ನಾಗಿ ಒಡೆದಾಗ ಅರ್ಥವು ಹೆಚ್ಚು ಸ್ಪಷ್ಟವಾಗುವ ರೀತಿಯನ್ನು ತೋರಿಸಿದ್ದಾರೆ.

ಹಸ್ತಪ್ರತಿಕಾರರ ಕೈತಪ್ಪು-ಅಜ್ಞಾನಜನ್ಯದೋಷ ಇವುಗಳಿಂದಾಗಿ ಕಷ್ಟಕರವಾದ ಪಾಠಗಳುಂಟಾದಾಗ ವಿಕಾರವಾದ ಶಬ್ದಗಳನ್ನು ಸಾರ್ಥಕಶಬ್ದಗಳನ್ನಾಗಿ ಪರಿಷ್ಕರಿಸಿಕೊಂಡಿರುವ ರೀತಿಯು ಬಸವನಾಳರ ಆಳವಾದ ವಿದ್ವತ್ತು, ಬಹು ಎಚ್ಚರವಾದ ಸಾಹಿತ್ಯಪ್ರಜ್ಞೆ ಇವುಗಳಿಗೆ ದ್ಯೋತಕವಾಗಿದೆ. ಅಪರೂಪದ ಶಬ್ದಗಳು ಪ್ರಯೋಗಗೊಂಡಾಗ ಅವುಗಳ ಅರ್ಥವನ್ನು ಸ್ಪಷ್ಟಪಡಿಸಿಕೊಳ್ಳುವ ರೀತಿ, ಸಂಶಯವನ್ನು ನಿವಾರಿಸಿಕೊಂಡ ಬಗೆ ಇವು ಬೆರಗುಗೊಳಿಸುವಂತಹವು.

ಬಸವನಾಳರಿಂದ ಸಂಪಾದಿತವಾದ ಬಸವಣ್ಣನವರ ವಚನಗಳು ಈಗಲೂ ಹೆಚ್ಚು ಅಧಿಕೃತವಾದವುಗಳೆಂಬುದರಲ್ಲಿ ಸಂಶಯವಿಲ್ಲ. ಕರ್ನಾಟಕ ವಿಶ್ವವಿದ್ಯಾಲಯದ ವಚನವಾಙ್ಮಯ ಯೋಜನೆಯಡಿಯಲ್ಲಿ ಪ್ರಕಟವಾದ ಬಸವಣ್ಣನವರ ವಚನಗಳ ಆವೃತ್ತಿಯೊಡನೆ ಬಸವನಾಳರ ಆವೃತ್ತಿಯನ್ನು ಹಲವೆಡೆಗಳಲ್ಲಿ ಹೋಲಿಸಿದರೆ ಈ ಅಂಶವು ವ್ಯಕ್ತವಾಗುತ್ತದೆ. ವಿಶ್ವವಿದ್ಯಾಲಯದ ಆವೃತ್ತಿಗೆ ಬಸವನಾಳರ ಆವೃತ್ತಿಯನ್ನೇ ಬಳಸಿಕೊಳ್ಳಲಾಗಿದೆ; ಆದರೆ ಅದರ ಪಾಠಗಳನ್ನು ಉತ್ತಮಪಡಿಸಿದರೆಂದು ಹೇಳಲಾಗದು. ಒಂದೇ ಒಂದು ಉದಾಹರಣೆಯನ್ನು ಗಮನಿಸಬಹುದು; ಬಸವನಾಳರು ಪರಿಷ್ಕರಿಸಿದ ಒಂದು ವಚನ ಹೀಗಿದೆ:

> ಭಕ್ತಿಯಿಲ್ಲದ ಚಿತ್ತ ದೊರೆ, ಭಕ್ತಿಯಿಲ್ಲದ ಪ್ರಮಥನಾಗಿ ಎಂದಿಪ್ಪೆನಯ್ಯಾ?
> ಸತ್ಯವಿಲ್ಲದ ಶರಣನಾಗಿ ಎಂದಿಪ್ಪೆನಯ್ಯಾ?
> ಗರಿಯಿಲ್ಲದ ಕೋಲಿನಲ್ಲಿ ಉದುರೆಯಸಿಕ್ಕಿದ ಖಂಡದ
> ಹರದನಂತಾದೆನಯ್ಯ
> ಕೂಡಲಸಂಗಮದೇವಾ

(ಬಸವಷಟ್‌ಪ ೯೩೮ : ೨೫೨)

ಕರ್ನಾಟಕ ವಿಶ್ವವಿದ್ಯಾಲಯದ ಆವೃತ್ತಿಯಲ್ಲಿ ಬಸವನಾಳರು ಇತ್ತಿರುವ ಸಂಖ್ಯೆಯನ್ನೇ ಪಡೆದಿರುವ ವಚನದ ಪಾಠವನ್ನು ನೋಡೋಣ. (ನಮಗೆ ಪ್ರಸ್ತುತವಾದದ್ದು ಮೂರನೆಯ ಸಾಲು ಮಾತ್ರ). ಅದು ಹೀಗೆ ಅಂಗೀಕೃತವಾಗಿದೆ: "ಗರಿಯಿಲ್ಲದ ಕೋಲಿನಲ್ಲಿ ಉದ್ದರೆಯಸಿಕ್ಕಿದ". ಕೋಲು ಎಂಬ ಪದವಿರುವುದರಿಂದಾಗಿ ಅದನ್ನು ಬಾಣವೆಂದು ಅರ್ಥೈಸಿ ಅದಕ್ಕೆ ಕಟ್ಟುತ್ತಿದ್ದ ಗರಿಯ ನೆನಪು ಬಂದು ಈ ಸಾಲಿನ ಪಾಠವನ್ನು ಮೇಲಿರುವಂತೆ ಒಪ್ಪಿಕೊಳ್ಳಲಾಗಿದೆ. ಆದರೆ ವಚನಕಾರನು 'ಹರದ'ನ

ಹೋಲಿಕೆಯನ್ನು ಕೊಡುತ್ತಿದ್ದಾನೆ. ಆ ಹರವ(ವ್ಯಾಪಾರಿ)ನಿಗೂ ಬಾಣಕ್ಕೂ ಏನು ಸಂಬಂಧ? ಇದು ನೋಡಲ ನೋಟಕ್ಕೇ ತಿಳಿಯುವಂಥದ್ದು. ಅಲ್ಲದೆ ಕವಿಯು ಭಿತ್ತಿಯಿಲ್ಲದೆ ಚಿತ್ರಾರವಿರಲಾರದ ಸ್ಥಿತಿಯಂತೆ ಭಕ್ತಿಯಿಲ್ಲದ ಪ್ರಮಥನಿರಲಾರದ್ದನ್ನೂ ಸತ್ಯವಿಲ್ಲದೆ ಶರಣನಾಗಲಾರದ ಜಗೆಯನ್ನೂ ಹೇಳುತ್ತಿದ್ದಾನೆ. ಅಂಥ ಶರಣನಾಗಿರುವ ತಾನು ಗೆರೆಯಿಲ್ಲದೆ ಸರಿಯಾದ ತೂಕವನ್ನು ತಿಳಿಸಲಾರದ ತಕ್ಕಡಿಯಲ್ಲಿ ವ್ಯಾಪಾರದ ವಸ್ತುವನ್ನಿಟ್ಟು ತೂಗುವ ಹರವನಂತೆ ಮೂರ್ಖನಾಗಿದ್ದೇನೆ ಎಂದು ಬಸವಣ್ಣ ಆತ್ಮವಿಡಂಬನೆ ಮಾಡಿಕೊಳ್ಳುತ್ತಿದ್ದಾನೆ. ಆದ್ದರಿಂದ ವಚನವಾಙ್ಮಯ ಯೋಜನೆಯಡಿಯಲ್ಲಿ ಪ್ರಕಟವಾದ ಈ ಪಾಠ ಅಸಮರ್ಪಕ. ಬಸವನಾಳರು ಈ ಪ್ರತಿಮೆಗಳನ್ನು ಅರ್ಥಮಾಡಿಕೊಂಡು ಪರಿಷ್ಕರಿಸಿದ ರೀತಿ ಸರಿ. ಬಸವನಾಳರು ಸರಿಯೆಂದು ನಿರ್ಧರಿಸಿದ ಎಲ್ಲ ಪಾಠಗಳೂ ಪರಿಪೂರ್ಣವಲ್ಲದಿರಬಹುದು. ಆದರೆ ಅವರು ಪಾಠನಿರ್ಣಯದಲ್ಲಿ ಕೇವಲ ಪಾಠಾಂತರಗಳನ್ನು ಮಾತ್ರ ಗಮನಿಸದೆ ವಚನಗಳ ಅರ್ಥವನ್ನು ದೃಷ್ಟಿಯಲ್ಲಿಟ್ಟುಕೊಂಡು, ವಚನಕಾರನ ಅಭಿವ್ಯಕ್ತಿರೀತಿಯನ್ನು ಅರಿತುಕೊಂಡು ಪರಿಷ್ಕರಣವನ್ನು ಮಾಡುತ್ತಿದ್ದರೆಂಬುದನ್ನು ನಾವು ಗಮನಿಸಬೇಕು.

ಕಾವ್ಯಗಳ ಪರಿಷ್ಕರಣಕಾರ್ಯ ಹೇಗೋ ಶಾಸ್ತ್ರಗ್ರಂಥಗಳ ಸಂಪಾದನೆಯೂ ಹಾಗೆಯೇ ಅತ್ಯಂತ ಪರಿಶ್ರಮದಿಂದ ಬಸವನಾಳರಿಂದ ನಡೆಯುತ್ತಿತ್ತೆಂದು ಅರಿಯಲು ಅವರು ಕೇಪು ಶಂಕರನಾರಾಯಣ ಅವರ ಜೊತೆ ಸಂಪಾದಿಸಿರುವ ನಾಗವರ್ಮನ 'ಕಾವ್ಯಾವಲೋಕನ'ವನ್ನು ನೋಡಬಹುದು. ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ ಇವರ ವತಿಯಿಂದ ೧೯೩೯ರಲ್ಲಿ ಮುದ್ರಣಗೊಂಡ ಈ ಗ್ರಂಥವೂ ತುಂಬ ಸುಂದರವಾಗಿ ಮುದ್ರಿತವಾಗಿದೆ. ಕೇವಲ ಸರಿಯಾದ ಪಾಠವನ್ನು ನಿಷ್ಕರ್ಷೆ ಮಾಡುವುದಲ್ಲದೆ ಅಭ್ಯಾಸಿಗಳಿಗೆ ಉಪಯುಕ್ತ ಮಾಹಿತಿಯನ್ನೊದಗಿಸುವ ಕೆಲಸವನ್ನು ಈ ಸಂಪಾದಕರು ನಿರ್ವಹಿಸಿದ್ದಾರೆ. ಈ ಗ್ರಂಥಕ್ಕೆ ಕೊಟ್ಟಿರುವ ಟಿಪ್ಪಣಿಗಳು ಅತ್ಯುಪಯುಕ್ತವಾಗಿವೆ. ಮುಖ್ಯ ಗ್ರಂಥದಲ್ಲಿಯೇ ನಾಗವರ್ಮನು ಉದಾಹರಣೆಗಳಾಗಿ ಕೊಟ್ಟ ಪದ್ಯಗಳ ಆಕರಗಳನ್ನು ಒದಗಿಸಿದ್ದಾರೆ; ಶಬ್ದಸ್ಮೃತಿಭಾಗದ ಉದಾಹರಣೆ ಪದ್ಯಗಳಲ್ಲಿನ ವ್ಯಾಕರಣ ವಿಶೇಷಗಳನ್ನು ಹೇಳಿದ್ದಾರೆ. ಟಿಪ್ಪಣಿಗಳಲ್ಲಿ ಅಲಂಕಾರಭಾಗದ ರಚನೆಯಲ್ಲಿ ನಾಗವರ್ಮನು ಆಧಾರವಾಗಿರಿಸಿಕೊಂಡಿರಬಹುದಾದ ಗ್ರಂಥಗಳ ಸೂತ್ರಸಂಖ್ಯೆಯನ್ನು ಕೊಟ್ಟು ಉಪಕಾರಮಾಡಿದ್ದಾರೆ. ಸೂತ್ರಗಳಲ್ಲಿ ಉಕ್ತವಾದ ಅಂಶಕ್ಕೆ ಪೂರಕವಾಗೋ ವಿಭಿನ್ನವಾಗೋ ಬೇರೆಡೆಯಲ್ಲಿ ದೊರೆಯುವ ಅಂಶಗಳನ್ನು ವಿವರಿಸುತ್ತಾರೆ. ಶಬ್ದಸ್ಮೃತಿ ಭಾಗದ ಸೂತ್ರಗಳಿಗೂ ಇದೇ ರೀತಿ ಟಿಪ್ಪಣಿ ಬರೆಯುವಾಗ ಶಬ್ದಮಣಿದರ್ಪಣ, ಕರ್ಣಾಟಕ ಭಾಷಾಭೂಷಣ, ಶಬ್ದಾನುಶಾಸನ ಇವುಗಳ ಸಂವಾದಿಸೂತ್ರಗಳ ಸಂಖ್ಯೆಯನ್ನು ಒದಗಿಸುತ್ತಾರೆ. ಎಂದರೆ ಈ ಗ್ರಂಥದಲ್ಲಿ ಉಕ್ತವಾದ ಅಂಶಗಳ ಆಳವಾದ ಅಧ್ಯಯನಕ್ಕೆ ಬೇಕಾದ ಸಾಮಗ್ರಿಯನ್ನೆಲ್ಲ ಒದಗಿಸುತ್ತಾರೆ. ಗ್ರಂಥದ ಮುನ್ನುಡಿಯಲ್ಲಿ "ಈ ಗ್ರಂಥಕ್ಕೆ ನಾವು

ಟಿಪ್ಪಣಿಯನ್ನು ಜೋಡಿಸಿದುದು ವಿದ್ಯಾರ್ಥಿಗಳಿಗೆ ಅನುಕೂಲವಾಗಬೇಕೆಂಬ ದೃಷ್ಟಿಯಿಂದ; ಪಂಡಿತರಿಗೆ ಮಾನ್ಯವಾಗಬೇಕೆಂಬ ಧಾರ್ಷ್ಟ್ಯದಿಂದಲ್ಲ" (ಮುನ್ನುಡಿ : ಪು ೧) ಎಂದು ವಿನಯದಿಂದ ಹೇಳಿಕೊಂಡಿದ್ದಾರೆ. ಅಭಿಪ್ರಾಯಗಳಲ್ಲಿ ಭೇದ ವಿರಬಹುದೇ ವಿನಾ ಅದು ಖಂಡಿತವಾಗಿ ಪಂಡಿತರಿಗೂ ಉಪಯುಕ್ತವಾದುದು. ಹೀಗಾಗಿ ಮೂಲಕ್ಕೆ ಸನಿಹವಾದ ಪಾಠಪರಿಷ್ಕರಣದ ಜೊತೆಗೆ ಅಭ್ಯಾಸಕ್ಕೆ ಸಹಾಯಕ ವಾಗುವ ಈ ರೀತಿ ಶಾಸ್ತ್ರಗ್ರಂಥ ಸಂಪಾದನೆಗೆ ಮಾದರಿಯಾಗಿದೆ.

'ಶಬರಶಂಕರವಿಲಾಸ'ದ (ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ ದಿಂದ ಮೊದಲ ಬಾರಿಗೆ ೧೯೩೯ ರಲ್ಲಿ ಪ್ರಕಟಿತ) ಪೀಠಿಕೆಯೂ ಇದೇ ರೀತಿ ತುಂಬ ಉಪಯುಕ್ತವಾದುದಾಗಿದೆ. ಷಡಕ್ಷರದೇವನ ಕವಿತಾರೀತಿ, ಭಾಷಾವೈಶಿಷ್ಟ್ಯಗಳನ್ನು ಕುರಿತು ಚರ್ಚಿಸುವುದರ ಜೊತೆಗೆ ಈ ಕಾವ್ಯಕ್ಕೂ, ಈ ಸನ್ನಿವೇಶವು ವರ್ಣಿತವಾದ ಕುಮಾರವ್ಯಾಸ ಭಾರತದ ಭಾಗಕ್ಕೂ ಇರುವ ಹೋಲಿಕೆಗಳನ್ನು ಎಂದರೆ ಕುಮಾರ ವ್ಯಾಸನು ಷಡಕ್ಷರನ ಮೇಲೆ ಮಾಡಿರುವ ಪ್ರಭಾವವನ್ನು ವಿವರಿಸುತ್ತಾರೆ. ಇದೇ ರೀತಿಯಾಗಿ ಬಸವನಾಳರು ತಾವು ಸಂಪಾದಿಸಿರುವ ಇತರ ಕಾವ್ಯಗಳಿಗೂ ಬರೆದಿರುವ ಪ್ರಸ್ತಾವನೆಗಳು ಅಭ್ಯಾಸಿಗಳಿಗೆ ಉಪಯುಕ್ತವಾಗುವಂತೆ ರಚಿತವಾಗಿವೆ.

ಬಸವನಾಳರು ಗ್ರಂಥಸಂಪಾದನೆಗೆ ತೊಡಗಿದ ಕಾಲದಲ್ಲಿ ಗ್ರಂಥಸಂಪಾದನ ಶಾಸ್ತ್ರವು ಈಗಿನಷ್ಟು ಬೆಳೆದಿರಲಿಲ್ಲ. ಆದರೆ ಹಲವಾರು ಪ್ರತಿಗಳಿಂದ ಕಾವ್ಯವನ್ನು ನಿರುಕಿಸಿ [illegible] ಮೂಲಕ್ಕೆ ಹತ್ತಿರವಾಗುವಂತೆ ಅವರು ಪಾಠಗಳನ್ನು ನಿರ್ಧರಿಸುತ್ತಿದ್ದ ರೀತಿ ತುಂಬ ಶ್ರಮದಾಯಕವಾದದ್ದು, ಅಪಾರ ಪಾಂಡಿತ್ಯದಿಂದ ಮಾತ್ರ ಸಾಧ್ಯ ವಾಗುವಂಥದ್ದು. ಗ್ರಂಥಸಂಪಾದನೆಯು ಹೇಗೆ ಈ ಶಾಸ್ತ್ರದ ಜ್ಞಾನವನ್ನು ನಿರೀಕ್ಷಿಸುವುದೋ ಹಾಗೆಯೇ ಪಾಠನಿರ್ಣಯದಲ್ಲಿ ಕವಿಯನ್ನು ಅರ್ಥಮಾಡಿಕೊಳ್ಳ ಬೇಕಾದ ಆರ್ದ್ರತೆಯನ್ನೂ ಬಯಸುವಂಥದು. ದಿವಂಗತ ಶಿ. ಶಿ. ಬಸವನಾಳರಿಗೆ ಈ ಎರಡೂ ಇದ್ದುವೆಂಬುದರಲ್ಲಿ ಸಂಶಯವಿಲ್ಲ.

—o—

# ಕನ್ನಡ ಗ್ರಂಥಸಂಪಾದನಾ ಕ್ಷೇತ್ರಕ್ಕೆ ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ ಅವರ ಕೊಡುಗೆ

ಎನ್. ಎಸ್. ತಾರಾನಾಥ

ಕನ್ನಡದಲ್ಲಿ ತಕ್ಕಮಟ್ಟಿಗೆ ವೈಜ್ಞಾನಿಕ ರೀತಿಯಲ್ಲಿ ಗ್ರಂಥಸಂಪಾದನೆಯ ಕಾರ್ಯವನ್ನು ಆರಂಭಿಸಿದ ಎಫ್. ಕಿಟ್ಟೆಲ್ ಅವರು ತಮ್ಮ ಸಂಪಾದಿತ ಕೃತಿಗಳನ್ನು ಮಂಗಳೂರಿನ ಬಾಸೆಲ್ ಮಿಷನ್ ಬುಕ್ ಅಂಡ್ ಟ್ರ್ಯಾಕ್ಟ್ ಡಿಪಾಸಿಟರಿ ಎಂಬ ಸಂಸ್ಥೆಯ ಮೂಲಕವೂ, ಬಿ. ಎಲ್. ರೈಸ್ ಅವರು ತಮ್ಮ ಸಂಪಾದಿತ ಕೃತಿಗಳಲ್ಲಿ 'ಸಂಪಧಾರತ'ವನ್ನು ಬಿಟ್ಟು ಉಳಿದುವನ್ನು ಬೆಂಗಳೂರಿನ ಮೈಸೂರು ಸರ್ಕಾರಿ ಮುದ್ರಣಾಲಯದ ಮೂಲಕವೂ ಪ್ರಕಟಿಸಿದ್ದಾರೆ. ಆರ್. ನರಸಿಂಹಾಚಾರ್ಯರು ತಮ್ಮ ಸಂಪಾದಿತ ಕೃತಿಗಳಿಗೆ ರೈಸ್ ಅವರನ್ನೇ ಪ್ರಕಟನೆಯ ವಿಷಯದಲ್ಲಿ ಅನುಸರಿಸಿದ್ದಾರೆ. ಹೆಚ್ಚುಕಡಿಮೆ ಇವರ ಸಮಕಾಲೀನರಾಗಿಯೇ ಇದ್ದ ಎಂ. ಎ. ರಾಮಾನುಜೈಯಂಗಾರ್ಯರು ತಮ್ಮ ಕೃತಿಗಳನ್ನು ತಾವೇ ಸ್ಥಾಪಿಸಿದ್ದ 'ಕರ್ಣಾಟಕ ಕಾವ್ಯಕಲಾನಿಧಿ' ಮತ್ತು 'ಕಾವ್ಯಮಂಜರಿ' ಎಂಬ ಪ್ರಕಾಶನಗಳ ಮೂಲಕ ತಮ್ಮ ಸಂಪಾದಿತ ಕೃತಿಗಳನ್ನು ಪ್ರಕಟಿಸಿದರು. 'ಹರಿಶ್ಚಂದ್ರಕಾವ್ಯ', 'ಕಾದಂಬರಿ' ಮುಂತಾದುವುಗಳ ಸಂಪಾದಿತ ಸಂಗ್ರಹ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಮೈಸೂರು ವಿಶ್ವವಿದ್ಯಾನಿಲಯವೂ ಈ ಕ್ಷೇತ್ರಕ್ಕೆ ಕೊಡುಗೆಗಳನ್ನು ನೀಡಲಾರಂಭಿಸಿತು. ಈಗಾಗಲೇ ಸ್ಪಷ್ಟವಿರುವಂತೆ ಈ ಎಲ್ಲ ಪ್ರಯತ್ನಗಳ ಕಾರ್ಯಕ್ಷೇತ್ರ ಹಳೆಯ ಮೈಸೂರು ಆಗಿತ್ತು.

ಇದೇ ಹೊತ್ತಿಗೆ ಮದ್ರಾಸನ್ನು ತಮ್ಮ ಕಾರ್ಯಕ್ಷೇತ್ರವಾಗಿರಿಸಿಕೊಂಡು ಮದ್ರಾಸು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಮೂಲಕ ಈ ಕ್ಷೇತ್ರದಲ್ಲಿ ಮರೆಯಲಾಗದ ಕಾಣಿಕೆಗಳನ್ನು ಕೊಟ್ಟವರು ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ ಅವರು. ಬಿ.ಎ. ಮತ್ತು ಎಲ್.ಟಿ. ಪದವಿಗಳನ್ನು ಪಡೆದಿದ್ದ ಎ. ವೆಂಕಟರಾವ್ ಅವರು ಮದ್ರಾಸು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಸೀನಿಯರ್ ಲೆಕ್ಚರರ್ ಮತ್ತು ರೀಡರ್ ಆಗಿದ್ದುದಲ್ಲದೆ, ಆ ವಿಭಾಗದ ಮುಖ್ಯರೂ ಆಗಿದ್ದರು. ಪಂಡಿತರಾಗಿದ್ದ ಎಚ್. ಶೇಷಯ್ಯಂಗಾರ್ ಅವರು ಆ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಫೆಲೋ ಆಗಿ ಸೇರಿ, ತರುವಾಯ ಜೂನಿಯರ್ ಕನ್ನಡ ಲೆಕ್ಚರರ್

ಆಗಿ, ಕೊನೆಯಲ್ಲಿ ಕನ್ನಡ 'ಲೆಕ್ಚರರ್' ಆಗಿ ನಿವೃತ್ತರಾದರು. ಈ ಇಬ್ಬರಲ್ಲಿ ಶೇಷಯ್ಯಂಗಾರ್ ಅವರ ಕಾರ್ಯ ಅನುಪಮವಾದ್ದು, ಪ್ರಾತಃಸ್ಮರಣೀಯವಾದ್ದು. ಅವರು ಎ. ವೆಂಕಟರಾಯರೊಂದಿಗೆ ಒಂಬತ್ತು ಪ್ರಾಚೀನ ಕನ್ನಡ ಕೃತಿಗಳನ್ನೂ, ಎಚ್. ಎಸ್. ರಾಮಸ್ವಾಮಿ ಅಯ್ಯಂಗಾರ್ಯರೊಂದಿಗೆ 'ಛಂದೋಂಬುಧಿ'ಯನ್ನೂ, ಪಿ. ಶ್ರೀನಿವಾಸರಾವ್ ಅವರೊಂದಿಗೆ 'ಅಶ್ವಶಾಸ್ತ್ರ'ವನ್ನೂ, ಸ್ವತಂತ್ರವಾಗಿ ಆರಕ್ಕೂ ಹೆಚ್ಚು ಕನ್ನಡ ಕೃತಿಗಳನ್ನೂ ಸಂಪಾದಿಸಿದ್ದಾರೆ. ಮತ್ತೊಬ್ಬರೊಂದಿಗೆ ಸೇರಿ ಕೃತಿಗಳನ್ನು ಸಂಪಾದಿಸಿ ಪ್ರಕಟಿಸುವಾಗ ಶೇಷಯ್ಯಂಗಾರ್ಯರು ಪಾಠನಿಷ್ಕರ್ಷೆಗೆ ಸಂಬಂಧಿಸಿದಂತೆ ಆ ಸಹಸಂಪಾದಕರ ನೆರವನ್ನು ಹೆಚ್ಚಾಗಿ ಪಡೆದಿರುವಂತೆ ತೋರುತ್ತದೆ; ಉಳಿದಂತೆ ಕವಿಕಾವ್ಯವಿಚಾರಗಳನ್ನೊಳಗೊಂಡ ಸುದೀರ್ಘವಾದ ಪ್ರಸ್ತಾವನೆ, ನಾನಾ ದೃಷ್ಟಿಗಳಿಂದ ಉಪಯುಕ್ತವಾದ ಅನುಬಂಧಗಳ ಸೇರ್ಪಡೆ ಮುಂತಾದವುಗಳಲ್ಲಿ ಶೇಷಯ್ಯಂಗಾರ್ಯರ ಕೈವಾಡವೇ ಅಧಿಕವಾಗಿರುವಂತಿದೆ. ೧೯೨೪ರ ಹೊತ್ತಿಗೆ 'ಶಾಂತಿಪುರಾಣ'ದ ಮೂಲಕ ಗ್ರಂಥಸಂಪಾದನೆಯ ಕಾರ್ಯವನ್ನು ಆರಂಭಿಸಿದ ಅವರು ೧೯೬೦ ರಲ್ಲಿ 'ಪಾರ್ಶ್ವನಾಥ ಪುರಾಣ'ವನ್ನು ಪ್ರಕಟಿಸುವವರೆಗೆ ಆ ಕಾಯಕವನ್ನು ನಡೆಸಿಕೊಂಡು ಬಂದಿದ್ದಾರೆ. ೧೯೬೭ ರಲ್ಲಿ ಅವರ 'ಛಂದೋಂಬುಧಿ' ಪುನರ್ಮುದ್ರಿತವಾಗಿರುವುದೂ ಉಂಟು. 'ಆದಿಪುರಾಣ' 'ಚಂದ್ರಪ್ರಭ ಪುರಾಣ' ಮುಂತಾದ ೬ ಕೃತಿಗಳ ಶೋಧಿತಪಾಠವನ್ನು ತಾವು ಅನೇಕ ಕೃತಿಗಳ ಆಧಾರದಿಂದ ಸಂಪಾದಿಸಿ ಇಟ್ಟುಕೊಂಡಿದ್ದರೂ, ಆರ್ಥಿಕ ನೆರವಿನ ಕೊರತೆಯಿಂದ ಅವನ್ನು ಪ್ರಕಟಿಸಲಾಗುತ್ತಿಲ್ಲ ಎಂದು ಅವರೇ ಒಂದೆಡೆ ಕೊರಗಿರುವುದೂ ಉಂಟು. ಪ್ರಸ್ತುತ ಎ. ವೆಂಕಟರಾಯರ ಜೊತೆಗೂಡಿ ಅವರು ಸಂಪಾದಿಸಿರುವ ಕನ್ನಡ ಕೃತಿಗಳ ಗ್ರಂಥಸಂಪಾದನಾ ವಿಧಾನದ ಒಂದು ಸ್ಥೂಲ ಸಮೀಕ್ಷೆಯನ್ನು ಕೈಗೊಳ್ಳಬಹುದು.

೨

ಈ ಹಿಂದೆಯೇ ತಿಳಿಸಿರುವಂತೆ ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ಯರು ಜೊತೆ ಸಂಪಾದಕರಾಗಿ ಪ್ರಕಟಿಸಿರುವ ಕೃತಿಗಳ ಸಂಖ್ಯೆ ಒಂಬತ್ತು. ಇವುಗಳಲ್ಲಿ ೨ ಜೈನಕಾವ್ಯಗಳು. ೨ ಕಾವ್ಯಲಕ್ಷಣ ಗ್ರಂಥಗಳು. ೨ ಕನ್ನಡ ನಿಘಂಟು ಸಂಬಂಧವಾದವು. ೧ ವ್ಯಾಕರಣ. ೧ ಗಿಡಮೂಲಿಕೆ ಸಂಬಂಧವಾದ ಕೋಶ, ೧ ವೈದ್ಯಶಾಸ್ತ್ರ ಕುರಿತಂಥದಾಗಿದೆ. ಈ ಒಂಬತ್ತರಲ್ಲಿ ಮೊದಲನೆಯದಾದ 'ಶಾಂತಿಪುರಾಣ'ವನ್ನುಳಿದು ಇತರ ಎಂಟು ಕೃತಿಗಳೂ ಮದ್ರಾಸು ವಿಶ್ವವಿದ್ಯಾನಿಲಯದ ಕರ್ಣಾಟಕ ಗ್ರಂಥಮಾಲೆಯ ಮೊದಲ ಒಂಬತ್ತು ಕೃತಿಗಳಲ್ಲಿ ಒಂದರ ತರುವಾಯ ಮತ್ತೊಂದರಂತೆ ಪ್ರಕಟವಾಗಿದೆ. 'ಶಾಂತಿಪುರಾಣ'ವು ಮಾತ್ರ ಮದ್ರಾಸಿನ ವೀಸಲ್ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್ ಲಿಮಿಟೆಡ್ ಮೂಲಕ ಪ್ರಕಟವಾಗಿದೆ. ೧೯೨೯ರಿಂದ ೧೯೪೭ರವರೆಗಿನ ೧೮ ವರ್ಷಗಳಲ್ಲಿ ಈ ೮ ಕೃತಿಗಳು

ಪ್ರಕಟವಾಗಿವೆ. ಮೊದಲ ಐದು ಕೃತಿಗಳು ಅಚ್ಚಿನಮನೆಯಿಂದ ಹೊರಬೀಳುವವರೆಗೆ —ಎಂದರೆ ಪ್ರಾಯಶಃ ೧೯೩೫–೩೬ರ ವರೆಗೆ—ಎ. ವೆಂಕಟರಾವ್ ಅವರು ಜೀವಂತ ರಾಗಿದ್ದರು; ತರುವಾಯದ ನಾಲ್ಕು ಕೃತಿಗಳು ಅವರು ತೀರಿಕೊಂಡ ಅನಂತರವೇ ಅವರು ಅವರ ಹೆಸರೊಡಗೂಡಿ ಅಚ್ಚಾಗಿವೆ. ವರ್ಷಾನುಪೂರ್ತಿಯಾಗಿ ಹಿಡಿದು ಈ ಕೃತಿಗಳು ಅಚ್ಚಾಗಿರುವುದು ಹೀಗೆ: (೧) ಶಾಂತಿಪುರಾಣ–೧೯೨೯, (೨) ಕವಿರಾಜಮಾರ್ಗ–೧೯೩೦, (೩) ರಸರತ್ನಾಕರ–೧೯೩೨, (೪) ಅಭಿಧಾನ ವಸ್ತುಕೋಶ –೧೯೩೩, (೫) ಪುಷ್ಪದಂತ ಪುರಾಣ–೧೯೩೩, (೬) ಶಬ್ದಮಣಿದರ್ಪಣ–೧೯೩೭, (೭) ಅಭಿಧಾನ ರತ್ನಮಾಲಾ ಕರ್ಣಾಟಕ ಟೀಕೆ–೧೯೪೦, (೮) ಔಷಧಿಕೋಶ– ೧೯೪೦, (೯) ಜಿನೇಂದ್ರ ಮಣಿದರ್ಪಣ–೧೯೪೨. ಈಗ ಈ ಒಂದೊಂದೂ ಕೃತಿಗಳ ಗ್ರಂಥಸಂಪಾದನಾ ವಿಧಾನದ ಬಗ್ಗೆ ಸ್ಥೂಲವಾಗಿಯಾದರೂ ಪ್ರತ್ಯೇಕವಾಗಿ ನೋಡ ಬಹುದು.

(೧) ಪೊನ್ನನ (ಸು. ೯೫೦) **'ಶಾಂತಿಪುರಾಣಂ'** ಎಂಬ ೧೨ ಆಶ್ವಾಸಗಳ ಹನ್ನೆರಡು ಜೈನ ಚಂಪೂವನ್ನು ಈ ಸಂಪಾದಕದ್ವಯರು ಈ ಹಿಂದೆಯೇ ಸೂಚಿ ಸಿರುವಂತೆ ೧೯೨೯ರಲ್ಲಿ ಮದ್ರಾಸಿನ ಪೀಪಲ್ಸ್ ಪ್ರಿಂಟಿಂಗ್ ಎಂಡ್ ಪಬ್ಲಿಷಿಂಗ್ ಹೌಸ್‌ನ ಮೂಲಕ ಪ್ರಕಟಿಸಿದ್ದಾರೆ. ಈ ಕೃತಿಯ ಆರಂಭದಲ್ಲಿ ಇಂಗ್ಲಿಷಿನಲ್ಲಿ, (ಅದರ ಕನ್ನಡಾನುವಾದವನ್ನೇ ತರುವಾಯದಲ್ಲಿ ಕೊಟ್ಟಿದೆ) ಪೊನ್ನನ ಕವಿಕಾವ್ಯಕ್ಕೆ ಸಂಬಂಧಿಸಿದಂತೆ ಆರ್. ತಾತಾ ಅವರಿಂದ ತಕ್ಕಮಟ್ಟಿಗೆ ದೀರ್ಘವಾದ ಒಂದು ಮುನ್ನುಡಿಯನ್ನು ಬರೆಸಿದ್ದಾರೆ. ತರುವಾಯ ಸಂಪಾದಕದ್ವಯರು ಇಂಗ್ಲಿಷಿನಲ್ಲಿ ಕೃತಿಸಂಪಾದನೆಗೆ ಬಳಸಿದ ಹಸ್ತಪ್ರತಿ ವಿವರಗಳಿಗೆ ಸಂಬಂಧಿಸಿದ ಹಾಗೂ ಕೃತಜ್ಞತಾ ಸೂಚಕವಾದ ಮಾತಿನ ಒಂದು ಸಂಪಾದಕೀಯ ಟಿಪ್ಪಣಿಯನ್ನು ಸೇರಿಸಿದ್ದಾರೆ. ಇಷ್ಟನ್ನುಳಿದು ಗ್ರಂಥಸಂಪಾದನೆಯ ವಿಧಾನದ ವಿವರವನ್ನಾಗಲೀ, ಹಸ್ತಪ್ರತಿ ಶೀಳಗೆಯ ವಿಚಾರವನ್ನಾಗಲೀ ಸಂಪಾದಕರು ಪ್ರಸ್ತಾಪಿಸಿಲ್ಲ. ಸಂಪಾದಕೀಯ ಟಿಪ್ಪಣಿಯ ಪ್ರಕಾರ ಇವರ ಗ್ರಂಥಸಂಪಾದನೆಗೆ ಮೈಸೂರಿನ ಪ್ರಾಚ್ಯ ವಿದ್ಯಾ ಗ್ರಂಥಭಂಡಾರದ ಒಂದು ಪ್ರತಿಯನ್ನೂ, ಬೊಮ್ಮರಸ ಪಂಡಿತರು ಕಳುಹಿಸಿಕೊಟ್ಟ ಒಂದು ಕಾಗದದ ಪ್ರತಿಯನ್ನೂ ಪ್ರಧಾನವಾಗಿ ಬಳಸಿದೆ. ಪದ್ಯಭಾಗವು ಬಹುಮಟ್ಟಿಗೆ ಸಂಪೂರ್ಣವಾಗಿಯೇ ಅಚ್ಚಾದಾಗ ಅನಿರೀಕ್ಷಿತವಾಗಿ ದೊರೆತ ಆರಾದ ಜೈನಗ್ರಂಥ ಭಂಡಾರದ ಮತ್ತೊಂದು ತಾಳಪ್ರತಿಯನ್ನು ಬಳಸಿಕೊಳ್ಳಲಾಗದೆ ಹೋದದ್ದರಿಂದ, ಅದರ ಪಾಠಾಂತರಗಳನ್ನು ಅಂತ್ಯದಲ್ಲಿ ಅನುಬಂಧವಾಗಿ ಸೇರಿಸಿದೆ.

ಹನ್ನೆರಡು ಆಶ್ವಾಸಗಳ ಈ ಕೃತಿಯು ಸಂಪಾದಿತವೂ ಶೋಧಿತವೂ ಆದ ಶುದ್ಧಪಾಠವನ್ನು ಕೃತಿಯುದ್ದಕ್ಕೂ ಕೊಟ್ಟಿದೆ. ಒಂದೊಂದು ಆಶ್ವಾಸವನ್ನೂ ಒಂದೊಂದು ಘಟಕವಾಗಿ ಭಾವಿಸಿ, ಪ್ರತಿಯೊಂದು ಆಶ್ವಾಸವನ್ನೂ ಹೊಸ ಪುಟದಿಂದ ಆರಂಭಿಸಿದೆ. ಪದ್ಯಗಳನ್ನು ನಾಲ್ಕುಪಾದಗಳ ಗುಂಪಿಯಾಗಿ ಕಂ, ಉ, ಶಾ ಇತ್ಯಾದಿಯಾದ

ಅವತಾರಿಕೆಯ ಕೊನೆಯಲ್ಲಿ ನಾಲ್ಕು ಸಾಲುಗಳ ಒಂದು ಪುಟ್ಟ ಪ್ಯಾರಾದಲ್ಲಿ ಬಳಸಿದ ಹಸ್ತಪ್ರತಿಗಳನ್ನು ಸೂಚಿಸಿದ್ದಾರೆ; ಹಸ್ತಪ್ರತಿಗಳ ಸ್ವರೂಪ, ಸ್ಥಿತಿ, ಸಂಬಂಧಗಳನ್ನು ಕುರಿತ ವಿವರಗಳನ್ನಾಗಲೀ, ತಾವು ಅನುಸರಿಸಿರುವ ಗ್ರಂಥ ಸಂಪಾದನೆಯ ವಿಧಾನವನ್ನಾಗಲೀ ವಿವರಿಸಿಲ್ಲ. ಮುದ್ರಿತ ಕವಿರಾಜಮಾರ್ಗದ ಪ್ರತಿಯನ್ನೂ (ಪಾಠಕ್ ಪರಿಷ್ಕರಣ), ಮದರಾಸು ಪ್ರಾಚ್ಯಕೋಶಾಲಯದ ಒಂದು ತಾಳಪ್ರತಿಯನ್ನೂ, ಮೈಸೂರು ಗ್ರಂಥಭಂಡಾರ ಹಾಗೂ ಬೊಮ್ಮರಸ ಪಂಡಿತರು ಕಳುಹಿಸಿದ ಪ್ರತಿಗಳನ್ನೂ ಈ ಪರಿಷ್ಕರಣದಲ್ಲಿ ಬಳಸಿಕೊಳ್ಳಲಾಗಿದೆ.

ಮೂರು ಪರಿಚ್ಛೇದಗಳ ಈ ಕೃತಿಯ ಸಂಪಾದನಾ ಹಾಗೂ ಪ್ರಕಟನ ಕ್ರಮಗಳಲ್ಲಿ ಶಾಂತಿಪು.ದ ಮಾದರಿಯನ್ನೇ ಅನುಸರಿಸಿದೆ. ಪದ್ಯಗಳನ್ನು ಅಚ್ಚಿಸಿರುವ ರೀತಿ, ಪರಿಚ್ಛೇದಗಳನ್ನು ಪ್ರತ್ಯೇಕಿಸಿರುವ ಕ್ರಮ ಇವು ಅಲ್ಲಿನಂತೆಯೂ ಇಲ್ಲೂ ಇದೆ. ಆದರೆ ಪದ್ಯ ಪದ್ಯಗಳ ನಡುವೆ ಲಕ್ಷಣ ಹಾಗೂ ಲಕ್ಷ್ಯಗಳನ್ನು ವಿವರಿಸಿ, ಪ್ರತ್ಯೇಕವಾಗಿ ಸೂಚಿಸಲಾಗಿದೆ. ವೃತ್ತಗಳ ಹೆಸರನ್ನು ಮಾತ್ರ ಸಂಕ್ಷಿಪ್ತವಾಗಿ ಸಂಕೇತಿಸಿ ಸೂಚಿಸಿದೆ. ದಪ್ಪಕ್ಷರಗಳ ಮೂಲಕ ಪದ್ಯಗಳಲ್ಲಿ ಪ್ರಸ್ತಾವಿತವಾಗಿರುವ ಮುಖ್ಯ ಸಂಗತಿಗಳೆಡೆ ಓದುಗರ ಗಮನವನ್ನು ಸೆಳೆಯಲಾಗಿದೆ. ಕೃತಿಯುದ್ದಕ್ಕೂ ಶೋಧಿತವೂ ಸಂಪಾದಿತವೂ ಆದ ಶುದ್ಧ ಪಾಠವನ್ನು ಕೊಟ್ಟಿದೆ. ಈ ಹಿಂದಿನಂತೆ ಸಂಪಾದಿತ ಪದ್ಯದ ಕೆಳಗೆ ಪಾಠಾಂತರಗಳನ್ನು ಸೂಚಿಸಿಲ್ಲ. ಆದರೆ ಕೆಲವು ವಿದ್ವದ್ ಗಮನಿಕೆಗಳನ್ನು ಅಲ್ಲಲ್ಲಿ ಪದ್ಯದ ಕೆಳಗೇ ಸೂಚಿಸಿರುವುದುಂಟು. ಇವು ಕವಿರಾ.ದ ಪದ್ಯಗಳು ಅನ್ಯಕೃತಿಗಳಲ್ಲಿ ಉದ್ಧೃತವಾಗಿರುವುದನ್ನೇ, ಪದ್ಯವೊಂದರ ಹೆಸರು, ಪ್ರಾಚುರ್ಯಗಳನ್ನೇ, ಪದ್ಯದಲ್ಲಾಗಿರುವ ಛಂದೋಭಂಗವನ್ನೇ, ಇತರ ವ್ಯಾಕರಣಾಂಶಗಳನ್ನೇ ಕುರಿತಿರುತ್ತವೆ. ಅಪವಾದವಾಗಿ ೨–೧೧ರಲ್ಲಿ ಗ್ರಂಥಪಾತದ ಸಂಗತಿಯನ್ನೂ, ೨–೧೧೬ರಲ್ಲಿ ಘಟಿಸಿರುವ ಲಿಪಿಕಾರದೋಷವನ್ನೂ, ೩–೬೧ ಮತ್ತು ೩–೧೫೩ ರಲ್ಲಿ ಮದ್ರಾಸ್ ಪ್ರತಿಯಲ್ಲಾಗಿರುವ ಕೆಲವು ವಿಶೇಷಗಳನ್ನೂ ಸೂಚಿಸಿದೆ. ಗ್ರಂಥಾಂತ್ಯದಲ್ಲಿ ೭ ಪರಿಶಿಷ್ಟಗಳನ್ನು ಕೊಟ್ಟಿದೆ: ಮೊದಲನೆಯದು ಕವಿರಾ., ಮತ್ತು ದಂಡಿ, ಭಾಮಹರ ಕೃತಿಗಳಲ್ಲಿ ಕಂಡುಬರುವ ಅರ್ಥಾಲಂಕಾರಗಳ ತೌಲನಿಕ ಪಟ್ಟಿ; ಎರಡನೆಯದು ಮೈಸೂರು ಓರಿಯಂಟಲ್ ಲೈಬ್ರರಿಯ ೧೨೫ ಮತ್ತು ೧೧೦ನೆಯ ಸಂಖ್ಯೆಯ ಹಸ್ತಪ್ರತಿಗಳಲ್ಲಿ ಕಂಡುಬರುವ ಪಾಠಾಂತರ ಪಟ್ಟಿ; ಮೂರನೆಯದು ಕವಿರಾ.ದ ಕೆಲವು ಪದ್ಯಭಾಗಗಳಿಗೆ ಭಾಮಹನ ಕಾವ್ಯಾಲಂಕಾರದಲ್ಲಿ ದೊರೆವ ಸಂವಾದಿಭಾಗಗಳ ಪಟ್ಟಿ; ನಾಲ್ಕನೆಯದು ಪದ್ಯಗಳ ಅಕಾರಾದಿ; ಐದನೆಯದು ಉತ್ತರಕಾಲೀನ ಕನ್ನಡ ಕೃತಿಗಳಲ್ಲಿ ಕಂಡುಬರುವ ಕವಿರಾ.ದ ಪದ್ಯಗಳ ವಿಷಯ; ಆರನೆಯದು ಕವಿರಾ.ದ ಕರ್ತೃ ಜೈನನೆನ್ನಲು ಇರುವ ಗ್ರಾಂಥಿಕ ಆಧಾರಗಳನ್ನೂ, ಏಳನೆಯದು ಚಿತ್ರಕವಿತ್ವದ ಬಂಧಗಳನ್ನೂ ಕುರಿತಿದೆ.

ಸಂಪಾದಕರು ತಮಗೆ ದೊರೆತ ಪ್ರತಿಗಳ ಸ್ವರೂಪ, ಕಾಲ ಮತ್ತು ಸ್ಥಿತಿಗಳ ನ್ನಾಗಲಿ, ಅವುಗಳ ನಡುವಣ ಪರಸ್ಪರ ಸಂಬಂಧ ಮತ್ತು ಪೀಳಿಗೆಯ ವಿಷಯ ವನ್ನಾಗಲಿ ಎಲ್ಲಿಯೂ ಸೂಚಿಸಿಲ್ಲ. ಹೀಗೆಯೇ ಆಧಾರಪ್ರತಿಯ ವಿಷಯವನ್ನೂ ವಿವರಿಸಿಲ್ಲ. ಎರಡನೆಯ ಪರಿಶಿಷ್ಟದಲ್ಲಿ ಮೈಸೂರು ಓರಿಯೆಂಟಲ್ ಲೈಬ್ರರಿಯ ೧೧೦ ಮತ್ತು ೧೩೫ನೆಯ ಸಂಖ್ಯೆಯ ಪ್ರತಿಗಳಲ್ಲಿ ಕಂಡುಬರುವ ಭಿನ್ನಪಾಠಗಳನ್ನು ಕೊಡ ಲಾಗಿದೆ. ಆದರೆ ಈ ಪ್ರತಿಗಳ ಗುಣದೋಷಗಳನ್ನು ವಿಮರ್ಶಿಸಿಲ್ಲ. ತೋರಿಸಿರುವ ಪಾಠಾಂತರಗಳು ಬಲುಮಟ್ಟಿಗೆ ಲಿಪಿಕಾರ ಸ್ಖಾಲಿತ್ಯಗಳ ಪಟ್ಟಿಯಾಗಿದೆ; ಕೆಲವು ಉಪಯುಕ್ತ ಪಾಠಗಳನ್ನು ತ್ಯಜಿಸಿರುವುದೇಕೋ ತಿಳಿಯದು. ಪಾಠಕ್ ಪರಿಷ್ಕರಣದ ಜೊತೆ ಈ ಪರಿಷ್ಕರಣವನ್ನು ಹೋಲಿಸಿದಾಗ ಈ ಪರಿಷ್ಕರಣ ಹಲವೆಡೆ ಉತ್ತಮ ವಾಗಿದೆಯೆಂಬುದು ತಿಳಿಯುತ್ತದೆ. ಈ ಉತ್ತಮಿಕೆಗೆ ಹೊಸಪ್ರತಿಗಳ ನೆರವು ಮತ್ತು ಸಂಪಾದಕರ ಪಾಂಡಿತ್ಯಗಳೇ ಕಾರಣವಾಗಿರುವುದು. ಕಂದಪದ್ಯಗಳ ಪಾಠ ಸುಕರ ವಾಗಿದ್ದು ಶುದ್ಧವಾಗಿರುವುದಾದರೂ, ಹಲವು ವೃತ್ತಗಳ ಪಾಠ ಶುದ್ಧವಾಗಿಲ್ಲ. ಕೆಲವಡೆ ಪಾಠಕರ ಪಾಠಗಳನ್ನು ತ್ಯಜಿಸಿ ಅನ್ಯಪಾಠಗಳನ್ನು ಬಳಸಿರುವುದರ ಲಾಭ ವೇನೋ ತಿಳಿಯುವುದಿಲ್ಲ. ಅಂಥ ಕಡೆಗಳಲ್ಲಿ ಪಾಠಕರ ಪರಿಷ್ಕರಣವೇ ಸುಕರವೂ ಸುಸಂಬದ್ಧವೂ ಆಗಿದೆಯೆನಿಸುತ್ತದೆ. ಬೊಮ್ಮರಸ ಪಂಡಿತರ ಪ್ರತಿಗಳ ಪಾಠಗಳ ವೈಶಿಷ್ಟ್ಯ ಮತ್ತು ಹಸ್ತಪ್ರತಿಯ ಮಹತ್ವ ತಿಳಿಯಲು ಸೂಚನೆಗಳೇನೂ ಇರದಿರು ವುದೂ ಒಂದು ಕೊರತೆಯೇ. ಮುದ್ರಿತ ಪಾಠದಲ್ಲಿ ಹಲವೆಡೆ ಗೋಚರಿಸುವ ಪದಚ್ಛೇದ ದೋಷ ಹಾಗೂ ಅವಕಾಶಗಳಿದ್ದೂ ಪರಿಷ್ಕರಣವನ್ನು ಉತ್ತಮವಾಗಿಸದ ವಿಷಯ ಇಲ್ಲಿ ವ್ಯಸನವುಂಟುಮಾಡುವ ಸಂಗತಿಗಳಾಗಿವೆ.

(೩) ಜೈನಕವಿಯಾದ ಸಾಳ್ವನ (ಸು. ೧೫೫೦) **'ರಸರತ್ನಾಕರ'**ವನ್ನು ೧೯೩೭ರಲ್ಲಿ ಮದ್ರಾಸು ವಿಶ್ವವಿದ್ಯಾನಿಲಯದ ಎರಡನೆಯ ಕನ್ನಡ ಪ್ರಕಟನೆಯಾಗಿ ಹೊರತಂದಿದ್ದಾರೆ. ಕೃತಿಯ ಮೊದಲಲ್ಲಿ ಸಾಳ್ವ ಕವಿಯ ಕಾಲ, ಆಶ್ರಯದಾತರು, ಆತನ ಅನ್ಯಕೃತಿಗಳು ಮತ್ತು ಆತನಿಂದ ಈ ಕೃತಿಯಲ್ಲಿ ಉಕ್ತವಾಗಿರುವ ಲಾಕ್ಷಣಿಕರೇ ಮುಂತಾದವನ್ನು ಕುರಿತಂತೆ ೧೮ ಪುಟಗಳ ವಿಷಯಭರಿತ ಅವತರಣಿಕೆಯೊಂದನ್ನು ಬರೆದಿದ್ದಾರೆ. ಇದರಂತ್ಯದಲ್ಲಿ ತಾವು ಅನುಸರಿಸಿರುವ ಸಂಪಾದನಾ ವಿಧಾನವನ್ನು ವಿವರಿಸದಿದ್ದರೂ, ತಾವು ಬಳಸಿರುವ ಹಸ್ತಪ್ರತಿಗಳ ವಿವರ ನೀಡಿದ್ದಾರೆ. ಈ ಕೃತಿಯ ಸಂಪಾದನೆಗೆ ನಾಲ್ಕು ಸಮಗ್ರ ಓಲೆಯ ಪ್ರತಿಗಳನ್ನೂ ಒಂದು ಅಸಮಗ್ರ ಓಲೆಯ ಪ್ರತಿಯನ್ನೂ ಇನ್ನೊಂದು ಕಾಗದದ ಪ್ರತಿಯನ್ನೂ ಬಳಸಿದ್ದಾರೆ. ಈ ಪ್ರತಿಗಳು ತಮಗೆ ಯಾರಿಂದ ದೊರೆತವೆಂಬುದನ್ನೂ, ಇವುಗಳ ಸ್ವರೂಪವನ್ನೂ ಸೂಚಿಸಿರು ವುದಲ್ಲದೆ, ಈ ಪ್ರತಿಗಳಿಗೆ ಸಂಕೇತಗಳನ್ನೂ ಕೊಟ್ಟಿದ್ದಾರೆ. ವಿವರದಲ್ಲಿ ನೋಡು ವುದಾದರೆ, ಪದ್ಮರಾಜ ಪಂಡಿತರಿಂದ ದೊರೆತ ತಾಳೆಯೋಲೆಯ ಪ್ರತಿಗೆ 'ಕ' ಎಂದೂ, ಮೈಸೂರು ಪ್ರಾಚ್ಯಕೋಶಾಲಯದ ಪ್ರತಿಗಳಿಗೆ 'ಖ', 'ಗ' ಎಂದೂ, ಮದರಾಸು

ಪ್ರಾಚ್ಯಕೋಶಾಲಯದ ಪ್ರತಿಗಳಿಗೆ 'ಘ', 'ಚ' ಎಂದೂ, ಮೈಸೂರಿನ ಟ್ರೇನಿಂಗ್ ಕಾಲೇಜಿನ ಕಾಗದದ ಪ್ರತಿಗೆ 'ಜ' ಎಂದೂ ಸಂಕೇತಗಳನ್ನಿತ್ತಿದ್ದಾರೆ. 'ಕ' ಪ್ರತಿ ವಿಚ್ಛಿನ್ನಿತವಾದುದೆಂದೂ ಶುದ್ಧ ಪಾಠಗಳನ್ನೊಳಗೊಂಡಿದ್ದರೂ ಅಕ್ಷರಗಳು ತುಂಬಾ ಮಾಸಿಹೋಗಿವೆಯೆಂದೂ ತಿಳಿಸಿದ್ದಾರೆ; ಮೈಸೂರು ಮತ್ತು ಮದರಾಸು ಪ್ರಾಚ್ಯ ಕೋಶಾಲಯ ಪ್ರತಿಗಳಲ್ಲಿ ಅಶುದ್ಧತೆ, ಗ್ರಂಥಪಾತ ಮತ್ತು ಪಾಠಭೇದಗಳಿವೆಯೆಂದೂ ಉಲೇಖಿಸಿದ್ದಾರೆ.

ನಾಲ್ಕು ಪ್ರಕರಣಗಳ ಈ ಕೃತಿಯ ಶೋಧಿತ ಪಠ್ಯವನ್ನು ಸಂಪಾದಿಸಿ ಅಚ್ಚಿಸುವಲ್ಲಿ ಹಿಂದಿನ ಗ್ರಂಥಗಳ ಮಾದರಿಯನ್ನೇ ಈ ಸಂಪಾದಕರು ಅನುಸರಿಸಿದ್ದಾರೆ. ಪದ್ಯಗಳು ಯಾವ ಜಾತಿಯವೆಂಬುದನ್ನೂ, ಅವುಗಳ ವಸ್ತುವೇನೆಂಬುದನ್ನೂ, ಸೂತ್ರ ಮತ್ತು ಲಕ್ಷಣಗಳಾವುವೆಂಬುದನ್ನೂ ಪ್ರತ್ಯೇಕವಾದ ಅಚ್ಚಿನಮೊಳೆಗಳಲ್ಲಿ ಅಚ್ಚಿಸಿ ತೋರಿಸಿದೆ. ಉದ್ದಕ್ಕೂ ಶೋಧಿತಪಠ್ಯವನ್ನೇ ಕೊಟ್ಟಿದ್ದು, ಪಾಠಾಂತರಗಳನ್ನು ಅಡಿಯಲ್ಲಿ ಸೂಚಿಸಿಲ್ಲ. ವಿರಳವಾಗಿ ಅಲ್ಲಲ್ಲಿ ಪ್ರತಿಗಳಲ್ಲಾಗಿರುವ ಲೋಪ, ಪ್ರಕ್ಷೇಪ, ವ್ಯತ್ಯಾಸ ಮತ್ತು ಪದ್ಯಗಳಲ್ಲಾಗಿರುವ ವ್ಯಾಕರಣ ಹಾಗೂ ಛಂದೋದೋಷಗಳನ್ನು ಗುರುತಿಸಲಾಗಿದೆ. ಆದರೆ ಯಾವ ಪ್ರತಿಯಲ್ಲಿ ಹೀಗಾಗಿದೆ ಎಂಬುದನ್ನು ನಿಸ್ಸಂದಿಗ್ಧವಾಗಿ ಸೂಚಿಸಿಲ್ಲ. ಸಂಪಾದಿತ ಪಠ್ಯ ಅರ್ಥದೃಷ್ಟಿಯಿಂದ ಸುಕರವಾಗಿಯೂ ಸುಲಲಿತವಾಗಿಯೂ ಇದೆ. ಊಹಾತ್ಮಕ ಪರಿಷ್ಕರಣದ ಪಾಠಗಳು ತುಂಬ ವಿರಳವಾಗಿರುವುದು ಗಮನಾರ್ಹವೂ, ಮೆಚ್ಚಿಗೆಗೆ ಪಾತ್ರವಾಗುವಂಥದೂ ಆಗಿದೆ. ಗ್ರಂಥಾಂತ್ಯದಲ್ಲಿ ಒಟ್ಟು ೬ ಪರಿಶಿಷ್ಟಗಳಿವೆ: ಮೊದಲನೆಯದು 'ಶಾರದಾ ವಿಲಾಸ'ದ ಸಂಪಾದಿತ ಪಠ್ಯ; ಎರಡನೆಯದು ಪದ್ಯಗಳ ಅಕಾರಾದಿ; ಮೂರನೆಯದು ಪೂರ್ವಕಾಲದ ಸಂಸ್ಕೃತ ಪದ್ಯಗಳನ್ನು ರಸರತ್ನಾಕರಕಾರ ಅನುವಾದಿಸಿರುವ ಸೋದಾಹರಣವಾದ ತೌಲನಿಕ ಪಟ್ಟಿ: ನಾಲ್ಕನೆಯದು ಶೃಂಗಾರರತ್ನಾಕರ, ಕಾವ್ಯಾವಲೋಕನಗಳನ್ನು ಮೂಲ ಆಕರವಾಗಿರಿಸಿಕೊಂಡು ರಚಿತವಾಗಿರುವ ರಸರತ್ನಾಕರ ಪದ್ಯಗಳ ಪಟ್ಟಿ ; ಐದನೆಯದು ರಸಭೇದ ಪಟ್ಟಿ; ಆರನೆಯದು ಭಿನ್ನಪ್ರತಿಗಳಲ್ಲಿ ಕಂಡುಬರುವ ಪಾಠಾಂತರಗಳ ಪಟ್ಟಿ.

ಈ ಕೃತಿಯನ್ನು ಪರಿಷ್ಕರಿಸುವಾಗ ಹಸ್ತಪ್ರತಿಗಳ ಸ್ವರೂಪದ ವಿಷಯ ತಿಳಿಸಿದ್ದರೂ ಅವುಗಳ ಕಾಲ, ಲಿಪಿಕಾರ ಪ್ರಶಸ್ತಿ, ಶಕಟರೇಫ ಱ ೞ ಗಳ ಬಳಕೆಯೇ ಮುಂತಾದುದನ್ನು ನಿರೂಪಿಸಿಲ್ಲ. ಆದರೆ ಇದ್ದುದರಲ್ಲಿ ಶುದ್ಧಪ್ರತಿಯಾದ 'ಕ'ವನ್ನು ಗಮನಿಸಿ "ಇದನ್ನೇ ನಾವು ವಿಶೇಷವಾಗಿ ಅನುಸರಿಸಿರುವೆವು" ಎಂದು ಆಧಾರಪ್ರತಿ ಯಾವುದೆಂಬುದನ್ನು ಸೂಚಿಸಿದ್ದಾರೆ; 'ಜ' 'ಖ'ದ ಪ್ರತಿಕೆ ಎಂಬುದನ್ನು ಪತ್ತೆ ಹಚ್ಚಿದ್ದರೂ ಇತರ ಪ್ರತಿಗಳ ನಡುವಣ ಸಂಬಂಧ ಮತ್ತು ಪೀಳಿಗೆಗಳ ವಿಷಯವನ್ನು ಸ್ಪಷ್ಟೀಕರಿಸಿಲ್ಲ. ಪಾಠಾಂತರಗಳನ್ನು ೬ನೆಯ ಪರಿಶಿಷ್ಟದಲ್ಲಿ ಕೊಟ್ಟಿದ್ದರೂ ಅವು ಯಾವ ಪ್ರತಿಯವೆಂಬುದು ಗೊತ್ತಾಗುವುದಿಲ್ಲ; ಅವುಗಳಲ್ಲಿ ಕೆಲವು ಉತ್ತಮ ಪಾಠಗಳಿದ್ದರೂ ಅವನ್ನು ಸಂಪಾದಕರು ಲಕ್ಷಿಸಿಲ್ಲ. ಕಡಿಮೆ ಪ್ರಮಾಣದಲ್ಲಿಯಾದರೂ

ಅಲ್ಲಲ್ಲಿ ಗೋಚರಿಸುವ ಪದಚ್ಛೇದದ ದೋಷ ಹಾಗೂ ಮುದ್ರಣದೋಷಗಳು ಕೃತಿಯೋದನ್ನು ಕಷ್ಟವಾಗಿಸಿವೆ. ಇಷ್ಟಾಗಿಯೂ ಈ ಕೃತಿಯ ಈಚಿನ ಪರಿಷ್ಕರಣಗಳು ಈ ಪರಿಷ್ಕರಣಕ್ಕೆ ವಿಶೇಷವಾಗಿ ಋಣಿಯಾಗಿರುವುದನ್ನು ನೋಡಿದರೆ ಇದರ ಮಹತ್ವ ತಿಳಿಯುತ್ತದೆ.

(೪) ಎರಡನೆಯ ಗುಣವರ್ಮನ (ಸು. ೧೨೩೫) **'ಪುಷ್ಪದಂತಪುರಾಣ'**ವು ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ನಾಲ್ಕನೆಯ ಕೃತಿಯಾಗಿ ೧೯೩೩ರಲ್ಲಿ ಅಚ್ಚಾಗಿದೆ. ಹದಿನಾಲ್ಕು ಆಶ್ವಾಸಗಳ ಈ ಕೃತಿಯ ಕಥಾಸಾರವನ್ನು ಆರಂಭದಲ್ಲಿ ೨೨ ಪುಟಗಳಲ್ಲಿ ಸಂಗ್ರಹಿಸಿ ಕೊಡಲಾಗಿದೆ. ತರುವಾಯ ೧೨ ಪುಟಗಳ ಮುನ್ನುಡಿಯೊಂದನ್ನು ಬರೆಯಲಾಗಿದ್ದು ಇದರ ಆದಿ ಮತ್ತು ಅಂತ್ಯಗಳಲ್ಲಿ ಹಸ್ತಪ್ರತಿವಿಷಯವನ್ನು ಕೊಂಚ ಸೂಚಿಸಿದೆ. ಮುಖ್ಯಭಾಗವೆಲ್ಲ ಕೃತಿ ಮತ್ತು ಕೃತಿಕರ್ತನ ವಿಷಯಕ್ಕೆ ಮೀಸಲಾಗಿದೆ. ಗ್ರಂಥವನ್ನು ಸಂಪಾದಿಸಲು ಮದರಾಸು ಪ್ರಾಚ್ಯಪುಸ್ತಕ ಕೋಶಾಗಾರದ ತಾಳೆಯೋಲೆ ಪ್ರತಿಯನ್ನೂ, ಮೈಸೂರಿನ ಪ್ರಾಚ್ಯಪುಸ್ತಕ ಕೋಶಾಗಾರದ ತಾಳೆ ಹಾಗೂ ಕಾಗದ ಪ್ರತಿಗಳನ್ನೂ—ಎಂದರೆ ಒಟ್ಟು ಮೂರು ಪ್ರತಿಗಳನ್ನು ಬಳಸಿದೆ. ಈ ಮೂರೂ ಪ್ರತಿಗಳ ಸ್ವರೂಪವನ್ನು ವಿವರವಾಗಾಗಲಿ, ತಾವನುಸರಿಸಿರುವ ಗ್ರಂಥಸಂಪಾದನಾ ವಿಧಾನವನ್ನಾಗಲಿ ಸಂಪಾದಕರು ಎಲ್ಲಿಯೂ ವಿಶದೀಕರಿಸಿಲ್ಲ.

೧೪ ಆಶ್ವಾಸಗಳ ಈ ಕೃತಿಯನ್ನು ಸಂಪಾದಿಸುವಾಗ ಈ ಸಂಪಾದಕರು ತಮ್ಮ ಹಿಂದಿನ ಕೃತಿಗಳನ್ನೇ ಮಾದರಿಯಾಗಿರಿಸಿಕೊಂಡಿದ್ದಾರೆ. ಎಂದರೆ ಯಾವುದೋ ಒಂದನ್ನು ಆಧಾರಪ್ರತಿಯಾಗಿಟ್ಟುಕೊಂಡು ಪಾಠವನ್ನು ಶೋಧಿಸಿ ಅದನ್ನೇ ಅಚ್ಚಿಸುವ, ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಸೂಚಿಸದಿರುವ, ವೃತ್ತ ಕಂದ ವಚನಗಳನ್ನು ವಿಭಜಿಸಿ ಮುದ್ರಿಸುವ ಕ್ರಮವನ್ನೇ ಇಲ್ಲಿಯೂ ಅನುಸರಿಸಿದೆ. ವಿರಳವಾಗಿ ಇತರ ಪ್ರತಿಗಳಲ್ಲಿ ಕಂಡುಬರುವ ಪಾಠವ್ಯತ್ಯಾಸವನ್ನೂ, ಔಪಾಧಿಕ ಪಾಠಗಳನ್ನೂ, ಊಹಾತ್ಮಕ ಪರಿಷ್ಕರಣದ ಪಾಠಗಳನ್ನೂ, ಇತರ ಕೆಲವು ಸಂಪಾದಕೀಯ ವಿವರಗಳನ್ನೂ ಸೂಚಿಸಿದೆ. ಆದರೆ ಪಾಠವ್ಯತ್ಯಾಸದ ಸಂಗತಿಗಳನ್ನು ಕುರಿತಾದ ಯಾವ ಪ್ರತಿಯಲ್ಲಿ ಹೇಗಾಗಿದೆ ಎಂಬುದನ್ನು ನಿರ್ದಿಷ್ಟವಾಗಿ ಎಲ್ಲಿಯೂ ಸೂಚಿಸಿಲ್ಲ. ಗ್ರಂಥಾಂತ್ಯದಲ್ಲಿ ಒಟ್ಟು ಆರು ಪರಿಶಿಷ್ಟಗಳಿವೆ: ಮೊದಲನೆಯದು ಗುಣವರ್ಮನ ಚಂದ್ರನಾಥಾಷ್ಟಕ; ಎರಡನೆಯದು ಪದ್ಯಗಳ ಅಕಾರಾದಿ; ಮೂರನೆಯದು ಪ್ರಸ್ತುತ ಕೃತಿಯ ವೃತ್ತಜಾತಿ ಸೂಚಿ; ನಾಲ್ಕನೆಯದು ಚಾವುಂಪು.ದ ಪುಷ್ಪದಂತ ಪುರಾಣ ಭಾಗದ ಪದ್ಯ; ಐದನೆಯದು ಶ್ರೀಪುರಾಣಾಂತರ್ಗತವಾದ ಪುಷ್ಪದಂತ ಪುರಾಣದ ಕಥೆ; ಆರನೆಯದು ಮೈಸೂರಿನ ಕಾಗದದ ಪ್ರತಿಯ ಕೆಲವು ಗದ್ಯಭಾಗದ ಮಾದರಿಗಳು.

ಮುನ್ನುಡಿ ಭಾಗದಲ್ಲಿ ಸಂಪಾದಕರು ಪ್ರತಿಗಳಲ್ಲಿ ಅಕ್ಷರಸ್ಖಾಲಿತ್ಯ, ಗ್ರಂಥಪಾತ, ಪ್ರಕ್ಷೇಪ, ಅಶುದ್ಧ ವಾಕ್ಯಪ್ರಯೋಗ ಇವಾಗಿವೆಯೆಂದು ಸೂಚಿಸಿದ್ದಾರೆ. ಆದರೆ ಈ

ಪ್ರತಿಗಳ ಪ್ರಾಚೀನತೆ. ಇವುಗಳಲ್ಲಿ ಅತ್ಯಂತ ಶುದ್ಧವಾದುದು ಯಾವುದು, ಇವುಗಳ ನಡುವಣ ವಂಶಾವಳಿ ವಿಚಾರವೇನು—ಇತ್ಯಾದಿಯಾದ ಯಾವುದೇ ಸಂಗತಿಗಳನ್ನು ನಿರೂಪಿಸಿಲ್ಲ. ಹೀಗೆಯೇ ಕೃತಿಸಂಪಾದನೆಗೆ ಆಧಾರವಾಗಿಟ್ಟುಕೊಂಡಿರುವ ಪ್ರತಿಯ ವಿಷಯವನ್ನಾಗಲಿ, ಅದರ ನಿರ್ಣಯದ ಬಗೆಗಾಗಲಿ ಅವರು ಏನನ್ನೂ ಸೂಚಿಸಿಲ್ಲ. ಈಗಾಗಲೇ ಡಿ. ಎಲ್. ನರಸಿಂಹಾಚಾರ್ಯರು ಗುರುತಿಸಿರುವಂತೆ ಸಂಪಾದಕರು ಮದರಾಸು ಪ್ರತಿಯನ್ನು ಆಧಾರವಾಗಿರಿಸಿಕೊಂಡಂತಿದೆ; ಆದರೆ ಮೈಸೂರಿನ ಓಲೆ ಪ್ರತಿ ಶುದ್ಧವಾದುದೂ ಪ್ರಾಚೀನವಾದುದೂ ಆಗಿದ್ದು ಅದು ಎಷ್ಟು ಉಪಯುಕ್ತ ವಾದುದು ಎಂಬುದನ್ನು ಅವರೇ ಸೋದಾಹರಣವಾಗಿ ತಿಳಿಸಿದ್ದಾರೆ. ಶೋಧಿಸಿ ಕೊಟ್ಟಿರುವ ಪಾಠದಲ್ಲಿಯಾದರೂ ಸಂಪಾದಕರು ಅಲ್ಲಲ್ಲಿ ಎಡವಿದ್ದಾರೆ. ಱ, ೞ, ಳ–ಗಳ ತಪ್ಪು ಬಳಕೆ, ಪಾಠ ನಿರ್ಣಯದ ಅಸ್ಥಿರತೆ ಮತ್ತು ದೋಷ, ಪದ್ಯಗಳ ಅದರಲ್ಲೂ ಕೆಲವೆಡೆ ಕಂದಗಳ ದೋಷ, ಪದ್ಯಗಳ ತ್ರುಟಿತತ್ವ ಇವಕ್ಕೆ ಅವು ಸಂಬಂಧಿಸಿವೆ. ತಮ್ಮ ಹಿಂದಿನ ಕೃತಿಗಳಲ್ಲಿ ಅನುಬಂಧದಲ್ಲಿಯಾದರೂ ಪಾಠಾಂತರಗಳನ್ನು ಕೊಡುತ್ತಿದ್ದರು. ಇಲ್ಲಿ ಅದೂ ಇಲ್ಲ. ಹೀಗಾಗಿ ಈ ಕೃತಿಯ ಇನ್ನೊಂದು ಪರಿಷ್ಕರಣ ತರಲು ಅವಕಾಶವಿದೆ.

(೫) ಕನ್ನಡದ ಪ್ರಸಿದ್ಧ ವ್ಯಾಕರಣ ಗ್ರಂಥವಾದ ಕೇಶಿರಾಜನ (ಸು. ೧೨೬೦) **'ಶಬ್ದಮಣಿದರ್ಪಣ'**ವನ್ನು ಲಿಂಗಣಾರಾಧ್ಯನ ವೃತ್ತಿಯೊಂದಿಗೆ ೧೯೨೦ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಐದನೆಯ ಕೃತಿಯಾಗಿ ಈ ಸಂಪಾದಕರು ಹೊರತಂದಿದ್ದಾರೆ. ಈ ಕೃತಿಗೆ ೧೧೨ ಪುಟಗಳ ಸುದೀರ್ಘವಾದ ಅವತರಣಿಕೆಯೊಂದನ್ನು ಎಚ್. ಚೆನ್ನಕೇಶವ ಅಯ್ಯಂಗಾರ್ಯರು ಬರೆದಿದ್ದಾರೆ. ಇವರ ಅಂತ್ಯದಿಂದ ಈ ಇಡೀ ಕೃತಿಯ ಗ್ರಂಥಪರಿಷ್ಕರಣ ಕಾರ್ಯವು ಶೇಷಯ್ಯಂಗಾರ್ ಮತ್ತು ವೆಂಕಟರಾವ್ ಅವರಿಂದಲೇ ನಡೆದಿದೆಯೆಂದು ತಿಳಿಯುತ್ತದೆ. ಗ್ರಂಥಾಂತ್ಯದ ಎಂಟು ಪರಿಶಿಷ್ಟಗಳು ಕೂಡ ಇವರಿಂದಲೇ ಸಿದ್ಧವಾದುವು; ಅವತರಣಿಕೆಯ ಭಾಗದ ಟಿಪ್ಪಣಿಗಳಲ್ಲಿ ಇವರ ಕೈವಾಡವಿದೆ; ಆದರೆ ಅದನ್ನು ಹೆಚ್ಚು ವಿಶ್ಲೇಷಕ ಹಾಗೂ ವಿಚಾರಪೂರ್ಣವಾಗಿಸಿದ್ದು, ಒಂಬತ್ತನೆಯ ಪರಿಶಿಷ್ಟವನ್ನು ಸೇರಿಸಿದ್ದು—ಇವುಗಳ ಕೀರ್ತಿ ಚೆನ್ನಕೇಶವ ಅಯ್ಯಂಗಾರ್ಯರದು.

ಚೆನ್ನಕೇಶವ ಅಯ್ಯಂಗಾರ್ಯರ ಮಾತುಗಳಿಂದ ಈ ಕೃತಿಯ ಸಂಪಾದನೆಗೆ ಮದರಾಸಿನ ಓರಿಯಂಟಲ್ ಲೈಬ್ರರಿಯ ಜೀರ್ಣವಾಗಿದ್ದ ತಾಳಪ್ರತಿ ಹಾಗೂ ಅದರ ಇನ್ನೊಂದು ಓಲೆ ಪ್ರತಿಯನ್ನು ಅವಲಂಬಿಸಿದೆ; ಕೇಶಿರಾಜನ ಶಮದ.ದ ಸೂತ್ರ ಪಾಠಕ್ಕೆ ಇದಕ್ಕಿಂತ ಹಿಂದೆಯೇ ಅಚ್ಚಾಗಿದ್ದ ಕೃತಿಗಳನ್ನು ಗಮನಿಸಿದೆ ಎಂದು ತಿಳಿಯುತ್ತದೆ. ಆದರೆ ಲಿಂಗಣಾರಾಧ್ಯನ ವೃತ್ತಿಗೆ ಸಂಬಂಧಿಸಿದಂತೆ ಮದ್ರಾಸಿನ ಏಕೈಕ ಪ್ರತಿಯೇ ಮೂಲ ಆಧಾರವಾಗಿದೆ. ಮದ್ರಾಸು ಸ್ವರೂಪವನ್ನು ಚೆನ್ನಕೇಶವ ಅಯ್ಯಂಗಾರ್ಯರು ವಿವರಿಸಿದ್ದರೂ, ಈ ಗ್ರಂಥವನ್ನು ಸಂಪಾದಿಸಿರುವ ವಿಧಾನದ ಬಗ್ಗೆ ತಿಳಿಯಲು ಸೂಚನೆಗಳೇನೂ ಇಲ್ಲ. ಗ್ರಂಥದುದ್ದಕ್ಕೂ ಸೂತ್ರ, ವೃತ್ತಿ ಮತ್ತು

ಪ್ರಯೋಗಗಳಿಗೆ ಸಂಬಂಧಿಸಿದಂತೆ ಪಾಠಭೇದಗಳನ್ನು ಅಡಿಟಿಪ್ಪಣಿಯಲ್ಲಿ ಕೊಡುತ್ತಾ ಹೋಗಲಾಗಿದೆ. ಸೂತ್ರಗಳಿಗೆ ಪಾಠಭೇದಗಳಿರುವ ವಿಷಯ ಸರಿ; ವೃತ್ತಿಗೆ ಪಾಠಭೇದ ಹೇಗೆ ಸೂಚಿಸಲಾಯಿತೋ ತಿಳಿಯುವುದಿಲ್ಲ. ಪ್ರಯೋಗಗಳಿಗೆ ಸಂಬಂಧಿಸಿದಂತೆ "ಕೇಶಿರಾಜನು ಕೊಟ್ಟಿರುವ ಉದಾಹರಣೆಗಳಲ್ಲಿ ಕೆಲವನ್ನು ಲಿಂಗಣಾರಾಧ್ಯನು ಮಾರ್ಪಡಿಸಿರುವನು; ಕೆಲವನ್ನು ಹೆಚ್ಚಾಗಿ ಕೊಟ್ಟಿರುವನು; ಕೆಲವನ್ನು ಬಿಟ್ಟಿರುವನು" ಎಂದು ಅವತರಣಿಕಾಕಾರರು ಸೂಚಿಸಿರುವುದು ಸರಿಯಾಗಿದೆ. ಸಂಪಾದಕರಿಂದ ಅಂಗೀಕೃತವಾಗಿರುವ ಸೂತ್ರದ ಕೆಲವು ಪಾಠಗಳು ವಿಚಾರಣೀಯವಾಗಿವೆ.

ಗ್ರಂಥಾಂತ್ಯದಲ್ಲಿ ೯ ಪರಿಶಿಷ್ಟಗಳಿವೆ. ಇವುಗಳಲ್ಲಿ ಮೊದಲ ನಾಲ್ಕು ಅಕಾರಾದಿಗೆ ಸಂಬಂಧಿಸಿದವಾಗಿವೆ. ಇವು ಕ್ರಮವಾಗಿ ಪದ್ಯಗಳ ಅಕಾರಾದಿ, ಸೂತ್ರಗಳಲ್ಲಿಯ ಶಬ್ದಗಳ ಅಕಾರಾದಿ, ಸೂತ್ರಗಳಲ್ಲಿಯ ಶಾಸ್ತ್ರೀಯ ಶಬ್ದಗಳ ಅಕಾರಾದಿ, ಪ್ರಯೋಗ ಪದ್ಯ ಮತ್ತು ಪದ್ಯಭಾಗಗಳ ಅಕಾರಾದಿಯನ್ನೊಳಕೊಂಡಿವೆ. ಐದನೆಯದು ದರ್ಪಣ ಸೂತ್ರಗಳಿಗೆ ಸಂವಾದಿಯಾದ ನಾಗವರ್ಮನ ವ್ಯಾಕರಣ ಸೂತ್ರಗಳ ತೌಲನಿಕ ಪಟ್ಟಿ; ಆರನೆಯದು ದರ್ಪಣದ ಮೇಲಾಗಿರುವ ಸಂಸ್ಕೃತ ಗ್ರಂಥ ಸೂತ್ರಗಳ ಪ್ರಭಾವ ಪಟ್ಟಿ; ಮುಂದಿನದು ದರ್ಪಣಾನುಕ್ತ ವಿಶೇಷ ಪ್ರಯೋಗಗಳನ್ನು ಕುರಿತಿದ್ದರೆ, ಅದರ ಮುಂದಿನದು ಪ್ರಯೋಗಗಳಲ್ಲಿ ಬಳಕೆಯಾಗಿರುವ ಪದಗಳ ಅಕಾರಾದಿ ಪಟ್ಟಿಕೆಯಾಗಿದೆ. ಕೊನೆಯದು ಶಮದ.ದ ಮೂರು ಪರಿಷ್ಕರಣಗಳ ಸಂವಾದಿ ಸೂತ್ರಗಳ ಪಟ್ಟಿಯಾಗಿದೆ.

ಈ ಹಿಂದೆಯೇ ತಿಳಿಸಿರುವಂತೆ ಈ ಗ್ರಂಥದ ಸಂಪಾದನ ವಿಧಾನದ ಕ್ರಮವನ್ನು ತಿಳಿಸಿಲ್ಲ. ಆದರೆ ಮದರಾಸು ಪ್ರತಿಯನ್ನೇ ಆಧಾರಪ್ರತಿಯಾಗಿರಿಸಿಕೊಂಡು ಕೃತಿಯನ್ನು ಸಂಪಾದಿಸಿರುವುದನ್ನು ಚೆನ್ನಕೇಶವಯ್ಯಂಗಾರ್ಯರು ಇಂಗಿತಗೊಳಿಸಿದ್ದಾರೆ. ಏಕೈಕ ಹಸ್ತಪ್ರತಿಯನ್ನೇ ಈ ಗ್ರಂಥಪರಿಷ್ಕರಣಕ್ಕೆ ಪ್ರಧಾನವಾಗಿ ಅವಲಂಬಿಸಿರುವುದಾದರೂ, ಅಚ್ಚಾದ ಇತರ ಶಮದ.ದ ಪರಿಷ್ಕರಣಗಳನ್ನೂ ಲಕ್ಷಿಸಿರುವುದರಿಂದ ಈ ಪರಿಷ್ಕರಣಕ್ಕೆ ಬೆಲೆಯಿದೆ; ಅಧಿಕೃತತೆ ಬಂದಿದೆ. ಪರಿಷ್ಕರಣದೊಡನೆ ಹೋಲಿಸಿದಾಗ ಈ ಪರಿಷ್ಕರಣದ ಇತಿಮಿತಿಗಳೇನು ಎಂಬುದು ತಿಳಿಯುತ್ತದೆ. ಇದೇನಿದ್ದರೂ ಈ ಪರಿಷ್ಕರಣದ ವೈಶಿಷ್ಟ್ಯವೆಲ್ಲಾ ಲಿಂಗಣಾರಾಧ್ಯನ ವೃತ್ತಿಯಲ್ಲಡಗಿದೆ ಎನ್ನಬಹುದು.

(೬) ಎರಡನೆಯ ನಾಗವರ್ಮನಿಂದ (೧೦೪೨) ರಚಿತವಾದ **'ಅಭಿಧಾನ ವಸ್ತುಕೋಶ'** ಎಂಬ ನಿಘಂಟನ್ನು ೧೯೩೩ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಮೂರನೆಯ ಪ್ರಕಟನೆಯಾಗಿ ಹೊರತಂದಿದ್ದಾರೆ. ಮೂರು ಕಾಂಡಗಳ ಈ ಪುಸ್ತಕಕ್ಕೆ ೧೬ ಪುಟಗಳ ಒಂದು ಮುನ್ನುಡಿಯನ್ನು ಬರೆಯಲಾಗಿದ್ದು. ಇದರ ಆರಂಭದಲ್ಲಿ ಕೃತಿಗೆ ಬಳಸಿರುವ ಹಸ್ತಪ್ರತಿ ವಿಷಯ ಮತ್ತು ಗ್ರಂಥಸಂಪಾದನಾ ವಿಧಾನದ ಬಗ್ಗೆ ಕೆಲವು ಮಾತುಗಳನ್ನು ಆಡಲಾಗಿದೆ. ಆ ಮೂಲಕ ತಿಳಿಯುವ ಸಂಗತಿಗಳು ಇವು: ಈ ಕೃತಿಯನ್ನು ಸಂಪಾದಿಸಲು ಎರಡು ಹಸ್ತಪ್ರತಿಗಳನ್ನು




ಅವಲಂಬಿಸಲಾಗಿದೆ. ಒಂದು ಪದ್ಮರಾಜಪಂಡಿತರ ಸ್ವಂತ ಸಂಗ್ರಹದಲ್ಲಿದ್ದ "ಕ" ಎಂಬ ಕಾಗದದ ಪ್ರತಿ; ಎರಡನೆಯದು ಭುಜಬಲಿಶಾಸ್ತ್ರಿಗಳ ಮೂಲಕ ಬಂದ ಆಧಾರದ "ಖ" ಎಂಬ ತಾಳೆಯೋಲೆಯ ಪ್ರತಿ. "ಗ್ರಂಥಪಾತ ಸ್ಥಳಗಳು, ಸಮಾನಪಾಠಗಳೇ ಮುಂತಾದುದನ್ನು ಪರಿಗಣಿಸಿ 'ಕ' ಪ್ರತಿ 'ಖ'ದ ಪ್ರತಿಕೃತಿ ಅಥವಾ 'ಪ್ರತಿಕೃತಿಯ ಪ್ರತಿಕೃತಿ'" ಎಂದು ಸಕಾರಣವಾಗಿ ನಿರ್ಧರಿಸುತ್ತಾರೆ. "ಇವೆರಡು ಪ್ರತಿಗಳಲ್ಲಿಯೂ ಗ್ರಂಥಲೋಪ ಗ್ರಂಥಪಾತಗಳೂ, ಲೇಖಕ ಭ್ರಮಪ್ರಮಾದಾದಿಗಳಿಂದ ಒದಗಬಹುದಾದ ಅಶುದ್ಧಗಳೂ ಹೇರಳವಾಗಿದ್ದು ಶುದ್ಧ ಪಾಠವುಳ್ಳ ಪದ್ಯಗಳು ಒಂದೆರಡಾದರೂ ಇಲ್ಲವೆನ್ನುವುದು ಅತಿಶಯೋಕ್ತಿಯಾಗಲಾರದು" ಎಂಬ ಸಂಪಾದಕರ ವಿಶ್ಲೇಷಕ ಮಾತುಗಳೂ ಇವೆ.

ಕೃತಿಯ ಪೂರ್ವಭಾಗ ಪೂರ್ಣವಾಗಿ ಅಚ್ಚಾದಮೇಲೆ ಡಿ.ಎಲ್. ನರಸಿಂಹಾಚಾರ್ಯರ ಮೈಸೂರಿನ ಪ್ರತಿಯೊಂದು ದೊರೆತಿದೆ. ಕೃತಿಯನ್ನು ಪರಿಷ್ಕರಿಸುವಾಗ ಅದನ್ನು ಬಳಸಿಕೊಳ್ಳಲಾಗದಿದ್ದರೂ, ಅದರ ಮುಖ್ಯ ಪಾಠಾಂತರಗಳನ್ನು ಕೊನೆಯಲ್ಲಿ ಪರಿಶಿಷ್ಟವಾಗಿ ಕೊಟ್ಟಿದೆ. ಈ ಪ್ರತಿಯ ಸ್ವರೂಪವನ್ನು ಹೀಗೆ ಬಣ್ಣಿಸಲಾಗಿದೆ: ಟೀಕೆ ಯೊಡಗೂಡಿದ ಈ ತಾಳಪ್ರತಿಯಲ್ಲಿ ಕ, ಖ ಗಳಿಗಿಂತ ಅಕ್ಷರಸ್ಖಾಲಿತ್ಯಾದಿ ದೋಷಗಳು ಹೇರಳವಾಗಿವೆ. ಇದರಲ್ಲಿ ನಾನಾರ್ಥವರ್ಗದಲ್ಲಿ ಮೊದಲ ಐವತ್ತು ಪದ್ಯಗಳು ಮಾತ್ರ ಇದ್ದು ಕೃತಿಯು ಅಸಮಗ್ರವಾಗಿದೆ; ಗ್ರಂಥಾಂತ್ಯದ ಪ್ರಶಸ್ತಿಪದ್ಯ ಮತ್ತು ಗದ್ಯಗಳೂ ಇಲ್ಲ. ಗ್ರಂಥದ ಕಡೆಯಲ್ಲಿ ಎರಡು ಪರಿಶಿಷ್ಟಗಳಿದ್ದು ಮೊದಲನೆಯದು ಈ ಕೋಶದಲ್ಲಿ ಬಳಕೆಯಾಗಿರುವ ಶಬ್ದಗಳ ಅಕಾರಾದಿ ಪಟ್ಟಿಯಾಗಿದೆ; ಎರಡನೆಯದು ಈ ಹಿಂದೆಯೇ ಸೂಚಿಸಿದಂತೆ ಮೈಸೂರು ಪ್ರತಿಯ ಪಾಠಾಂತರ ಪಟ್ಟಿಯಾಗಿದೆ.

ಈ ಹಿಂದಿನ ಸಂಪಾದನ ಕೃತಿಗಳಲ್ಲಿ ಮಾಡಿದಂತೆ ಈ ಕೃತಿಯಲ್ಲಿಯೂ ಶೋಧಿತವೂ ಸಂಪಾದಿತವೂ ಆದ ಶುದ್ಧ ಪಾಠವನ್ನೇ ಉದ್ಧರಿಸಿ ಮುದ್ರಿಸಿದೆ. ಕಂದ ಮತ್ತು ವೃತ್ತಗಳ ಬಗೆಗಳನ್ನು ಪದ್ಯಾರಂಭದಲ್ಲಿ ಸೂಚಿಸಿದೆ. ಅಡಿಟಿಪ್ಪಣಿಗಳಲ್ಲಿ ಎಲ್ಲಿಯೂ ಪಾಠಭೇದಗಳನ್ನು ಸೂಚಿಸಿಲ್ಲ. ಊಹಾತ್ಮಕ ಪರಿಷ್ಕರಣದ ಬಲದಿಂದ ಸೃಷ್ಟಿಸಿರುವ ಪಾಠಸಂಖ್ಯೆಗಳು ಹೆಚ್ಚಿದ್ದರೂ ಅವು ಬಲುಮಟ್ಟಿಗೆ ಸರಿಯಾಗಿವೆ. ಆದರೆ ಪರಿಷ್ಕರಣ ನಡೆಸುವಾಗ ಛಂದಸ್ಸಿನ ಲಕ್ಷಣಕ್ಕನುಗುಣವಾಗಿ ಸಂಪಾದನ ಕಾರ್ಯ ನಡೆಯದಿರುವ ಸಂದರ್ಭಗಳೂ ಇವೆ. ಗ್ರಂಥದಲ್ಲಿ ಕಂಡುಬರುವ ದೇಶ್ಯಮಟ್ಟುಗಳಾದ ಕೆಲವು ತ್ರಿಪದಿಗಳ, ಹಲವು ಅಕ್ಕರಗಳ ಪಾಠಗಳನು ಲಕ್ಷಿಸಿದರೆ ಇದು ಖಚಿತವಾಗುತ್ತದೆ. ಎಂದಿನಂತೆ ಪದಚ್ಛೇದದೋಷಗಳೂ ಅಪಾರವಾಗಿವೆ. ಅಲ್ಲಲ್ಲಿ ಕೆಲಂಚ ಹೆಚ್ಚಾಗಿಯೇ ಪದ್ಯಭಾಗಗಳು ತ್ರುಟಿತವಾಗಿರುವುದು, ಪಾಠಲೋಪಗಳು ಕಂಡುಬರುವುದು, ಮೈಸೂರು ಪ್ರತಿಯನ್ನು ಬಳಸದಿರುವುದು–ಇವುಗಳ ಹಿನ್ನೆಲೆಯಲ್ಲಿ ಇದರ ಇನ್ನೊಂದು ಪರಿಷ್ಕರಣವನ್ನು ತರಲವಕಾಶವಿದೆ ಎನ್ನಬಹುದು. ಎರಡನೆಯ ಪರಿಶಿಷ್ಟದಲ್ಲಿ ಮೈಸೂರು ಪ್ರತಿಯ ಪಾಠಾಂತರಗಳನ್ನು ಗುರುತಿಸುವಾಗ

ಅಲ್ಲಾಗಿರುವ ಲೋಪ, ಸ್ಖಾಲಿತ್ಯ ಮತ್ತಿತರ ವೈಶಿಷ್ಟ್ಯಗಳನ್ನು ಗುರುತಿಸಿದ್ದರೂ ಆ ಪ್ರತಿಯ ಉಪಯುಕ್ತತೆಯನ್ನು ನಿರೂಪಿಸದಿರುವುದೂ ಒಂದು ಕೊರತೆಯೇ.

(೭) ಭಟ್ಟ ಹಲಾಯುಧನಿಂದ ರಚಿತವಾದ **ಅಭಿಧಾನ ರತ್ನಮಾಲೆಗೆ** ನಾಗವರ್ಮನಿಂದ (?) ಬರೆಯಲ್ಪಟ್ಟ **'ಕರ್ಣಾಟಕ ಟೀಕೆ'**ಯನ್ನು ೧೯೪೦ ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ೬ನೆಯ ಪುಸ್ತಕವಾಗಿ ಈ ಸಂಪಾದಕರು ಹೊರತಂದಿದ್ದಾರೆ. ಇದು ಆರಾದ ಏಕೈಕ ತಾಳೆಯೋಲೆ ಪ್ರತಿಯಿಂದ ಅಚ್ಚಾಗಿರುವ ಕೃತಿಯಾಗಿದೆ. ಈ ಕೃತಿಗೆ ೩೦ ಪುಟಗಳ ಸುದೀರ್ಘವಾದ ಮುನ್ನುಡಿಯೊಂದನ್ನು ಶೇಷಯ್ಯಂಗಾರ್ಯರು ಬರೆದಿದ್ದಾರೆ. ಸಂಸ್ಕೃತ ನಿಘಂಟುಸಾಹಿತ್ಯದ ಇತಿಹಾಸ, ಅಭಿಧಾನ ರತ್ನಮಾಲೆ ಮತ್ತು ಹಲಾಯುಧನನ್ನು ಕುರಿತ ಪರಿಚಯ ನಿರೂಪಣೆ, ಕರ್ಣಾಟಕ ಟೀಕೆಯ ಕರ್ತೃತ್ವವಿಚಾರ ಮುಂತಾದುವನ್ನು ಅಲ್ಲಿ ಚರ್ಚಿಸಲಾಗಿದೆ.

ಕೃತಿಯನ್ನು ಏಕೈಕ ಹಸ್ತಪ್ರತಿಯಿಂದಲೇ ಆದರೂ ಅದರ ಉಪಯುಕ್ತತೆಯನ್ನು ಗಮನಿಸಿ ಸಂಪಾದಿಸಿ ಪ್ರಕಟಿಸಿದ್ದೇವೆ ಎಂದು ಸಂಪಾದಕರು ಆರಂಭದಲ್ಲಿ ಹೇಳಿಕೊಂಡಿದ್ದಾರೆ. ಮೊದಲಿಗೆ ಬರುವ ಮುನ್ನುಡಿಯ ಭಾಗದಲ್ಲಿ ಈ ಹಸ್ತಪ್ರತಿಯ ಸ್ವರೂಪವನ್ನೂ, ಗ್ರಂಥವನ್ನು ಸಂಪಾದಿಸುವಾಗ ಅನುಸರಿಸಿರುವ ವಿಧಾನದ ಕೆಲವಂಶಗಳನ್ನೂ ತಿಳಿಸಿದೆ. ಇದರ ಮೂಲಕ ಪ್ರಸ್ತುತ ಹಸ್ತಪ್ರತಿಯು ಆರಾದ ಜೈನಗ್ರಂಥಭಂಡಾರದಲ್ಲಿ ಸಂರಕ್ಷಿತವಾಗಿದ್ದ ಪ್ರತಿಯೆಂದೂ ಅದು ಭುಜಬಲಿಶಾಸ್ತ್ರಿಗಳ ಮೂಲಕ ದೊರೆಯಿತೆಂದೂ ತಿಳಿಯುತ್ತದೆ. ಈ ಪ್ರತಿಯಲ್ಲಿ ಭಟ್ಟಹಲಾಯುಧನ ಕೃತಿಯ ಮೂಲಪಾಠ ಮತ್ತು ಅದಕ್ಕೆ ಟೀಕೆಯಿರುವ ಪಾಠ ಎರಡೂ ಬಂದಿವೆ. ಹಲಾಯುಧನ ಗ್ರಂಥಪಾಠವನ್ನು ಪರಿಷ್ಕರಿಸುವ ಉದ್ದೇಶ ಈ ಸಂಪಾದಕರದಲ್ಲವಾದರೂ ಮೂಲದ ಕೆಲವು ಅಸಾಧು ಪಾಠಗಳನ್ನು ಶುದ್ಧೀಕರಿಸಲು ಅವರು ಪ್ರಯತ್ನಿಸಿದ್ದಾರೆ; ಇಂಥ ಸಂದರ್ಭಗಳಲ್ಲಿ ಟೀಕಾಕಾರನು ಸ್ವೀಕರಿಸಿರುವ ಹಲಾಯುಧನ ಪ್ರತಿಯ ಮೂಲಪಾಠವನ್ನು ಗಮನದಲ್ಲಿಟ್ಟುಕೊಳ್ಳುವ ಎಚ್ಚರವನ್ನು ತೋರಲಾಗಿದೆ. ಪ್ರಸ್ತುತ ಪ್ರತಿಯಲ್ಲಿ ಕೊನೆಯ ೫೬ ಪದ್ಯಗಳೂ, ಅವರ ಟೀಕಾಭಾಗವೂ ಉಪಲಬ್ಧವಾಗಿಲ್ಲ. ಟೀಕೆಗೆ ಮೂಲವಾದ ಹಲಾಯುಧನ ಈ ಗ್ರಂಥಭಾಗವನ್ನು ಇತರ ಹಸ್ತಪ್ರತಿಗಳಿಂದ ತಿದ್ದಿ ಟೀಕಾರಹಿತವಾಗಿಯೇ ಅಚ್ಚುಮಾಡಿದೆ.

ಸಂಪಾದಿತ ಪಠ್ಯವನ್ನು ಅಚ್ಚುಮಾಡುವಾಗ ಮೊದಲು ದಪ್ಪಕ್ಷರಗಳಲ್ಲಿ ಮೂಲ ಹಲಾಯುಧನ ಕೃತಿಯ ಶ್ಲೋಕಗಳನ್ನು ಅಚ್ಚುಮಾಡಿದೆ. ಅದರ ಕೆಳಗೆ ಕನ್ನಡದ ಟೀಕಾಭಾಗವನ್ನು ದಪ್ಪಕ್ಷರಗಳಲ್ಲಿ ಅಚ್ಚುಮಾಡಿದೆ. ಅದರ ಕೆಳಗೆ ಹಲಾಯುಧನ ಕೃತಿಯ ಶ್ಲೋಕಗಳಿಗಿರುವ ಪಾಠಾಂತರಗಳನ್ನು ಕೊಟ್ಟಂತಿಲ್ಲ. ಆದರೆ ಅಡಿಟಿಪ್ಪಣಿಯ ಭಾಗದಲ್ಲಿ ಪ್ರತಿಯಲ್ಲಾಗಿರುವ ಲೋಪ, ಸ್ಖಾಲಿತ್ಯ, ಪುನರುಕ್ತಿ ವಿಷಯವನ್ನು ಅಲ್ಲಲ್ಲಿ ಸೂಚಿಸಿರುವುದುಂಟು. ಎರಡು ವಿಸ್ತಾರವಾದ ಪರಿಶಿಷ್ಟಗಳಿದ್ದು

ಮೊದಲನೆಯದು 'ಅಭಿಧಾನ ರತ್ನಮಾಲೆ'ಯ ಕರ್ಣಾಟಕ ಟೀಕೆಯಲ್ಲಿ ಬಳಕೆಯಾಗಿರುವ ಕನ್ನಡ ಪದಗಳ ವರ್ಣಾನುಕ್ರಮಣಿಕೆಯನ್ನೂ, ಎರಡನೆಯದು ಸಂಸ್ಕೃತ ಪದಗಳ ಅಕಾರಾದಿಯ ಅನುಕ್ರಮಣಿಕೆಯನ್ನೂ ಕುರಿತವು. ಎರಡೂ ಉಪಯುಕ್ತವಾದುವುಗಳೇ.

ಈ ಕೃತಿಯನ್ನು ಸಂಪಾದಿಸಲು ವಿಶೇಷವಾದ ಶ್ರಮವೇನೂ ಇಲ್ಲದಿರುವುದರಿಂದಲೂ, ಛಂದಸ್ಸು ವಿಷಯ ಭಾಷೆಗಳಿಗೆ ಸಂಬಂಧಿಸಿದಂತೆ ಹೆಚ್ಚು ತೊಂದರೆಗಳಿಲ್ಲದಿರುವುದರಿಂದಲೂ ಏಕೈಕ ಪ್ರತಿಯಿಂದಲೇ ಆ ಕೃತಿಯನ್ನು ಚೆನ್ನಾಗಿಯೇ ಸಂಪಾದಿಸಲಾಗಿದೆ. ಟೀಕೆಯೊಂದಿಗೆ ಮೂಲಪಾಠ ಹಲಾಯುಧನ ಗ್ರಂಥವನ್ನೂ ಪರಿಷ್ಕರಿಸಿರುವುದು ಉಪಯುಕ್ತವೂ ಉಲ್ಲೇಖನಾರ್ಹವೂ ಆಗಿದೆ. ಮೂಲಕೃತಿಗೆ ಸಂಬಂಧಿಸಿದಂತೆ ಮೂಲಪ್ರತಿಯಲ್ಲೂ, ಟೀಕೆಯಲ್ಲೂ ಅಲ್ಪಸ್ವಲ್ಪ ಗ್ರಂಥಪಾತವೂ, ಲಿಪಿಕಾರ ಸ್ಖಲಿತ್ಯಾದಿಗಳೂ ಇದ್ದು ಅವನ್ನು ಸರಿಪಡಿಸಿದೆ ಎಂಬ, "ಒಂದೇ ಒಂದು ಹಸ್ತಲಿಖಿತ ಪ್ರತಿಯ ಆಧಾರದಿಂದ ಯಾವುದೊಂದು ಪ್ರಾಚೀನಗ್ರಂಥವಾದರೂ ಸಮರ್ಪಕವಾಗಿಯೂ ಸಂಪೂರ್ಣವಾಗಿಯೂ ಮುದ್ರಿತವಾಗಲಾರದು" ಎಂಬ ವಿಶ್ಲೇಷಕ ಮಾತುಗಳನ್ನು ಸಂಪಾದಕರು ಆಡಿರುವುದು ಅವರಿಗಿದ್ದ ಗ್ರಂಥಸಂಪಾದನಾ ದೃಷ್ಟಿಯನ್ನು ತೋರುತ್ತದೆ.

(೮) ಔಷಧಿವಾಚಕ ಶಬ್ದಗಳನ್ನು ಸಂಗ್ರಹಿಸಿರುವ ಈ ಔಷಧಿಕೋಶವು ೧೯೬೦ರಲ್ಲಿ ಮದ್ರಾಸಿನ ಕನ್ನಡ ಗ್ರಂಥಮಾಲೆಯ ಏಳನೆಯ ಪುಸ್ತಕವಾಗಿ ಪ್ರಕಟವಾಗಿದೆ. ಈ ಪುಸ್ತಕಕ್ಕೆ ೬ ಪುಟಗಳ ಒಂದು ಚಿಕ್ಕ ಮುನ್ನುಡಿಯನ್ನು ಬರೆಯಲಾಗಿದೆ. ಮುನ್ನುಡಿಯ ಬಹುಭಾಗವು ಕೃತಿಕರ್ತ ಮತ್ತು ಕೃತಿವಸ್ತುವಿನ ವಿಷಯವನ್ನು ನಿರೂಪಿಸಲು ವಿನಿಯೋಗಿಸಲಾಗಿದೆ. ಇದನ್ನು ಅರಗದ ಒಂದು ಓಲೆಪ್ರತಿಯ ಆಧಾರದಿಂದ ಸಂಪಾದಿಸಲಾಗಿದೆ. ಈ ಹಸ್ತಪ್ರತಿಯ ಕೆಲವು ವೈಶಿಷ್ಟ್ಯಗಳನ್ನೂ ನಿರೂಪಿಸಲಾಗಿದೆ. ಹಸ್ತಪ್ರತಿಯಲ್ಲಿರುವ ಒಟ್ಟು ಓಲೆಗಳ ಸಂಖ್ಯೆ, ಪ್ರತಿಯ ಅಸಮಗ್ರತೆಯ ವಿಚಾರ, ಪ್ರತಿಯಲ್ಲಾಗಿರುವ ಗ್ರಂಥ ಮತ್ತು ಅರ್ಥಪಾತ, ವಿರಳವಾದ ಱ ಮತ್ತು ೞ ಬಳಕೆ, ಅನಾವಶ್ಯಕವಾಗಿ ಸಂಸ್ಕೃತ ಶಬ್ದಗಳಲ್ಲಿ ಱಕಾರ ಬಳಸಲ್ಪಟ್ಟಿರುವ ವಿಷಯ—ಇವನ್ನು ಪ್ರಸ್ತಾವನೆಯಲ್ಲಿ ಸ್ಪಷ್ಟವಾಗಿ ನಿರೂಪಿಸಿದೆ. ಬಳಸಲಾದ ಓಲೆಪ್ರತಿಯ ಸ್ಥಿತಿ, ಬರವಣಿಗೆಯ ಸ್ವರೂಪ ಹಾಗೂ ಅಲ್ಲಲ್ಲಿ ಬಳಕೆಯಾಗಿರುವ ಹೊಸಗನ್ನಡ ಪ್ರಯೋಗಗಳು ಇವನ್ನು ಅವಲಂಬಿಸಿ ಆ ಪ್ರತಿಯ ಕಾಲವನ್ನು ಸುಮಾರು ೧೯ನೆಯ ಶತಮಾನ ಎಂದು ನಿರ್ಧರಿಸಿದೆ. ಏಕೈಕ ಪ್ರತಿಯಿಂದಲೇ ಆದರೂ ಕೃತಿಯ ಉಪಯುಕ್ತತೆಯನ್ನು ಗಮನಿಸಿ ಪ್ರಕಟಿಸಲಾಗಿದೆ ಎಂದು ಮುನ್ನುಡಿಯಲ್ಲಿ ಸಂಪಾದಕರು ಹೇಳಿದ್ದಾರೆ. "ಒಂದು ಹಸ್ತಲಿಖಿತಪ್ರತಿಯ ಆಧಾರದಿಂದ ಯಾವುದೊಂದು ಪ್ರಾಚೀನ ಕಾವ್ಯವೂ ಅದ್ದು ಸಮರ್ಪಕವಾಗಿ ಮುದ್ರಿತವಾಗಲಾರದೆಂಬುದು [illegible] ಬಲ್ಲವರು [illegible] ಎಂಬ ವಿಶ್ಲೇಷಕ [illegible] ಎಚ್ಚರದ ಮಾತುಗಳನ್ನು ಸಂಪಾದಕರು

ಆಡಿರುವುದು ಉಲ್ಲೇಖನೀಯವಾಗಿದೆ. "ಈ ಓಲೆಯ ಪ್ರತಿಯ ಕೊನೆಯಲ್ಲಿ ದೊರಕುವ ಬರೆಯಲ್ಪಡದ ಒಂಬತ್ತು ಓಲೆಗಳು ಈ ಗ್ರಂಥದ ಕೊನೆಯಲ್ಲಿ ಈಗ ಬಿಟ್ಟು ಹೋಗಿರುವ ಭಾಗವನ್ನು ಬರೆಯಲು ಲೇಖಕನಿಂದ ಜೋಡಿಸಲ್ಪಟ್ಟವೆಂದು ಹೇಳಬಹುದು" ಎಂಬಂಥ ಪರಿಶೀಲನೆ ಮೆಚ್ಚುಗೆಗೆ ಅರ್ಹವಾದುದು.

ಈ ಕೃತಿಯು ಸಂಸ್ಕೃತ ಏಕಾರ್ಥವಾಚಕ ಶಬ್ದಗಳ ಕನ್ನಡ ಅರ್ಥ ನಿರೂಪಿಸುವ ಕೋಶವಾದುದರಿಂದ ಶಬ್ದಗಳನ್ನು ಉದ್ದಕ್ಕೂ ಒಂದರ ಕೆಳಗೆ ಒಂದರಂತೆ ಪಟ್ಟಿ ಮಾಡಲಾಗಿದೆ. ಸಂಸ್ಕೃತ ಶಬ್ದಗಳನ್ನು ದಪ್ಪಕ್ಷರದಲ್ಲೂ, ಮಗ್ಗುಲಲ್ಲೇ ಕನ್ನಡದವನ್ನು ಚಿಕ್ಕಕ್ಷರಗಳಲ್ಲೂ ಮುದ್ರಿಸಲಾಗಿದೆ. ಒಂದೇ ಪ್ರತಿಯಾದುದರಿಂದ ಅಡಿಟಿಪ್ಪಣಿಯಲ್ಲಿ ಪಾಠಾಂತರಗಳೇನೂ ಸೂಚಿತವಾಗಿಲ್ಲ. ಆದರೆ ಓಲೆಯಲ್ಲಿ ಕಂಡುಬರುವ ಕೆಲವು ಹೆಚ್ಚಿನ ಸಂಗತಿಗಳನ್ನು ನಿರೂಪಿಸಿದೆ. ಎಂದರೆ ನಡುನಡುವೆ ಲಿಪಿಕಾರನಿಂದಾದ ದೇವತಾಸ್ತುತಿ, ಗ್ರಂಥಗಲಿತವಾಗಿರುವ ವಿಚಾರ, ಲೋಪ ಪ್ರತಿನಿಧಾನ ಪುನರುಕ್ತಿಯೇ ಮುಂತಾದ ಲಿಪಿಸ್ಖಾಲಿತ್ಯ ವಿಷಯಗಳನ್ನು ಅಡಿಟಿಪ್ಪಣಿಯಲ್ಲಿ ನಿರೂಪಿಸಿದೆ. ಇದರಿಂದ ಬಳಸಿದ ಪ್ರತಿಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಂತಾಗುತ್ತದೆ. ಈ ಕೃತಿಯನ್ನು ಸಂಪಾದಿಸಲು ವಿಶೇಷವಾಗಿ ಶ್ರಮಿಸುವ ಅಗತ್ಯವಿಲ್ಲ. ಲಿಪಿಕಾರ ಸ್ಖಾಲಿತ್ಯಗಳನ್ನು ತಿದ್ದಿದರೆ ಸುಕರಪಾಠ ತಾನಾಗಿಯೇ ಒದಗುತ್ತದೆ. ಇಲ್ಲಿ ನಡೆದಿರುವುದಾದರೂ ಹೀಗೆಯೇ.

(೯) ಮೊದಲನೆಯ ಮಂಗರಾಜನ (ಸು. ೧೩೬೦) ವಿಷವೈದ್ಯ ಕೃತಿಯಾದ **‘ಖಗೇಂದ್ರಮಣಿ ದರ್ಪಣ’** ಎಂಬ ಕಂದವೃತ್ತಗಳ ಹಳಗನ್ನಡ ಕೃತಿಯನ್ನು ೧೯೪೩ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಒಂಬತ್ತನೆಯ ಕೃತಿಯಾಗಿ ಹೊರತಂದಿದ್ದಾರೆ. ೧೬ ಅಧಿಕಾರಗಳುಳ್ಳ ಈ ಕೃತಿಗೆ ಆರಂಭದಲ್ಲಿ ಮರಿಯಪ್ಪ ಭಟ್ಟರ ಪ್ರಸ್ತಾವನೆಯ ಅನಂತರ ೬ ಪುಟಗಳ ಚಿಕ್ಕ ಮುನ್ನುಡಿಯನ್ನೂ, ೧೨ ಪುಟಗಳ ಕವಿಕಾವ್ಯ ವಿಚಾರದ ಪೀಠಿಕೆಯನ್ನೂ [illegible] ಬರೆದಿದ್ದಾರೆ. ಮುನ್ನುಡಿ ಭಾಗದಲ್ಲಿ ಈ ಕೃತಿಗೆ ಬಳಸಲಾಗಿರುವ ಹಸ್ತಪ್ರತಿಗಳು, ಅವುಗಳ ಸ್ವರೂಪ, ಸಂಬಂಧ, ಸಂಕೇತ ಮತ್ತು ಅವು ಯಾರಿಂದ ದೊರೆತವು ಎಂಬ ವಿಚಾರವನ್ನೂ ಅನುಸರಿಸಿರುವ ಗ್ರಂಥಸಂಪಾದನಾ ವಿಧಾನವನ್ನೂ ವಿವರವಾಗಿ ತಿಳಿಸಲಾಗಿದೆ; ಉಳಿದ ಕವಿಕಾವ್ಯವಿಚಾರ ಭಾಗದಲ್ಲಿ ಮಂಗರಾಜನ ಕಾಲ, ಆತನ ಕೃತಿ ವಸ್ತು, ಆತನ ಆಶ್ರಯದಾತ ಮುಂತಾದುದನ್ನು ಕುರಿತಿದೆ. ಮುನ್ನುಡಿ ಭಾಗದಿಂದ ತಿಳಿಯುವ ಸಂಗತಿಗಳು ಇವು: ಈ ಕೃತಿಯನ್ನು ಪರಿಷ್ಕರಿಸಲು ಆರು ಹಸ್ತಪ್ರತಿಗಳನ್ನು ಬಳಸಿದೆ. ಅವುಗಳಲ್ಲಿ ಐದು ತಾಳೆಯೋಲೆ ಪ್ರತಿಗಳು, ಒಂದು ಕಾಗದದ ಪ್ರತಿ. ತಾಳಪತ್ರಗಳಲ್ಲಿ ಎರಡಕ್ಕೆ ಟೀಕೆ ಇದೆ. ಮದರಾಸಿನ ಪ್ರಾಚ್ಯಪುಸ್ತಕ ಭಂಡಾರದಲ್ಲಿಯೇ ಮತ್ತೊಂದು ಕಾಗದದ ಪ್ರತಿಯಿದ್ದು ಅದು ಉಪಲಬ್ಧವಾಗಿದ್ದರೂ,

ಆದು ಅಲ್ಲಿಯ ತಾಳಪತ್ರಪ್ರತಿಯು ಶಿಥಿಲವಾಗಿರುವುದರಿಂದ ಅದನ್ನು ಬಳಸಿಕೊಂಡಿಲ್ಲ. ಸಂಪಾದಕರು ತಿಳಿಸಿರುವ ಹಸ್ತಪ್ರತಿ ವಿವರಗಳಿವು: (i) ಮೈಸೂರಿನ ಬೊಮ್ಮರಸ ಪಂಡಿತರಿಂದ ಬಂದ "ಕ" ಎಂಬ ಓಲೆಪ್ರತಿ ೬೦೦ ವರ್ಷಗಳಷ್ಟು ಪ್ರಾಚೀನವಾದುದು ; ಇದರಲ್ಲಿ ಹದಿನಾಲ್ಕೂವರೆ ಅಧಿಕಾರಗಳು ಮಾತ್ರವಿವೆ. ಟೀಕೆ ಕೂಡ ೧೦ನೆಯ ಅಧಿಕಾರದ ಆರಂಭದವರೆಗೆ ಇದೆ. ಈ ಅಸಮಗ್ರ ಪ್ರತಿಯಲ್ಲಿ ಗ್ರಂಥಪಾತ, ಸ್ಖಾಲಿತ್ಯಗಳು ಹೆಚ್ಚಾಗಿವೆ. (ii) ಆರಾದ ಜೈನಭಂಡಾರದಿಂದ ದೊರೆತ "ಖ" ಎಂಬ ತಾಳೆಯೋಲೆ ಪ್ರತಿ ೩೦೦ ವರ್ಷಗಳಷ್ಟು ಹಿಂದಿನದು. ಸಮಗ್ರ ಪ್ರತಿಯಾದ ಇದರಲ್ಲಿ [illegible] ಟೀಕೆಯಿದೆ. ಇದರೊಂದಿಗೆ ಇತರ ಕೃತಿಗಳೂ ಸೇರಿವೆ. (iii) ಗೋವಿಂದ ಪೈಗಳ ಖಾಸಗಿ ಸಂಗ್ರಹದಲ್ಲಿದ್ದ "ಗ" ಎಂಬ ಕಾಗದದ ಪ್ರತಿ ಸಮಗ್ರವಾಗಿದೆ. ಆದರೆ ಇದರಲ್ಲಿ ಲೋಪ, ಪ್ರತಿಕಾರ ಪ್ರಮಾದ, ಸ್ಖಾಲಿತ್ಯ, ಅಧಿಕ ಶ್ಲೋಕಗಳ ಬಳಕೆಯಾಗಿದೆ. (iv) ಬೆಂಗಳೂರಿನ ನರಸಿಂಹ ಶಾಸ್ತ್ರಿಗಳಿಂದ ಬಂದ "ಘ" ಎಂಬ ಪ್ರತಿಯು ಅಸಮಗ್ರ. ಇದರಲ್ಲಿ ಸಂಕಲನಾರ್ಹವಾದ ಟೀಕಾ ಭಾಗಗಳಿವೆ. ಆಧುನಿಕರಿಂದ ಇದು ರಚಿತವಾಗಿರುವಂತಿದೆ. (v) ೩ ಅಧಿಕಾರಗಳು ಮಾತ್ರವಿರುವ ಮೂಡಬಿದರೆಯ ಲೋಕನಾಥಶಾಸ್ತ್ರಿಗಳಿಂದ ಬಂದ "ಙ" ಪ್ರತಿಯಲ್ಲಿ ಅನೇಕ ಶುದ್ಧಪಾಠಗಳಿವೆ. (vi) ಮೈಸೂರಿನ ಶ್ರೀನಿವಾಸಾಚಾರ್ಯರಿಂದ ದೊರೆತ ಒಂದು ಓಲೆಪ್ರತಿಯಲ್ಲಿ ೨೦ ಪದ್ಯಗಳಷ್ಟು ಪದ್ಯಭಾಗ ದೊರೆತಿದ್ದರೂ ಇದರ ಪಾಠ ತುಂಬ ಅಶುದ್ಧವಾದ್ದರಿಂದ ಇದನ್ನು ವಿಶೇಷವಾಗಿ ಲಕ್ಷಿಸಿಲ್ಲ.

ಗ್ರಂಥಸಂಪಾದನ ಸಂದರ್ಭದಲ್ಲಿ ಅನುಸರಿಸಬೇಕಾಗಿ ಬಂದ ರೀತಿಯನ್ನು ಹೀಗೆ ತಿಳಿಸಲಾಗಿದೆ: "ಆದಿಯಲ್ಲಿ ಎರಡು ಪ್ರತಿಗಳ ಆಧಾರದಿಂದ (ಮೈಸೂರು ಸರ್ಕಾರದ ಲೈಬ್ರರಿ ಮತ್ತು ಆರಾ ಜೈನ ಲೈಬ್ರರಿಗಳಲ್ಲಿರುವ ಪ್ರತಿಗಳು) ಗ್ರಂಥ ಶರೀರವು ರಚಿತವಾಯಿತು. ಬಳಿಕ, ಮೈಸೂರು ಬೊಮ್ಮರಸ ಪಂಡಿತರಿಂದ ದೊರಕಿದ ಪ್ರತಿಯ (ಇದರಲ್ಲಿ ಟೀಕಿರುವುದು) ಪಾಠಾಂತರವನ್ನು ಗುರ್ತಿಸಿದ ಪ್ರತಿಯು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಮುದ್ರಣಕ್ಕಾಗಿ ಕಳುಹಿಸಲ್ಪಟ್ಟಿತು. ಬಳಿಕ ಖಗೇಂದ್ರಮಣಿ ದರ್ಪಣದ ಬೇರೆ ಮೂರು ಹಸ್ತಲಿಖಿತಪ್ರತಿಗಳು ದೊರೆತ ಕಾರಣದಿಂದ ಈ ಗ್ರಂಥವು ಮತ್ತೆ ಮರಳಿ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಂದ ಹಿಂದಕ್ಕೆ ಬರಮಾಡಲ್ಪಟ್ಟು, ಆ ಮೂರು ಪ್ರತಿಗಳ ಪಾಠಾಂತರಗಳೊಡನೆ ಮುದ್ರಣಕ್ಕೆ ಸಿದ್ಧಪಡಿಸಲ್ಪಟ್ಟಿತು ; ಪ್ರಕೃತದಲ್ಲಿ ಈ ಗ್ರಂಥವು, ಗ್ರಂಥಪಾತ, ಗ್ರಂಥಸ್ಖಾಲಿತ್ಯ, ಗ್ರಂಥ ತ್ಯಜನ, ಮೊದಲಾದ ದೋಷಗಳಿಂದ ಸಾಧ್ಯವಾದಷ್ಟು ಮಟ್ಟಿಗೆ ದೂರವಾಗಿದ್ದರೂ, ಅಲ್ಲಲ್ಲಿ ಇನ್ನೂ ಅಲ್ಪ ಸ್ವಲ್ಪ ದೋಷಗಳು ಇಲ್ಲದೆ ಇಲ್ಲ ಎಂದು ಹೇಳಬಹುದು. ಇನ್ನೂ ಹಸ್ತಲಿಖಿತ ಪ್ರತಿಗಳು ದೊರಕುವುದಾದರೆ, ಸಂಪೂರ್ಣವಾಗಿ ಶುದ್ಧವಾಗುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ.'

ಅನಂತರದಕ್ಕೆಯೂ ಇರುತ್ತದೆ; ಇವು ವಿಷಯಭರಿತವೂ ಸಾಂಗವೂ ಆಗಿದ್ದರೂ ಕೃತಿ ಮುದ್ರಣವನ್ನೊಳಕೊಂಡಿಲ್ಲದಿರುವುದು ವಿಷಾದದ ಸಂಗತಿ; ವಿಷಯ ಸೂಚನೆ ಯಾವದೂ ತುಂಬ ದೀರ್ಘವಾಗಿಯೇ ಇರುತ್ತದೆ. (೩) ಈ ಗ್ರಂಥಸಂಪಾದನೆಗೆ ಸಂಬಂಧಿಸಿದಂತೆ ಆರಂಭದ ಕೃತಿಗಳಲ್ಲಿ ಯಾವ ಹಸ್ತಪ್ರತಿಗಳು ದೊರೆಯಿತೆಂಬುದರ ಉಲ್ಲೇಖಗಳಷ್ಟು ಮ, ತರುವಾಯದ ಕೃತಿಗಳಲ್ಲಿ ಅವುಗಳ ಸ್ಥೂಲ ಸ್ವರೂಪವನ್ನೂ, ಆ ತರುವಾಯದವಲ್ಲಿ ಸಂಕೇತದೊಂದಿಗೆ ಅವುಗಳ ಸ್ವರೂಪ, ಸಂಬಂಧ, ಪ್ರಾಚೀನತೆಗಳನ್ನು ವಿವರಿಸುವಂಥದಾಗಿವೆ; ಆರಂಭದಲ್ಲಿ ಕೆಲವೇ ಪ್ರತಿಗಳನ್ನು ಸಂಗ್ರಹಿಸಿ ಗ್ರಂಥವನ್ನು ಸಂಪಾದಿಸುವಂಥದು, ಕ್ರಮಕ್ರಮವಾಗಿ ಹೆಚ್ಚು ಹೆಚ್ಚು ಪ್ರತಿಗಳನ್ನು ಸಂಗ್ರಹಿಸಿ ಸಂಪಾದಿಸುವತ್ತ ನಡೆದಿವೆ; ಸಂರಕ್ಷಿತ ಏಕೈಕ ಪ್ರತಿ, ಪುತ್ರಿಕಾ ಪ್ರತಿ ಎಂಬ ಮಾತುಗಳನ್ನು ಬಳಸಿರುವುದಲ್ಲದೆ ಅವನ್ನು ಪತ್ತೆ ಕೂಡ ಹಚ್ಚಿದೆ. (೪) ಆರಂಭದ ಸಂಪಾದಿತ ಕೃತಿಗಳನ್ನು ಸಂಗ್ರಹಿಸಿದರೂ ಒಂದೇ ಒಂದನ್ನು ಆಧಾರ ಪ್ರತಿಯಾಗಿಟ್ಟುಕೊಂಡು, ಇತರ ಪ್ರತಿಗಳ ಪಾಠಾಂತರಗಳನ್ನು ಅನುಬಂಧ ರೂಪದಲ್ಲಿ ಕೊಡಲಾಗಿದೆ; ಆದರೆ ಆಧಾರಪ್ರತಿ ಯಾವುದೆಂಬುದನ್ನೂ, ಅದನ್ನು ಹೇಗೆ ನಿರ್ಣಯಿಸಲಾಯಿತೆಂಬುದನ್ನೂ, ಅನುಬಂಧದಲ್ಲಿ ಸೂಚಿತವಾಗಿರುವ ಪಾಠಗಳು ಯಾವ ಪ್ರತಿಗೆ ಸಂಬಂಧಪಟ್ಟವೆಂಬುದನ್ನೂ ಎಲ್ಲಿಯೂ ಸೂಚಿಸಿಲ್ಲ; ಆಧಾರಪ್ರತಿಯನ್ನುಳಿದು ಇತರ ಪ್ರತಿಗಳಲ್ಲಿ ಶುದ್ಧ ಪಾಠಗಳಿದ್ದರೂ ಅವನ್ನು ಲಕ್ಷಿಸಿಲ್ಲ; ಬರುಬರುತ್ತ ಈ ದೋಷಗಳು ಕಡಿಮೆಯಾಗಿದ್ದರೂ ಅದು ಅಲ್ಪ ಪ್ರಮಾಣದಲ್ಲಿ ಅಷ್ಟೆ; ತೀರ ಕಡೆಕಡೆಯ ಒಂದೆರಡು ಕೃತಿಗಳಲ್ಲಿ ಪ್ರತಿಗಳ ಕಾಲ ನಿರ್ಧರಿಸುವುದು, ಅವಕ್ಕೆ ಸಂಕೇತ ಕೊಡುವುದು, ಅವುಗಳಲ್ಲಿರುವ ಲಿಪಿಕಾರ ಪ್ರಶಸ್ತಿಯೇ ಇತ್ಯಾದಿಯನ್ನು ಸೂಚಿಸುವುದು, ಅವುಗಳ ನಡುವಣ ಸಂಬಂಧ ನಿರ್ಧರಿಸುವುದು ನಡೆದಿದೆ; ಎಲ್ಲಿಯೂ ಹಸ್ತಪ್ರತಿಗಳ ವಂಶವೃಕ್ಷವನ್ನು ರಚಿಸಿಕೊಟ್ಟಿಲ್ಲ. (೫) ಗ್ರಂಥಾಂತ್ಯದ ಅನುಬಂಧಗಳನ್ನು ಪ್ರಾಯಃ ಆರ್. ನರಸಿಂಹಾಚಾರ್ಯರನ್ನು ಅನುಸರಿಸಿಯೋ ಏನೋ ವೈವಿಧ್ಯಪೂರ್ಣವೂ, ಮಾಹಿತಿಭರಿತವೂ, ಅತ್ಯಂತ ಉಪಯುಕ್ತವೂ ಆಗಿಸುವೆಡೆ ಆರಂಭದ ಸಂಪಾದನಕೃತಿಯಿಂದಲೂ ಗಮನ ಹರಿಸಲಾಗಿದೆ. ಇವು ಸಾಮಾನ್ಯವಾಗಿ ಪದ್ಯಗಳ ಅಕಾರಾದಿ, ಮುಖ್ಯಪದಗಳ ಅಥವಾ ವಿಶಿಷ್ಟಶಬ್ದಗಳ ಸೂಚಿ, ಗ್ರಂಥದಲ್ಲಿ ಬಳಕೆಯಾಗಿರುವ ವೃತ್ತಜಾತಿ ಸೂಚಿ, ಗ್ರಂಥದ ಸಂಸ್ಕೃತಾಕರಗಳ ಉದ್ಧೃತ ಸೂಚಿಯೇ ಮುಂತಾದುವುಗಳಿಗೆ ಸಂಬಂಧಿಸಿರುತ್ತವೆ. ಎಷ್ಟೋ ಬಾರಿ ಈ ಪರಿಷ್ಕರಣಗಳ ಜೊತೆಗೆ ಈ ಅನುಬಂಧ ಅಥವಾ ಈ ಕೃತಿಯ ಉಪೋದ್ಘಾತ ಒರಹಗಳಲ್ಲಿಯೇ ಅಡಗಿವೆ ಎನ್ನುವಷ್ಟರ ಮಟ್ಟಿಗಿದೆ. ಇವು. (೬) ಆರಂಭದ ಕೃತಿಗಳಲ್ಲಿ ನಿಶ್ಚಿತವಾದ ಇಲ್ಲವೇ ವೈಜ್ಞಾನಿಕವಾದ ಯಾವುದೇ ಗ್ರಂಥಸಂಪಾದನಾ ತತ್ತ್ವಗಳನ್ನು ಬಳಸಿದಂತಿಲ್ಲ. ತರುವಾಯದ ಕೃತಿಗಳಲ್ಲಿ ಅವನ್ನು ರೂಢಿಸಿಕೊಳ್ಳುತ್ತ, ನಿಷ್ಠುರವಾಗಿ ಪಾಲಿಸುತ್ತ ಮುನ್ನಡೆಯಲಾಗಿದೆ. ಈ ಕಾರಣದಿಂದಲೇ ಕೊನೆಯದಾದ ಮಂಗರಾಜನ ಕೃತಿಯಲ್ಲಿ ಗ್ರಂಥಸಂಪಾದನ

ತತ್ತ್ವಗಳೆಲ್ಲದರ ಬಳಕೆಯನ್ನು ಕಾಣಬಹುದಾಗಿದೆ. ಈ ನಿಲುವಿಗೆ ತಲಪಲು ಬಿ. ಎಂ. ಶ್ರೀಕಂಠಯ್ಯನವರು ಮಾಡಿದ 'ಕವಿರಾಜಮಾರ್ಗ' ಪರಿಷ್ಕರಣದ ಹಾಗೂ ಡಿ. ಎಲ್. ನರಸಿಂಹಾಚಾರ್ಯರು ಮಾಡಿದ 'ಪುಷ್ಪದಂತ ಪುರಾಣ'ದ ವಿಮರ್ಶೆಯ ಗಮನಿಕೆಗಳೂ ಕಾರಣವಾಗಿರಬಹುದು. ಗ್ರಂಥಸಂಪಾದನೆಯ ತತ್ತ್ವಗಳಿಗೆ ಸಂಬಂಧಿಸಿದಂತೆ ತುಂಬ ವಿರಳವಾಗಿ ಒಂದೆರಡೆಡೆ ಕೆಲವು ವಾಕ್ಯಗಳಲ್ಲಿ ಪ್ರಸ್ತಾಪ ಮಾಡಿರುವುದುಂಟು.

—o—



ಗಂಗರಾಜ ನೀತಿಮಾರ್ಗನ ಶಾಸನ

# ಗ್ರಂಥಸಂಪಾದನೆಗೆ ಎಂ. ಮರಿಯಪ್ಪ ಭಟ್ಟರ ಕೊಡುಗೆ

---

**ಟಿ. ಆರ್. ಮಹಾದೇವಯ್ಯ**

ಕನ್ನಡ ನಾಡಿನ ಸುಪ್ರಸಿದ್ಧ ವಿದ್ವಾಂಸರೂ ಉದ್ದಾಮ ಭಾಷಾಶಾಸ್ತ್ರಜ್ಞರೂ ಆದ ಪ್ರೊ|| ಎಂ. ಮರಿಯಪ್ಪ ಭಟ್ಟರು ನೆರೆನಾಡಾದ ತಮಿಳುನಾಡಿನ ಮದ್ರಾಸು ವಿಶ್ವವಿದ್ಯಾಲಯದ ಕನ್ನಡ ಇಲಾಖೆಯಲ್ಲಿ ಮೂರು ದಶಕಗಳಿಗೂ ಮೇಲ್ಪಟ್ಟು ಸೇವೆ ಸಲ್ಲಿಸಿ ೧೯೬೭ರಲ್ಲಿ ನಿವೃತ್ತರಾದರು. ಇಂಗ್ಲೀಷ್, ಕನ್ನಡ, ತಮಿಳು, ತುಳು, ಮಲೆಯಾಳಂ ಮೊದಲಾದ ಭಾಷೆಗಳಲ್ಲಿ ನಿಷ್ಣಾತರಾಗಿದ್ದ ಭಟ್ಟರು ಪ್ರಾಧ್ಯಾಪಕರಾಗಿ ಬರೀ ಪಾಠ ಹೇಳುವುದರಲ್ಲಿಯೇ ತೃಪ್ತರಾಗಲಿಲ್ಲ. ಅವರು ಸಾಹಿತ್ಯ ಕ್ಷೇತ್ರದಲ್ಲಿ ಕೃಷಿಗೈದರು. ಅಧ್ಯಯನ, ಅಧ್ಯಾಪನ, ಸಂಶೋಧನ, ಸಂಪಾದನ—ಹೀಗೆ ಹಲವು ಮುಖವಾಗಿ ಸಾಗಿದ ಅವರ ಸಾಹಿತ್ಯಸೇವೆ ಅವರಿಗೆ ಸಾಕಷ್ಟು ಕೀರ್ತಿ ಪ್ರತಿಷ್ಠೆಗಳನ್ನು ದೊರಕಿಸಿಕೊಟ್ಟಿದೆ. ಅವರು ಸ್ವತಃ ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಭಾಷೆಯ ಇತಿಹಾಸ, ನಾಲ್ನುಡಿ ನಾಣ್ಣುಡಿ, ಕನ್ನಡ ಸಂಸ್ಕೃತಿ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಪ್ರೊ|| ಭಟ್ಟರು ಉತ್ತಮ ಕೋಶಕಾರರೂ ಹೌದು. ಅವರು ಸಂಪಾದಿಸಿದ ತುಳು–ಇಂಗ್ಲೀಷ್ ನಿಘಂಟು, ಕಿಟ್ಟೆಲ್ ಅವರ ಕನ್ನಡ–ಇಂಗ್ಲೀಷ್ ನಿಘಂಟಿನ ಪರಿಷ್ಕೃತ ಹಾಗೂ ವಿಸ್ತೃತ ಸಂಪಾದನೆಗಳು ಪ್ರಸಿದ್ಧವಾಗಿವೆ. ಅವರು ಕನ್ನಡ–ಕನ್ನಡ ಬೃಹತ್‌ಕೋಶದ ಸಂಪಾದಕ ಸಮಿತಿಯಲ್ಲಿ ಆರಂಭದಿಂದಲೂ ಸಕ್ರಿಯ ಸದಸ್ಯರಾಗಿದ್ದುಕೊಂಡು ಬಂದಿದ್ದಾರೆ. ಮದ್ರಾಸು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಹುದ್ದೆಯಿಂದ ನಿವೃತ್ತರಾದಮೇಲೆ ಕನ್ನಡ ನಿಘಂಟಿನ ಸಂಪಾದಕ ಸಮಿತಿಯ ಅಧ್ಯಕ್ಷರೂ, ಅದರ ಪ್ರಧಾನ ಸಂಪಾದಕರೂ ಆಗಿದ್ದರು. ಹೀಗಾಗಿ ಭಾಷಾಶಾಸ್ತ್ರದಲ್ಲಿದ್ದ ಅವರ ವಿಶಿಷ್ಟ ಜ್ಞಾನದ ಪ್ರಯೋಜನವನ್ನು ಕನ್ನಡ ನಿಘಂಟು ಪಡೆಯಲು ಸಾಧ್ಯವಾಯಿತು. ಅವರು ಮೈಸೂರು ವಿಶ್ವವಿದ್ಯಾಲಯದ ಇಂಗ್ಲೀಷ್–ಕನ್ನಡ ನಿಘಂಟಿನ ಸಂಪಾದಕ ಸಮಿತಿಯಲ್ಲಿದ್ದು ಕೆಲಸ ಮಾಡಿದ್ದೂ ಉಂಟು. ಹವ್ಯಕ ಭಾಷೆಯನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿದ್ದ ಅವರು ಅದರ ಕೋಶವನ್ನೂ ಸಿದ್ಧಗೊಳಿಸಿದ್ದಾರೆ. ಹೀಗೆ ಮರಿಯಪ್ಪ ಭಟ್ಟರು ದ್ರಾವಿಡಭಾಷಾ ಇತಿಹಾಸದಲ್ಲಿ ತಮ್ಮ ಹೆಸರು ಶಾಶ್ವತವಾಗಿ ನಿಲ್ಲುವಂತಹ ಸೇವೆಯನ್ನು ಸಲ್ಲಿಸಿದ್ದಾರೆ.

ಪ್ರೊ|| ಭಟ್ಟರ ದೃಷ್ಟಿ ಗ್ರಂಥಸಂಪಾದನೆಯ ಕಡೆಗೂ ಹರಿದುದು ನಮ್ಮ ನಾಡಿನ ಭಾಗ್ಯ. ಇದು ಅವರು ಮಾಡಿದ ಅತ್ಯಂತ ಮಹತ್ವದ ಕೆಲಸ. ಅಪ್ರಕಟಿತ ಪ್ರಾಚೀನ ಗ್ರಂಥಗಳನ್ನು ಬೆಳಕಿಗೆ ತರುವ ಮಹಾಕಾರ್ಯದಲ್ಲಿ ಭಟ್ಟರದು ಸಿಂಹಪಾಲು ಎನ್ನಬಹುದು. ತಮಿಳುನಾಡಿನ ಹಸ್ತಪ್ರತಿ ಕೋಶಾಗಾರದಲ್ಲಿದ್ದ ಕನ್ನಡದ ಅನೇಕ ಪ್ರಾಚೀನ ಗ್ರಂಥಗಳು ಮದ್ರಾಸು ವಿಶ್ವವಿದ್ಯಾಲಯದ ಕರ್ಣಾಟಕ ಗ್ರಂಥಮಾಲೆಯಲ್ಲಿ ಅರಳುವಂತಾದುದು ಅವರ ಪರಿಶ್ರಮ ಹಾಗೂ ಮುಂಗಾಣ್ಕೆಯ ಫಲವೆನ್ನಬೇಕು. ಹಸ್ತಪ್ರತಿಯಲ್ಲೇ ಉಳಿದಿರುವ ಪ್ರಾಚೀನ ಸಾರಸ್ವತ ಸಂಪತ್ತನ್ನು ರಕ್ಷಿಸಿಕೊಂಡು ಬರುವ ಹೊಣೆ ಬಹಳ ದೊಡ್ಡದು. ಅಂಥವನ್ನು ಪತ್ತೆಮಾಡಿ, ಪರಿಶೋಧಿಸಿ, ಲಭ್ಯವಿರುವ ಇತರ ಪ್ರತಿಗಳನ್ನು ದೊರಕಿಸಿಕೊಂಡು ಪಾಠಕ್ಲೇಶಗಳನ್ನು ಬಗೆಹರಿಸಿ, ಶುದ್ಧ ಪಾಠವನ್ನು ನಿರ್ಣಯಿಸಿ ಅಂದವಾಗಿ ಅಚ್ಚುಮಾಡಿಸಿ ಪ್ರಕಟಿಸುವುದು ಅತ್ಯಂತ ಜವಾಬ್ದಾರಿಯ ಕೆಲಸ. ಪ್ರೊ|| ಭಟ್ಟರು ಮದರಾಸು ಹಸ್ತಪ್ರತಿಕೋಶಾಗಾರದಲ್ಲಿ ದೊರೆತ ಹಸ್ತಪ್ರತಿಗಳನ್ನು ಕೈಗೆತ್ತಿಕೊಂಡು, ನಾಡಿನ ಬೇರೆಡೆಗೆ ದೊರೆಯುವ ಬೇರೆ ಬೇರೆ ಪ್ರತಿಗಳನ್ನು ತರಿಸಿಕೊಂಡು, ತಮ್ಮ ಇಲಾಖೆಯಲ್ಲಿ ಕೆಲಸಮಾಡುತ್ತಿದ್ದ ಪಂಡಿತರ ನೆರವನ್ನು ಪಡೆದು ಅನೇಕ ಕೃತಿಗಳನ್ನು ಶಾಸ್ತ್ರೋಕ್ತವಾಗಿ ಸಂಪಾದಿಸಿದ್ದಾರೆ. ಏಕೈಕ ಪ್ರತಿಯನ್ನು ಆಶ್ರಯಿಸಿ ಯಾವುದೇ ಗ್ರಂಥವನ್ನು ಸಂಪಾದಿಸುವುದು ಕಷ್ಟ. ಅದು ಅಶುದ್ಧವಾಗಿದ್ದರಂತೂ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಭಟ್ಟರು ಅಂತಹ ಸಾಹಸದ ವಿದ್ವತ್ಕಾರ್ಯಮಾಡಿ, ಸಿಕ್ಕಿರುವಷ್ಟಾದರೂ ಹೊರಬೀಳಲಿ, ಆ ಅಮೂಲ್ಯಗ್ರಂಥದ ಹಸ್ತಪ್ರತಿಗಳು ಅನ್ಯತ್ರ ದೊರೆತರೆ ಮುಂದೆ ಅದನ್ನು ಪರಿಷ್ಕರಿಸಬಹುದೆಂದು ಹೊರಗೆಡಹಿ ಮಹೋಪಕಾರ ಮಾಡಿದ್ದಾರೆ. ಸಂಪಾದಿತ ಕೃತಿಗಳ ಪ್ರಸ್ತಾವನೆಯಲ್ಲಿ ಕವಿಯ ಜೀವನ, ಕಾಲವಿಚಾರಗಳನ್ನು ಸಾಧಾರವಾಗಿ ಚರ್ಚಿಸಿ, ಕಾವ್ಯದ ಮೂಲ ಆಕರಗಳನ್ನು ಪರಿಶೀಲಿಸಿ, ಕಾವ್ಯದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳನ್ನು ದೀರ್ಘವಾಗಿ ಚರ್ಚಿಸಿ, ಕಾವ್ಯದ ಮೌಲ್ಯಮಾಪನ ನಡೆಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಅನೇಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಕಾವ್ಯದಲ್ಲಿ ದೊರೆಯುವ ಆಂತರಿಕ ಅಂಶಗಳನ್ನು, ಹೊರಗಿನಿಂದ ದೊರೆಯುವ ಇತರ ಅಂಶಗಳನ್ನು ತೌಲನಿಕವಾಗಿ ಚರ್ಚಿಸಿ ವಾಸ್ತವಿಕತೆಗೆ ಒತ್ತುಕೊಟ್ಟು ಅವರು ಕವಿ-ಕಾವ್ಯ ವಿಚಾರಗಳನ್ನು ವಿವೇಚಿಸಿದ್ದಾರೆ. ಕೃತಿಯಲ್ಲಿ ಪ್ರತಿಪಾದಿತವಾಗಿರುವ ವಿಷಯವನ್ನು ಅಥವಾ ನಿರೂಪವಾಗಿರುವ ಕಥೆಯನ್ನು ಸಂಗ್ರಹವಾಗಿ ಹೇಳಿ ಕವಿ ಮಾಡಿಕೊಂಡಿರಬಹುದಾದ ಮಾರ್ಪಾಡುಗಳ ವೈಚಿತ್ರ್ಯವನ್ನು ಕುರಿತು ಪ್ರಸ್ತಾವಿಸಿದ್ದಾರೆ. ಆಯಾ ಕಾವ್ಯದಲ್ಲಿರುವ ಕುಂದುಕೊರತೆಗಳನ್ನು, ಅಂತೆಯೇ ಮೇಲ್ಮೆಗಳನ್ನು ಎತ್ತಿತೋರಿಸಿದ್ದಾರೆ. ಕಾವ್ಯದಲ್ಲಿ ಚೆಲ್ಲಿ ಹೋಗಿರುವ ಗಾದೆ, ಶ್ಲೋಕ, ಸೂಕ್ತಿಗಳನ್ನು, ಅಪರೂಪದ ಶಬ್ದಗಳು ಮೊದಲಾದ ವಿಶೇಷಾಂಶಗಳನ್ನು ಅನುಬಂಧದಲ್ಲಿ ಅಳವಡಿಸಿ ಓದುಗರ ಗಮನ ಸೆಳೆದಿದ್ದಾರೆ.

ಹೀಗೆ ಪ್ರೊ|| ಎಂ. ಮರಿಯಪ್ಪ ಭಟ್ಟ ಅವರು ೬-೧೦ ಅಮೂಲ್ಯವಾದ ಪ್ರಾಚೀನಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅವರು ಸಂಪಾದಿಸಿ ಹೊರ ತಂದಿರುವ ಗ್ರಂಥಗಳು ಅವರ ಅಪೂರ್ವವಾದ ವಿದ್ವತ್ತನ್ನೂ ವ್ಯುತ್ಪತ್ತಿ ಜ್ಞಾನವನ್ನೂ ಗ್ರಂಥಸಂಪಾದನ ಪ್ರೌಢಿಮೆಯನ್ನೂ ತೋರಿಸುತ್ತವೆ. ಒಂದೊಂದು ಗ್ರಂಥಕ್ಕೂ ಅವರು ಬರೆದಿರುವ ಮುನ್ನುಡಿ, ಕವಿಕಾವ್ಯವಿಮರ್ಶೆ, ಕೊನೆಯಲ್ಲಿ ಅಳವಡಿಸಿರುವ ಅನುಬಂಧಗಳು, ಪರಿಶಿಷ್ಟಗಳು ಅವರ ಸಂಶೋಧಕ ದೃಷ್ಟಿ ಹಾಗೂ ವಿಮರ್ಶನ ಸಾಮರ್ಥ್ಯದ ದ್ಯೋತಕವಾಗಿವೆ. ಒಂದೆರಡು ಗ್ರಂಥಗಳಲ್ಲಿ ಇವುಗಳ ಕೊರತೆ ಕಂಡು ಬಂದರೂ ಒಟ್ಟಾರೆ ಕನ್ನಡ ಗ್ರಂಥಸಂಪಾದನೆಗೆ ಭಟ್ಟರ ಕೊಡುಗೆ ಅಪೂರ್ವವಾದುದು, ಮಹತ್ವಪೂರ್ಣವಾದುದು ಎಂದು ಹೇಳಿದರೆ ಅದು ಅತಿಶಯೋಕ್ತಿಯಾಗುವುದಿಲ್ಲ.

**ಛಂದಸ್ಸಾರ:** ಪ್ರೊ|| ಎಂ. ಮರಿಯಪ್ಪ ಭಟ್ಟ ಅವರು ಮದರಾಸು ಸರ್ಕಾರದ ಪ್ರಾಚ್ಯ ಹಸ್ತಪ್ರತಿ ಭಂಡಾರದಲ್ಲಿದ್ದ ಗುಣಚಂದ್ರನ 'ಛಂದಸ್ಸಾರ'ವನ್ನು ಮೊದಲಿಗೆ Annals of Oriental Research, vol. vi-ii, 1943. (ಪು. ೧-೩೬) ಇವರಲ್ಲಿ ಪ್ರಕಟಿಸಿದ್ದಾರೆ. ಈಚೆಗೆ ಎಲ್. ಬಸವರಾಜು ಅವರು, 'ಕನ್ನಡ ಛಂದಸ್ಸಂಪುಟ'ದಲ್ಲಿ (ಪು.೧೮೬-೨೧೭) ಮೈಸೂರಿನಲ್ಲಿ ದೊರೆತ ಇನ್ನೊಂದು ಪ್ರತಿಯನ್ನೂ ಬಳಸಿಕೊಂಡು ಅದನ್ನು ಸಂಪಾದಿಸಿ ಪ್ರಕಟಿಸಿದ್ದಾರೆ.

**ಖಗೇಂದ್ರಮಣಿದರ್ಪಣ:** ೧೯೪೨ ರಲ್ಲಿ ಪ್ರಕಟವಾದ ಈ ಗ್ರಂಥಕ್ಕೆ ಪ್ರೊ|| ಭಟ್ ಅವರು ಪ್ರಧಾನ ಸಂಪಾದಕರು. ಶ್ರೀ ಎ. ವೆಂಕಟರಾವ್ ಹಾಗೂ ಶ್ರೀ ಹೆಚ್. ಶೇಷಯ್ಯಂಗಾರ್ ಅವರು ಸಂಪಾದಕರು. ಗ್ರಂಥಾರಂಭದಲ್ಲಿ ೧೦ ಪುಟಗಳ ಪ್ರಸ್ತಾವನೆ ಇಂಗ್ಲಿಷಿನಲ್ಲಿದೆ. ಮೈಸೂರು ಪ್ರಾಚ್ಯಪುಸ್ತಕ ಭಂಡಾರ, ಆರಾದ ಕೇಂದ್ರ ಜೈನಪುಸ್ತಕ ಭಂಡಾರ, ಮೈಸೂರಿನ ಬೊಮ್ಮರಸ ಪಂಡಿತರು, ಮಂಜೇಶ್ವರದ ಗೋವಿಂದ ಪೈಗಳು, ಬೆಂಗಳೂರಿನ ಹೆಚ್. ನರಸಿಂಹ ಶಾಸ್ತ್ರಿ ಹಾಗೂ ಮೂಡಬಿದರೆ ಲೋಕನಾಥ ಶಾಸ್ತ್ರಿ-ಇವರಿಂದ ದೊರೆತ ಆರು ಹಸ್ತಪ್ರತಿಗಳ ನೆರವಿನಿಂದ ಮದ್ರಾಸಿನ ಪ್ರಾಚ್ಯ ಹಸ್ತಪ್ರತಿ ಭಂಡಾರದಲ್ಲಿ ಸಿಕ್ಕಿದ ಕೃತಿಯನ್ನು ಪರಿಷ್ಕರಿಸಿದ್ದಾರೆ. ಸಂಪಾದಕರ ಅರಿಕೆಯಾದನಂತರ ಕವಿಕಾವ್ಯವಿಚಾರ ೧೪ ಪುಟಗಳಲ್ಲಿ ನಿರೂಪಿತವಾಗಿದೆ. ಗ್ರಂಥಾಂತ್ಯದಲ್ಲಿ ಮೂರು ಪರಿಶಿಷ್ಟಗಳಿದ್ದು, ಪದ್ಯಗಳ ಅಕಾರಾದಿ ಹಾಗೂ ಕಾಶ್ಯಪ ಸಂಹಿತೆ-ಖಗೇಂದ್ರ ಮಣಿದರ್ಪಣಗಳ ಸಂವಾದಿ ವಿಸಂವಾದಿ ಭಾಗಗಳನ್ನು ಮಾದರಿಗಾಗಿ ಕೊಟ್ಟಿದ್ದಾರೆ. ಹೀಗೆ ಅಪುರೂಪದ ಈ ಗ್ರಂಥವು ತುಂಬಾ ಅಚ್ಚುಕಟ್ಟಾಗಿ ಶಾಸ್ತ್ರೋಕ್ತವಾಗಿ ಸಂಪಾದಿಸಲ್ಪಟ್ಟಿದೆ.

**ಸಂಗೀತ ರತ್ನಾಕರ:** ಮದರಾಸು ಸರ್ಕಾರದ ಪ್ರಾಚ್ಯ ಹಸ್ತಪ್ರತಿ ಕೋಶಾಗಾರದ ಟಿ. ಚಂದ್ರಶೇಖರನ್ ಅವರೂ ಪ್ರಧಾನ ಸಂಪಾದಕತ್ವದಲ್ಲಿ ಪ್ರೊ|| ಮರಿಯಪ್ಪ ಭಟ್ಟರೂ ೧೯೫೦ರಲ್ಲಿ ಸಂಪಾದಿಸಿದ್ದಾರೆ. ಗ್ರಂಥಾರಂಭದಲ್ಲಿ ಇಂಗ್ಲಿಷ್ ಮತ್ತು ಕನ್ನಡದಲ್ಲಿ ಪ್ರಸ್ತಾವನೆ ಇದೆ. ಶುದ್ಧವಾಗಿದ್ದ ಒಂದು ಕಾಗದ

ಪ್ರತಿಯಿಂದ ಇದು ಮೂಡಿ ಬಂದಿದೆ. ಪ್ರಸ್ತಾವನೆಯಲ್ಲಿ ಭಾರತೀಯ ಸಂಗೀತ ಶಾಸ್ತ್ರದ ಸಂಕ್ಷಿಪ್ತ ಚರಿತ್ರೆಯನ್ನು ಸ್ಥೂಲವಾಗಿ ನಿರೂಪಿಸಿರುವುದಲ್ಲದೆ ಕನ್ನಡದಲ್ಲಿ ಸಂಗೀತ ಶಾಸ್ತ್ರಜ್ಞಾನ ಬೆಳೆದ ಬಗೆಯನ್ನು ವಿವೇಚಿಸಿದ್ದಾರೆ. ಗ್ರಂಥಕರ್ತೃವಿನ ಬಗ್ಗೆ ಹೆಚ್ಚು ಉಲ್ಲೇಖಿಸಲು ಗ್ರಂಥದ ಯಾವ ಭಾಗದಿಂದಲೂ ಗ್ರಂಥಕಾರನ ಹೆಸರು ಗೊತ್ತಾಗುವುದಿಲ್ಲ. ಅವನ ಕಾಲದೇಶಾದಿ ವಿವರಗಳೂ ಸಹ ದುರ್ಲಭ. ಆದರೂ ಸಂಪಾದಕರು ಆಂತರಿಕ ಆಧಾರಗಳಿಂದ ಗ್ರಂಥರಚನೆಯ ಕಾಲವನ್ನು ಊಹಿಸಿದ್ದಾರೆ. ಅನಂತರ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ವಿಷಯವನ್ನು ಕುರಿತು ಪ್ರಸ್ತಾಪಮಾಡಿದ್ದಾರೆ. ಸಂಪೂರ್ಣ ಶಾಸ್ತ್ರೀಯವಾದ ಈ ಗ್ರಂಥ ಸಂಗೀತಶಾಸ್ತ್ರಾಧ್ಯಯನಕ್ಕೆ ಒಳ್ಳೆಯ ಕೊಡುಗೆ.

**ಅಭಿನವಾಭಿಧಾನಂ** (ಮಂಗರಾಜ ನಿಘಂಟು): ೧೯೫೫ರಲ್ಲಿ ಮೊದಲಿಗೆ ಪ್ರಕಟವಾದ ಈ ಕೃತಿಯನ್ನೂ ಅವರು ಮದರಾಸು ಪ್ರಾಚ್ಯ ಹಸ್ತಪ್ರತಿಭಂಡಾರದ ಪ್ರತಿಯೊಂದಿಗೆ ಮೈಸೂರು ಪ್ರಾಚ್ಯಪುಸ್ತಕ ಭಂಡಾರದ ಒಂದು ಪ್ರತಿ ಹಾಗೂ ಶ್ರವಣಬೆಳಗೊಳದ ಜೈನಮಠದ ಇನ್ನೊಂದು ಪ್ರತಿಯ ನೆರವಿನಿಂದ ಪರಿಷ್ಕರಿಸಿ ಸಂಪಾದಿಸಿದ್ದಾರೆ. ಕಿಟ್ಟೆಲ್ ಅವರು ತಮ್ಮ ಕೋಶದಲ್ಲಿ (Kannada-English Dictionary) ಮಂಗರಾಜನ ಕೋಶದ ಹಸ್ತಪ್ರತಿಯೊಂದನ್ನು ಬಳಸಿಕೊಂಡಿದ್ದಾರೆ. ಅದು ದೊರೆತಿದ್ದರೆ ಪರಿಷ್ಕರಣ ಇನ್ನಷ್ಟು ಶುದ್ಧವಾಗಿರುತ್ತಿತ್ತು. ಗ್ರಂಥಾರಂಭದಲ್ಲಿ ಅಲ್ಲಿನ ಪದ್ಧತಿಯಂತೆ ಇಂಗ್ಲಿಷು ಮತ್ತು ಕನ್ನಡ ಎರಡು ಭಾಷೆಗಳಲ್ಲೂ ಪ್ರಾಸ್ತಾವಿಕ ಮಾತುಗಳುಂಟು. ಪ್ರೊ|| ಭಟ್ಟರು ಒಂಬತ್ತು ಪುಟಗಳ ಮುನ್ನುಡಿಯಲ್ಲಿ ಕನ್ನಡ ನಿಘಂಟುಗಳ ಬೆಳವಣಿಗೆಯನ್ನು ಕುರಿತು ಪ್ರಸ್ತಾಪಿಸಿದ್ದಾರೆ. ಕಬ್ಬಿಗರ ಕೈಪಿಡಿ, ಚತುರಾಸ್ಯ ನಿಘಂಟು, ಕರ್ಣಾಟಕ ಶಬ್ದ ಮಂಜರಿ, ಕರ್ಣಾಟಕ ಸಂಜೀವನಂ, ಭಾರತ ನಿಘಂಟು ಮೊದಲಾದ ಪ್ರಾಚೀನ ಕೋಶಗಳನ್ನು ಪರಿಚಯಿಸಿದ್ದಾರೆ. ಅನಂತರ ಕವಿ-ಕಾವ್ಯ ವಿಮರ್ಶೆ ಮಾಡಿದ್ದಾರೆ. ಅಲ್ಲಿ ಆ ಕೃತಿಯು ಶಬ್ದಾರ್ಥ ಜ್ಞಾನದ ಜೊತೆಗೆ ವಿವಿಧ ಕಲೆಗಳ, ಶಾಸ್ತ್ರಗಳ ಅಲ್ಪ ಪರಿಚಯವನ್ನು ಹೇಗೆ ಮಾಡಿಕೊಡುತ್ತದೆ ಎಂಬುದನ್ನು ತೋರಿಸಿದ್ದಾರೆ. ಗ್ರಂಥದ ಕೊನೆಯಲ್ಲಿ ೧೫೫ ಪುಟಗಳಷ್ಟು ಶಬ್ದಗಳ ಅಕಾರಾದಿ ಪಟ್ಟಿ ಇದೆ. ನಿಘಂಟಿಗೆ ಅತ್ಯವಶ್ಯವಾದ ಭಾಗ ಇದು. ಕೊನೆಯಲ್ಲಿ ಒಪ್ಪೋಲೆಯೂ ಇದೆ. ಈ ಪ್ರಾಚೀನ ನಿಘಂಟು ಶಾಸ್ತ್ರೋಕ್ತವಾಗಿ ಸಂಪಾದಿತವಾಗಿ ಚೆನ್ನಾಗಿ ಅಚ್ಚಾಗಿದೆ.

**ಸದ್ಗುರು ರಹಸ್ಯ**: ೧೯೫೫ರಲ್ಲಿ ಮದರಾಸು ವಿಶ್ವವಿದ್ಯಾಲಯದಿಂದ ಪ್ರಕಟವಾದ ಈ ಗ್ರಂಥವನ್ನು ಪ್ರೊ|| ಭಟ್ಟರು ಮದರಾಸು ಪ್ರಾಚ್ಯ ಹಸ್ತಪ್ರತಿಭಂಡಾರದ ಮೂರು ತಾಳೆಯೋಲೆ ಪ್ರತಿಗಳ ಸಹಾಯದಿಂದ ಸಂಪಾದಿಸಿದ್ದಾರೆ. ಚೆನ್ನಾಗಿರುವ ಮೂರು ಪ್ರತಿಗಳು ಸಿಕ್ಕಿದ್ದರಿಂದ ಶುದ್ಧವಾದ ಪಾಠವನ್ನು ನಿರ್ಣಯಿಸಲು ಸಾಧ್ಯವಾಯಿತೆಂದು ಅವರು ಹೇಳಿದ್ದಾರೆ. ಗ್ರಂಥಾರಂಭದಲ್ಲಿ ೭೦ ಪುಟಗಳ ಕವಿಕಾವ್ಯ

ಪರಿಚಯಿಸಿದೆ. ಗುಣಭದ್ರನ ಪದ್ಯಕಾವ್ಯಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಪ್ರಸ್ತುತ ಗ್ರಂಥವನ್ನು ವಿಮರ್ಶಿಸಲಾಗಿದೆ. ಕವಿಯ ಉಳಿದ ಕಾವ್ಯಗಳನ್ನು ಪ್ರಕಟಿಸುವ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಗ್ರಂಥದ ಕೊನೆಯಲ್ಲಿ ಯಾವುದೇ ಅನುಬಂಧಗಳಿಲ್ಲ. ಅವಶ್ಯವಾಗಿಬೇಕಾದ ಪದ್ಯಗಳ ವರ್ಣಾನುಕ್ರಮಣಿಕೆ, ಪಾರಿಭಾಷಿಕ ಶಬ್ದಾರ್ಥ ವಿವರಣೆ ಇತ್ಯಾದಿಗಳು ಇಲ್ಲದೆ ಕೊರತೆಯೆನಿಸಿದೆ. ಈ ಗ್ರಂಥ ೧೯೬೭ರಲ್ಲಿ ಧಾರವಾಡದ ಮುರುಘಾಮಠದಿಂದ ಡಾ|| ಎಂ. ಎಸ್. ಸುಂಕಾಪುರ ಮತ್ತು ಪಂ. ನಾಗಭೂಷಣ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಮತ್ತೆ ಪ್ರಕಟವಾಗಿದೆ.

**ವರ್ಧಮಾನ ಪುರಾಣ:** ೧೯೩೭ರಲ್ಲಿ ಪ್ರೊ|| ಎಂ. ಮರಿಯಪ್ಪ ಭಟ್ಟರು ಶ್ರೀ ಎಂ. ಗೋವಿಂದ ರಾವ್ ಅವರೊಡನೆ ಇದನ್ನು ಸಂಪಾದಿಸಿ ಮದರಾಸು ವಿಶ್ವವಿದ್ಯಾಲಯದ ಮೂಲಕ ಹೊರತಂದಿದ್ದಾರೆ. ಇದನ್ನು ಆರಾ ಕೇಂದ್ರ ಜೈನ ಪುಸ್ತಕ ಭಂಡಾರದಿಂದ ದೊರೆತ ಏಕೈಕ ತಾಳೆಯೋಲೆ ಪ್ರತಿಯಿಂದ ಸಂಪಾದಿಸಿದ್ದಾರೆ. ಬೇರೆ ಪ್ರತಿಗಳನ್ನು ದೊರಕಿಸಿಕೊಳ್ಳಲು ಪ್ರಯತ್ನ ಮಾಡಿ ವಿಫಲರಾದುದಾಗಿ ಅವರು ಹೇಳಿದ್ದಾರೆ. ಹೀಗಾಗಿ ಗ್ರಂಥದಲ್ಲಿ ಗ್ರಂಥಪಾತಗಳೂ, ಸ್ಖಾಲಿತ್ಯಗಳೂ ಉಳಿದಿವೆ. ಗ್ರಂಥದ ಆರಂಭದಲ್ಲಿ ಕವಿಕಾವ್ಯ ವಿಚಾರವು ೩೦ ಪುಟಗಳಿಗೂ ಹೆಚ್ಚು ವಿಸ್ತಾರವಾಗಿ ಬಂದಿದೆ. ಗ್ರಂಥಾಂತ್ಯದಲ್ಲಿ ಎರಡು ಅನುಬಂಧಗಳಲ್ಲಿ ಶಾಸನಗಳಲ್ಲಿ ಬರುವ ರೇಚಣನ ವರ್ಣನೆ ಹಾಗೂ ಚಾವುಂಡರಾಯ ಕೃತ ವರ್ಧಮಾನ ಪುರಾಣವನ್ನು ಕೊಟ್ಟಿದೆ. ಪದ್ಯಗಳ ಅಕಾರಾದಿ ಇಲ್ಲ. ಪ್ರೊ|| ತ. ಸು. ಶಾಮರಾಯರು ಸಂಶೋಧನಾತ್ಮಕವಾಗಿ ಪರಿಷ್ಕರಿಸಿ ಅನುವಾದ ಸಹಿತ ಸಂಪಾದಿಸಿ ೧೯೭೩ರಲ್ಲಿ ಭಾರತೀಯ ಜ್ಞಾನಪೀಠ ಪ್ರಕಾಶನವಾಗಿ ಹೊಸಕೃತಿ ಹೊರಬೀಳುವವರೆಗೆ ಇದೇ ಆಧಾರಗ್ರಂಥವಾಗಿತ್ತು.

**ಪಾರ್ಶ್ವನಾಥಪುರಾಣ:** ೧೯೩೪ರಲ್ಲಿ ಪ್ರೊ|| ಎಂ. ಎಂ. ಭಟ್ಟ ಅವರು ಎಂ. ಗೋವಿಂದರಾವ್ ಅವರೊಡನೆ ಸಂಪಾದಿಸಿದ್ದಾರೆ. ಮದ್ರಾಸು ಪ್ರಾಚ್ಯ ಹಸ್ತಪ್ರತಿಭಂಡಾರದ ಪ್ರತಿಯ ಜೊತೆಗೆ ಮೈಸೂರು ಪ್ರಾಚ್ಯ ಹಸ್ತಪ್ರತಿ ಕೋಶಾಗಾರದ ಪ್ರತಿಯನ್ನು ಬಳಸಿಕೊಂಡು ಸಂಪಾದಿಸಿದ್ದಾರೆ. ಇವೆರಡರಲ್ಲೂ ಅನೇಕ ದೋಷಗಳಿದ್ದರೂ 'ಯದೃಚ್ಛಾ ಲಾಭ ಸಂತುಷ್ಟಂ' ಎಂದು ಇದ್ದುದನ್ನೇ ಪ್ರಕಟಿಸಿದ್ದಾರೆ. ಗ್ರಂಥಾರಂಭದಲ್ಲಿ ಒಂಬತ್ತು ಪುಟಗಳು ಇಂಗ್ಲಿಷಿನಲ್ಲಿ ಪ್ರಸ್ತಾವನೆ ಇದೆ. ೩೭ ಪುಟಗಳ ಕವಿಕಾವ್ಯ ವಿಮರ್ಶೆ ಇದೆ. ಗ್ರಂಥದ ಕೊನೆಯಲ್ಲಿ ಕವಿ ಪ್ರಯೋಗಿಸಿರುವ ಅಪೂರ್ವ ಪದಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಪದ್ಯಗಳ ಅಕಾರಾದಿಯಿಲ್ಲ. ಮೈಸೂರಿನ ಎನ್. ಬಿ. ಪದ್ಮರಸ ಪಂಡಿತರು ಇದನ್ನು ಮತ್ತೆ ೧೯೫೭ರಲ್ಲಿ ಗದ್ಯಾನುವಾದ ಸಮೇತ ಸಂಪಾದಿಸಿ ಸನ್ಮತಿಗ್ರಂಥಮಾಲೆಯ ಮೂಲಕ ಪ್ರಕಟಿಸಿದ್ದಾರೆ.

**ಜಾತಕ ತಿಲಕಂ:** ಕನ್ನಡದ ಈ ಮೊಟ್ಟಮೊದಲ ಜ್ಯೋತಿಷ ಗ್ರಂಥದಲ್ಲಿ ಪ್ರೊ|| ಭಟ್ಟರು ಎಂ. ಗೋವಿಂದರಾವ್ ಅವರ ಜೊತೆ ೧೯೩೩ರಲ್ಲಿ ಎರಡು ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿದ್ದಾರೆ. ಆರಂಭದಲ್ಲಿ ಇಂಗ್ಲಿಷಿನಲ್ಲಿ ೫ ಪುಟ,

ಕನ್ನಡದಲ್ಲಿ ೧೩ ಪುಟಗಳ ಪ್ರಸ್ತಾವನೆ ಇದೆ. ಅದರಲ್ಲಿ ಜ್ಯೋತಿಶ್ಶಾಸ್ತ್ರವು ನಡೆದು ಬಂದ ದಾರಿಯನ್ನು ಪರಿಚಯಮಾಡಿಸಿ ಕವಿ-ಕಾವ್ಯವನ್ನು ಕುರಿತು ವಿವೇಚಿಸಿದ್ದಾರೆ. ಶ್ರೀಧರಾಚಾರ್ಯನ ಗ್ರಂಥಕ್ಕೆ ವರಾಹಮಿಹಿರನ ಬೃಹಜ್ಜಾತಕವು ಹೇಗೆ ಆಧಾರವಾಗಿದೆ ಎಂಬುದನ್ನು ತಿಳಿಸಿದ್ದಾರೆ. ಗ್ರಂಥಪ್ರತಿಪಾದ್ಯವಿಷಯವೆಂಬ ಶೀರ್ಷಿಕೆಯಡಿಯಲ್ಲಿ ಜಾತಕತಿಲಕದ ವಸ್ತುವನ್ನು ಕುರಿತು ವಿಮರ್ಶಿಸಿದ್ದಾರೆ. ಗ್ರಂಥಾಂತ್ಯದ ಅನುಬಂಧದಲ್ಲಿ ಉಪಯುಕ್ತವಾದ ಶಬ್ದಸೂಚಿಯಿದೆ. ಮುಂದೆ ೧೯೫೯ ರಲ್ಲಿ ಎಸ್. ಎಸ್. ಕೃಷ್ಣಜೋಯಿಸ್ ಅವರು ಸಂಪಾದಿಸಿ ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯ ವಿದ್ಯಾ ಸಂಶೋಧನಾಲಯದಿಂದ ಇದು ಪ್ರಕಟವಾಯಿತು.

**ವ್ಯವಹಾರ ಗಣಿತ :** ಮದರಾಸಿನ ಪ್ರಾಚ್ಯಹಸ್ತಪ್ರತಿ ಭಂಡಾರದ ಮೂರು ಪ್ರತಿಗಳ ಸಹಾಯದಿಂದ ಪ್ರೊ|| ಭಟ್‌ರವರು ೧೯೫೬ರಲ್ಲಿ ಸಂಪಾದಿಸಿದ್ದಾರೆ. ಆ ಯಾವ ಪ್ರತಿಗಳೂ ಸಮಗ್ರವಾಗಿಲ್ಲದೆ, ಅಕ್ಷರ ಸ್ಖಾಲಿತ್ಯ, ಛಂದೋಭಂಗ, ಅಪಪಾಠಗಳು ಯಥೇಚ್ಛವಾಗಿದ್ದು ಸಾಕಷ್ಟು ಅಚ್ಚಿನ ತಪ್ಪುಗಳೂ ಇವೆ. ವಿಷಯಗಳ ಹರಿವಿಡಿ ಕೂಡ ಕ್ರಮಬದ್ಧವಾಗಿಲ್ಲ. ಗ್ರಂಥ ಇನ್ನೂ ಅಪೂರ್ಣವಾಗಿರಬೇಕು ಎಂಬ ಸಂಶಯಕ್ಕೂ ಆಸ್ಪದವಿದೆ. ಆದರೆ ಅಪೂರ್ವಕೃತಿಯೊಂದು ಸಿಕ್ಕಷ್ಟಾದರೂ ಹೊರಬಂತಲ್ಲಾ ಎಂದು ಸಮಾಧಾನಪಡಬೇಕಾಗಿದೆ. ಸಿಕ್ಕ ಗ್ರಂಥ ಅಶುದ್ಧ ಹಾಗೂ ಅಸಮಗ್ರವಾದ್ದರಿಂದ ಗ್ರಂಥಾಂತ್ಯದಲ್ಲಿ ಶಾಸ್ತ್ರೀಯವಾಗಿ ಇರಬೇಕಾದ ಶಬ್ದಕೋಶವಾಗಲೀ ಪದ್ಯಗಳ ಅನುಕ್ರಮಣಿಕೆಯಾಗಲೀ ಇಲ್ಲದೆ ಪುಸ್ತಕದ ಕೊರತೆಯನ್ನು ಹೆಚ್ಚಿಸಿದೆ. ಹೀಗೆ ಈ ಕೃತಿ ಇನ್ನೊಂದು ಶುದ್ಧ ಹಸ್ತಪ್ರತಿಯನ್ನು ನಿರೀಕ್ಷಿಸುತ್ತಾ ಪುನಃಪರಿಷ್ಕರಣಕ್ಕೆ ಕಾದು ಕೂತಿದೆ.

**ವಿಷ್ಣುಪುರಾಣಂ** (ಪಂಚಮಾಂಶ): ಪ್ರೊ|| ಭಟ್ಟ ಅವರು ಎಂ. ಗೋವಿಂದ ರಾವ್ ಅವರೊಡನೆ ೧೯೫೬ರಲ್ಲಿ ಸಂಪಾದಿಸಿದ್ದಾರೆ. ಮದರಾಸಿನ ಹಾಳೆಗರಿ ಪುಸ್ತಕದ ಜೊತೆಗೆ ಮೈಸೂರು ಪ್ರತಿಯನ್ನು ಪರಿಶೀಲಿಸಿ ಗ್ರಂಥಪಾತ ಹಾಗೂ ಸಂದಿಗ್ಧ ಪಾಠಗಳನ್ನು ಸರಿಪಡಿಸಿದ್ದಾರೆ. ಆರಂಭದಲ್ಲಿ ಸಾಂಪ್ರದಾಯಿಕವಾಗಿ ೩ ಪುಟಗಳ ಇಂಗ್ಲಿಷ್ ಪ್ರಸ್ತಾವನೆಯೂ ೧೪ ಪುಟಗಳ ಕವಿಕಾವ್ಯ ವಿಚಾರಗಳೂ ಬಂದಿವೆ. ಗ್ರಂಥಾಂತ್ಯದಲ್ಲಿ ಅವಶ್ಯವಾದ ಅರ್ಥಕೋಶವಾಗಲೀ, ಪದ್ಯಗಳ ಅಕಾರಾದಿಯಾಗಲೀ ಇಲ್ಲ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಿಂದ ೧೯೬೦ರಲ್ಲಿ ಶ್ರೀ ಬಿ. ವಿ. ನರಸಿಂಹಯ್ಯನವರ ಸಂಪಾದಕತ್ವದಲ್ಲಿ ವಿಷ್ಣುಪುರಾಣದ ಉತ್ತರಾರ್ಧ ಹೊರಬಂದಿದೆ.

**ತುಳು–ಇಂಗ್ಲಿಷ್ ನಿಘಂಟು :** ಪ್ರೊ|| ಎಂ. ಎಂ. ಭಟ್ಟ ಅವರು ಶಂಕರ ಕೆದಿಲಾಯ ಅವರೊಡನೆ ಸಂಪಾದಿಸಿ ೧೯೬೭ರಲ್ಲಿ ಮದರಾಸು ವಿಶ್ವವಿದ್ಯಾಲಯದಿಂದ ಪ್ರಕಟಿಸಿದ್ದಾರೆ. ಹಿಂದೆ ಇದ್ದ ಮಾನರ್ ಅವರ ತುಳುಕೋಶದಲ್ಲಿ ಅನೇಕ ಸಂಸ್ಕೃತ ಮತ್ತು ಕನ್ನಡ ಪದಗಳು ಸೇರಿದ್ದವೆಂದೂ, ಅವನ್ನು ತೆಗೆದುಹಾಕಿ ತುಳು ದೇಶ್ಯಶಬ್ದ

ಗಳನ್ನೇ ಉಳಿಸಿ (ಸು. ೮೦೫೦ ಮುಖ್ಯ ಉಲ್ಲೇಖಗಳು) ತೌಲನಿಕ ಅಧ್ಯಯನಕ್ಕೆ ನೆರವಾಗುವಂತೆ ಮಾಡಿರುವುದಾಗಿ ಅವರು ಹೇಳಿದ್ದಾರೆ. ಕೋಶದ ಆರಂಭದ ೧೨ ಪುಟಗಳಲ್ಲಿ ತುಳು ಭಾಷಾ ಸಾಹಿತ್ಯದ ಬಗ್ಗೆ ಪ್ರಸ್ತಾವನೆ ಇದ್ದು ಅನಂತರ ಈ ನಿಘಂಟು ರಚನೆಯಲ್ಲಿ ಬಳಸಿರುವ ತಂತ್ರಗಳ ವಿವರಣೆ ಇದೆ.

**ಕಿಟ್ಟೆಲ್ ಅವರ ಕನ್ನಡ ಇಂಗ್ಲಿಷ್ ನಿಘಂಟು:** ರೆ. ಫರ್ಡಿನೆಂಡ್ ಕಿಟ್ಟೆಲ್ ಅವರು ೧೮೯೪ರಲ್ಲಿ ಒಂದೇ ಸಂಪುಟದಲ್ಲಿ ಪ್ರಕಟಿಸಿದ ಈ ಬೃಹತ್‌ಕೋಶದ ಪರಿಷ್ಕೃತ ಮತ್ತು ವಿಸ್ತೃತ ಸಂಪಾದನೆಯನ್ನು ಪ್ರೊ॥ ಎಂ. ಮರಿಯಪ್ಪಭಟ್ಟರು ನಾಲ್ಕು ಸಂಪುಟಗಳಲ್ಲಿ ಮದ್ರಾಸು ವಿಶ್ವವಿದ್ಯಾಲಯದ ಮೂಲಕ ಹೊರತಂದಿದ್ದಾರೆ. ಕನ್ನಡ ನಿಘಂಟು ಶಾಸ್ತ್ರದಲ್ಲಿ ತಮ್ಮ ನಿಸ್ಸೀಮ ಮೇರುಕೃತಿಯಿಂದ ಅಮರರಾಗಿರುವ ರೆವರೆಂಡ್ ಎಫ್. ಕಿಟ್ಟೆಲ್ ಅವರ ಬಗ್ಗೆ ವಿವರಗಳು, ಹೊಸ ಮುದ್ರಣದ ಬಗೆಗಿನ ಸಂಗತಿಗಳು ೧೪ ಪುಟಗಳ ಪ್ರಸ್ತಾವನೆಯಲ್ಲಿ ಇವೆ. ಮೂಲ ಕೋಶದಲ್ಲಿ ಬಿಟ್ಟು ಹೋಗಿರುವ ಹೊಸ ಶಬ್ದಗಳು ಹಾಗೂ ಪ್ರಯೋಗಗಳು ಇಲ್ಲಿ ಸೇರ್ಪಡೆಯಾಗಿವೆ. ಕಿಟ್ಟೆಲ್ ಅವರು ಬಳಸದೆ ಇರುವ ಕವಿರಾಜಮಾರ್ಗ, ವಡ್ಡಾರಾಧನೆ, ಆದಿಪುರಾಣ, ವಚನಗಳು ಮುಂತಾದವುಗಳಿಂದ ಪ್ರಯೋಗಗಳನ್ನು ಸೇರಿಸಿದೆ. ಮೂಲದಲ್ಲಿಲ್ಲದ ೭೭೪೦ ಹೊಸ ಶಬ್ದಗಳು ಸೇರ್ಪಡೆಯಾಗಿವೆ. ಕಿಟ್ಟೆಲ್ ಕೋಶದ ಮರುಮುದ್ರಣ ಒಂದು ಮಹತ್ವದ ಕೆಲಸ. ಸಾವಿರಾರು ಪುಟಗಳ ಈ ಬೃಹತ್‌ಕೋಶವನ್ನು ನಾಲ್ಕು ಭಾಗಗಳಾಗಿ ಸುಂದರವಾಗಿ ಮುದ್ರಿಸಿದ್ದು, ಅವು ಕಾಲೋಚಿತವಾಗುವಂತೆ ಪರಿಷ್ಕರಿಸಿದ್ದು ಪ್ರೊ॥ ಮರಿಯಪ್ಪ ಭಟ್ಟರ ಕನ್ನಡ ಭಾಷೆಯ ಬಗೆಗಿನ ಕಾಳಜಿ ಹಾಗೂ ಅವರ ಗ್ರಂಥಸಂಪಾದಾನ ಸಾಮರ್ಥ್ಯದ ದ್ಯೋತಕವಾಗಿದೆ ಎನ್ನಬಹುದು.

—o—

# ಹಸ್ತಪ್ರತಿ ಸಂಗ್ರಹಕಾರ್ಯ ಮತ್ತು ಗ್ರಂಥಸಂಪಾದನೆಗೆ ಬಿ. ಶಿವಮೂರ್ತಿ ಶಾಸ್ತ್ರಿಗಳ ಕೊಡುಗೆ

ಸಿ. ಯು. ಮಂಜುನಾಥ್

ಗ್ರಂಥಸಂಪಾದನೆ ಅತ್ಯಂತ ಶ್ರಮದಾಯಕವಾದ, ಅಪಾರ ಪಾಂಡಿತ್ಯ ಮತ್ತು ವಿಮರ್ಶನ ಶಕ್ತಿಗಳನ್ನು ನಿರೀಕ್ಷಿಸುವ ಕ್ಷೇತ್ರವಾಗಿದೆ. ಗ್ರಂಥಸಂಪಾದನೆ ಅತ್ಯಂತ ಮೂಲಭೂತ ಕಾರ್ಯವೂ ಮತ್ತು ಮೌಲಿಕ ಕಾರ್ಯವೂ ಆಗಿದೆ. ಗ್ರಂಥಸಂಪಾದನೆಯೇ ಮೂಲತಃ ಶ್ರೇಷ್ಠ ಸತ್ಯಾನ್ವೇಷಣೆಯ, ಸಂಶೋಧನೆಯ ಕಾರ್ಯವಾಗಿದೆ. ಈ ಸಂಶೋಧನೆಯನ್ನು ಅನುಸರಿಸಿ ಭಾಷೆ, ಸಾಹಿತ್ಯ, ಸಮಾಜ, ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟ ಸಂಶೋಧನೆಗಳು ಮುಂದುವರಿಯುತ್ತವೆ. ಈ ದೃಷ್ಟಿಯಿಂದ ಶಾಸ್ತ್ರೀಯ ರೀತಿಯಲ್ಲಿ ಸಂಪಾದಿತವಾದ ಕೃತಿ ಅನೇಕ ಸಂಶೋಧನೆಗಳಿಗೆ ಅಡಿಪಾಯವನ್ನು ಒದಗಿಸುತ್ತದೆ. ಈ ಕಾರಣದಿಂದ ಗ್ರಂಥಸಂಪಾದನೆ ಆಕರ ಸಂಶೋಧನೆಯಾಗಿದೆ. ಸಾಹಿತ್ಯ ವಿಮರ್ಶಕನು ನಿಷ್ಕೃಷ್ಟ ಪಾಠದ ಆಧಾರದ ಮೇಲೆ ತನ್ನ ಸಾಹಿತ್ಯ ವಿಮರ್ಶೆಯನ್ನು ನಿಖರವಾಗಿ ನೆರವೇರಿಸಬಹುದು. ಗ್ರಂಥಸಂಪಾದನೆಯ ಕಾರ್ಯದಲ್ಲಿ ಹಸ್ತಪ್ರತಿ ಸಂಗ್ರಹವನ್ನು ಮೊದಲ ಹಂತವೆಂದೂ ಪರಿಷ್ಕರಣವನ್ನು ಎರಡನೆಯ ಹಂತವೆಂದೂ ಕರೆಯಬಹುದು. ಇವುಗಳಲ್ಲಿ ಎರಡು ಹಂತಗಳೂ ಭಿನ್ನ ಮನೋಧರ್ಮವನ್ನೂ, ಸ್ವಭಾವ, ಭಿನ್ನ ವ್ಯಕ್ತಿತ್ವ, ಪಾಂಡಿತ್ಯ ಮತ್ತು ಪ್ರತಿಭೆಯನ್ನು ನಿರೀಕ್ಷಿಸುವಂಥವು. ಹಸ್ತಪ್ರತಿ ಸಂಗ್ರಹದ ಹಂತದಲ್ಲಿ ಜನಸಂಪರ್ಕ, ಜನರೊಂದಿಗೆ ಬೆರೆಯುವ ಮನೋಧರ್ಮ, ಉಪಾಯದಿಂದ ತಿಳವಳಿಕೆ ಹೇಳಿ ಜನರನ್ನು ಒಲಿಸಿಕೊಳ್ಳುವ ಬುದ್ಧಿವಂತಿಕೆ, ಬಹುಬೇಗ ಜನರಲ್ಲಿ ವಿಶ್ವಾಸ ಮೂಡಿಸುವ ವ್ಯಕ್ತಿತ್ವ ಅಗತ್ಯವಾಗಿದೆ. ಎರಡನೆಯ ಹಂತ ಪಾಂಡಿತ್ಯವನ್ನೂ, ಗ್ರಂಥಸಂಪಾದನೆಯ ಶಿಸ್ತನ್ನೂ, ವಿಮರ್ಶನ ಶಕ್ತಿಯನ್ನೂ ಪ್ರತಿಭೆಯನ್ನೂ ನಿರೀಕ್ಷಿಸುವಂಥದು. ಕೆಲವು ವಿದ್ವಾಂಸರು ಹಸ್ತಪ್ರತಿಗಳನ್ನು ಕಷ್ಟಪಟ್ಟು ಸಂಪಾದಿಸಿ ಆನಂತರ ಸಂಪಾದನ ಕಾರ್ಯಕ್ಕೆ ತೊಡಗಿರುವುದುಂಟು. ಇನ್ನು ಕೆಲವು ವಿದ್ವಾಂಸರು ಹಸ್ತಪ್ರತಿಗಳ ಸಂಗ್ರಹ ಒಂದು ಸಂಸ್ಥೆಯಲ್ಲಿ ದೊರೆತರೆ ನೇರವಾಗಿ ಎರಡನೆಯ ಹಂತದಿಂದ ಕಾರ್ಯಾರಂಭ ಮಾಡಿರುವುದುಂಟು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಯವರು ಈ ಎರಡೂ ಹಂತಗಳಲ್ಲಿ ಗಣನೀಯ ಸೇವೆಯನ್ನು ಸಲ್ಲಿಸಿರುವ ಮಹನೀಯರಾಗಿದ್ದಾರೆ.

ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಯವರು ನಾಡು ನುಡಿಗಳಿಗೆ ಅನೇಕ ರೀತಿಯಲ್ಲಿ ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಗ್ರಂಥಸಂಗ್ರಹ ಮತ್ತು ಗ್ರಂಥಸಂಪಾದನೆ ಕನ್ನಡ ನಾಡಿನಲ್ಲಿ ಆ ಕಾಲದಲ್ಲಿ ಸಮರ್ಪಕವಾಗಿ ವಿದ್ವಾಂಸರ ಗಮನ ಸೆಳೆದಿರಲಿಲ್ಲ. ಅಂತಹ ಹಿನ್ನೆಲೆಯಲ್ಲಿ ಶ್ರೀ ಶಾಸ್ತ್ರಿಯವರು ಗಣನೀಯ ಸೇವೆಯನ್ನು ಸಲ್ಲಿಸಿದ್ದಾರೆ. ಕನ್ನಡ ನಾಡು ನುಡಿಗಳ ಬಗ್ಗೆ ವಿಶೇಷ ಆಸಕ್ತಿ ಹೊಂದಿದ್ದ ಶಾಸ್ತ್ರಿಯವರು ಕನ್ನಡ ನಾಡಿನ ಅಮೂಲ್ಯ ಆಸ್ತಿಯಾದ ಹಸ್ತಪ್ರತಿಗಳ ಸಂಗ್ರಹಕ್ಕೆ ತೊಡಗಿದರು. ಅನಂತರ ನಾಡಿನ ಉದ್ದಗಲಕ್ಕೆ ಸಂಚಾರ ಮಾಡಿ ಅಷ್ಟೊಂದು ವಿಪುಲ ಸಂಖ್ಯೆಯಲ್ಲಿ ಹಸ್ತಪ್ರತಿ ಸಂಗ್ರಹಿಸಿರುವವರು ವಿರಳವೆಂದೇ ಹೇಳಬಹುದು. ಈ ಕ್ಷೇತ್ರದಲ್ಲಿ ಬಿ. ಶಿವಮೂರ್ತಿಯವರ ಸೇವೆ ಅತ್ಯಮೂಲ್ಯವಾದುದಾಗಿದೆ. ಅವರು ತಮ್ಮ ಕಾರ್ಯ ಗೌರವದ ದೃಷ್ಟಿಯಿಂದ, ಕೀರ್ತನಕಾರರಾಗಿ ಅಖಂಡ ಕರ್ಣಾಟಕದ ಕನಸು ಕಂಡ ಏಕೀಕರಣದ ಧುರೀಣರಾಗಿ ನಾಡನ್ನು ಸಂಪೂರ್ಣವಾಗಿ ಸುತ್ತಿ ನೂರಾರು ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದರು. "ಸುಮಾರು ೧೯೩೬ರ ವರೆಗೆ ನನ್ನ ಈ ಪ್ರವಾಸವು ಮುಂದುವರಿಯಿತು. ದೇಶಾಟನದಲ್ಲಿ ಅನೇಕ ಅನುಭವಗಳು ಉಂಟಾದವು. ತೀರ್ಥಕ್ಷೇತ್ರಗಳನ್ನೂ, ಐತಿಹಾಸಿಕ ಸ್ಥಳಗಳನ್ನೂ ಅಗತ್ಯವಾಗಿ ಸಂದರ್ಶಿಸುತ್ತಿದ್ದೆನು. ನಾಡಿನ ಮನೆ ಮಠಗಳಲ್ಲಿ ಅವಿತುಕೊಂಡು ಕೂತಿದ್ದ ತಾಳೆಗರಿ ಗ್ರಂಥಗಳು, ತಾಮ್ರ ಶಾಸನಗಳು ಮೊದಲಾದವುಗಳನ್ನು ಸಂಗ್ರಹಿಸುತ್ತಿದ್ದೆನು."[1] ಅವರು ಕರ್ನಾಟಕದ ಪ್ರಖ್ಯಾತ ಕೀರ್ತನಕಾರರೂ ಮತ್ತು ವಾಗ್ಮಿಗಳೂ ಆಗಿದ್ದರಿಂದ ಕರ್ನಾಟಕದ ನೂರಾರು ಹಳ್ಳಿ, ಊರು, ನಗರಗಳಿಂದ ಆಹ್ವಾನಗಳು ಬರುತ್ತಿದ್ದವು. ಸ್ವತಃ ಉತ್ಸಾಹಶಾಲಿಗಳಾದ ಅವರು ಆ ಸ್ಥಳಗಳಿಗೆ ಹೋಗಿ ತಮ್ಮ ಕೀರ್ತನೆಯ, ಭಾಷಣದ ಕಾರ್ಯವನ್ನು ಸಾಂಗವಾಗಿ ಮುಗಿಸಿ ಹಸ್ತಪ್ರತಿ ಸಂಗ್ರಹಕಾರ್ಯವನ್ನು ಉಪಾಯವಾಗಿ ಮಾಡಿಕೊಳ್ಳುತ್ತಿದ್ದರು. ಅವರು ಧರ್ಮ, ಕಥೆ, ಪುರಾಣ, ಪ್ರಭಾವ, ವ್ಯಕ್ತಿತ್ವ, ಮಾತಿನ ಮೋಡಿ ಎಲ್ಲವನ್ನೂ ಬಳಸಿಕೊಂಡು ಜನರ ಹೃದಯ ಗೆದ್ದು ಎಂತಹ ಹಸ್ತಪ್ರತಿಯಾಗಲಿ ತಮ್ಮ ಗ್ರಂಥಸಂಗ್ರಹಕ್ಕೆ ಸೇರಿಸಿಕೊಳ್ಳುತ್ತಿದ್ದರು. ಕನ್ನಡ ನಾಡಿನ ಯಾವುದೇ ಕವಿಗೆ ಸಂಬಂಧಿಸಿದ ಊರಾಗಲಿ, ಗದ್ದುಗೆಯಾಗಲಿ, ಐತಿಹ್ಯದ ಸ್ಥಳವಾಗಲಿ ಅದನ್ನು ಸಂದರ್ಶಿಸಿ ಅವುಗಳ ಛಾಯಾಚಿತ್ರ ಪಡೆದು ಅದಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ ಕಾಣಿಸದೇ ಹೋದರೆ ಅವರಿಗೆ ಸಮಾಧಾನವೇ ಆಗುತ್ತಿರಲಿಲ್ಲ.

ಶಿವಮೂರ್ತಿ ಶಾಸ್ತ್ರಿಯವರ ಹಸ್ತಪ್ರತಿ ಸಂಗ್ರಹ ಅತ್ಯಂತ ವಿಸ್ತಾರವಾದುದು ಮತ್ತು ಅಷ್ಟೇ ವೈವಿಧ್ಯಮಯವಾದುದು. ಅವರು ಸುಮಾರು ನಲವತ್ತು ವರ್ಷಗಳು ಅತ್ಯಂತ ಶ್ರಮವಹಿಸಿ ನಾಲ್ಕುನೂರಕ್ಕೂ ಮೇಲ್ಪಟ್ಟು ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಅವರು ಕೇವಲ ಕನ್ನಡ ಹಸ್ತಪ್ರತಿಗಳಿಗಾಗಿ ಕಾದು ಕುಳಿತುಕೊಳ್ಳಲಿಲ್ಲ. ಕನ್ನಡ, ಸಂಸ್ಕೃತ ಮತ್ತು ಅನ್ಯ ಭಾಷೀಯ ಹಸ್ತಪ್ರತಿಗಳು ಸಿಕ್ಕ ತಕ್ಷಣವೇ ಅವನ್ನು

ತಮ್ಮ ಸಂಗ್ರಹಕ್ಕೆ ಸೇರಿಸಿಕೊಳ್ಳುತ್ತಿದ್ದರು. ಹಸ್ತಪ್ರತಿ ಸಂಗ್ರಹಕಾರ್ಯದಲ್ಲಿ ಅವರು ಮುಖ್ಯ ಅಮುಖ್ಯ ಎಂಬ ತಾರತಮ್ಯವನ್ನು ಮಾಡಿದಂತಿಲ್ಲ. ಯಾವುದೇ ಹಸ್ತಪ್ರತಿ ಸಿಕ್ಕರೂ ಅದನ್ನು ಪ್ರೀತಿಯಿಂದ ತಮ್ಮ ಗ್ರಂಥಸಂಗ್ರಹಕ್ಕೆ ಸೇರಿಸಿಕೊಂಡಿದ್ದಾರೆ. ಹಸ್ತಪ್ರತಿ ಸಂಗ್ರಹದಲ್ಲಿ ಶಾಸ್ತ್ರಿಯವರದು ಅಮಿತವಾದ ಉತ್ಸಾಹ. ಒಂದು ಹಸ್ತಪ್ರತಿಯನ್ನು ಪಡೆಯಬೇಕೆಂದರೆ ಹೇಗಾದರೂ ಅದನ್ನು ಪಡೆದೇ ತೀರುತ್ತಿದ್ದರು. ಇಂತಹ ಹಠಕ್ಕೆ ಸಂಬಂಧಿಸಿದಂತೆ ಒಂದು ಸಂಗತಿ ಪ್ರಚಲಿತವಿದೆ.[2] ಒಂದು ಗ್ರಾಮದಲ್ಲಿ ಒಬ್ಬ ವಯಸ್ಸಾದ ವ್ಯಕ್ತಿಯ ಹತ್ತಿರ ಹರೀಶ್ವರನ ರಘಟಾ ಬಂಧದ ಹಸ್ತಪ್ರತಿ ಇದ್ದದ್ದು ಶಾಸ್ತ್ರಿಯವರ ಗಮನ ಸೆಳೆಯಿತು. ಅದನ್ನು ಪಡೆಯಲು ಎಷ್ಟೇ ಪ್ರಯತ್ನಿಸಿದರೂ ಅದು ದೊರೆಯುವಂತೆ ಕಾಣಲಿಲ್ಲ. ಆ ವಯಸ್ಸಾದ ಮನುಷ್ಯನು ಎರಡನೆಯ ಮದುವೆಯನ್ನು ಆಗಬೇಕೆಂದು ಇದ್ದನು. ಆದರೆ ಆ ಊರಿನವರ ವಿರೋಧವಿದ್ದಿತು. ಆ ವಯಸ್ಸಾದ ವ್ಯಕ್ತಿ ಊರಿನ ಜನರನ್ನು ತನ್ನ ಮದುವೆಗೆ ಒಪ್ಪಿಸಿದರೆ ಆ ಹಸ್ತಪ್ರತಿ ಕೊಡುವುದಾಗಿ ಹೇಳಿದ. ಶಾಸ್ತ್ರಿಯವರು ಕೀರ್ತನೆಯ ಮೋಡಿಯಿಂದ ಆ ಗ್ರಾಮದವರು ಆ ವ್ಯಕ್ತಿಯ ಮದುವೆಗೆ ಒಪ್ಪುವಂತೆ ಮಾಡಿ ಹಸ್ತಪ್ರತಿ ಪಡೆದರಂತೆ. ಈ ಸಂಗತಿ ಸ್ವಲ್ಪ ಅವಮಾನವೀಯವಾಗಿ ಕಂಡರೂ ಅವರು ಸಂಗ್ರಹದಲ್ಲಿ ತೋರುತ್ತಿದ್ದ ಆಸಕ್ತಿ ಮತ್ತು ಛಲವನ್ನು ನಿರ್ದೇಶಿಸುತ್ತದೆ.

ಶಾಸ್ತ್ರಿಯವರು ಸಂಗ್ರಹಿಸಿದ ಗ್ರಂಥಗಳು ವೈವಿಧ್ಯಮಯವಾಗಿವೆ. ಅವರು ಸಂಗ್ರಹಿಸಿದ ಹಸ್ತಪ್ರತಿಗಳಲ್ಲಿ 'ಜೈಮಿನಿ ಭಾರತ,' 'ಷಟ್ಸ್ಥಲ ಜ್ಞಾನಾಮೃತಸಾರ', 'ದೀಪದ ಕಲಿಯರ ಕಾವ್ಯ', ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ', 'ಶರಣಲೀಲಾಮೃತಂ', 'ವೀರೇಶ ಚರಿತೆ', 'ಪುರಾತನರ ತ್ರಿವಿಧಿ' ಮುಂತಾದ ನೂರಾರು ಇವೆ. ಅವರು ಸಂಗ್ರಹಿಸಿದ ವೈವಿಧ್ಯಮಯ ಹಸ್ತಪ್ರತಿಗಳ ವಿವರ ತಿಳಿಯಬೇಕಾದರೆ ಬೆಂಗಳೂರು, ಕರ್ನಾಟಕ, ಮೈಸೂರು ವಿಶ್ವವಿದ್ಯಾಲಯಗಳಿಗೆ ಮತ್ತು ಇತರ ಸಂಸ್ಥೆಗಳಿಗೆ ಅವರು ದಾನವಾಗಿ ನೀಡಿರುವುದನ್ನು ಗಮನಿಸಬಹುದು.[3] ಒಬ್ಬ ವ್ಯಕ್ತಿ ತನ್ನ ಸ್ವಸಾಮರ್ಥ್ಯದಿಂದ ಇಷ್ಟೊಂದು ಹಸ್ತಪ್ರತಿಗಳನ್ನು ಸಂಗ್ರಹಿಸಿರುವುದು ಅಪ್ರರೂಪದ ಮತ್ತು ಅಸಾಧ್ಯದ ಕಾರ್ಯವೆಂಬಂತೆ ಭಾಸವಾಗುತ್ತದೆ. ಆದರೆ ಶಾಸ್ತ್ರಿಯವರು ಅದನ್ನು ಸಾಧ್ಯವಾಗಿ ಮಾಡಿ ತೋರಿದ್ದಾರೆ. ಶಾಸ್ತ್ರಿಯವರು ತಾವು ಸಂಗ್ರಹಿಸಿದ ನೂರಾರು ಹಸ್ತಪ್ರತಿಗಳಲ್ಲಿ ಕೆಲವನ್ನು ಮಾತ್ರ ಸಂಪಾದಿಸಿ ಪ್ರಕಟಿಸಿದರು. ಕೆಲವು ವಿದ್ವಾಂಸರು ತಾವು ಸಂಗ್ರಹಿಸಿದ ಹಸ್ತಪ್ರತಿಗಳನ್ನು ಸಂಪಾದಿಸಿ ಪ್ರಕಟಿಸಲಾಗದಿದ್ದರೂ ಅವನ್ನು ಮೂಲೆಗುಂಪುಮಾಡಿ ವ್ಯರ್ಥಮಾಡುವುದುಂಟು. ಆದರೆ ಶಾಸ್ತ್ರಿಯವರು ಈ ವಿಷಯದಲ್ಲಿಯೂ ಬಹು ಉದಾರವಾಗಿ ನಡೆದುಕೊಂಡಿದ್ದಾರೆ. ಪ್ರೊ|| ಡಿ. ಎಲ್. ನರಸಿಂಹಾಚಾರ್ಯರು ಹೀಗೆ ಹೇಳಿದ್ದಾರೆ: "ಸ್ಥಿರ ಸಂಕಲ್ಪಯುತನಾದ ಒಬ್ಬ ಮನುಷ್ಯನು ನಿರಂತರ ಉದ್ಯೋಗಶೀಲತೆಯಿಂದಲೂ, ಪ್ರಯತ್ನದಿಂದಲೂ, ಆತ್ಮೋದ್ಧಾರವನ್ನು ಮಾಡಿಕೊಂಡು, ಜನತೆಯ ಉದ್ಧಾರವನ್ನೂ

ಹೇಗೆ ಮಾಡಲು ಸಾಧ್ಯವೆಂಬುದಕ್ಕೆ ಶ್ರೀನಿವಾಸ್ ಶಾಸ್ತ್ರಿಗಳವರ ಜೀವನ ಒಂದು ಪ್ರತ್ಯಕ್ಷವಾದ ಜೀವಂತವಾದ ನಿದರ್ಶನವಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಇವರು ಸುಮಾರು ನಲವತ್ತು ವರ್ಷ ಕಾಲ ಕಷ್ಟಪಟ್ಟು ಸಂಗ್ರಹಿಸಿದ ಸುಮಾರು ೬೦೦-೭೦೦ ತಾಳೆಯೋಲೆ ಗ್ರಂಥಗಳು, ಸಂಸ್ಕೃತ ಗ್ರಂಥಗಳು, ತಾಮ್ರ ಶಾಸನಗಳು ಮೊದಲಾದುವನ್ನು ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳಿಗೆ ನಿಷ್ಕಾಮ ಬುದ್ಧಿಯಿಂದ ಅರ್ಪಿಸಿದ್ದಾರೆ. ಇದು ಇವರ ತ್ಯಾಗಗುಣಕ್ಕೆ ನಿದರ್ಶನವಾಗಿದೆ."[4]

ಶಾಸ್ತ್ರಿಯವರು ಸಂಗ್ರಹಕಾರ್ಯದಲ್ಲಿ ಅಮೂಲ್ಯ ಸೇವೆಯನ್ನು ಮಾಡಿರುವಂತೆ ಸಂಪಾದನೆಯ ಕಾರ್ಯದಲ್ಲೂ ವಿಶೇಷವಾದ ಸೇವೆಯನ್ನು ಮಾಡಿದ್ದಾರೆ. ಅವರಿಂದ ಸಂಪಾದಿತವಾದ ಕೃತಿಗಳಲ್ಲಿ ಮುಖ್ಯವಾದವು ನಿಜಗುಣ ಶಿವಯೋಗಿ ವಿರಚಿತ 'ಪುರಾತನ ತ್ರಿವಿಧಿ', 'ಶಿವಶರಣರ ತ್ರಿಪದಿಗಳು' ಮತ್ತು 'ವೇದಾಂತ ಶಿಖಾರತ್ನ ಪ್ರಕಾಶಿಕಾ', 'ಕನ್ನಡ ಶತಕ ಸಾಹಿತ್ಯ', 'ಮಾದೇಶ್ವರ ಸಾಂಗತ್ಯ', 'ಗಣ ಸಹಸ್ರ ನಾಮಾವಳಿ', 'ಷಡಕ್ಷರ ಮಂತ್ರ ಮಹಿಮೆ', 'ವೀರೇಶ ಚರಿತೆ', 'ಘನಲಿಂಗಿ ದೇವರ ವಚನಗಳು', 'ಶ್ರೀಬಸವೋದಾಹರಣಂ', 'ನ್ಯಾಯ ಶತಕಂ', ದಿವಂಗತ ಹುಲ್ಲೂರು ಶ್ರೀನಿವಾಸ ಜೋಯಿಸರ 'ಸಿರುಮಲ ಚರಿತೆ', 'ಕನ್ನಡ ಜೈಮಿನಿ ಭಾರತ' (ಶ್ರೀ ದೇವುಡು ಅವರೊಡನೆ), 'ಕನಕದಾಸರ ಕೀರ್ತನೆಗಳು' ಮತ್ತು 'ಹರಿಭಕ್ತಿಸಾರ' (ಡಾ|| ಕೆ. ಎಂ. ಕೃಷ್ಣರಾಯರೊಡನೆ), 'ಸೋಮೇಶ್ವರ ಶತಕ', 'ಗಮಕ ಕಾವ್ಯ ಮಂಜರಿ', 'ಕರ್ನಾಟಕ ಕವಿಚರಿತೆ' (ಭಾಗ–೧) (ಇತರರೊಂದಿಗೆ), ಇತ್ಯಾದಿ.[5]

ಶಾಸ್ತ್ರಿಯವರು ವಿಶ್ವವಿದ್ಯಾಲಯದಲ್ಲಿ ವಿದ್ಯಾಭ್ಯಾಸಮಾಡಿ ಗ್ರಂಥಸಂಪಾದನೆಗೆ ತೊಡಗಿದವರಲ್ಲ. ಸಾಹಿತ್ಯದ ಭಾಷೆಯ ಮೇಲಿನ ಅಭಿಮಾನ ಪ್ರೀತಿಗಳಿಂದ ಈ ಕ್ಷೇತ್ರಕ್ಕೆ ಪ್ರವೇಶಿಸಿದರು. ವಿದ್ವಾಂಸರಾದ ಡಿ. ಎಲ್. ನರಸಿಂಹಾಚಾರ್, ಪಿ. ಆರ್. ಕರಿಬಸವ ಶಾಸ್ತ್ರಿ, ಎಸ್. ಆರ್. ಕರಿಬಸವ ಶಾಸ್ತ್ರಿ, ಎಸ್. ಬಸವಾರಾಧ್ಯ ಮುಂತಾದವರ ಸಂಪರ್ಕ, ಒಡನಾಟ ಮತ್ತು ಸಾಹಿತ್ಯದ ಸತತ ಅಭ್ಯಾಸ ಗ್ರಂಥಸಂಪಾದನೆಯ ಕಡೆ ಶಾಸ್ತ್ರಿಗಳ ಒಲವು ಮೂಡುವಂತೆ ಮಾಡಿರಬೇಕು. ಶಾಸ್ತ್ರಿಯವರು ಸಂಪಾದಿಸಿ ಪ್ರಕಟಿಸಿರುವ ಕೆಲವು ಕೃತಿಗಳನ್ನು ಸ್ಥೂಲವಾಗಿ ಪರೀಕ್ಷಿಸುವುದರ ಮೂಲಕ ಅವರ ಗ್ರಂಥ ಸಂಪಾದನಾ ಮಾರ್ಗವನ್ನು ತಿಳಿಯಬಹುದು. ಶಿವಮೂರ್ತಿ ಶಾಸ್ತ್ರಿಯವರ ಗ್ರಂಥ ಸಂಪಾದನೆ ಮತ್ತು ಪ್ರಕಟನೆ ಶ್ರೀ ನಿಜಗುಣ ಶಿವಯೋಗಿ ವಿರಚಿತ 'ಪುರಾತನ ತ್ರಿವಿಧಿ'ಯಿಂದ ಆರಂಭವಾಗಿದೆ. ಗ್ರಂಥದ ಮುನ್ನುಡಿಯಲ್ಲಿ, 'ನಾವು ನಮಗೆ ಸಿಕ್ಕ ಒಂದೇ ಒಂದು ತಾಳೆಯೋಲೆಯ ಗ್ರಂಥದ ಸಹಾಯದಿಂದಲೂ ಇದನ್ನು ಕೂಡಿದ ಮಟ್ಟಿಗೆ ಶುದ್ಧವಾಗಿ ಪ್ರಕಟಿಸಿರುತ್ತೇವೆ.' ಎಂದಿದ್ದಾರೆ. ಹಸ್ತಪ್ರತಿ ನಿರ್ಣಯ, ಪಾಠಗಳ ಕಡೆ ಶಾಸ್ತ್ರಿಯವರು ಗಮನ ಕೊಡದೇ ಹೋದರೂ ಕಠಿಣಪದ [illegible] ವಿಸ್ತೃತ ಅರ್ಥಕೋಶಗಳನ್ನು ಒದಗಿಸಿದ್ದಾರೆ, 'ಶಿವಶರಣರ ತ್ರಿಪದಿಗಳು' ಮತ್ತು 'ವೇದಾಂತ ಶಿಖಾರತ್ನ ಪ್ರಕಾಶಿಕಾ' ಕೃತಿಯಲ್ಲಿ. 'ಪುರಾತನ [illegible] ತ್ರಿಪದಿ',

ಶಾಸ್ತ್ರಿಯವರ ಮಹತ್ವದ ಸಂಪಾದಿತ ಕೃತಿಗಳಲ್ಲಿ ರಾಘವಾಂಕನ 'ಸೋಮೇಶ್ವರಚರಿತೆ' ಒಂದಾಗಿದೆ. ಇದು ಶಾಸ್ತ್ರಿಯವರಿಂದ ಪ್ರಥಮಬಾರಿಗೆ ಪ್ರಕಟಿತವಾದ ಕೃತಿಯಾಗಿದೆ. ಈ ಕೃತಿಯನ್ನು ಒಂದು ತಾಳೆಯೋಲೆ ಮತ್ತು ಕೈಬರಹದ ಪ್ರತಿಯ ಸಹಾಯದಿಂದ ಮುದ್ರಿಸಿರುವುದಾಗಿ ಹೇಳಿದ್ದಾರೆ. ಈ ಕೃತಿಯನ್ನು ಸಾಕಷ್ಟು ಶಾಸ್ತ್ರೀಯವಾಗಿ ಸಂಪಾದಿಸಲು ಪ್ರಯತ್ನಿಸಿದ್ದಾರೆ.[10] ಪಾಠಾಂತರಗಳನ್ನು ಎಚ್ಚರಿಕೆಯಿಂದ ನೀಡಿದ್ದಾರೆ. ಈ ಕೃತಿಯು ಪ್ರಥಮ ಬಾರಿಗೆ ಪ್ರಕಟವಾದದ್ದು ೧೯೪೩ರಲ್ಲಿ. ಅನಂತರ ೧೯೬೬ ಮತ್ತು ೧೯೭೫ ರಲ್ಲಿ ಎರಡು ಪುನರ್ಮುದ್ರಣಗಳನ್ನು ಕಂಡಿದೆ. ಸಂಪಾದಕರು ಕವಿಕಾವ್ಯ ವಿಚಾರ, ಅನುಬಂಧವಾಗಿ ಕೊಟ್ಟಿರುವ 'ವೀರಭದ್ರದೇವರ ರಗಳೆ', ವಿಶೇಷ ವಿಚಾರಗಳು ಮತ್ತು ಉಪಯುಕ್ತ ಅರ್ಥಕೋಶ, ಜೊತೆಗೆ ಉಪಯುಕ್ತ ಛಾಯಾಚಿತ್ರಗಳು—ಇವು ಗ್ರಂಥದ ಮೌಲ್ಯವನ್ನು ಹೆಚ್ಚಿಸಿವೆ. ಇತ್ತೀಚೆಗೆ (೧೯೮೦) ಸೋಮೇಶ ಚರಿತೆಯು ಇನ್ನೂ ಕೆಲವು ಹಸ್ತಪ್ರತಿಗಳ ಸಹಾಯದಿಂದ ಎಸ್. ಎಸ್. ಹಿರೇಮಠ ಅವರಿಂದ ಪ್ರಕಟಿತವಾಗಿದೆ.

ಶಾಸ್ತ್ರಿಯವರು ಮೈಸೂರು ಸರ್ಕಾರ ಪ್ರಕಟಿಸಿದ 'ಜೈಮಿನಿಭಾರತ', 'ಕನಕದಾಸರ ಕೀರ್ತನೆಗಳು' ಮತ್ತು 'ಹರಿಭಕ್ತಿಸಾರ' ಕೃತಿಗಳನ್ನು ಅನ್ಯಸಂಪಾದಕರೊಡಗೂಡಿ ಸಂಪಾದಿಸಿದ್ದಾರೆ. 'ಕನಕದಾಸರ ಕೀರ್ತನೆಗಳು' ಕೃತಿ ಡಾ|| ಕೆ. ಎಂ. ಕೃಷ್ಣರಾವ್ ಅವರೊಂದಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಉತ್ತಮ ಕೃತಿಯಾಗಿದೆ. ೧೯೬೫ರಲ್ಲಿ ಪ್ರಕಟವಾದ ಈ ಕೃತಿ ಕನಕದಾಸರ ಎಲ್ಲ ಕೀರ್ತನೆಗಳನ್ನು ಪಾಠಾಂತರಗಳೊಂದಿಗೆ ಶಾಸ್ತ್ರೀಯವಾಗಿ ಒಟ್ಟಿಗೆ ತರುವ ಉತ್ತಮ ಪ್ರಯತ್ನವಾಗಿದೆ. ಉಪಯುಕ್ತ ಟಿಪ್ಪಣಿ ಅರ್ಥಕೋಶಗಳೊಂದಿಗೆ ಪ್ರಕಟವಾಗಿರುವ ಈ ಕೃತಿ ಉತ್ತಮ ಸಂಪಾದಿತ ಕೃತಿಗಳಲ್ಲಿ ಒಂದಾಗಿದೆ.

ಶಾಸ್ತ್ರಿಯವರು 'ಶರಣ ಸಾಹಿತ್ಯ' ಮತ್ತು 'ಸ್ವತಂತ್ರ ಕರ್ನಾಟಕ' ಎಂಬ ಪತ್ರಿಕೆಗಳನ್ನು ಸಂಪಾದಿಸಿ ಪ್ರಕಟಿಸಿದರು. 'ಶರಣ ಸಾಹಿತ್ಯವು' ಸುಮಾರು ೩೫ ವರ್ಷಗಳು ಸತತವಾಗಿ ನಡೆದುಕೊಂಡುಬಂದಿತು. 'ಶರಣ ಸಾಹಿತ್ಯ' ಅನೇಕ ಶಾಸನಗಳ, ಹಸ್ತಪ್ರತಿಗಳ ಸಂಪಾದನೆಗೆ ಅವಕಾಶ ಮಾಡಿಕೊಟ್ಟಿದೆ. ಅವರು 'ಶರಣಸಾಹಿತ್ಯ ಗ್ರಂಥಮಾಲೆ'ಯಲ್ಲಿ ೮೦ಕ್ಕೂ ಮೇಲ್ಪಟ್ಟು ಗ್ರಂಥಗಳನ್ನು ಪ್ರಕಾಶಪಡಿಸಿದ್ದಾರೆ. ಈ ಗ್ರಂಥಮಾಲೆಯಲ್ಲಿ ಬಹುಮಟ್ಟಿಗೆ ಶಾಸ್ತ್ರಿಯವರ ಗ್ರಂಥಗಳೇ ಪ್ರಕಟವಾಗಿರುವುದಾದರೂ ಶ್ರೀ ನ. ಕೃಷ್ಣ ಜೋಯಿಸರು ಸಂಪಾದಿಸಿರುವ 'ಪಂಪಾಸ್ಥಾನ ವರ್ಣನಂ' ಎಂಬ ಕಾವ್ಯವನ್ನೂ ಪ್ರಕಟಿಸಿದ್ದಾರೆ.

ಶಾಸ್ತ್ರಿಯವರ ಗ್ರಂಥಸಂಪಾದನೆಯ ಆರಂಭದ ಕೃತಿಗಳಲ್ಲಿ ಕೆಲವು ಹಸ್ತಪ್ರತಿಗಳನ್ನು ಗ್ರಂಥರೂಪಕ್ಕೆ ತರುವ ಪ್ರಯತ್ನದಂತೆ ಕಂಡುಬರುತ್ತದೆ. ಆದರೆ ಶುದ್ಧಪಾಠವನ್ನು ಕೊಡಬೇಕೆಂಬ ಹಂಬಲ, ಪ್ರಯತ್ನಗಳೂ ಕಂಡುಬರುತ್ತವೆ. ಅನೇಕ ಸಂಪಾದಿತ ಕೃತಿಗಳಲ್ಲಿ ಸಂಪಾದಕರು ಹಸ್ತಪ್ರತಿ ವಿವರ, ಪ್ರತಿಗಳ ಸಂಕೇತ, ಮೂಲ

ಮಾತೃಕೆ, ಪಾಠಾಂತರಗಳು ಮುಂತಾದ ವಿವರಗಳನ್ನು ಕೊಡುವುದಿಲ್ಲ. ಗ್ರಂಥ ಸಂಪಾದನೆಯ ಆದರ್ಶಕ್ಕೆ ಮತ್ತು ಶಾಸ್ತ್ರೀಕತೆಗಳಿಗೆ ಒಡ್ಡಿದರೆ ಶಾಸ್ತ್ರಿಯವರ ಕೆಲವು ಕೃತಿಗಳು ಸಾಧಾರಣ ಮತ್ತು ಅಷ್ಟೊಂದು ಶಾಸ್ತ್ರೀಯ ಮಟ್ಟವನ್ನು ಮುಟ್ಟಲಾರವು. ಆದರೂ ಕೆಲವು ಕೃತಿಗಳಲ್ಲಿ ಶಾಸ್ತ್ರಿಯವರು ಗ್ರಂಥಸಂಪಾದನೆಯ ಆದರ್ಶಗಳನ್ನು ಬಹುಮಟ್ಟಿಗೆ ಈಡೇರಿಸಿದ್ದಾರೆ. ಶಾಸ್ತ್ರಿಯವರು ಸಂಪಾದಿಸಿದ ಕಾಲ, ಸಂಪಾದಕರ ಹಿನ್ನೆಲೆ, ಶ್ರದ್ಧೆ ಮತ್ತು ಪ್ರಾಮಾಣಿಕತೆಗಳನ್ನು ಗಮನದಲ್ಲಿರಿಸಿಕೊಂಡು ನೋಡಿದರೆ ಅವರ ಸಾಧನೆ ತುಂಬಾ ಮಹತ್ವದ್ದಾಗಿ ಕಾಣುತ್ತದೆ. ಶಾಸ್ತ್ರಿಯವರ ಸಂಪಾದನೆಗಳಲ್ಲಿ ಪಾಠನಿರ್ಣಯಕ್ಕೆ ಇರುವಷ್ಟೇ ಗಮನವನ್ನು ಕವಿಕಾವ್ಯ ವಿಚಾರಗಳಿಗೂ ಕೊಡುವುದನ್ನು ಕಾಣುತ್ತೇವೆ. ಕವಿಗೆ, ಕಾವ್ಯಕ್ಕೆ ಸಂಬಂಧಿಸಿದ ವಿವರಗಳನ್ನೂ ಛಾಯಾಚಿತ್ರಗಳನ್ನೂ ತೆಗೆದುಕೊಂಡುಬಂದು ಸಚಿತ್ರವಾಗಿ ತಮ್ಮ ಎಲ್ಲ ಕೃತಿಗಳಲ್ಲೂ ಕಾಣಿಸಿದ್ದಾರೆ. ಗ್ರಂಥಸಂಪಾದನೆ ವಿಶೇಷವಾಗಿ ಬೆಳೆದಿರುವ ಈ ಕಾಲದಲ್ಲಿ ಶಾಸ್ತ್ರಿಯವರು ಸಂಪಾದಿಸಿರುವ ಕೃತಿಗಳೇ ಇನ್ನೂ ಶಾಸ್ತ್ರೀಯವಾಗಿ ಉತ್ತಮವಾಗಿ ಪ್ರಕಟವಾಗಬಹುದು; ಆಗುತ್ತಿವೆ. ಆದರೆ ಶಾಸ್ತ್ರಿಯವರು ಸಂಪಾದಿಸಿದ ಕಾಲ ಮತ್ತು ಹಿನ್ನೆಲೆಯಲ್ಲಿ ಅವರ ಸೇವೆ ಮೇಲ್ಪಟ್ಟದ್ದೇ ಆಗಿ ಉಳಿಯುತ್ತದೆ.*

---

* ಈ ಲೇಖನ ರಚನೆಯಲ್ಲಿ ಉಪಯುಕ್ತ ಸಲಹೆ ಮತ್ತು ಗ್ರಂಥಗಳನ್ನು ನೀಡಿದ ಶ್ರೀ ಎಸ್. ಶಿವಣ್ಣ, ಶ್ರೀ ಆರ್. ರಾಜಪ್ಪ, ಶ್ರೀ ಎಚ್. ಎಸ್. ಶಿವಪ್ರಕಾಶ ಮತ್ತು ಶ್ರೀ ಮೊರಬದ ಮಲ್ಲಿಕಾರ್ಜುನ ಅವರಿಗೆ ಋಣಿಯಾಗಿದ್ದೇನೆ.

## ಅಡಿಟಿಪ್ಪಣಿಗಳು

1. ಜೀವನ ಸ್ಮೃತಿಗಳು : ಬಿ. ಶಿವಮೂರ್ತಿ ಶಾಸ್ತ್ರಿ; ಪುಟ-೧೦
2. ದೇವ ಗಂಗೆ : ಪುಟ-೨೩, ೨೪ ಮತ್ತು ೩೩,೩೪
3. ಶರಣಸಾಹಿತ್ಯ : ಸಂಪುಟ ೪೩ ; ಸಂಚಿಕೆ ೧-೨—ಬೆಂಗಳೂರು ವಿಶ್ವವಿದ್ಯಾಲಯಕ್ಕೆ (೪೬ ಹಸ್ತಪ್ರತಿಗಳು. ೨ ತಾಮ್ರಶಾಸನಗಳು, ೭೫ ಮುದ್ರಿತ ಗ್ರಂಥಗಳು). ಸಂಪುಟ ೪೧ ; ಸಂಚಿಕೆ-೯—ಮೈಸೂರು ವಿಶ್ವವಿದ್ಯಾಲಯಕ್ಕೆ ೧೪೭೭ ಓಲೆಯ ಗ್ರಂಥಗಳು.
4. ಜೀವನಸ್ಮೃತಿಗಳು : ಬಿ. ಶಿವಮೂರ್ತಿ ಶಾಸ್ತ್ರಿ ; ಉದಾಹೃತ, ಪುಟ ೩೮-೩೯
5. ತುಮಕೂರು ಜಿಲ್ಲಾ ಪ್ರಥಮ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ: ಎಸ್. ಬಸವಾರಾಧ್ಯ: ಪು. ೧೩ ಮತ್ತು ಜೀವನ ಸ್ಮೃತಿಗಳು: ಬಿ. ಶಿವಮೂರ್ತಿಶಾಸ್ತ್ರಿ: ಪು. ೩೭.
6. ಪುರಾತನ ತ್ರಿವಿಧಿ : (ಸಂ) ಬಿ. ಶಿವಮೂರ್ತಿ ಶಾಸ್ತ್ರಿ : ಮುನ್ನುಡಿ. ಪುಟ-೮
7. ಗಣಸಹಸ್ರನಾಮಾವಳಿ : (ಸಂ.) ಬಿ. ಶಿವಮೂರ್ತಿ ಶಾಸ್ತ್ರಿ : 'ವಿನಂತಿ', ಪುಟ-೧
8. ಅದೇ : ಪುಟ ೧೭, ಅಡಿಟಿಪ್ಪಣಿ.
9. ಷಟ್‌ಸ್ಥಲ ಮಂತ್ರ ಸಂಹಿತೆ : ಸಂ. ಬಿ. ಶಿವಮೂರ್ತಿ ಶಾಸ್ತ್ರಿ, ಪುಟ-7
10. ವೀರೇಶ ಚರಿತೆ : (ಸಂ.) ಬಿ. ಶಿವಮೂರ್ತಿ ಶಾಸ್ತ್ರಿ

—o—

# ಗ್ರಂಥಸಂಪಾದನೆ :

# ತೀ. ನಂ. ಶ್ರೀ. ಮತ್ತು ಡಿ. ಎಲ್. ಎನ್. ಕೊಡುಗೆ

---

**ಡಾ|| ಎಂ. ಚಿದಾನಂದ ಮೂರ್ತಿ**

ಕನ್ನಡ ಸಂಶೋಧನ ಕ್ಷೇತ್ರದ ಬಹುದೊಡ್ಡ ಹೆಸರುಗಳು ತೀ. ನಂ. ಶ್ರೀಕಂಠಯ್ಯ ಮತ್ತು ಡಿ. ಎಲ್. ನರಸಿಂಹಾಚಾರ್. ಇವರ ಬಹುಮುಖವಾದ ಕಾಣಿಕೆಗಳಲ್ಲಿ ಗ್ರಂಥಸಂಪಾದನೆಯ ಕ್ಷೇತ್ರಕ್ಕೆ ಸಂದಿರುವ ಕಾಣಿಕೆ ಅತಿ ಮಹತ್ವದ್ದು. ಈಗಲೇನೋ ಗ್ರಂಥಸಂಪಾದನೆ ಎಂಬ ಹೆಸರು ಪಾಂಡಿತ್ಯಸಂಬಂಧಿಯಾದ ಒಂದು ಶಿಸ್ತಿನ ಹೆಸರಾಗಿ, ಪ್ರೌಢ ತರಗತಿಗಳಲ್ಲಿ ಅಧ್ಯಯನ ವಿಷಯದ ಹೆಸರಾಗಿ ಬಳಕೆಗೆ ಬಂದಿದೆ. ಸಾಹಿತ್ಯ ಅಕಾಡೆಮಿ ವರ್ಷದ ಶ್ರೇಷ್ಠ ಗ್ರಂಥಗಳಿಗೆ ಬಹುಮಾನ ಕೊಡುವಾಗ ಗ್ರಂಥಸಂಪಾದನೆಯನ್ನೂ ಗಮನದಲ್ಲಿಟ್ಟುಕೊಂಡಿರುವುದಲ್ಲದೆ, ಎಂ. ಎ. ಮಟ್ಟದಲ್ಲಿ ಗ್ರಂಥಸಂಪಾದನೆಪತ್ರಿಕೆಯಲ್ಲಿ ಉತ್ತಮಾಂಕಗಳನ್ನು ಪಡೆದ ವಿದ್ಯಾರ್ಥಿಗೆ ಚಿನ್ನದ ಪದಕವೂ ದೊರಕುವ ಅವಕಾಶಗಳಿವೆ. ಅನೇಕರಿಗೆ ಆಶ್ಚರ್ಯವಾಗಬಹುದು : ಐವತ್ತರ ದಶಕದಲ್ಲಿ ಅದೊಂದು ಗಣ್ಯಶಿಸ್ತು ಎಂಬ ಭಾವನೆಯಾಗಲಿ, 'ಗ್ರಂಥ ಸಂಪಾದನೆ' ಎಂಬ ಮಾತಾಗಲಿ, ಆ ಕ್ಷೇತ್ರದಲ್ಲಿ ದುಡಿಯುವ ಕೆಲವರನ್ನು ಬಿಟ್ಟರೆ, ಬಹಳ ಜನಕ್ಕೆ ತಿಳಿದೇ ಇರಲಿಲ್ಲ. ಆ ದಶಕದ ಅಂತ್ಯದಲ್ಲಿ ಮೈಸೂರಿನ ಮಹಾರಾಜಾ ಕಾಲೇಜಿನಿಂದ "ಮಾನಸಗಂಗೋತ್ರಿ"ಯ ವಿಶ್ವವಿದ್ಯಾನಿಲಯದ ಹೊಸ ಆವರಣಕ್ಕೆ ಕನ್ನಡ ಸ್ನಾತಕೋತ್ತರವಿಭಾಗ ಸ್ಥಳಾಂತರಗೊಂಡು ಕನ್ನಡ ಎಂ.ಎ. ತರಗತಿಯ ಪಠ್ಯವನ್ನು ಮಾರ್ಪಡಿಸುವ ಕಾರ್ಯಕ್ಕೆ ಕನ್ನಡ ಪ್ರಾಧ್ಯಾಪಕರಾಗಿದ್ದ [ದಿ] ಪ್ರೊ|| ತೀ. ನಂ. ಶ್ರೀಕಂಠಯ್ಯನವರು ಕೈಹಾಕಿ "ಗ್ರಂಥಸಂಪಾದನೆ"ಯೆಂಬ ಹೊಸ ಪ್ರಶ್ನಪತ್ರಿಕೆಯನ್ನು ಕನ್ನಡ ಎಂ. ಎ. ಪಠ್ಯಕ್ರಮದಲ್ಲಿ ಸೇರಿಸಿದರು. ಆಗ ಮಹಾರಾಜಾ ಕಾಲೇಜಿನಲ್ಲಿದ್ದ ಪ್ರೊ|| ಡಿ. ಎಲ್. ನರಸಿಂಹಾಚಾರ್ಯರನ್ನು ಮಾನಸಗಂಗೋತ್ರಿಗೆ ವರ್ಗಾಯಿಸಿ ಕೊಡಬೇಕೆಂದು ವಿಶ್ವವಿದ್ಯಾನಿಲಯಕ್ಕೆ ಪತ್ರ ಬರೆದು ಅನುಮತಿ ದೊರಕುವುದು ತಡವಾದ್ದರಿಂದ, ತೀ. ನಂ. ಶ್ರೀ. ಯವರೇ ಗ್ರಂಥಸಂಪಾದನೆ ಪಾಠವನ್ನು ಪ್ರಾರಂಭಿಸಿದರು. ನಾವು ಕೆಲವು ಉಪಾಧ್ಯಾಯರು ಎಂ. ಎ. ವಿದ್ಯಾರ್ಥಿಗಳ ಜೊತೆ ಕೂತು ಅವರ ತರಗತಿಗಳಿಗೆ ಹಾಜರಾಗುತ್ತಿದ್ದೆವು. (ಆ ತರಗತಿಗಳ ಟಿಪ್ಪಣಿಗಳು ನನ್ನ ಬಳಿ ಇವೆ). ಸ್ವಲ್ಪ ಕಾಲದಲ್ಲೇ ವಿಶ್ವವಿದ್ಯಾನಿಲಯದಿಂದ ಅನುಮತಿ ದೊರಕಿ

ಡಿ. ಎಲ್. ನರಸಿಂಹಾಚಾರ್ಯರು ಮಾನಸಗಂಗೋತ್ರಿಗೆ ವರ್ಗವಾಗಿ ಬಂದಮೇಲೆ (ಇದು ೧೯೬೧ ರಲ್ಲಿ) ತೀ. ನಂ. ಶ್ರೀ. ಯವರು ಗ್ರಂಥಸಂಪಾದನೆಯ ಪಾಠವನ್ನು ಅವರಿಗೆ ಒಪ್ಪಿಸಿದರು. ಆ ಕ್ಷೇತ್ರದಲ್ಲಿ ತಮ್ಮ ಸಾಧನೆಗಿಂತ ಡಿ. ಎಲ್. ಎನ್. ಅವರ ಸಾಧನೆ ಹಿರಿದೆಂದು ಮುಕ್ತಮನಸ್ಸಿನಿಂದ ಹೇಳಿದ್ದು ಎಲ್ಲರಿಗೂ ನೆನಪಿದೆ. ನಮ್ಮ ಪಾಠಶ್ರವಣ ಮುಂದುವರಿಯಿತು. ಡಿ. ಎಲ್. ಎನ್. ಅವರು ಒಬ್ಬ ಶ್ರದ್ಧಾವಂತ ವಿದ್ಯಾರ್ಥಿಯಂತೆ ಪ್ರತಿದಿನ ಟಿಪ್ಪಣಿಗಳನ್ನು ಸಿದ್ಧಪಡಿಸಿಕೊಂಡು ಪಾಠ ಹೇಳುತ್ತಿದ್ದರು. ತಾವು ಎಷ್ಟೋ ಗ್ರಂಥಗಳನ್ನು ಸಂಪಾದಿಸಿ ಅನುಭವವಿದ್ದರೂ, ದಿನವೂ ತಮ್ಮ ಗ್ರಂಥಗಳಿಂದಲೋ ಹಸ್ತಪ್ರತಿಗಳಿಂದಲೋ ಹಿಂದಿನ ಸಂಪಾದಿತ ಅಥವಾ ಜನಪ್ರಿಯ ಪ್ರತಿಗಳಿಂದಲೋ ನಿದರ್ಶನಗಳನ್ನು ತಂದು ಪಾಠಮಾಡುತ್ತಿದ್ದರು. ಅದು, ಕರ್ನಾಟಕದಲ್ಲೇ ಪ್ರಪ್ರಥಮವಾಗಿ ಆರಂಭವಾದ ಅಧ್ಯಯನವಾದ್ದರಿಂದ ಡಿ. ಎಲ್. ಎನ್. ತರಗತಿಯಲ್ಲಿ ಹೇಳಿದ್ದೆಲ್ಲ ಸಂಪೂರ್ಣ ಹೊಸದೇ ಆಗಿರುತ್ತಿತ್ತು. ಒಂದು ದಿನ ಅವರು ತಂದಿದ್ದ ಟಿಪ್ಪಣಿ ನಲವತ್ತು ನಿಮಿಷಗಳಿಗೆ ಮುಗಿದು ಹೋದ್ದರಿಂದ ತಮ್ಮ ಟಿಪ್ಪಣಿಯ ಕೊನೆಯ ಬರಿಯ ಹಾಳೆಯನ್ನು ಎತ್ತಿ ತೋರಿಸಿ "ಈ ದಿನದ ಸರಕು ಮುಗಿಯಿತು" ಎಂದು ತರಗತಿಯಿಂದ ಹೊರಟದ್ದನ್ನು, ಆಗ ಎದ್ದ ನಗೆಬುಗ್ಗೆಯನ್ನು ಮರೆಯಲಾರೆ. ಅದೇ ಪಾಠವನ್ನು ೧೯೬೨ ರ ವಿದ್ಯಾರ್ಥಿಗಳಿಗೂ ಮತ್ತೆ ಮಾಡಿದರು. ಇದನ್ನು ಅವರೇ ತಮ್ಮ 'ಕನ್ನಡ ಗ್ರಂಥಸಂಪಾದನೆ'ಯ ೧೯೬೪ ರ ಆವೃತ್ತಿಯ ಮೊದಲ ಮಾತಿನಲ್ಲಿ ಹೀಗೆ ಹೇಳಿಕೊಂಡಿದ್ದಾರೆ :

"ಮೈಸೂರು ವಿಶ್ವವಿದ್ಯಾನಿಲಯದ ಕನ್ನಡದ ಎಂ. ಎ. ಪರೀಕ್ಷೆಗೆ ಗ್ರಂಥ ಸಂಪಾದನಾ ಶಾಸ್ತ್ರವು ಪಠ್ಯವಿಷಯಗಳಲ್ಲಿ ಒಂದಾಗಿದೆ. ಆ ತರಗತಿಯ ವಿದ್ಯಾರ್ಥಿಗಳಿಗೆ ಈ ವಿಷಯವನ್ನು ಬೋಧಿಸುವ ಅವಕಾಶ ನನಗೆ ೧೯೬೧ ಮತ್ತು ೧೯೬೨ನೆಯ ವರ್ಷಗಳಲ್ಲಿ ಆಗ ವಿಶ್ವವಿದ್ಯಾನಿಲಯದ ಕನ್ನಡ ಶಾಖೆಯ ಪ್ರಮುಖಾಧಿಕಾರಿಗಳಾಗಿದ್ದ ಪ್ರೊ|| ತೀ. ನಂ. ಶ್ರೀಕಂಠಯ್ಯನವರ ದಯೆಯಿಂದ ದೊರೆಯಿತು. ಈ ವಿಷಯದಲ್ಲಿ ನನಗೆ ಅನೇಕ ವರ್ಷಗಳಿಂದ ತುಂಬ ಕುತೂಹಲವೂ ಆಸಕ್ತಿಯೂ ಇದ್ದವು. ಅಲ್ಲಿ ಇಲ್ಲಿ ಕೆಲವು ಗ್ರಂಥಗಳನ್ನೂ ಲೇಖನಗಳನ್ನೂ ಈ ವಿಷಯವಾಗಿ ಓದಿಯೂ ಆಗಿತ್ತು. ಆದರೆ ಪಾಠ ಹೇಳುವ ಅವಕಾಶ ಸಿಕ್ಕಿದಾಗ ಹೆಚ್ಚಿನ ಕೆಲಸವನ್ನು ಮಾಡಬೇಕಾಯಿತಲ್ಲದೆ ವಿಷಯದ ನಾನಾ ಅಂಶಗಳಲ್ಲಿ ಖಚಿತವಾದ ತಿಳಿವನ್ನು ಗಳಿಸಬೇಕಾಯಿತು. ೧೯೬೨-೬೪ ರ ವರೆಗೆ ಎರಡು ವರ್ಷಗಳ ಕಾಲ ಕೇಂದ್ರ ಸರ್ಕಾರದ ವಿಶ್ವವಿದ್ಯಾನಿಲಯ ಧನ ಸಹಾಯಕ ಆಯೋಗದವರು (University Grants Commission) ವಿಶ್ರಾಂತ ಪ್ರಾಧ್ಯಾಪಕರಿಗೆ ವರ್ಷಂಪ್ರತಿ ಕೊಡುವ ದ್ರವ್ಯ ಸಹಾಯದ ನಿರ್ವಾಹದಿಂದ ಈ ಗ್ರಂಥವನ್ನು ಬರೆಯುವುದು ಸಾಧ್ಯವಾಯಿತು. ಇದರ ರಚನೆಗೆ ಪ್ರೇರಣೆಯನ್ನು ನೀಡಿದ ಪ್ರೊ|| ತೀ. ನಂ. ಶ್ರೀಕಂಠಯ್ಯನವರಿಗೂ ಅದಕ್ಕೆ ಈ ರೂಪ

ಉಂಟಾಗಲು ಕಾರಣರಾದ ವಿಶ್ವವಿದ್ಯಾನಿಲಯ ಧನಸಹಾಯಕ ಆಯೋಗಕ್ಕೂ ನನ್ನ ಕೃತಜ್ಞತೆಗಳು ಮೊದಲು ಸಲ್ಲುತ್ತವೆ."

ಆ ಗ್ರಂಥವನ್ನು ೧೯೬೪ ರಲ್ಲಿ ಪ್ರೊ॥ ತೀ. ನಂ. ಶ್ರೀ. ಅವರೇ ಬಿಡುಗಡೆ ಮಾಡಿದ ಸಂದರ್ಭದ ಒಂದು ಕಿರುಚಿತ್ರವನ್ನು ಶ್ರೀ ಎಸ್. ರಾಘವೇಂದ್ರಭಟ್ಟ ಒಂದೆಡೆ ಕೊಟ್ಟಿದ್ದಾರೆ. ('ಅವರು ತೋರಿದ ದಾರಿ': 'ಶ್ರೀಕಂಠತೀರ್ಥ',: ಪು. ೫೨೨-೨೪). ಕನ್ನಡದ ಗ್ರಂಥಸಂಪಾದನ ಕ್ಷೇತ್ರದಲ್ಲಿ ನಡೆದ ಎರಡು ಘಟನೆಗಳು–ಒಂದು, ಅದು ಎಂ. ಎ. ಗೆ ಪಠ್ಯವಾದದ್ದು ; ಎರಡು, ಆ ಕ್ಷೇತ್ರದಲ್ಲಿ ಒಂದು ಹೊಸ ದಿಗಂತ ವನ್ನೇ ತೆರೆದು ತೋರಿದ ಮೌಲಿಕ ಕೃತಿ "ಕನ್ನಡ ಗ್ರಂಥಸಂಪಾದನೆ"ಯ ಪ್ರಕಟನೆ. ಇವೆರಡರಲ್ಲು ಇಬ್ಬರದು ಹೇಗೆ ಹೊಂದಿಕೊಂಡ ಪ್ರಯತ್ನವಾಗಿದೆಯೆಂಬುವನ್ನು ತೋರಲು ಮೇಲಿನ ಉಲ್ಲೇಖ, ವಿವರಗಳನ್ನು ಕೊಡಲಾಗಿದೆ. ಇಂದು ಕನ್ನಡದಲ್ಲಿ ಗ್ರಂಥಸಂಪಾದನೆ ಒಂದು ಗಣ್ಯ ಶಿಸ್ತಾಗಿದ್ದರೆ, ಅಧ್ಯಯನ ವಿಷಯವಾಗಿದ್ದರೆ, ಅವಕ್ಕೆ ಆ ಇಬ್ಬರು ಮಹಾ ವಿದ್ವಾಂಸರ ಪ್ರಯತ್ನಗಳೆ ಕಾರಣವೆಂಬಲ್ಲಿ ಅನುಮಾನಕ್ಕೆ ಎಡೆಯಿಲ್ಲ.

* * *

ತೀ. ನಂ. ಶ್ರೀಕಂಠಯ್ಯನವರು ವಾಸ್ತವವಾಗಿ ಬರೆದದ್ದು ಕಡಿಮೆ. ಅವರ ಬದುಕು ಬಹುಮಟ್ಟಿಗೆ ಓದು, ಚಿಂತನೆ, ಚರ್ಚೆ, ಪಾಠ ಬೋಧನೆಗಳಲ್ಲಿ ಕಳೆಯಿತು. ಅವರು ಸಂಪಾದಿಸಿದ ಪ್ರಾಚೀನ ಕೃತಿಗಳು ಎರಡು : ಒಂದು ಹರಿಹರನ ನಂಬಿಯಣ್ಣನ ರಗಳೆ ೧೯೪೬ ; ಮತ್ತೊಂದು ರನ್ನನ ಗದಾಯುದ್ಧ ಸಂಗ್ರಹ ೧೯೪೯. ತೀ. ನಂ. ಶ್ರೀ.ಯವರು ಗ್ರಂಥಸಂಪಾದನೆಗೆ ಕೈಹಾಕುವ ಹೊತ್ತಿಗೆ ಆ ಶಾಸ್ತ್ರವಾಗಲೇ ಪಾಶ್ಚಾತ್ಯರಲ್ಲಿ ಒಂದು ನಿಶ್ಚಿತ ರೂಪವನ್ನು ತಾಳಿತ್ತಲ್ಲದೆ ಭಾರತದಲ್ಲಿ ಆ ಶಾಸ್ತ್ರದ ತತ್ವಗಳನ್ನು ಅನ್ವಯಿಸಿ ಅನೇಕ ಕೃತಿಗಳನ್ನು ವಿದ್ವಾಂಸರು ಸಂಪಾದಿಸಿ ದ್ದರು. ಕನ್ನಡದಲ್ಲಿ ಕಿಟೆಲ್, ರೈಸ್, ಆರ್. ನರಸಿಂಹಾಚಾರ್, ಎಂ. ಎ. ರಾಮಾನುಜ ಅಯ್ಯಂಗಾರ್, ಉತ್ತಂಗಿ ಚನ್ನಪ್ಪ, ಫ. ಗು. ಹಳಕಟ್ಟಿ, ಟಿ. ಎಸ್. ವೆಂಕಣ್ಣಯ್ಯ, ಬಿ. ವೆಂಕಟನಾರಾಯಣಪ್ಪ, ಶಿ. ಶಿ. ಬಸವನಾಳ ಇವರೇ ಮೊದಲಾದ ವರು ಗ್ರಂಥಸಂಪಾದನಾ ಕ್ಷೇತ್ರಕ್ಕೆ ತಮ್ಮ ಜ್ಞಾನವನ್ನು ಎರೆದಿದ್ದರು. ಅದರಲ್ಲೂ ಟಿ. ಎಸ್. ವೆಂಕಣ್ಣಯ್ಯನವರ ಗ್ರಂಥಸಂಪಾದನಾ ಕಾರ್ಯದಲ್ಲಿ ತೀ. ನಂ. ಶ್ರೀ. ಯವರೂ ಬಿ. ಎಲ್. ಎಸ್. ಅವರೂ ಸಹಾಯ ಮಾಡುತ್ತ ಆ ತಮ್ಮ ಗುರುಗಳ

* ಈ ಭಾಗವನ್ನು ಬರೆಯುವಲ್ಲಿ ಪ್ರೊ॥ ಎಂ. ವಿ. ಸೀತಾರಾಮಯ್ಯನವರ, 'ಕನ್ನಡ ಗ್ರಂಥ ಸಂಪಾದನೆಗೆ ತೀ. ನಂ. ಶ್ರೀಯವರ ಕೊಡುಗೆ' (ಶ್ರೀಕಂಠತೀರ್ಥ, ಸಂಪಾದಕರು : ಎಂ. ಚಿದಾನಂದ ಮೂರ್ತಿ, ತೀ. ಶ್ರೀ. ನಾಗಭೂಷಣ, ಮತ್ತು ತೀ. ನಂ. ಶಂಕರನಾರಾಯಣ. ಬೆಂಗಳೂರು, ೧೯೭೬. ಪು. ೧೮೬–೨೨೦) ಎಂಬ ಲೇಖನದ ಸಹಾಯವನ್ನೂ ಪಡೆದಿದ್ದೇನೆ.

ನೇತೃತ್ವದಲ್ಲಿ ಗ್ರಂಥಸಂಪಾದನೆಯ ಶಿಕ್ಷಣವನ್ನು ಪಡೆದರು, ಮತ್ತು ಆ ದಿಸೆಯಲ್ಲಿ ಹೆಚ್ಚಿನ ಪ್ರೌಢಿಮೆ ಗಳಿಸಿದರು. ಟಿ. ಎಸ್. ವೆಂಕಣ್ಣಯ್ಯನವರು ತಮ್ಮ ಶಿಷ್ಯರಿಂದ ಒದಗಿದ ಸಹಾಯವನ್ನು ತಮ್ಮ "ಬಸವರಾಜ ದೇವರ ರಗಳೆ" (೧೯೩೦), "ಕರ್ಣಾಟಕ ಕಾದಂಬರೀ ಸಂಗ್ರಹ"ಗಳ (೧೯೩೩) ಮುನ್ನುಡಿಗಳಲ್ಲಿ ಹಾರ್ದಿಕವಾಗಿ ಸ್ಮರಿಸಿದ್ದಾರೆ.

ತೀ. ನಂ. ಶ್ರೀ. ಅವರಿಗೆ ಗ್ರಂಥಸಂಪಾದನೆ ಮಾಡಲು ಇದ್ದ ಅರ್ಹತೆಗಳೇನು ಎಂಬುದನ್ನು ಗಮನಿಸಬೇಕು. ಪಾಶ್ಚಾತ್ಯ ಸಾಹಿತ್ಯದ ಅಧ್ಯಯನದಿಂದ ಒದಗಿದ ವೈಜ್ಞಾನಿಕ ಅಥವಾ ಸಂಶೋಧನ ದೃಷ್ಟಿ, ಸಂಸ್ಕೃತದಲ್ಲಿ ಆಳವಾದ ಜ್ಞಾನ, ಕನ್ನಡದಲ್ಲಿ ಅತ್ಯಂತ ನಿರ್ದುಷ್ಟವಾದ ತಿಳಿವಳಿಕೆ, ತಮಿಳು ತೆಲುಗುಗಳ ಒಳ್ಳೆಯ ಜ್ಞಾನ, ಉನ್ನತ ವಿದ್ವಾಂಸರ ಸಹವಾಸ, ನಲವತ್ತು ಐವತ್ತರ ದಶಕಗಳಲ್ಲಿದ್ದ ಉತ್ಸಾಹದ ಶೈಕ್ಷಣಿಕ ವಾತಾವರಣ, ಕನ್ನಡ ಕೃತಿಗಳನ್ನು ಹೊರತರುವ ಹುಮ್ಮಸ್ಸು, ಸುಲಭಕೀರ್ತಿ ಮತ್ತು ಆಮಿಷಗಳಿಗೆ ಒಳಗಾಗದ ಮನೋಧರ್ಮ, ಇವು. ಇನ್ನೂ ಹತ್ತಾರು ಅಂಶಗಳನ್ನು ನಾವು ಗಮನಿಸಬೇಕು (ಈ ಎಲ್ಲ ಮಾತುಗಳೂ ಡಿ. ಎಲ್. ಎನ್. ಅವರಿಗೂ ಅನ್ವಯವಾಗುತ್ತವೆ.) ಪಾಂಡಿತ್ಯಕ್ಕೆ ಬೇಕಾದ ಒಂದು ಸಂಯಮ, ಎಲ್ಲವನ್ನೂ ಒಂದು ಬಗೆಯ ಸಂದೇಹದಿಂದಲೇ ನೋಡುತ್ತ ಉಚಿತ ತೀರ್ಮಾನವನ್ನು ಕೊಡಲು ಸಾಧ್ಯವಾಗುವ ತನಕ ಒಂದು ರೀತಿಯ ಮಾನಸಿಕ ಹಿಂದೇಟು ಹಾಕುತ್ತ, ಆದಷ್ಟು ಶ್ರಮಪಟ್ಟು ಉತ್ತಮವಾದುದನ್ನೇ ಒದಗಿಸುವ ಛಲ ಇವನ್ನು ಅವರಲ್ಲಿ ಕಾಣುತ್ತೇವೆ.

ತೀ. ನಂ. ಶ್ರೀ. ಕೈಹಾಕುವವರೆಗೆ ಹರಿಹರನ "ನಂಬಿಯಣ್ಣನ ರಗಳೆ" ಪ್ರಕಟವಾಗಿರಲೇ ಇಲ್ಲ. ಅದರ ಸಂಪಾದನೆಗೆ ಅವರು ಒಟ್ಟು ಐದು ಪ್ರತಿಗಳನ್ನು ಬಳಸಿಕೊಂಡಿದ್ದಾರೆ, ಮತ್ತು ಅವುಗಳ ಪರಸ್ಪರ ಸಂಬಂಧದ ಪೀಳಿಗೆ ರಚನೆಯನ್ನು ಮಾಡಿದ್ದಾರೆ. "ಕ, ಜ ಗಳ ಪಾಠ ಸಂಪ್ರದಾಯವೂ ಖ, ಗ, ಚ ಗಳ ಪಾಠ ಸಂಪ್ರದಾಯವೂ ಕೊಂಚಮಟ್ಟಿಗೆ ಭಿನ್ನವಾಗಿವೆ. ಕ, ಜ ಗಳ ಸಂಪ್ರದಾಯವೇ ಮೂಲಕ್ಕೆ ಹೆಚ್ಚು ಹತ್ತಿರವೆಂದು ಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಖ, ಗ, ಚ ಗಳ ಗುಂಪಿನಲ್ಲಿ ಖ, ಗ ಗಳು ಒಂದಕ್ಕೊಂದು ಬಹುಮಟ್ಟಿಗೆ ಹೊಂದಿಕೊಳ್ಳುತ್ತವೆ, ಚ ಬೇರೆ ನಿಲ್ಲುತ್ತದೆ. ಖ, ಗ ಗಳಲ್ಲಿ ಅನೇಕ ಪ್ರಕ್ಷಿಪ್ತ ಭಾಗಗಳುಂಟು; ತಪ್ಪು ಪಾಠಗಳೂ ಉಂಟು. ಚ ದಲ್ಲಂತೂ ಅವು ಮಿತಿಮೀರಿ ಹೋಗಿವೆ." ಈ ಮಾತುಗಳು ಹಸ್ತಪ್ರತಿಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿರುವುದರ ಕುರುಹುಗಳು. ಆ ಹಸ್ತಪ್ರತಿಗಳಲ್ಲಿ ಪ್ರಮಾದದಿಂದ ಸಂಭವಿಸಿದ ಅಕ್ಷರದೋಷಗಳನ್ನು ಬಿಟ್ಟು ಉಳಿದ ಪಾಠಗಳನ್ನು ಗುರುತುಮಾಡಿಕೊಂಡು ಮೂಲ ಪಾಠವನ್ನು [illegible] [illegible] "ಪಾಠಾಂತರಗಳನ್ನು [illegible] [illegible] [illegible]....[illegible] [illegible] [illegible] [illegible] [illegible]" [illegible]. [illegible]

"ನಂಬಿಯಣ್ಣನ ರಗಳೆಯ ಪುಸ್ತಕದ ಯಾವುದೇ ಪುಟ ತೆಗೆದರೂ, ಅದರ ಮುದ್ರಿತ ಅಕ್ಷರಗಳ ಜೊತೆ ಸಂಖ್ಯೆಗಳೂ ಚಿಹ್ನೆಗಳೂ ಕಲಸಿಕೊಂಡಿವೆ. ಪಾಠಾಂತರ ಚಿಹ್ನೆಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ಬಳಕೆಗೆ ತಂದದ್ದು ಗ್ರಂಥಸಂಪಾದನ ಶಾಸ್ತ್ರಕ್ಕೆ ತೀ.ನಂ. ಶ್ರೀ.ಯವರ ಒಂದು ಉಪಯುಕ್ತವಾದ ಕೊಡುಗೆ" ಎಂಬ ಪ್ರೊ|| ಎಂ. ವಿ. ಸೀತಾರಾಮಯ್ಯನವರ ಹೇಳಿಕೆ ಸಮರ್ಥನೀಯವಾಗಿದೆ. ಬಹುಶಃ ಕನ್ನಡದಲ್ಲಿ ಡಿ.ಎಲ್.ಎನ್. ಅವರು "ವಡ್ಡಾರಾಧನೆ"ಗೆ ಶ್ರಮಿಸಿರುವುದನ್ನು ಬಿಟ್ಟರೆ ಇನ್ನೊಂದು ಕೃತಿಯ ಬಗ್ಗೆ ಇಷ್ಟೊಂದು ಶ್ರಮಿಸಿರುವ ಉದಾಹರಣೆ ಮತ್ತೊಂದು ದೊರಕಲಾರದು. "ವಡ್ಡಾರಾಧನೆ" ಮತ್ತು "ನಂಬಿಯಣ್ಣನ ರಗಳೆ"ಗಳು ಆದರ್ಶ ಗ್ರಂಥಸಂಪಾದನೆಗೆ ಕನ್ನಡದ ಉದಾಹರಣೆಗಳು.

"ನಂಬಿಯಣ್ಣನ ರಗಳೆ"ಯ ಮೂಲ, ಕವಿಯ ಕಾಲ, ದೇಶ, ಕೃತಿಯ ಸೊಗಸು, ಕಥೆಯ ವ್ಯಾಪ್ತಿ ಇವುಗಳ ಬಗ್ಗೆ ಪ್ರತ್ಯೇಕವಾಗಿ ಬರೆಯುವ ಆಸೆಯನ್ನು ಹೊತ್ತಿದ್ದರು. ಆದರೆ ಅದು ಈಡೇರದೇ ಹೋದುದು ಅತ್ಯಂತ ವ್ಯಸನದ ಸಂಗತಿಯಾಗಿದೆ.

"ಗದಾಯುದ್ಧ ಸಂಗ್ರಹ" ಎಂಬ ಹೆಸರ ಕೃತಿಯನ್ನು ನೋಡದವರಿಗೆ ಸ್ವಲ್ಪ ಮಟ್ಟಿನ ತಪ್ಪುಕಲ್ಪನೆ ತಂದುಕೊಡಬಹುದು. ಆಗಲೇ ಸಂಪಾದಿತವಾದ ಕೃತಿಯೊಂದರ ಕೆಲವು ಭಾಗಗಳನ್ನು ತೆಗೆದು ಕೊಡುವುದೇ "ಸಂಗ್ರಹ"ವೆನ್ನಿಸಿಕೊಳ್ಳುತ್ತದೆ, ಈಗಿನ ಅನೇಕರ ಕಣ್ಣಲ್ಲಿ. ಆದರೆ, ತೀ.ನಂ.ಶ್ರೀ. ತಲೆಮಾರಿನ ವಿದ್ವಾಂಸರು ಒಂದು ಕೃತಿಯ ಸಂಪಾದನೆಯಷ್ಟೇ ಶ್ರಮವಹಿಸುತ್ತಿದ್ದರು ಅವುಗಳನ್ನು ಸಂಗ್ರಹಿಸುವಲ್ಲಿ ಕೂಡ. ('ಕರ್ಣಾಟಕ ಕಾದಂಬರಿ ಸಂಗ್ರಹ', 'ಪಂಪರಾಮಾಯಣ ಸಂಗ್ರಹ', 'ಹರಿಶ್ಚಂದ್ರಕಾವ್ಯ ಸಂಗ್ರಹ', 'ಪ್ರಭುಲಿಂಗಲೀಲೆಯ ಸಂಗ್ರಹ'ಗಳನ್ನು ಇಲ್ಲಿ ಉದಾಹರಿಸಬಹುದು.) ಅಂತಹವುಗಳಲ್ಲಿ ಬಹುಶಃ "ಗದಾಯುದ್ಧ ಸಂಗ್ರಹಂ" ನಿಶ್ಚಿತವಾಗಿಯೂ ಅಗ್ರಗಣ್ಯ. ಈ ಸಂಗ್ರಹಕ್ಕೆ ಅಗತ್ಯವಾದ ಒಂದು ಪ್ರಸ್ತಾವನೆ ಇಲ್ಲ ಎಂಬ ಕೊರತೆಯನ್ನು ಬಿಟ್ಟರೆ, ಇದೊಂದು ಅತ್ಯುತ್ತಮ ಸಂಪಾದಿತ, ಸಂಗ್ರಹಿತ ಕೃತಿ. ಆ ಹೊತ್ತಿಗೆ (೧೯೪೯) ಮಂ. ಆ. ರಾಮಾನುಜಯ್ಯಂಗಾರ್ಯರು ಸಂಪಾದಿಸಿದ್ದ "ಗದಾಯುದ್ಧ"ವು ಮೂರು ಆವೃತ್ತಿಗಳನ್ನು ಕಂಡಿತ್ತು. ಆ ಆವೃತ್ತಿಯನ್ನಲ್ಲದೆ, ರಾಮಾನುಜಯ್ಯಂಗಾರ್ಯರೇ ಬಳಸಿಕೊಂಡಿದ್ದ ಹಸ್ತಪ್ರತಿಗಳನ್ನಲ್ಲದೆ, ರನ್ನನ ಪದ್ಯಗಳು ಉಲ್ಲೇಖಗೊಂಡಿರುವ ಹಿಂದಿನ ಕಾವ್ಯಸಂಕಲನಗಳನ್ನೂ (ಉದಾ: ಕಾವ್ಯಾವಲೋಕನ), ಬಿ.ಎಂ.ಶ್ರೀ. ಅವರ "ಗದಾಯುದ್ಧ ನಾಟಕ"ವನ್ನೂ, ಸಂಸ್ಕೃತ ಆಕರಗಳನ್ನೂ ತಮ್ಮ ಸಂಪಾದನಸಾಮಗ್ರಿಯ ವ್ಯಾಪ್ತಿಗೆ ತಂದುಕೊಂಡಿದ್ದಾರೆ.

ಪದ್ಯಗಳಿಗೆ ಪಾಠಾಂತರಗಳನ್ನು ಕೊಡುವಲ್ಲಿ ವಹಿಸಿರುವ ಎಚ್ಚರ ಬಹುಶಃ ಅನನ್ಯ. ಅವರು ಒಪ್ಪಿ ಸ್ವೀಕರಿಸಿರುವ ಪಾಠಗಳ ಔಚಿತ್ಯವನ್ನು ಪ್ರಶ್ನಿಸುವುದು ತೀರ ದುಸ್ತರ. ಡಿ.ಎಲ್.ಎನ್. ಅವರು "ಕನ್ನಡ ಗ್ರಂಥಸಂಪಾದನೆ"ಯಲ್ಲಿ (೧೯೭೦,

ಪು. ೨೦೦) ಸ್ವೀಕೃತ ಪಾಠವೊಂದನ್ನು ಪ್ರಶ್ನಿಸಿದ್ದಾರೆ ಮತ್ತು ತೀ.ನಂ.ಶ್ರೀ. ಅವರು ಒಪ್ಪಿಕೊಂಡಿದ್ದ ಆ ಪಾಠವನ್ನು ತಿದ್ದಿದ್ದಾರೆ. 'ಬಗಸೆರೆ', 'ಬೆಸಲಗೆ' ಎಂಬರೆ ಎರಡಕ್ಕೂ ಬೊಗಸೆ ಎಂಬೇ ಅರ್ಥ. ಇವೆರಡಲ್ಲಿ ತೀ.ನಂ.ಶ್ರೀ.ಯವರು "ಬಗಸೆರೆ" ಯನ್ನು ಒಪ್ಪಿ, "ಬೆಸಲಗೆ"ಯನ್ನು ಪಾಠಾಂತರಕ್ಕೆ ತಳ್ಳಿದ್ದಾರೆ (೩.೭೬). "ಬೆಸಲಗೆ" ಬಹುಶಃ ಕಠಿಣಪಾಠವಾದ ಕಾರಣ ಅದು ಹೆಚ್ಚು ಸ್ವೀಕರಣಯೋಗ್ಯವಾಗಬಹುದೇ ಎಂಬ ಸಂದೇಹ ಓದುಗರಿಗೆ ಸುಳಿದುಹೋಗಬಹುದು. ಆದರೆ "ಗದಾಯುದ್ಧ ಸಂಗ್ರಹ"ದ ಉದ್ದಕ್ಕೂ ಒಂದು ತೀವ್ರ ಎಚ್ಚರದ ಮನಸ್ಸು ಕೆಲಸಮಾಡಿದೆಯೆಂಬುದು ಸಾಮಾನ್ಯ ಓದುಗನಿಗೂ ಸ್ಪಷ್ಟವಾಗುತ್ತದೆ. "ತುಱುಗೋಳೆಳ್...." ಎಂಬ ಪದ್ಯದ ಪಾಠವನ್ನು ನಿರ್ಣಯಿಸಿರುವ ರೀತಿಯನ್ನು ಗಮನಿಸಬಹುದು, "ತುರು ಗೊಳ್ಳಲ್" ಎಂಬ ಹಸ್ತಪ್ರತಿಗಳ ಪಾಠವನ್ನು "ತುಱುಗೋಳೆಳ್" ಎಂದು ಊಹೆ ಮಾಡಿ ತಿದ್ದಿರುವುದು ಸರ್ವಥಾ ಸಮರ್ಥನೀಯ. ಗ್ರಂಥಾಂತ್ಯದಲ್ಲಿ ಕೊಟ್ಟಿರುವ ಟಿಪ್ಪಣಿಗಳು, ಟಿಪ್ಪಣಿಗಳು ಹೇಗಿರಬೇಕೆಂಬುದಕ್ಕೆ ಮಾದರಿಯಾಗಿವೆ.

"ಗದಾಯುದ್ಧ ಸಂಗ್ರಹ"ಕ್ಕೆ ಪ್ರಸ್ತಾವನೆಯನ್ನು ಅವರು ಬರೆಯಲೇ ಇಲ್ಲ. ಆ ಬಗ್ಗೆ ವಿಸ್ತೃತವಾಗಿ ಟಿಪ್ಪಣಿಗಳನ್ನು ಮಾಡಿಕೊಂಡಿದ್ದರು ಮತ್ತು ಎಷ್ಟೋ ಹೊಸ ವಿಷಯಗಳು ಅವರ ತಲೆಯಲ್ಲಿದ್ದುವು. ಈ ನಷ್ಟವನ್ನು ಯೋಚಿಸುತ್ತಿದ್ದಂತೆಯೇ, ಅವರು ಸಂಗ್ರಹದಂತೆಯೇ ಇಡೀ ಕೃತಿಯನ್ನು ಸಂಪಾದಿಸದೇ ಹೋದರಲ್ಲಾ ಎಂಬುದೂ ನೆನಪಾಗಿ ಸಂಕಟಪಡುವಂತಾಗುತ್ತದೆ.

*  *  *

ಗ್ರಂಥಸಂಪಾದನೆಯ ಕ್ಷೇತ್ರದಲ್ಲಿ ಡಿ.ಎಲ್. ನರಸಿಂಹಾಚಾರ್ಯರದು ಇನ್ನೊಂದು ದೊಡ್ಡ ಹೆಸರು. ಅವರ ಕಾರ್ಯ, ಆ ಕ್ಷೇತ್ರದಲ್ಲಿ ಕನ್ನಡದಲ್ಲಿ ನಡೆದಿರುವ ಕಾರ್ಯಗಳಲ್ಲೆಲ್ಲ ನಿಶ್ಚಯವಾಗಿಯೂ ಮಹತ್ತರವಾದುದು. ಅವರು ಒಟ್ಟು ಏಳು ಕೃತಿಗಳನ್ನು ಸಂಪಾದಿಸಿದ್ದಾರೆ. (ಅವುಗಳಲ್ಲಿ ಎರಡು ಇತರರ ಜೊತೆ ಸೇರಿ). ಅವುಗಳ ಪಟ್ಟಿ ಹೀಗಿದೆ:

೧. ಭೀಷ್ಮ ಪರ್ವ, ಎರಡನೆಯ ಮುದ್ರಣ (೧೯೫೦).
೨. ಸಕಲವೈದ್ಯ ಸಂಹಿತಾಸಾರಾರ್ಣವ (೧೯೩೨).
೩. ಸಿದ್ಧರಾಮ ಚಾರಿತ್ರ (೧೯೪೧, ಟಿ. ಎಸ್. ವೆಂಕಣ್ಣಯ್ಯನವರೊಡನೆ).
೪. ವಡ್ಡಾರಾಧನೆ (೧೯೪೯).
೫. ಸುಕುಮಾರ ಚರಿತಂ (೧೯೫೪, ತ. ಸು. ಶಾಮರಾಯ್ ಅವರೊಡನೆ).
೬. ಗೋವಿನ ಹಾಡು (೧೯೬೦).
೭. ಶಬ್ದಮಣಿ ದರ್ಪಣಂ (೧೯೬೪).

ಇವಲ್ಲದೆ, 'ಪಂಪರಾಮಾಯಣ ಸಂಗ್ರಹ', 'ಸಿದ್ಧರಾಮ ಚರಿತೆ ಸಂಗ್ರಹ'ಗಳನ್ನು ಅಮೂಲ್ಯವಾದ ಪ್ರಸ್ತಾವನೆಗಳೊಂದಿಗೆ ಹೊರತಂದಿದ್ದಾರೆ.

'ಗೋವಿನ ಹಾಡು' ಹಸ್ತಪ್ರತಿಗಳಲ್ಲಿ ದೊರಕುವ ಜಾನಪದ ಸ್ವರೂಪದ ಒಂದು ಕಥನಗೀತ. ಅವರ ಮೂಲಪಾಠವನ್ನು ಒದಗಿಸಿದ್ದಾರೆಯಾದರೂ ಕೆಲವೆಡೆ ನಮಗೆ ಬಾಲ್ಯದಲ್ಲಿ ಪ್ರಾಥಮಿಕ ಪಠ್ಯಗ್ರಂಥಗಳಲ್ಲಿ ಓದಿ ಪರಿಚಿತವಾಗಿರುವ ಪಾಠವೇ ಹೆಚ್ಚು ಪ್ರಿಯವಾಗಬಹುದು. ಆದರೆ, ಒಂದು ಪಾಠವು ಓದುಗರಿಗೆ ಪ್ರಿಯವೇ ಅಪ್ರಿಯವೇ ಎಂಬುದು ಗ್ರಂಥಸಂಪಾದನೆಯಲ್ಲಿ ತೀರ ಗೌಣವಾದುದು: ಕವಿ ಬರೆದಿರಬಹುದಾದ ಮೂಲಪಾಠ ಯಾವುದು ಎಂಬುದೇ ನಿಜವಾಗಿ ಪ್ರಸ್ತುತ. 'ಭೀಷ್ಮ ಪರ್ವ' ಮತ್ತು 'ಸಕಲವೈದ್ಯ ಸಂಹಿತಾಸಾರಾರ್ಣವ'ಗಳು ಡಿ. ಎಲ್. ಎನ್. ಅವರ ವಿದ್ವಜ್ಜೀವನದ ಆರಂಭದ ಕೃಷಿಗಳು. ಅವರು ಮೈಸೂರಿನ ಓರಿಯಂಟಲ್ ಲೈಬ್ರರಿಗೆ ೧೯೩೦ರಲ್ಲಿ ರಿಸಿಡೆಂಟ್ ಕನ್ನಡ ಪಂಡಿತರಾಗಿ ಸೇರಿದ ಎರಡು ವರ್ಷಗಳಲ್ಲಿ ಆ ಕೃತಿಗಳನ್ನು ಅಚ್ಚಿಗೆ ಸಿದ್ಧಪಡಿಸಿಕೊಟ್ಟರು. ಭೀಷ್ಮಪರ್ವವನ್ನು "ಎಂಟು ಕೈಬರಹದ ಪ್ರತಿಗಳ ಆಧಾರದಿಂದ ತಿದ್ದಿದೆ.... ಈ ಪರ್ವವನ್ನು ಶೋಧನೆ ಮಾಡುವುದರಲ್ಲಿ ಎಲ್ಲ ಪ್ರತಿಗಳಲ್ಲಿಯೂ ದೊರೆಯುವ ಪಾಠವನ್ನೇ ಮೂಲಪಾಠವನ್ನಾಗಿಟ್ಟುಕೊಂಡು, ಕೆಲವು ಪ್ರತಿಗಳಲ್ಲಿ ಮಾತ್ರ ದೊರೆಯುವ ಪಾಠಗಳಲ್ಲಿ ಸೂಕ್ತವಾಗಿ ಕಂಡುಬಂದುವುಗಳನ್ನು ಒಂದೆರಡು ಪದ್ಯಗಳಾಗಿದ್ದರೆ ಪುಟದಡಿಯಲ್ಲಿಯೂ ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿ ಪರಿಶಿಷ್ಟವಾಗಿಯೂ ಕೊಟ್ಟಿದೆ."

೧೯೩೦ನೆಯ ಇಸವಿಯಲ್ಲಿ ಮೇಲೆ ಹೇಳಿದ ಕೆಲಸದಲ್ಲಿ ನಿಯುಕ್ತರಾಗಿದ್ದಾಗಲೇ ಅವರ ಕಣ್ಣಿಗೆ ಅದೇ ಹಸ್ತಪ್ರತಿಭಂಡಾರದಲ್ಲಿದ್ದ ವಡ್ಡಾರಾಧನೆಯ ಹಸ್ತಪ್ರತಿ ಕಾಣಿಸಿದ ಕಥೆಯನ್ನು ಮುಂದೆ ತಾವು ಸಂಪಾದಿಸಿ ಪ್ರಕಟಿಸಿದ ಅದೇ ಕೃತಿಯ ಪೀಠಿಕೆಯಲ್ಲಿ ಹೇಳಿಕೊಂಡಿದ್ದಾರೆ. ವಡ್ಡಾರಾಧನೆಯ ಒಳ್ಳೆಯ ಗದ್ಯದಿಂದ ಆಕರ್ಷಿತರಾದ ಅವರು ಆ ಹಸ್ತಪ್ರತಿಯಿಂದ ಮೂರು ಕತೆಗಳನ್ನು ಬರೆದು ಕಳಿಸಿದರು ಮತ್ತು ಅವು ಮರುವರ್ಷ, ಎಂದರೆ (೧೯೩೧ನೆಯ ಅಕ್ಟೋಬರ್ ಸಂಚಿಕೆಯ) "ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆ"ಯಲ್ಲಿ ಪ್ರಕಟವಾದುವು. ಮುಂದೆ, ಹೆಚ್ಚಿನ ಹಸ್ತಪ್ರತಿಗಳಿಗಾಗಿ ಎಂಟು ವರ್ಷ ಕಾದು ಅವು ದೊರಕಿ ಹೆಚ್ಚು ಶುದ್ಧಪಾಠವನ್ನು ಕೊಡಬಹುದೆಂಬ ಧೈರ್ಯ ಮೂಡಿದ ಮೇಲೆ, ಮೊದಲನೆಯ ಸುಕುಮಾರಸ್ವಾಮಿಯ ಕಥೆಯನ್ನು ಅದೇ ಪತ್ರಿಕೆಯಲ್ಲಿ (೨೪ : ४) ಪ್ರಕಟಿಸಿದರು. ಮುಂದೆ ಎಲ್ಲ ಕತೆಗಳು ಆ ಪತ್ರಿಕೆಯಲ್ಲಿ ಭಾಗಶಃ ಅಚ್ಚಾಗಿ ೧೯೪೯ರಲ್ಲಿ ವಡ್ಡಾರಾಧನೆಯ ಪಾಠ ಇಡಿಯಾಗಿ ಪ್ರಕಟವಾಯಿತು. ೧೯೭೦ ರಲ್ಲಿ ನಾಲ್ಕನೆಯ ಮುದ್ರಣವನ್ನು ಕಂಡು ವಿಸ್ತಾರವಾದ ಉಪೋದ್ಘಾತದೊಡನೆ ಪ್ರಕಟವಾಯಿತು.

ಕನ್ನಡ ಸಾಹಿತ್ಯದ ಅಮೂಲ್ಯ ಗದ್ಯಕೃತಿ ಸಂಪಾದನೆಗೆ ಡಿ. ಎಲ್. ಎನ್ ಅವರ ಕೈಗೆ ದೊರಕಿದ್ದು ಒಂದು ಅಪೂರ್ವ ಯೋಗಾಯೋಗ. ಇದರ ಸಂಪಾದನೆಗೆ ಆರು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಅವುಗಳ ವಿವರಣೆಯನ್ನು ಕೊಟ್ಟು ಅವುಗಳ ಪೀಳಿಗೆ ರಚನೆಯನ್ನು ಮಾಡಿದ್ದಾರೆ. ಪೀಳಿಗೆ ರಚನೆ ಯಾವ ಹಸ್ತಪ್ರತಿ

ಗಳ ಪಾಠಕ್ಕೆ ಎಷ್ಟು ಬೆಲೆ ಕೊಡಬೇಕು ಎಂಬ ಸಂಪಾದಕನ ತೀರ್ಮಾನಿಗೆ ಹೆಚ್ಚು ಸಹಾಯವನ್ನು ಮಾಡುತ್ತದೆ.

ಪೀಠಿಕೆಯಲ್ಲಿ (೧೯೭೦ರ ಆವೃತ್ತಿ) ಡಿ. ಎಲ್. ಎನ್. ಕೃತಿಯ ಹೆಸರು, ಕೃತಿಕಾರನ ಹೆಸರು, ಕಾಲ ದೇಶ ವಿಚಾರಗಳನ್ನು ಕುರಿತು ವಿಪುಲವಾಗಿ ವಿವೇಚಿಸಿದ್ದಾರೆ. ಆ ಮುಂಚೆ ಆ. ನೇ. ಉಪಾಧ್ಯೆಯವರೂ ಅಂತಹ ಚರ್ಚೆಗೆ ಕೈಹಾಕಿ, ಕೆಲವು ಸಂದೇಹಗಳನ್ನು ಎತ್ತಿದ್ದರು. ಅದಕ್ಕೆ ಡಿ. ಎಲ್. ಎನ್. ಇಲ್ಲಿ ಉತ್ತರ ಹೇಳಲು ಯತ್ನಿಸಿದ್ದಾರೆ. ಅಂದು ಆ. ನೇ. ಉಪಾಧ್ಯೆ ಎತ್ತಿದ ಸಂದೇಹಗಳು ಇಂದಿಗೂ ಹಾಗೇ ಉಳಿದಿವೆ. ಈ ವಿದ್ವಾಂಸರ ಬಳಿಕ ಹಲವರು ವಡ್ಡಾರಾಧನೆ ಕೃತಿಯ ಹೆಸರು, ಕೃತಿಕಾರನ ಹೆಸರು, ಕಾಲ, ದೇಶಗಳ ಚರ್ಚೆಯನ್ನು ಮುಂದುವರಿಸಿದರೂ ಆ ಚರ್ಚೆ ಒಟ್ಟು ಸಾರಾಂಶದಲ್ಲಿ ಚರ್ಚೆ ಆರಂಭವಾದಾಗ ಇದ್ದ ಸ್ಥಿತಿಯಲ್ಲಿಯೇ ಉಳಿದಿರುವುದು ಒಂದು ದುರದೃಷ್ಟದ ಸಂಗತಿ. ವಡ್ಡಾರಾಧನೆಯ ಹೆಸರು ಏನು? ತಿಳಿಯದು; ಕೃತಿಕಾರನ ಹೆಸರು, ಬಹುಶಃ ಶಿವಕೋಟಿ ಅಲ್ಲ; ಕಾಲ ಕ್ರಿ. ಶ. ೯೨೦ ಎಂಬ ಡಿ. ಎಲ್. ಎನ್.ವಾದ ಬಹುಶಃ ಸ್ವೀಕಾರ್ಯವಿಲ್ಲ (ಅದು ಬಹುಶಃ ಇನ್ನೂ ಈಚಿನದು). ಕೃತಿಕಾರನ ದೇಶವೂ ಅನಿಶ್ಚಿತ, ಡಾ|| ಉಪಾಧ್ಯೆ ಹೇಳುವಂತೆ, ಕೃತಿಯನ್ನು ನಿರ್ದೇಶಿಸುವುದಕ್ಕೆ ಒಂದು ಹೆಸರು ಬೇಕಾಗಿದೆ— 'ವಡ್ಡಾರಾಧನೆ' ಎಂಬುದು ಅಂತಹ ಅನುಕೂಲ ಹೆಸರು—ಇಟ್ಟುಕೊಳ್ಳೋಣ (ಅದು ಕೃತಿಕಾರ ಕೊಟ್ಟ ಹೆಸರಿರಬಹುದು, ಇಲ್ಲದಿರಬಹುದು). ಈಗ ದೊರಕಿರುವ ಹತ್ತೊಂಬತ್ತು ಕತೆಗಳ ಗುಚ್ಛವೊಂದೇ ಗಟ್ಟಿ ಸಂಗತಿ; ಇದರ ಅರ್ಥ, ಆ ಬಗ್ಗೆ ನಡೆದಿರುವ ಚರ್ಚೆಗಳೆಲ್ಲ ನಿಷ್ಫಲವೆಂದು ಸೂಚಿಸುತ್ತಿಲ್ಲ; ಅವು ಇನ್ನೂ ಉಚಿತ ಫಲಗಳನ್ನು ಕೊಡಬೇಕಾಗಿದೆಯೆಂದು ಮಾತ್ರ ಅರ್ಥ.

ಆದರೆ, ಡಿ. ಎಲ್. ಎನ್. ಅವರ ವಿಸ್ತಾರವಾದ ಪೀಠಿಕೆಯ ಅಧ್ಯಯನವೇ ಒಂದು ಸಂಶೋಧನೆಯ ಶಿಕ್ಷಣವಾಗಬಲ್ಲುದು.

೧೯೭೪-೬ ರ ಸುಮಾರಿನಲ್ಲಿ ಒಮ್ಮೆ ಡಿ. ಎಲ್. ಎನ್. ನನಗೆ ಹೇಳಿದ್ದರು— "ವಡ್ಡಾರಾಧನೆಯ ಸಂಪಾದನಕಾರ್ಯದಂತಹ ಸಂಶೋಧನೆಗೆ ರಷ್ಯದಲ್ಲಿ ಎರಡುಮೂರು ಡಿಗ್ರಿಗಳು ದೊರಕುತ್ತಿದ್ದುವು". ಈ ಮಾತುಗಳನ್ನು ಅವರು ಯಾವ ಸಂದರ್ಭದಲ್ಲಿ ಹೇಳಿದರೆಂಬುದು ಮರೆತುಹೋಗಿದೆ. ಪಿಎಚ್.ಡಿ., ಡಿ. ಲಿಟ್. ಪದವಿಗಳನ್ನು ಯೋಗ್ಯವಲ್ಲದ ಕೃತಿಗಳಿಗೂ ಕೊಡುತ್ತಿರುವುದರ ಬಗ್ಗೆ ಚರ್ಚೆ ಮಾಡುತ್ತಿದ್ದೆವು. ಆ ಪ್ರಶಸ್ತಿಗಳ ಅಪಮೌಲ್ಯೀಕರಣವಾಗುತ್ತಿರುವುದು, ಅವುಗಳಿಗೆ ಇಲ್ಲದ ಪ್ರಾಮುಖ್ಯ ಬಂದಿರುವುದು ಡಿ. ಎಲ್. ಎನ್. ಅವರ ಮನಸ್ಸನ್ನು ನೋಯಿಸಿತ್ತು. ತಗುಲಿಸಿಕೊಳ್ಳಲು ಅವರಿಗೆ ಯಾವುದೇ ಅಂತಹ ಪ್ರಶಸ್ತಿಯೂ ಇರಲಿಲ್ಲ, ಅದರ ವ್ಯಾಮೋಹವಂತೂ ಸ್ವಲ್ಪವೂ ಇರಲಿಲ್ಲ. ನಾನೇ "ವಡ್ಡಾರಾಧನೆಯಂತಹ ಸಂಶೋಧನೆ " ಇತ್ಯಾದಿ ಮಾತುಗಳನ್ನಾಡಿ ಅವರ ಬಾಯಿಂದ ಮೇಲಿನ ಮಾತುಗಳು ಬರುವಂತೆ

ಪ್ರಚೋದಿಸಿವೆನೆಂದು ತೋರುತ್ತದೆ. ಆದರೆ ಅವು ಡಿ. ಎಲ್. ಎಸ್. ಅವರಿಗೆ ತಮ್ಮ ಕಾರ್ಯದ ಬಗ್ಗೆ ಇದ್ದ ನಿಜವಾದ ಹೆಮ್ಮೆಯನ್ನು ತೋರುತ್ತವೆ (ಮುಂದೆ ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಗೌರವ ಡಾಕ್ಟರೇಟ್ ಕೊಟ್ಟು ಗೌರವಿಸಿದ್ದು ನಮಗೆಲ್ಲ ಬಹಳ ಸಮಾಧಾನವನ್ನು ತಂದಿತು).

ಆ ಕೃತಿಯ ಸಂಪಾದನೆಗೆ ಡಿ. ಎಲ್. ಎಸ್. ಅಪಾರ ಶ್ರಮಪಟ್ಟಿದ್ದಾರೆ. ಹಸ್ತಪ್ರತಿಗಳ ಸಂಕಲನ, ಪಾಠಾಂತರ ಸಂಕಲನ, ಪಾಠ ನಿಯೋಜನೆ, ಸಂಸ್ಕೃತ ಪ್ರಾಕೃತ ಭಾಷೆಗಳ ಉಲ್ಲೇಖಗಳು ಇವುಗಳನ್ನು ಕುರಿತು ಅತ್ಯಂತ ಎಚ್ಚರಿಕೆಯಿಂದ ಕೆಲಸಮಾಡಿದ್ದಾರೆ. ಬಹುಶಃ ಈಗಿರುವ ಸಾಮಗ್ರಿಯ ಸಹಾಯದಿಂದ ಅದಕ್ಕಿಂತ ಉತ್ತಮಪಾಠವನ್ನು ನಾವು ಕೊಡಲಾರೆವು.

ತೊಂಬತ್ತು ಪುಟಗಳ ಟಿಪ್ಪಣಿಗಳು ಜೈನಧರ್ಮ ಸಾಹಿತ್ಯದ ಒಂದು ಪುಟ್ಟ ವಿಶ್ವಕೋಶ. ಪುಟಪುಟದಲ್ಲೂ ಅವರ ಪಾಂಡಿತ್ಯ ಪರಿಶ್ರಮಗಳು ಎದ್ದು ಕಾಣುತ್ತವೆ. ಒಂದು ಹಳಗನ್ನಡ ಕೃತಿಗೆ ಟಿಪ್ಪಣಿಗಳು ಹೇಗಿರಬೇಕು ಎಂಬುದಕ್ಕೆ ಇದೂ ಒಂದು ಒಳ್ಳೆಯ ಮಾದರಿ (ಮುಂದೆ ಇವರೇ ಬರೆದ "ಪಂಪಭಾರತ ದೀಪಿಕೆ" ಇಂದಿಗೂ ಆ ಬಗೆಯ ಕೆಲಸಮಾಡುವವರಿಗೆ ಒಂದು ದಾರಿದೀಪವಾಗಿದೆ).

ಈ ಟಿಪ್ಪಣಿಗಳ ಬಗ್ಗೆ ಮಾತನಾಡುವಾಗ ಒಂದು ಸಣ್ಣ ಸಂಗತಿಯನ್ನು ಪ್ರಸ್ತಾಪಿಸಬೇಕೆನ್ನಿಸುತ್ತದೆ. ವಡ್ಡಾರಾಧನೆಯ ಭದ್ರಬಾಹು ಭಟಾರರ ಕಥೆಯಲ್ಲಿ ಬರುವ "ಜಾಪುಲಿ ಸಂಘ"ವನ್ನು ಯಾಪನೀಯ ಸಂಘವೆಂದು ಮೊದಲು ಗುರುತಿಸಿದವನು ಬಹುಶಃ ನಾನು (ನೋಡಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೬೬, ಪು. ೭೫). ಆಗ ನನಗೆ ಹರಿಷೇಣನ ಬೃಹತ್ಕಥಾ ಕೋಶದಲ್ಲಿ ಅದಕ್ಕೆ ಸಮಾನವಾದ ಮಾತುಗಳು ಏನಿವೆ ಎಂಬುದನ್ನು ನೋಡಬೇಕೆಂಬುದು ಹೊಳೆದಿರಲಿಲ್ಲ. ಡಿ.ಎಲ್.ಎಸ್. ಅವರು ತಮ್ಮ ಟಿಪ್ಪಣಿಗಳಲ್ಲಿ (ವಡ್ಡಾರಾಧನೆ, ೧೯೭೦, ಪು. ೨೩೮) ಈ ಮಾತುಗಳನ್ನು ಬರೆದಿದ್ದಾರೆ–"ಶ್ವೇತಭಿಕ್ಷು ಜಾಪುಲಿಸಂಘ ಶ್ವೇತಾಂಬರ ಯತಿಗಳ ಜಾಪುಲಿ ಎಂಬ ನಗರದ ಸಂಘ, ಜಾಪುಲಿ– ಸಾವಲಿ ಪತ್ತನೇ' (ಬೃ. ಕ. ಕೋ. ೧೩೧-೮೧)". ಅದೇ ಟಿಪ್ಪಣಿಗಳ ಬಳಿಕ 'ಬೃಹತ್ಕಥ ಕೊಶ'ದ ಸಾರಾಂಶವನ್ನು ಕೊಡುತ್ತ (ಪು. ೩೦೦–೧) ಹೀಗೆ ಬರೆದಿದ್ದಾರೆ " ಈ ಕಂಬಲಿಕಾ ತೀರ್ಥದಿಂದ ಸಾವಲಿಪತ್ತನದಲ್ಲಿ (ದಕ್ಷಿಣಾ ಪಥದ) ಯಾಪನ ಸಂಘವು ಹುಟ್ಟಿತು (ಇದೇ ಯಾಪನೀಯ ಸಂಘವಿರಬಹುದು, ಶ್ವೇತಭಿಕ್ಷು ಜಾಪುಲಿಸಂಘ ಎಂದಿದೆ ವಡ್ಡಾರಾಧನೆಯಲ್ಲಿ)." 'ಜಾಪುಲಿ'ಯನ್ನು ಯಾಪನೀಯದ ಜೊತೆ ಸಮೀಕರಿಸುವಲ್ಲಿ ನನ್ನ ಪುಸ್ತಕ ಪ್ರಚೋದನೆ ನೀಡಿರಬಹುದು. ಆ ಮಾತು ಹಾಗಿರಲಿ. ಆದರೆ ಒಂದು ಕೃತಿಯನ್ನು ಮೂಲದೊಡನೆ ಹೋಲಿಸಿ ನೋಡುವ ಸಂಶೋಧನ ಪ್ರವೃತ್ತಿ ಡಿ.ಎಲ್.ಎಸ್. ಅವರಿಗೆ ರಕ್ತಗತವಾಗಿರುವುದನ್ನು ಇಲ್ಲಿ ಗಮನಿಸಬೇಕು.

"ಸಿದ್ಧರಾಮಚಾರಿತ್ರ"ವನ್ನು ಶ್ರೀ ಟಿ. ಎಸ್. ವೆಂಕಣ್ಣಯ್ಯನವರ ಜೊತೆ ಸಂಪಾದಿಸಿದ್ದಾರೆ. ಅವಕ್ಕಾಗಿ ನಾಲ್ಕು ಪ್ರತಿಗಳನ್ನು ಬಳಸಿಕೊಂಡು ಅವುಗಳ ವಿವರ ಕೊಟ್ಟಿದ್ದಾರೆ. "ಈ ಪ್ರತಿಗಳಲ್ಲಿ ಯಾವುದೂ ಸರ್ವಶುದ್ಧವಾಗಿಲ್ಲ; ಯಾವ ಒಂದನ್ನೂ ಮೂಲಪಾಠವಾಗಿ ಸ್ವೀಕರಿಸುವ ಹಾಗಿಲ್ಲ. ಯಾವ ಸಂದರ್ಭದಲ್ಲಿ ಯಾವ ಪ್ರತಿಗಳ ಅಥವಾ ಪ್ರತಿಯ ಪಾಠ ಉಚಿತವೆಂದು ಕಂಡುಬಂದಿದೆಯೋ ಅದನ್ನು ಇಲ್ಲಿ ಮೂಲಪಾಠವಾಗಿ ಕೊಟ್ಟಿದೆ. ಆದ್ದರಿಂದ ಈಗ ಮುದ್ರಿತವಾಗಿರುವ ಪಾಠ ಎಲ್ಲ ಪ್ರತಿಗಳ ಗುಣಾಂಶಗಳನ್ನೊಳಗೊಂಡ ಮಿಶ್ರಪಾಠವಾಗಿದೆ (Eclectic text). ದೊರೆತಿರುವ ಪ್ರತಿಗಳು ಅಶುದ್ಧತೆಯಲ್ಲಿ ಒಂದನ್ನೊಂದು ಮೀರಿಸಿರುವುದರಿಂದ ಬೇರೆ ಯಾವ ಕ್ರಮವನ್ನೂ ಪಾಠಶೋಧನೆ ಮಾಡುವಾಗ ಹಿಡಿಯಲು ಸಾಧ್ಯವಾಗಿಲ್ಲ. ಕವಿಯ ಪಾಠ ಯಾವುದಿರಬಹುದೆಂಬುದರ ಅರಿವು ಕೊಂಚಮಟ್ಟಿಗಾದರೂ ಈಗಿನ ಪರಿಷ್ಕರಣದಿಂದುಂಟಾಗುವಂತಿದ್ದರೆ ಸಾಕು. ಆದಷ್ಟುಮಟ್ಟಿಗೆ ಈ ಧ್ಯೇಯವನ್ನು ಸಾಧಿಸುವ ಪ್ರಯತ್ನ ಮಾಡಿದೆ."

ಹೀಗಿರುವಾಗ, ಉಸಿರು–ಉಸುರು, ಪೋಗು–ಹೋಗು ಎಂಬಂತಹ ಎರಡೂ ರೂಪಗಳು ಬಳಕೆಯಾಗಿದ್ದರೆ ಯಾವುದನ್ನು ಉಳಿಸಿಕೊಳ್ಳಬೇಕೆಂಬುದರ ಬಗ್ಗೆ ಸಂಪಾದಕನಿಗೆ ತೀವ್ರ ಸಂದೇಹಗಳು ಮೂಡುವುದು ಸಹಜ. ಡಿ. ಎಲ್. ಎನ್., "ಪ್ರಾಚೀನತಮವಾದ ಪ್ರತಿಯನ್ನು ಇಂಥ ಸಂದರ್ಭದಲ್ಲಿ ಅನುಸರಿಸದೆ ಬೇರೆ ಗತಿಯೇ ಇಲ್ಲ" ಎಂದು ಹೇಳಿ ತಮ್ಮ ಪ್ರಾಮಾಣಿಕತೆಯನ್ನು ಮೆರೆದಿದ್ದಾರೆ. ಸಿದ್ಧ ರಾಮ ಚಾರಿತ್ರವನ್ನು ಸಹೃದಯರಾಗಿ ಓದುವವರಿಗೆ ಈಗ ಪುನಾರಚಿಸಿರುವ ಪಾಠ ಸರ್ವದೃಷ್ಟಿಯಿಂದಲೂ ಗ್ರಾಹ್ಯವಾಗಿದೆ, ಮತ್ತು ಒಟ್ಟಾರೆ ಅದಕ್ಕಿಂತ ಉತ್ತಮಪಾಠ ಸದ್ಯಕ್ಕೆ ಅಸಾಧ್ಯ; ಆದರೆ, ಸಂಶೋಧನಾತ್ಮಕವಾಗಿ ಪ್ರತಿ ಪುಟದ ಕೆಳಗಿನ ಪಾಠಾಂತರ ಗಳನ್ನು ಗಮನಿಸಿದರೆ ಅಲ್ಲಿ ಹುದುಗಿರುವ ಸಮಸ್ಯೆಗಳ ಗಂಭೀರತೆ ವೇದ್ಯವಾಗುತ್ತದೆ. ವಿಸ್ತಾರವಾದ ಪೀಠಿಕೆ, ಟಿಪ್ಪಣಿಗಳು ಗ್ರಾಹ್ಯವಾಗಿವೆ. ಕನ್ನಡದಲ್ಲಿ ಚೆನ್ನಾಗಿ ಸಂಪಾದಿತವಾಗಿರುವ ಕಾವ್ಯಗಳಲ್ಲಿ ಇದೂ ಒಂದು. ಇನ್ನೂ ಒಳ್ಳೆಯ ಪ್ರತಿಗಳು ಸಿಗುವವರೆಗೆ "ಸಿದ್ಧರಾಮ ಚಾರಿತ್ರ"ದ ಪಾಠ ಈಗ ಇರುವಂತೆಯೇ ಮುಂದುವರಿಯು ವುದು ಅನಿವಾರ್ಯವಾಗಿದೆ.

ಕೇಶಿರಾಜನ "ಶಬ್ದಮಣಿ ದರ್ಪಣ"ವನ್ನು ಗ್ಯಾರೆಟ್, ಕಿಟೆಲ್ ಅವರು ಮೊದಲು ಪರಿಷ್ಕರಿಸಿ ಪ್ರಕಟಿಸಿದರು. ೧೯೨೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಒಂದು ಆವೃತ್ತಿ ಯನ್ನು ತಂದಿತು. ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ ಅವರು ಲಿಂಗಣಾರಾಧ್ಯನ ವೃತ್ತಿಗಳೊಡನೆ ಹೊರತಂದ ಆವೃತ್ತಿ ೧೯೪೯ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಪ್ರಕಟವಾಯಿತು. ಇದಕ್ಕೆ ಎಚ್. ಚೆನ್ನಕೇಶವ ಅಯ್ಯಂಗಾರ್ಯರು ವಿಸ್ತಾರವಾದ ಅವತರಣಿಕೆಯನ್ನು ಬರೆದು ಸೇರಿಸಿದರು. ಈ ಆವೃತ್ತಿ ಗಳಲ್ಲಿ ಯಾವುದೂ ವಿದ್ಯಾರ್ಥಿಗಳಿಗೆ ದೊರೆಯದಿದ್ದ ಕಾಲದಲ್ಲಿ ತೀ.ನಂ.ಶ್ರೀ.ಯವರು

ಈ ಕೃತಿಯನ್ನು "ಪರಿಷ್ಕರಿಸಿ ಮುದ್ರಿಸಬೇಕೆಂದು....ಒತ್ತಾಯಪಡಿಸಿ ಪ್ರೋತ್ಸಾಹ ವನ್ನಿತ್ತ" ಫಲವೆಂದು ಡಿ.ಎಲ್.ಎಸ್. ಹೇಳಿಕೊಂಡಿದ್ದಾರೆ. (೧೯೫೯ರ ಮೊದಲ ಮುದ್ರಣದ ಪ್ರಸ್ತಾವನೆ).

ಶಬ್ದಮಣಿ ದರ್ಪಣ ಬಹಳ ಜನಪ್ರಿಯವಾಗಿದ್ದ ಹಳಗನ್ನಡ ವ್ಯಾಕರಣವಾದ್ದ ರಿಂದ ಅದು ಅನೇಕ ಪಾಠಾಂತರ ಪ್ರಕ್ಷೇಪಗಳಿಗೆ ಒಳಗಾಗಿದೆ. ಈ ಮುಂಚೆ ಬಂದಿದ್ದ ಆವೃತ್ತಿಗಳಿಗಿಂತ ಉತ್ತಮವಾದ ಒಂದು ಆವೃತ್ತಿಯೂ ಬೇಕಾಗಿತ್ತು. ಈ ಆವೃತ್ತಿ ಗಾಗಿ ಕಿಟೆಲ್, ಪರಿಷತ್ ಆವೃತ್ತಿಗಳನ್ನಲ್ಲದೆ ಇನ್ನೂ ಎರಡು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಇಲ್ಲಿರುವ ಪಾಠಸಮಸ್ಯೆಗಳನ್ನು ಕುರಿತು ವಿಸ್ತಾರವಾಗಿ ಹನ್ನೊಂದು ಪುಟಗಳಲ್ಲಿ ಚರ್ಚಿಸಿದ್ದಾರೆ. ತಮ್ಮ ಆವೃತ್ತಿಯ ಮಿತಿಗಳನ್ನು ಅರಿತಿದ್ದ ಡಿ.ಎಲ್.ಎಸ್. ಅವರೇ ಬೇರೊಂದು ಪರಿಷ್ಕರಣವೂ ಅಗತ್ಯವಿದೆಯೆಂಬುದನ್ನೂ ಸೂಚಿಸಿದ್ದಾರೆ—"ಕೇಶಿರಾಜನ ಸ್ವಹಸ್ತಪ್ರತಿಯ ಸ್ವರೂಪವನ್ನು ಕಂಡುಹಿಡಿಯುವು ದಕ್ಕೂ ಅದು ಸಾಧ್ಯವಾಗದಿದ್ದಲ್ಲಿ ಅದಕ್ಕೆ ಅತಿ ಸಮೀಪವಾದ ಪಾಠವನ್ನು ಗೊತ್ತು ಪಡಿಸುವುದಕ್ಕೂ ಪಾಠಸಮಸ್ಯೆಗಳ ವಿಶದೀಕರಣಕ್ಕೂ ಸರ್ವಪಾಠಭೇದಗಳನ್ನೊಳ ಕೊಂಡ ಸಶಾಸ್ತ್ರೀಯ ಸವಿಮರ್ಶ ಪರಿಷ್ಕರಣವನ್ನು (Variorum and Critical Edition based on the Science of Textual Criticism) ಸಿದ್ಧಪಡಿಸ ಬೇಕಾದ ಅವಶ್ಯಕತೆ ಇದೆ." ಅದಕ್ಕಾಗಿ ಎಲ್ಲ ಹಸ್ತಪ್ರತಿಗಳನ್ನೂ ಸೇರಿಸಿ, ಅವುಗಳಲ್ಲಿ ಅತ್ಯಂತ ಪ್ರಾಚೀನ ಹಸ್ತಪ್ರತಿಯನ್ನು ಆಧಾರವಾಗಿಟ್ಟುಕೊಂಡು ಉಳಿದ ಪ್ರತಿಗಳ ಪಾಠಭೇದವನ್ನು ಗುರುತಿಸಬೇಕೆಂದೂ, ಇದಕ್ಕೆ ಸಮಯವೂ ಹಣವೂ ಸಮರ್ಥ ಸಂಪಾದಕನ ಅಗತ್ಯವೂ ಇದೆಯೆಂದೂ ಸೂಚಿಸಿದ್ದಾರೆ. ಆ ಮಹತ್ಕಾರ್ಯಕ್ಕೆ "ಆ ಗ್ರಂಥದ ಮುದ್ರಿತ ಪ್ರತಿಗಳಿಂದ ಸಹಾಯವಾಗುವಂತೆಯೇ ಪ್ರಕೃತ ಮುದ್ರಣ ದಿಂದಲೂ ಆಗಬಹುದು" ಎಂದು ಹೇಳುವಲ್ಲಿ ತಮ್ಮ ಆವೃತ್ತಿ ಹಿಂದಿನವುಗಳ ಸುಧಾರಿತ ಆವೃತ್ತಿಯೆಂದೂ, ತಮ್ಮ ಆವೃತ್ತಿಯ ಬಗ್ಗೆ ತಮಗೇ ಅತೃಪ್ತಿಯಿದೆಯೆಂದೂ ಸೂಚಿಸಿದ್ದಾರೆ. ಆತ್ಮವಿಶ್ವಾಸವಿರುವ ಸಂಶೋಧಕನೊಬ್ಬನಿಗೆ ಮಾತ್ರ ಈ ಬಗೆಯ ಆತ್ಮಶೋಧನೆ ಸಾಧ್ಯ.

ಟಿ. ಎಸ್. ಶಾಮರಾವ್ ಮತ್ತು ಡಿ. ಎಲ್. ನರಸಿಂಹಾಚಾರ್ಯರ ಜಂಟಿ ಸಂಪಾದಕತ್ವದಲ್ಲಿ ಶಾಂತಿನಾಥ ಕವಿಯ "ಸುಕುಮಾರ ಚರಿತಂ" ಪ್ರಕಟವಾಗಿದೆ. ಈ ಕಾರ್ಯದಲ್ಲಿ ಎರಡು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಪತ್ರಿಗಳಲ್ಲೇ ಗ್ರಂಥಪಾತದ ಭಾಗಗಳು ಹಲವಿವೆ. ಬೇರೆ ಪ್ರತಿಗಳು ದೊರಕುವವರೆಗೆ ಏನೂ ಮಾಡುವಂತಿಲ್ಲ. "ಬೀರಾರಿನ ಅಕೋಲ ಜಿಲ್ಲೆಯ ಕಾರಂಜ ಎಂಬ ಊರಿನಲ್ಲಿರುವ ಬಲಾತ್ಕಾರ ಗಣದ ಜೈನಬಸದಿಯಲ್ಲಿ 'ಸುಕುಮಾರ ಚರಿತ್ರ' ಎಂಬೊಂದು ಓಲೆಯ ಗ್ರಂಥವಿರುವಂತೆ ತಿಳಿದುಬಂದಿದೆ. ಇದು ಶಾಂತಿನಾಥನ ಗ್ರಂಥವಾಗಿರಬಹುದು. ಇದನ್ನು ನೋಡುವುದಕ್ಕಾಗಲಿಲ್ಲ ; ಏಕೆಂದರೆ ಇದು ದುರ್ಲಭ" ಎಂದು ಹೇಳಿರುವುದು

ಮುಂದಿನ ಗ್ರಂಥಸಂಪಾದಕರಿಗೆ ಸೂಚನೆಯಾಗಿವೆ. ಸುಕುಮಾರ ಚರಿತೆ ಈಗ ದೊರಕಿರುವಂತೆ ಅಪೂರ್ಣ. ದ್ವಾದಶಾಶ್ವಾಸ ಭಾಗದಲ್ಲಿ—ಇದೇ ಕೊನೆಯ ಆಶ್ವಾಸವಾಗಿರುವಂತೆ ಕಾಣುತ್ತದೆ—ಮಧ್ಯೆ ಅನೇಕ ಹಾಳೆಗಳು ಹಾಳಾಗಿ ಹೋಗಿವೆ; ಕೊನೆಯಲ್ಲಿ ಎಷ್ಟೋ ಪದ್ಯಗಳು ನಷ್ಟವಾಗಿ ಹೋಗಿವೆ. (ಆ ಆಶ್ವಾಸದ "ಪಟ್ಟದ" ಪದ್ಯವು ಹಾಳಾಗದೆ ಶುದ್ಧ ರೂಪದಲ್ಲಿ ಉಳಿದು ಬಂದಿರುವುದು ನಮ್ಮ ಪುಣ್ಯ.)

ಈ ಪುಸ್ತಕಕ್ಕೆ ೮೬ ಪುಟಗಳ ವಿಸ್ತಾರವಾದ ಪ್ರಸ್ತಾವನೆಯನ್ನು ಡಿ.ಎಲ್.ಎನ್. ಬರೆದಿದ್ದಾರೆ. ಕವಿ ವಿಚಾರ, ಕಥಾಸಾರಗಳ ಬಳಿಕ ಕಥೆಯ ಮೂಲವನ್ನು ಚರ್ಚಿಸಿ, ವಡ್ಡಾರಾಧನೆಯಲ್ಲಿ ಬಂದಿರುವ ಸುಕುಮಾರ ಸ್ವಾಮಿಯ ಕತೆಗೂ ಇಲ್ಲಿನ ಕತೆಗೂ ಇರುವ ಹೋಲಿಕೆ ವ್ಯತ್ಯಾಸಗಳನ್ನು ಗಮನಿಸಿದ್ದಾರೆ. "ಪಂಪನಿಗೆ ರನ್ನನು ಹೇಗೋ 'ವಡ್ಡಾರಾಧನೆ'ಯ ಸುಕುಮಾರ ಕಥೆಗೆ ಶಾಂತಿನಾಥನು ಬಹುಮಟ್ಟಿಗೆ ಹಾಗೆ." ಛಂದಸ್ಸಿನ ದೃಷ್ಟಿಯಿಂದ ಸುಕುಮಾರ ಚರಿತೆ ಕಾವ್ಯವನ್ನು ಪರಿಶೀಲಿಸಿರುವುದು ಬಹು ಅಮೂಲ್ಯವಾದುದು. ಮುಖ್ಯವಾಗಿ ರಗಳೆ ಎಂಬುದರ ಮೂಲ ಸಂಸ್ಕೃತದ ಪದ್ಧತಿ ಅಥವಾ ಪ್ರಾಕೃತದ ಪಜ್ಝಟಿಕಾ ಎಂಬ ತಮ್ಮ ಶೋಧನೆಯನ್ನು* ಸೂಚ್ಯವಾಗಿ ಹೇಳಿರುವುದು ಇಲ್ಲಿಯೇ.

ಡಿ. ಎಲ್. ನರಸಿಂಹಾಚಾರ್ಯರು "ಪಂಪರಾಮಾಯಣ ಸಂಗ್ರಹ"ಕ್ಕೆ ಬರೆದ ಮುನ್ನುಡಿಯನ್ನು ಹೋಲುವಂತಹುದು ಕನ್ನಡದಲ್ಲಿ ಮತ್ತೊಂದು ದೊರಕುವುದು ಅಸಂಭವ. ಆರಂಭದಲ್ಲಿ ನಾಗಚಂದ್ರನ ಕಾಲವನ್ನು ಚರ್ಚಿಸಿ, ಅವನದು ಸು. ಕ್ರಿ.ಶ. ೧೧೪೦ ಎಂಬ ಅವರ ತೀರ್ಮಾನ ಈಗ ಬಹುಮಟ್ಟಿಗೆ ಒಪ್ಪಿತವಾಗಿದೆ. ಜೈನ ರಾಮಾಯಣ ಪರಂಪರೆಗಳನ್ನೂ ಅವರಲ್ಲೂ 'ಪಉಮ ಚರಿಯ'ದ ಪರಂಪರೆಯನ್ನು ಪ್ರಸ್ತಾಪಿಸಿದ್ದಾರೆ. ವಿಮಲಸೂರಿ ಕವಿ ಚಿತ್ರಿಸಿರುವ ರಾವಣನ ಬಗ್ಗೆ ಬರೆದಿರುವ ಭಾಗವನ್ನೇ ಪ್ರತ್ಯೇಕಿಸಿ ಒಂದು ಸೊಗಸಾದ ಸಾಹಿತ್ಯಕೃತಿಯೆಂದು ಓದುಗರಿಗೆ ಕೊಡುವಷ್ಟು ಅದು ರಸನಿಬಿಡವಾಗಿದೆ. ವಿಮಲಸೂರಿಯು ಕೊಟ್ಟಿರುವ ರುದ್ರಪಾತ್ರವನ್ನು ನಾಗಚಂದ್ರ ಎಷ್ಟರಮಟ್ಟಿಗೆ ಬಳಸಿಕೊಂಡಿದ್ದಾನೆಂಬಲ್ಲಿ ಔಚಿತ್ಯವನ್ನು ಮೆರೆದಿದ್ದಾರೆ. ನಾಗಚಂದ್ರನಲ್ಲಿ "ಮೂಲದಲ್ಲಿರುವಷ್ಟು ಸೌಂದರ್ಯವಿಲ್ಲ, ಗಾಂಭೀರ್ಯವಿಲ್ಲ" ಎಂಬ ಮಾತು ಅವರ ಶ್ರೇಷ್ಠ ತೌಲನಿಕ ವಿಮರ್ಶನ ಶಕ್ತಿಗೆ ಒಳ್ಳೆಯ ಸಾಕ್ಷಿ. ನಾಗಚಂದ್ರನ ಮೇಲೆ ರವಿಷೇಣನ ಪ್ರಭಾವವೂ ಗಮನಾರ್ಹ ಭಾಗ. ಅವರ ಪೀಠಿಕೆಗಳು ಬರಿಯ ಸಂಶೋಧನಾತ್ಮಕವಾದ ಸಾಮಗ್ರಿ ಚರ್ಚೆಗಳಿಂದ ಕೂಡಿರದೆ ಸಾಹಿತ್ಯವಿಮರ್ಶೆಯನ್ನೂ ಒಳಗೊಂಡಿರುತ್ತವೆ. ತಾವು ಸಂಪಾದಿಸುತ್ತಿರುವುದು ಒಂದು ಕಾವ್ಯವೆಂಬುದನ್ನು ಡಿ.ಎಲ್.ಎನ್. ಎಲ್ಲಿಯೂ ಮರೆಯುವುದಿಲ್ಲ. ಅವರ ರಸಜ್ಞತೆ ಅವರ ಎಲ್ಲ

* ಈ ಶೋಧನೆ ಡಿ.ಎಲ್.ಎನ್. ಮತ್ತು ತೀ.ನಂ.ಶ್ರೀ. ಅವರಿಗೆ ಸ್ವತಂತ್ರವಾಗಿ ಹೊಳೆದಿತ್ತು. ಇನ್ನೊಬ್ಬರು ವಿಸ್ತಾರವಾಗಿ ಬರೆಯಲೆಂದು ಇಬ್ಬರೂ ನಿರೀಕ್ಷಿಸಿದರು; ಕೊನೆಗೆ ಇಬ್ಬರೂ ಬರೆಯಲಿಲ್ಲ.

ಮುನ್ನುಡಿಗಳಲ್ಲಿಯೂ ವ್ಯಕ್ತವಾಗಿದೆ. ಅದರಲ್ಲೂ ಪಂಪರಾಮಾಯಣದ ಮುನ್ನುಡಿಯಲ್ಲಿ ಅದು ಸುಪ್ರಕಟಿತ.

ನರಸಿಂಹಾಚಾರ್ಯರು ಗ್ರಂಥಸಂಪಾದನೆಗೆ ಸಂಬಂಧಿಸಿದ ಗ್ರಂಥವನ್ನು ("ಕನ್ನಡ ಗ್ರಂಥಸಂಪಾದನೆ, ೧೯೬೪) ಬರೆಯಲು ಒದಗಿದ ಹಿನ್ನೆಲೆಯನ್ನು ಆಗಲೇ ನೋಡಿದ್ದೇನೆ. ೧೯೬೪ ರ ಹೊತ್ತಿಗೆ ಪ್ರಾಚೀನ ಕನ್ನಡದ ಎಲ್ಲ ಪ್ರಮುಖ ಗ್ರಂಥಗಳು ಅಚ್ಚಾಗಿದ್ದುವು; ಕೆಲವು ಉತ್ಕೃಷ್ಟವಾಗಿ ಸಂಪಾದಿತವಾಗಿದ್ದುವು. ಆರ್. ನರಸಿಂಹಾಚಾರ್, ಶಿ. ಶಿ. ಬಸವನಾಳ, ಟಿ. ಎಸ್. ವೆಂಕಣ್ಣಯ್ಯ, ತೀ. ನಂ. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್ ಇವರು ಮತ್ತು ಇನ್ನೂ ಹಲವರು ಆ ಕ್ಷೇತ್ರದಲ್ಲಿ ದುಡಿದಿದ್ದರು. ಮುಖ್ಯವಾಗಿ ಮೈಸೂರು, ಧಾರವಾಡಗಳಲ್ಲಿ ಬಹು ಒಳ್ಳೆಯ ಹಸ್ತಪ್ರತಿ ಭಂಡಾರಗಳು ರೂಪಿತವಾಗಿದ್ದುವು. ಮತ್ತು ವಿವರಣಾತ್ಮಕ ಹಸ್ತಪ್ರತಿ ಸೂಚಿಗಳು ಪ್ರಕಟವಾಗಿದ್ದುವು. ಕನ್ನಡದಲ್ಲಿ ಪಾಂಡಿತ್ಯದ ಪರಂಪರೆಯೊಂದು ನಿರ್ಮಾಣವಾಗಿದ್ದಿತು. ಈ ಹಿನ್ನೆಲೆಯಲ್ಲಿ ವಿದ್ವಾಂಸರು ತಮ್ಮ ಸ್ವಾನುಭವದಿಂದಲೂ ಗ್ರಂಥಗಳ ಅಧ್ಯಯನದಿಂದಲೂ ಅಥವಾ ಎರಡರಿಂದಲೂ ಗಳಿಸಿದ್ದ ಗ್ರಂಥಸಂಪಾದನಾ ಶಾಸ್ತ್ರದ ತತ್ವಗಳನ್ನು ವಿವರಿಸಿ ಅವನ್ನು ಒಂದು ಭದ್ರ ತಳಹದಿಯ ಮೇಲೆ ನಿಲ್ಲಿಸುವಂತಹ ಒಂದು ಗ್ರಂಥದ ಅಗತ್ಯವಿದ್ದಿತು. ಅದಕ್ಕೆ ಮೊದಲು ಒಂದೆರಡು ಬಿಡಿ ಲೇಖನಗಳನ್ನು ಬಿಟ್ಟರೆ ಆ ಶಾಸ್ತ್ರಕ್ಕೆ ಸಂಬಂಧಿಸಿದ ಬರಹಗಳೇ ಕನ್ನಡದಲ್ಲಿ ಇರಲಿಲ್ಲವೆಂದರೆ ಆಶ್ಚರ್ಯಪಡಬೇಕಾಗಿಲ್ಲ.

ಇವರಲ್ಲಿ "ಗ್ರಂಥಸಂಪಾದನೆಯ ಚರಿತ್ರೆ" ಮತ್ತು "ಲೇಖನಸಾಮಗ್ರಿಗಳು" ಎಂಬ ಎರಡು ಅಧ್ಯಾಯಗಳಿಗೆ ಆನುಷಂಗಿಕ ಆಕರಗಳಿಂದ ಸಾಮಗ್ರಿ ಸಂಗ್ರಹ ಮಾಡಿರುವುದನ್ನು ಬಿಟ್ಟರೆ (ಆ ಎರಡು ಅಧ್ಯಾಯಗಳಲ್ಲಿರುವ ವಿಷಯವನ್ನು ಸ್ವಲ್ಪ ಶ್ರಮಪಟ್ಟರೆ ಬೇರೆ ಕಡೆಯಿಂದಲೂ ಸಂಗ್ರಹಿಸಬಹುದು), ಉಳಿದ ಎಲ್ಲ ಅಧ್ಯಾಯಗಳು ಅವರ ಸ್ವಂತ ಸಂಶೋಧನೆಯ ಫಲ. ಬಹುತೇಕ ಉದಾಹರಣೆಗಳು ಕನ್ನಡ ಹಸ್ತಪ್ರತಿಗಳಿಂದ ಹೆಕ್ಕಿದುವು ಅಥವಾ ಆಗಲೇ ಸಂಪಾದಿತವಾಗಿ ಅಚ್ಚಾಗಿದ್ದ ಕೃತಿಗಳಿಂದ ತೆಗೆದುಕೊಂಡಂಥವು.

ಬಹುತೇಕ ಪಾರಿಭಾಷಿಕ ಪದಗಳು ಇವರೇ ಮೊತ್ತಮೊದಲು ಟಂಕಿಸಿದುವಾಗಿದ್ದು ಈಗ ಅವು ಬಳಕೆಗೆ ಬಂದುಹೋಗಿವೆ. ಅಕ್ಷರ ಸ್ಖಾಲಿತ್ಯಗಳನ್ನು ತೋರಿಸಿರುವುದು, ಪಾಠಾಂತರಗಳನ್ನು ಗುರುತುಹಾಕಿಕೊಳ್ಳುವ ವಿಧಾನ, ಸ್ಖಾಲಿತ್ಯಗಳನ್ನು ಗುರುತಿಸುವ ಬಗೆ, ಹಸ್ತಪ್ರತಿಗಳ ಪರಸ್ಪರ ಸಂಬಂಧವನ್ನು ಕಂಡುಕೊಳ್ಳುವ ಮಾರ್ಗ, ಪಾಠ ಪರಿಷ್ಕರಣ, ಈ ಎಲ್ಲ ವಿವರಗಳಿಂದ ಇದು ಒಂದು ಮಾರ್ಗದರ್ಶಿ ಗ್ರಂಥವಾಗಿ ಪರಿಣಮಿಸಿದೆ. ಸಂದೇಹವಿದ್ದ ಕಡೆ ಸಂದೇಹವನ್ನು ಸೂಚಿಸಿದ್ದಾರೆ. ಪಾಠ ಪರಿಷ್ಕರಣ ಭಾಗದಲ್ಲಂತೂ, ಸರಿ ಪಾಠವನ್ನು ನಿರ್ಣಯಿಸುವಾಗ ಎಷ್ಟು ಬಗೆಯ ಜ್ಞಾನ ಅಗತ್ಯವೆಂಬುದನ್ನು ಅನೇಕ ಉದಾಹರಣೆಗಳಿಂದ ತೋರಿಸಿದ್ದಾರೆ.

"ಕನ್ನಡ ಗ್ರಂಥಸಂಪಾದನೆ"ಯಂತಹ ಕೃತಿ ಕನ್ನಡಕ್ಕಂತೂ ಹೊಸತು. ಉಳಿದ ಭಾರತೀಯ ಭಾಷೆಗಳಲ್ಲೂ ಅಂತಹ ಕೃತಿಯೊಂದು ನಿರ್ಮಾಣವಾಗಿರುವಂತೆ ಕಾಣುವುದಿಲ್ಲ. ಬಹುಶಃ ಅದನ್ನು ಇಂಗ್ಲಿಷಿಗೆ ಅನುವಾದಿಸಿದರೆ, ಆ ಕ್ಷೇತ್ರಕ್ಕೆ ಅದೊಂದು ಮೌಲಿಕ ಕೊಡುಗೆಯೂ ಆಗಬಲ್ಲುದು.

ಶೋಚನೀಯ ಸಂಗತಿಯೆಂದರೆ, "ಕನ್ನಡ ಗ್ರಂಥಸಂಪಾದನೆ" ಪುಸ್ತಕ ಬಂದ ಮೇಲೆ, ಗ್ರಂಥಗಳನ್ನು ಸಂಪಾದಿಸುವವರಲ್ಲಿ ಹೆಚ್ಚಿನ ಶಾಸ್ತ್ರೀಯ ದೃಷ್ಟಿ ಮೂಡಬೇಕಾಗಿತ್ತು; ಆದರೆ ಅಂತಹುದೇನೂ ಘಟಿಸಿದಂತೆ ತೋರುವುದಿಲ್ಲ. ಇಂದಿಗೂ ಆ ಗ್ರಂಥಸಂಪಾದನ ಶಾಸ್ತ್ರವು ಕೆಲವು ಉದ್ಯೋಗಿಗಳ ಅಥವಾ ಹವ್ಯಾಸಿಗಳ ಪ್ರಯತ್ನವಾಗಿ ಉಳಿದಿದೆಯೇ ಹೊರತು ಅದೊಂದು ಗಣ್ಯ ಶಿಸ್ತೆಂಬಂತೆ ಭಾವಿಸಿ ಕೆಲಸ ಮಾಡಿರುವವರ ಸಂಖ್ಯೆ ಕಡಮೆ. ಆ ಗ್ರಂಥ ಬಂದು ಎಂ. ಎ. ಪರೀಕ್ಷೆಗೆ ಓದುವ ವಿದ್ಯಾರ್ಥಿಗಳಿಗೆ ಪಠ್ಯ ಮತ್ತು ಪರಾಮರ್ಶನ ಗ್ರಂಥವಾಗಿ ಪರಿಣಮಿಸಿದೆ. ಆದರೆ, ಆ ಕ್ಷೇತ್ರದಲ್ಲಿ ಕೆಲಸಮಾಡುತ್ತಿರುವ ಜನ ಅದರಿಂದ ಉಪಯೋಗವನ್ನು ಪಡೆದಿರುವರೇ? ನನಗೇನೋ ತೀರ ಸಂದೇಹವಿದೆ.

ಈ ಸಮೀಕ್ಷೆಯಲ್ಲಿ ಮುಖ್ಯವಾಗಿ ಗ್ರಂಥಗಳನ್ನು ಲಕ್ಷಿಸಿದೆ. ಈ ಇಬ್ಬರು ವಿದ್ವಾಂಸರೂ ತಮ್ಮ ಅನೇಕ ಬರಹಗಳಲ್ಲಿ ಬಿಡಿಪದ್ಯಗಳಿಗೆ ಪಾಠಪರಿಷ್ಕರಣವನ್ನು ಮಾಡಿರುವುದನ್ನು ಇಲ್ಲಿ ಗಮನಿಸಿಲ್ಲ. ತೀ.ನಂ.ಶ್ರೀ.ಯವರು "ಎನಿತ್ತೆನಿತ್ತಂಬುಜಪತ್ರನೇತ್ರೆಯಾ......" ಎಂಬ ಪದ್ಯದ ಪಾಠವನ್ನು ನಿರ್ಣಯಿಸಿರುವುದನ್ನಾಗಲಿ, "ಮಂದರ ಧರಗಣ...." ಎಂಬ ಛಂದೋಂಬುಧಿಯ ಲಕ್ಷಣ–ಲಕ್ಷ್ಯ ಪದ್ಯಪಾಠವನ್ನು ನಿರ್ಣಯಿಸಿರುವುದನ್ನಾಗಲಿ ಇಲ್ಲಿ ಸ್ಮರಿಸಬೇಕು. ಹಾಗೆಯೇ, ಡಿ.ಎಲ್.ಎನ್. ಅವರು ತಮ್ಮ ಅನೇಕ ಬಿಡಿಬರಹಗಳಲ್ಲಿ ಪಾಠಚರ್ಚೆಗಳನ್ನು ಮಾಡಿದ್ದಾರೆ. "ಬಸವಣ್ಣನವರ ಕೆಲವು ವಚನಗಳ ಪಾಠ" ಇತ್ಯಾದಿ ಲೇಖನಗಳನ್ನು ಇಲ್ಲಿ ಹೇಳಬೇಕು. ಎಷ್ಟೋ ಶಬ್ದಾರ್ಥಗಳ ಚರ್ಚೆಮಾಡುವಾಗ, ಮೊದಲು ಕವಿಪಾಠ ಯಾವುದು ಎಂಬ ನಿರ್ಣಯವಾದ ಮೇಲೆಯೇ ಮುಂದಿನ ವಿಚಾರಕ್ಕೆ ಹೋಗುವುದು. ಎಂದರೆ, ಗ್ರಂಥಸಂಪಾದನೆಯು ಹಿಂದಿನ ಕನ್ನಡ ಸಾಹಿತ್ಯದ ಯಾವುದೇ ಬಗೆಯ ಅಧ್ಯಯನಕ್ಕೂ ಮೂಲಭೂತವಾದುದು ಎಂಬುದನ್ನು ಇಬ್ಬರೂ ಗುರುತಿಸಿಕೊಂಡಿದ್ದರು. ಕೆಟ್ಟ ಪಾಠವನ್ನಿಟ್ಟುಕೊಂಡು ಸಂಶೋಧನೆ ಮಾಡುವುದಾಗಲಿ ವಿಮರ್ಶೆಯನ್ನು ಬರೆಯುವುದಾಗಲಿ ಮರಳಿನ ಮೇಲೆ ಮನೆಯನ್ನು ಕಟ್ಟಿದಂತೆ ಎಂಬುದನ್ನು ಇಬ್ಬರೂ ಸಂಪೂರ್ಣವಾಗಿ ಮನಗಂಡಿದ್ದರು.

—o—

# ಚರಿತ್ರಾರ್ಹ ಕಾಗದಪತ್ರಗಳ ಅನ್ವೇಷಣೆ, ಸಂಕಲನ ಪಾಲನೆಗಳಲ್ಲಿ ವಿದುಷವರ್ಗದ ಸ್ಥಾನ

ಡಾ|| ಎಸ್. ವಿ. ದೇಶಿಕಾಚಾರ್

ಇತಿಹಾಸದ ಉಪ್ಪರಿಗೆಯನ್ನು ಅನೇಕ ವಿಧ ಸಾಮಗ್ರಿಗಳಿಂದ ಕಟ್ಟುತ್ತೇವೆ. ಅವು ಮುಖ್ಯವಾಗಿ ಮೂರು ವಿಧ : ಮಾನವಕೃತ ಪದಾರ್ಥಗಳು, ಬಾಯಿಮಾತಿನಲ್ಲಿ ಪರಂಪರೆಯಾಗಿ ಬಂದ ಪೂರ್ವಸ್ಮೃತಿ, ಲಿಖಿತವಸ್ತು ಪ್ರಪಂಚ. ಇವುಗಳಲ್ಲಿ ಪ್ರಾಚೀನ–ಮಧ್ಯಕಾಲದ ಇತಿಹಾಸ ಬರೆಯಲು ಹೆಚ್ಚು ಕಡಮೆ ಅನಶ್ವರವಾದ ವಸ್ತುಗಳೇ ಆಧಾರ. ಭೂಗರ್ಭ ಅವಶೇಷಗಳು, ಶಿಲಾಶಾಸನ, ತಾಮ್ರಪಟ, ಹಳೆಯ ಕಟ್ಟಡ, ನಾಣ್ಯ ಇತ್ಯಾದಿ. ಸ್ವಭಾವತಃ ನಶ್ವರವಾದ ತಾಳಪತ್ರಾದಿ ಲಿಖಿತವಸ್ತುಗಳೂ ಉಪಯೋಗಕ್ಕೆ ಬಂದಿವೆ; ಆದರೆ ಇವು ಉತ್ತರಕಾಲದ ಪ್ರತಿಪ್ರತಿಗಳ ಮೂಲಕ. ಬಹುತೇಕ ಇವು ವಿಖ್ಯಾತಿಹೊಂದಿದ ಗ್ರಂಥಗಳು ; ಸಾಮಾನ್ಯ ವ್ಯವಹಾರದ ಕಾಗದಪತ್ರಗಳಲ್ಲ. ಐದಾರು ಶತಮಾನಗಳ ಇತ್ತೀಚೆಗೆ, ಆಧುನಿಕ ಕಾಲ ಹತ್ತಿರ ಬಂದಬಂದಂತೆ, ತಾಳಪತ್ರ, ಕಡತ, ಕಾಗದ ಮುಂತಾದ ನಶ್ವರವಾದ ಲಿಖಿತ ಸಾಮಾನ್ಯ ವ್ಯವಹಾರದ ಕಾಗದಪತ್ರಗಳೇ ಇತಿಹಾಸಕಾರನ ಮುಖ್ಯ ಸಾಮಗ್ರಿಯಾಗಿವೆ. ಏಕೆಂದರೆ, ಇವು ವೈಯಕ್ತಿಕ ಸಾಮೂಹಿಕ ಜೀವನವನ್ನು ವಿಸ್ತೃತವಾಗಿ, ಸ್ಫುಟವಾಗಿ, ಸರ್ವತೋಮುಖವಾಗಿ ಪ್ರತಿಬಿಂಬಿಸಬಲ್ಲವು. ಇವು ಹೇರಳವಾಗಿರುವ ಕಡೆ ಇತರ ವಿಧದ ಸಾಮಗ್ರಿಗಳು ಕೇವಲ ಸಹಾಯಕವಾಗುತ್ತವೆ. ಈ ಬಗೆಯ ಕಾಗದಗಳು ಉಳಿದುಬಂದಿರುವುದು ಮುಂದೊದಗಬಹುದಾದ ಪ್ರಾಪಂಚಿಕ ಪ್ರಯೋಜನಾಕಾಂಕ್ಷೆಯಿಂದಲೇ ಹೊರತು ಬೇರೆಯಲ್ಲ. ಇವು ಇತಿಹಾಸಕಾರನ ಆಧಾರವಸ್ತುವಾಗಿ ಪರಿಣಮಿಸಿರುವುದು ಕೇವಲ ಆಕಸ್ಮಿಕ.

ಇತಿಹಾಸರಚನೆಗೆ ಈ ಬಗೆಯ ಸಾಮಾನ್ಯ ಕಾಗದ ಪತ್ರಗಳ ಅಮೂಲ್ಯತೆಯ ಜ್ಞಾನೋದಯವಾದದ್ದು, ಕ್ರಿ. ಶ. ೧೪–೧೬ನೇ ಶತಮಾನದಲ್ಲಾದ ಯೂರೋಪಿನ "ರಿನೆಸಾನ್ಸ್" ಚಳವಳಿಯ ಪರಿಣಾಮವಾಗಿ, ಇತಿಹಾಸವನ್ನು ಕ್ರಮಬದ್ಧವಾಗಿ ಆಧಾರಭೂತವಾಗಿ ನವೀನ ಶಾಸ್ತ್ರಮಾರ್ಗದಲ್ಲಿ ಬರೆಯಲು ಹೊರಟದ್ದರಿಂದ. ಇತಿಹಾಸ ಕಲೆ ಬಹು ಪ್ರಾಚೀನವಾದರೂ, ಪ್ರಾಕ್ತನವಸ್ತುಗಳ ಸಂರಕ್ಷಣೆಯಲ್ಲಿ ಶ್ರದ್ಧೆ ಹಳೆಯದಾದರೂ, ಸಾಮಾನ್ಯ ವ್ಯವಹಾರದ ಕಾಗದಪತ್ರಗಳ ಅಮೂಲ್ಯತೆಯನ್ನು ತಿಳಿದಿದ್ದು,

ಇವುಗಳಲ್ಲಿ ಆಸಕ್ತಿ ಹುಟ್ಟಿದ್ದು ಬಹು ಇತ್ತೀಚೆಗೆ. ಇವುಗಳ ಕ್ರಮಬದ್ಧ ಅನ್ವೇಷಣೆ, ಸಂಗ್ರಹಣ, ಸುರಕ್ಷಣೆ, ಸುರಚನೆ, ಸುನಿರ್ವಹಣ ಮುಂತಾದ ವಿಷಯಗಳಲ್ಲಿ ವಿಮರ್ಶೆ, ಪರಿಶೋಧನೆ, ಶಾಸ್ತ್ರಮಟ್ಟಕ್ಕೇರಿದ್ದು ಕೇವಲ ನೂರುವರ್ಷಗಳ ಹಿಂದೆ. ಈ ನವೀನ ವಿದ್ಯೆ "ಕಾಗದಪತ್ರ ಶಾಸ್ತ್ರ" ಅಥವ "ಕಾಗದಪತ್ರ ವಿಜ್ಞಾನ" (Archival Science), "ಕಾಗದಪತ್ರ ನಿರ್ವಹಣ ಕ್ರಮ" (Archival Administration), ಎಂದು ನಾಮಾಂಕಿತವಾಗಿವೆ. ಹದಿನಾಲ್ಕನೇ ಶತಮಾನದಿಂದೀಚೆಗೆ ಆದ ಸಾಂಸ್ಕೃತಿಕ, ವೈಜ್ಞಾನಿಕ, ಔದ್ಯೋಗಿಕ, ಆರ್ಥಿಕ ಕ್ರಾಂತಿಗಳ ಪರಿಣಾಮವಾಗಿಯೂ, ಪೂರ್ವಿಕರ ವಿಷಯದಲ್ಲಿ ಯಾವತ್ತೂ ಇವರಿಗಿದ್ದ ಹೆಚ್ಚಿನ ಶ್ರದ್ಧೆಯಿಂದಲೂ, ಅಮೇರಿಕದ ಸಂಯುಕ್ತ ರಾಷ್ಟ್ರ, ಯೂರೋಪ್ ಇತ್ಯಾದಿ ಪ್ರಗತಿಪರ ದೇಶಗಳಲ್ಲಿ ಉಳಿದುಬಂದಿರುವ ಕಾಗದಪತ್ರಗಳ ಸ್ಥಿತಿ ಹಳ್ಳತಿಟ್ಟಿಲ್ಲದೆ ಸಮವಾಗಿ ಸರ್ವತೋಮುಖವಾಗಿದೆ. ರಾಜಕೀಯ ಯುದ್ಧ ವಿಚಾರಗಳಿಗೆ ಬಹು ಹೆಚ್ಚಿನ ಪ್ರಾಧಾನ್ಯವಿದ್ದರೂ, ಸಾಮಾಜಿಕ ಆರ್ಥಿಕ ಸಾಂಸ್ಕೃತಿಕ ವಿಷಯಗಳಿಗೆ ಸಂಬಂಧಿಸಿದ ಕಾಗದಗಳು ಹೇರಳವಾಗಿವೆ; ವಿಜ್ಞಾನಿಗಳ, ಸಾಹಿತಿಗಳ, ಕಲಾವಿದರ, ಇತರ ವಿಮರ್ಶರ ಸ್ಥಾನವೂ ಹಿರಿದಾಗಿಯೇ ಇದೆ. ಇದರಿಂದಲೇ ಈ ದೇಶಗಳ ಇತಿಹಾಸ ಸಾರ್ವತ್ರಿಕವಾಗಿ ಸಮರ್ಪಕವಾಗಿ ಬೆಳೆಯಲು ಸಾಧ್ಯವಾಗಿದೆ.

ಇನ್ನು ಈ ಕ್ಷೇತ್ರದಲ್ಲಿ ನಮ್ಮ ದೇಶದ ಪ್ರಗತಿಯೇನೆಂಬುದನ್ನು ನೋಡೋಣ. ಸ್ವಾತಂತ್ರ್ಯಕ್ಕೆ ಮುಂಚೆ ಬ್ರಿಟಿಷರಿಗೆ ಭಾರತದಲ್ಲಿ ತಮ್ಮ ಆಳ್ವಿಕೆಯ ಬಗ್ಗೆ ಹೆಚ್ಚಿನ ಆಸಕ್ತಿ, ಹೆಮ್ಮೆ ಇದ್ದದ್ದು ಸ್ವಾಭಾವಿಕ. ಬ್ರಿಟಿಷಿನ ಚರಿತ್ರಲೇಖಕರು ಈ ವಿಷಯದಲ್ಲಿ ತೋರಿದ ಕುತೂಹಲ ಆಸಕ್ತಿಗಳ ಪರಿಣಾಮವಾಗಿಯೂ ಸರಕಾರದ ಆಡಳಿತ ಸುಸೂತ್ರವಾಗಿ ನಡೆಯಲೂ, ಮದರಾಸ್, ಬೊಂಬಾಯಿ, ಕಲ್ಕತ್ತ, ಡೆಲ್ಲಿ, ಈ ನಾಲ್ಕು ಜಾಗಗಳಲ್ಲಿದ್ದ ಸರಕಾರಿ ಪತ್ರಾಗಾರಗಳು ಸಾಕಷ್ಟು ವ್ಯವಸ್ಥಿತವಾಗಿಯೇ ಇದ್ದುವು. ಇದರ ಜೊತೆಗೆ ಇತಿಹಾಸರಚನೆಯಲ್ಲಿ ಇತರ ದೇಶಗಳು ಮುಂದುವರಿದುದರ ಪ್ರಚೋದನೆಯಿಂದ ನಮ್ಮ ದೇಶದಲ್ಲೂ [illegible] ಸಂಶೋಧನೆ ಕ್ರಮಶಃ ಹೆಚ್ಚಾಯಿತು. ಮುಖ್ಯವಾಗಿ ಈ ಶತಮಾನದ ಆರಂಭದಲ್ಲಿ ಬಂಗಾಳದ, ಮರಾಠ ಯವರ ಹಿರಿಮೆಯಲ್ಲಿ ಆಸಕ್ತಿ ಹುಟ್ಟಿ ಆ ಕಾಲದ ಕಾಗದಪತ್ರಗಳ ಸಂಕಲನದ [illegible] ಪ್ರತ್ಯೇಕವಾಗಿ ಬೆಳೆಯಿತು. ಇತರ ಅರ್ವಾಚೀನ ರಾಜಮನೆತನಗಳಲ್ಲೂ ಶ್ರದ್ಧೆ ಹುಟ್ಟಿತು. ಹೀಗೆ ಅಲ್ಲಲ್ಲಿ ಒಳ್ಳೆಯ ಕೆಲಸ ನಡೆದರೂ ನಿಜವಾದ ಕಾವು ಹುಟ್ಟಿದ್ದು ಸ್ವಾತಂತ್ರ್ಯದಿಂದೀಚೆಗೆ. ಮುಖ್ಯ ಕಾರಣ, ಸರಕಾರ ಎಲ್ಲಾ ಪ್ರಾಂತಗಳಲ್ಲೂ ವ್ಯವಸ್ಥಿತ ಪತ್ರಾಗಾರಗಳನ್ನು ಏರ್ಪಡಿಸಿದ್ದು; ಸಂಶೋಧನೆಗೆ ಬೇಕಾದ ಸೌಕರ್ಯಗಳನ್ನು [illegible] ಒದಗಿಸಿದ್ದು; ಐತಿಹಾಸಿಕ ಸಂಶೋಧನೆಗೆ ಪತ್ರ ಸಂಕಲನಕ್ಕೆ ಹೆಚ್ಚಿನ ಪ್ರೋತ್ಸಾಹ, ಧನ ಸಹಾಯ ಸಿಕ್ಕಿದ್ದು. ಅನೇಕ ನ್ಯೂನತೆಗಳುಳಿದಿದ್ದರೂ ಇತೋಪ್ಯಧಿಕವಾಗಿ ಬೆಳಸಬಹುದಾಗಿ

ದೇಶದ ಸರಕಾರಿ ಕಾಗದಪತ್ರಗಳ ಕಾಪುಬಾರು ಬಹುಮಟ್ಟಿಗೆ ಉತ್ತಮಗೊಂಡಿವೆ. ಈ ಸುಧಾರಣೆಗಳ ಗಾಳಿ ಸರಕಾರೇತರ ಪ್ರಪಂಚಕ್ಕೂ ಮುಟ್ಟಿ ದೊಡ್ಡ ಔದ್ಯೋಗಿಕ ಆರ್ಥಿಕ ಸಂಸ್ಥೆಗಳು ಚಾರಿತ್ರಾರ್ಹ ಕಾಗದಪತ್ರಗಳ ವಿಷಯದಲ್ಲಿ ಹೆಚ್ಚು ಗಮನ ಕೊಡಲು ಆರಂಭಿಸಿದ್ದಾರೆ. ಕಲ್ಕತ್ತಾದ ನ್ಯಾಷನಲ್ ಲೈಬ್ರರಿ, ಪಾಟ್ನಾವಿನ ಖುದಾಬಕ್ಷ್ ಲೈಬ್ರರಿ, ಪುಣೆಯ ಭಾರತ ಇತಿಹಾಸ ಸಂಶೋಧಕ ಮಂಡಲಿ, ಮದರಾಸಿನ ಅಡಿಯಾರ್ ಲೈಬ್ರರಿ ಮುಂತಾದ ಸಂಸ್ಕೃತಿಕ ಕೇಂದ್ರಗಳೂ ಒಳ್ಳೆಯ ಕೆಲಸ ನಡೆಸುತ್ತಿದ್ದಾರೆ. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಡ್‌ಮಿನಿಸ್ಟ್ರೇಷನ್, ಇನ್‌ಸ್ಟಿಟ್ಯೂಟ್ ಆಫ್ ಬಿಸಿನೆಸ್ ಮ್ಯಾನೇಜ್‌ಮೆಂಟ್ ಮುಂತಾದ ಸಂಸ್ಥೆಗಳು ಕಾಗದಪತ್ರ ವಿಜ್ಞಾನದ ಮೂಲಭೂತ ತತ್ತ್ವಗಳ ವಿಷಯವಲ್ಲೂ, ಕಾರ್ಯರಂಗದಲ್ಲಿ ಬೇಕಾದ ಕಾನೂನು ಕಟ್ಟಳೆಗಳ ವಿಷಯವಲ್ಲೂ ವಿಮರ್ಶೆ–ಸಂಶೋಧನೆಯನ್ನು ಕೈಗೊಂಡಿದ್ದಾರೆ.

ಹೀಗೆ ಒಂದು ನವಚೇತನ ಸರ್ವತ್ರ ಕಂಡುಬಂದರೂ ವಿಜ್ಞಾನಿಗಳ, ಸಾಹಿತಿಗಳ, ಕಲಾವಿದರ, ಇತರ ವಿದ್ವಾಂಸರ ಕಾರ್ಯಕಲಾಪಕ್ಕೆ ಸೇರಿದ ಕಾಗದಪತ್ರಗಳಲ್ಲಿ ಆಸಕ್ತಿ ಮೂಡಿಲ್ಲ. ಇತ್ತೀಚೆಗೆ ವಿಚಾರಿಸಿದ್ದರಲ್ಲಿ ಡೆಲ್ಲಿಯ ನ್ಯಾಷನಲ್ ಆರ್ಕೈವ್ಸ್‌ನಲ್ಲಿ ನಾಲ್ಕರು ವಿದ್ವಾಂಸರ ಸಂಕಲನಗಳು ಮಾತ್ರ ಇವೆ—ಆರ್ಥಿಕಶಾಸ್ತ್ರ ಪರಿಣತ ಜೆ. ಸಿ. ಕೊಯಾಜಿ, ಪ್ರಸಿದ್ಧ ಹಿಂದಿ ಸಾಹಿತಿಗಳಾದ ಬನಾರಸಿದಾಸ್ ಚತುರ್ವೇದಿ ಮತ್ತು ಪಿ. ಕೆ. ಮಾಳವೀಯ, ವಿಖ್ಯಾತ ಪ್ರವಾಸಿ ಪ್ರಾಚೀನಾನ್ವೇಷಕ ರಾಹುಲ್ ಸಂಕೃತ್ಯಾಯನ. ಎಲ್ಲೆಡೆಗಳಲ್ಲಿರುವ ವಿದುಷವರ್ಗದ ಸಂಕಲನಗಳ ಪಟ್ಟಿ ಮಾಡಿದರೆ ಈ ಕ್ಷೇತ್ರದ ಕಡೆಗೆ ಇರುವ ಅಸಡ್ಡೆ ವ್ಯಕ್ತವಾಗುತ್ತದೆ. ಸರ್ವಕಾಲದಲ್ಲೂ ವಿದುಷವರ್ಗ ಸಮಾಜದ ಜ್ಞಾನಕೇಂದ್ರ; ಅವರ ಕೊಡುಗೆಯೇ ಸಮಾಜದ ಜ್ಞಾನಭಂಡಾರ. ಈ ಭಂಡಾರವನ್ನು ಯಶಸ್ವಿಯಾಗಿ ಕಾದಿಡದಿದ್ದರೆ, ಈ ಕಾರ್ಯರಂಗದಲ್ಲಿ ಹೆಚ್ಚಿನ ಲೋಪದೋಷಗಳು ಏರ್ಪಟ್ಟರೆ, ಜ್ಞಾನಾಭಿವೃದ್ಧಿಗೆ, ಜ್ಞಾನಪರಂಪರೆಗೆ ದೊಡ್ಡ ಕುಂದು, ಅಪಾಯ ಏರ್ಪಡುತ್ತದೆ. ವಿಷಯ ಹೀಗಿರಲು ಅನಾದರವೇಕೆ? ಎಂದು ಕೇಳಬಹುದು. ಇದಕ್ಕೆ ಮುಖ್ಯ ಕಾರಣ ಬಹುತೇಕ ವಿದ್ವಾಂಸರು ಏಕಾಂಗಿಗಳು, ಇವರ ಕೆಲಸಕಾರ್ಯವೆಲ್ಲ ವೈಯಕ್ತಿಕ, ಇವರ ಕಾಗದಪತ್ರಗಳು ಇವರ ಮನೆ–ಮಠದಂತೆ ಸಂಬಂಧಿಕ ವಾರಸುದಾರರಿಗೆ ಸೇರಿದ್ದು, ಹಣಕಾಸಿನ ದೃಷ್ಟಿಯಿಂದ ಇವು ಬಹುಮಟ್ಟಿಗೆ ಅಪ್ರಯೋಜಕವಾದುದರಿಂದ ಇದು ಬೇಡದ, ಬಿಸಾಡಲು ಯೋಗ್ಯವಾದ ವಸ್ತು. ಈ ಏಕಾಂಗಿಗಳ ಸ್ವತ್ತು ಸಮಾಜಕ್ಕೆ ಉಳಿಯಬೇಕಾದರೆ ಇದರ ಹಿರಿಮೆಯ ಮೌಲ್ಯದ ಅರಿವು ಸಾರ್ವತ್ರಿಕವಾಗಬೇಕು; ಇದನ್ನು ಕ್ರೋಡೀಕರಿಸಿ ಕಾದಿಡುವ ಜವಾಬ್ದಾರಿಯನ್ನು ಸಮಾಜ ಕೈಗೊಳ್ಳಬೇಕು; ಈ ಕ್ಷೇತ್ರದಲ್ಲಿ ದುಡಿಯುವ ಸಂಸ್ಥೆಗಳ ಪ್ರಭಾವ ಹೆಚ್ಚಬೇಕು.

ಇದುವರೆಗೆ ಉಪಯೋಗಿಸಿದ "ಕಾಗದ ಪತ್ರ" ಎಂಬುದು ಒಂದು ಸಾರ್ವತ್ರಿಕ ನಾಮ. ಇದರ ವ್ಯಾಪ್ತಿ ಬಹುಮಟ್ಟಿಗೆ ಕ್ಷೇತ್ರಾನುಸಾರಿ. ಪಂಡಿತವರ್ಗದ ಕಾಗದ ಪತ್ರಗಳು ಸಾಮಾನ್ಯವಾಗಿ ಈ ಬಗೆಯವು: (೧) ಪ್ರಕಟಿತ ಪುಸ್ತಕಗಳು, ಬಿಡಿ ಲೇಖನಗಳು, ಗ್ರಂಥ ವಿಮರ್ಶನಗಳು; (೨) ಮೇಲ್ಕಂಡವುಗಳ ಅಸಲು ಹಸ್ತಪ್ರತಿಗಳು; (೩) ಅಪ್ರಕಟಿತ ಪೂರ್ಣ ಅಥವಾ ಅಪೂರ್ಣ ಗ್ರಂಥಾದಿಗಳು; (೪) ಸಂಶೋಧನೆಯ ಅಂಗವಾಗಿ ಬರೆದಿಟ್ಟುಕೊಂಡ ಉದ್ಧೃತ ಅಥವಾ ಸಾರಾಂಶಾದಿಗಳು; (೫) ಸಹೋದ್ಯೋಗಿಗಳೊಡನೆ, ಸಹೃದಯರೊಡನೆ, ಮಿತ್ರರೊಡನೆ, ಬಂಧುವರ್ಗದವರೊಡನೆ, ಅಥವಾ ಉದ್ಯೋಗಕ್ಕೆ ಸಂಬಂಧವಾಗಿ, ನಡೆದ ಪತ್ರವ್ಯವಹಾರ; (೬) ಸಂಶೋಧನೆಗೆ ಸಹಾಯಕವಾಗಿ ಶೇಖರಿಸಿ ಇಟ್ಟುಕೊಂಡಿದ್ದ ಯಾಂತ್ರಿಕ ಸಾಧನಗಳು, ಪುಸ್ತಕಗಳು ಇತ್ಯಾದಿ; (೭) ದಿನಚರಿ ಪಟ್ಟಿ, ಲೆಕ್ಕದ ಪುಸ್ತಕ, ಮುಂತಾದವುಗಳು.

ಈ ಪಂಡಿತವರ್ಗದ ಕಾಗದಪತ್ರಗಳ ಅನ್ವೇಷಣೆ ಕ್ರೋಡೀಕರಣದಲ್ಲಿ ಹಲವಾರು ಜಟಿಲ ಸಮಸ್ಯೆಗಳು ಏರ್ಪಡುತ್ತವೆ. ಇವಲ್ಲಿ ಹಲವು ಎಲ್ಲ ಜಾತಿಯ ಕಾಗದಪತ್ರಗಳಿಗೂ ಅನ್ವಯಿಸತಕ್ಕವು: ಹಣಕಾಸಿನ ಅಭಾವ; ಕೂಡಿಡಲು ಸರಿಯಾದ ಆವಾಸ; ಸರಿಯಾಗಿ ರಕ್ಷಿಸಲು ಇಂದು ಪ್ರಯೋಗದಲ್ಲಿರುವ ವೈಜ್ಞಾನಿಕ ಸಾಧನಗಳು, ಉಪಕರಣಗಳು; ತರಬೇತು ಹೊಂದಿದ ಉದ್ಯೋಗಿಗಳು. ಇವುಗಳ ವಿಚಾರಣೆ ಪ್ರಕೃತ ಅನಾವಶ್ಯಕ. ಕಾಗದಪತ್ರ ವಿಜ್ಞಾನಕ್ಕೆ ಏಕಮಾತ್ರ ಅನ್ವಯಿಸುವ ಕಲೆಯ ಕೌಶಲ್ಯಕ್ಕೆ ಸಂಬಂಧಿಸಿದ ಬೃಹತ್ಪ್ರಶ್ನೆಯೊಂದಿದೆ. ಅದರ ಪರ್ಯಾಲೋಚನೆ ಅಗತ್ಯ. ಒಟ್ಟಿನಲ್ಲಿ ಪಂಡಿತವರ್ಗದ ಕಾಗದಪತ್ರಗಳು ಸಮಾಜದ ಜ್ಞಾನಭಂಡಾರವೆಂಬುದು ದಿಟ. ಆದರೆ ಎಲ್ಲ ಪಂಡಿತರ ಕಾಗದಪತ್ರಗಳನ್ನು ಅನ್ವೇಷಿಸಿ, ಕ್ರೋಡೀಕರಿಸಿ, ಕಾದಿಡುವುದು ಅಸಾಧ್ಯ, ಅಪ್ರಯೋಜಕ, ಇದರಿಂದ ಜ್ಞಾನಾಭಿವೃದ್ಧಿಗೆ ಅಡಚಣೆಯೇ ಹೊರತು ಲಾಭಕರವಲ್ಲ. ಕಳೆಕೀಳುವುದು ವ್ಯವಸಾಯಕ್ಕೆ ಎಷ್ಟು ಅಗತ್ಯವೋ ಅಷ್ಟೇ ಅಗತ್ಯ, ಒಂದು ಮಟ್ಟಕ್ಕೆ ಏರದವರನ್ನು ಪರಿಗಣನೆ ಮಾಡದಿರುವುದು. ಇದು ಒಪ್ಪುವ ಮಾತು. ಆದರೆ ಕಾರ್ಯರಂಗದಲ್ಲಿ ಈ ತತ್ವವನ್ನು ಪ್ರಯೋಗಕ್ಕೆ ತರುವುದು ಬಹುಕಷ್ಟ. ಪಂಡಿತರಲ್ಲಿ ಪರಸ್ಪರ ಸ್ಥಾನಮಾನವನ್ನು ನಿರ್ಣಯಿಸುವುದು ಹೇಗೆ? ಅನ್ವೇಷಣೆಯಲ್ಲಿ ಸಿಗುವ ನೂರಾರು ಕಾಗದಪತ್ರಗಳಲ್ಲಿ ಉತ್ತರಕಾಲದ ದೃಷ್ಟಿಯಿಂದ ಕ್ರೋಡೀಕರಣಕ್ಕೆ ಅರ್ಹವಾದವು ಯಾವುವು? ಈ ಸಮಸ್ಯೆಯನ್ನು ಬಗೆಹರಿಸಲು ಸರ್ವಸಮ್ಮತವಾದ ಗಜಕಡ್ಡಿಯೊಂದು ಇರಬೇಕು. ಸರಕಾರಿ ಕಾಗದಪತ್ರಗಳ ಆಯ್ಕೆಗೆ ಮಾರ್ಗದರ್ಶಕವಾಗಿ ಹಲವಾರು ಸ್ಥೂಲನಿಯಮಗಳು ಜಾರಿಯಲ್ಲಿವೆ. ಹಾಗೆಯೇ ಈ ಕ್ಷೇತ್ರಕ್ಕೆ ವಿಶೇಷವಾಗಿ ಅನ್ವಯಿಸುವಂತೆ ತಜ್ಞ ವಿಮರ್ಶಕರೊಡನೆ ಸ್ಥೂಲನಿಯಮಗಳನ್ನು ರಚಿಸುವುದು ಉತ್ತಮ. ಈ ನಿಯಮಗಳು ಶಾಸ್ತ್ರ ಶಾಸ್ತ್ರಕ್ಕೆ ವ್ಯತ್ಯಾಸವಾಗಬಹುದು.

ಆದ್ದರಿಂದ ಈ ನಿಯಮಗಳು ಮೂರು ವಿಧವೆಂದು ನೆನಪಿನಲ್ಲಿಡಬೇಕು : (೧) ಎಲ್ಲ ಬಗೆಯ ಕಾಗದ ಪತ್ರಗಳಿಗೂ ಅನ್ವಯಿಸತಕ್ಕವು ; (೨) ಪಂಡಿತವರ್ಗದ ಕಾಗದ ಪತ್ರಗಳಿಗೆ ಸಾಮಾನ್ಯವಾದವು ; (೩) ಯಾವುದೊಂದು ಶಾಸ್ತ್ರಕ್ಕೆ, ಕಲೆಗೆ, ವಿಶೇಷ ವಾಗಿ ಅನ್ವಯಿಸತಕ್ಕವು. ನಿಯಮಗಳು ಬಹುತರ ಸ್ಥೂಲವಾಗಿಯೇ ಇರಲು ಸಾಧ್ಯ. ಸೂಕ್ಷ್ಮವಾಗಿ ರಚಿಸಲು ಅಸಾಧ್ಯ. ಆಯ್ಕೆಯ ಕೆಲಸ ಸಮರ್ಪಕವಾಗಿ ನಡೆಯುವುದು ವಿಶೇಷವಾಗಿ ಆಯ್ಕೆದಾರರ ವಿದ್ವತ್ತು, ದೂರದೃಷ್ಟಿ, ಕುಶಲತೆಯ ಮೇಲಿದೆ.

ಈ ಆಯ್ಕೆಯ ವಿಷಯದಲ್ಲಿ ಮತ್ತೊಂದು ಮುಖ್ಯ ವಿಷಯವನ್ನು ಗಮನಿಸ ಬೇಕು. ಆಯ್ಕೆ ಮಾಡುವಾಗ ನಮ್ಮ ಸಮಕಾಲೀನ ದೃಷ್ಟಿಯಲ್ಲಿ ಲೋಪದೋಷ ಗಳಿರುವುದು ಸಹಜ—ಇವು ನಮ್ಮ ವೈಯಕ್ತಿಕ ಮಾನವಕುಲ, ಮತ, ಜಾತಿ, ಶ್ರೇಣಿ, ಉದ್ಯೋಗಾದಿಗಳಿಂದ ಜನಿಸಿರಬಹುದು, ಅಥವಾ ಸಾರ್ವತ್ರಿಕವಾದ ತತ್ಕಾಲ ದೃಷ್ಟಿಯಿಂದ ಇರಬಹುದು. ಇಂದು ಗಣ್ಯರೆಂದೆಣಿಸಿಕೊಂಡವರು ಅಲ್ಪಕಾಲದಲ್ಲೇ ಅವಜ್ಞರಾಗಬಹುದು, ಅಸಾಮರ್ಥ್ಯರಾದವರು ಪ್ರಸಿದ್ಧಿ ಹೊಂದಬಹುದು. ಹೀಗೆಯೇ, ಇಂದಿನ ಅಲಕ್ಷಿತ ವಿಷಯ ಮುಂದೊಂದು ಕಾಲದಲ್ಲಿ ಪ್ರಧಾನವಾಗ ಬಹುದು. ಆದ್ದರಿಂದ ಸಮಕಾಲೀನರ ವಸ್ತುಗಳ ಆಯ್ಕೆಯಲ್ಲಿ ಆದಷ್ಟು ವಿಶಾಲ ದೃಷ್ಟಿ ಇರುವುದೇ ಉತ್ತಮ. ಇದರಿಂದ ಬರುವ ಮುಖ್ಯ ದೋಷ ಸಂಗ್ರಹಿತ ವಸ್ತುಗಳು ಬೆಟ್ಟದ ಪ್ರಮಾಣವಾದರೆ ಸಂರಕ್ಷಿಸುವುದು ಅಸಾಧ್ಯ. ಈ ಮಾತು ಕೇವಲ ತಾತ್ವಿಕವಾಗಲಿ ಅತಿಶಯೋಕ್ತಿಯಾಗಲಿ ಅಲ್ಲ. ಸರಕಾರಿ ಕಾಗದಪತ್ರಗಳು ಬೆಳೆದಿರುವ, ಬೆಳೆಯುತ್ತಿರುವ ರೀತಿಯಲ್ಲಿ ಇದು ಆ ಕ್ಷೇತ್ರದಲ್ಲಿ ಸಾವು ಬದುಕಿನ ಸಮಸ್ಯೆ ಎನ್ನಬಹುದು. ಇದನ್ನು ಬಗೆಹರಿಸಲು ಮಾಡಿರುವ ಉಪಾಯ ಕಾರ್ಯಾ-ನಂತರ ಮುಖ್ಯವೆಂದು ಕಾದಿಟ್ಟ ಕಾಗದಪತ್ರಗಳನ್ನು ೨೫ ವರ್ಷಗಳಾದಮೇಲೆ ಪುನರ್ವಿಮರ್ಶಿಸಿ ಬೇಡವನ್ನು ಕಳೆಯುವುದು. ಈ ನಿಯಮ ಸರಕಾರದ ಸರ್ವ ಶಾಖೆಗಳಲ್ಲೂ ಜಾರಿಯಲ್ಲಿದೆ. ಇದೂ ಸಾಲದು, ೫೦ ವರ್ಷ ಕಳೆದ ಮೇಲೆ ಮತ್ತೊಂದು ಜಾರಿ [illegible]ಮ ಉತ್ತಮವೆಂದು ೪೦ರ ದಶಕದಲ್ಲಿ ಕೇಂದ್ರ ಸರಕಾರದ ಪ್ರೊ. [illegible] ಅವರ ಅಧ್ಯಕ್ಷತೆಯಲ್ಲಿ ಕೂಡಿದ "ಕಾಗದಪತ್ರ ಶಾಸನ ಸಮಿತಿ" ಅಭಿ[illegible] ಪಟ್ಟಿತು. ಈ ಪ್ರಶ್ನೆ ಬಹು ಬೃಹತ್ತಾದರೂ ಇಂದಿನ ಸ್ಥಿತಿಯಲ್ಲಿ ಪಂಡಿತರ ಕಾಗದಪತ್ರಗಳ ವಿಷಯದಲ್ಲಿ ಅಪ್ರಕೃತ, ಅಮುಖ್ಯ. ಇಂದಿರುವ ಪಂಡಿತವರ್ಗದ ಪತ್ರಸಂಕಲನದ ರಾಶಿ ಅತ್ಯಲ್ಪ. ಈ ಕ್ಷೇತ್ರಕ್ಕಿರುವ ಅನಾದರದಿಂದ ಬೆಳವಣಿಗೆಯೂ ಬಹು ನಿಧಾನ. ಸ್ಥಿತಿ ಬದಲಾಯಿಸಿದಾಗ ತಕ್ಕ ಕ್ರಮ ಕೈಗೊಳ್ಳಬಹುದು.

ಆಯ್ಕೆಯ ಕೆಲಸವನ್ನು ಯಾರು ಕೈಗೊಳ್ಳುವುದು ಉತ್ತಮವೆಂಬುದೊಂದು ಪ್ರಶ್ನೆಯಿದೆ. ವಿದ್ವಾಂಸರು ಆಗಿಂದಾಗ್ಗೆ ತಮ್ಮ ಕಾಗದಪತ್ರಗಳನ್ನು ಪರಿಶೀಲಿಸಿ

ಬೇಡದವನ್ನು ಬಿಸಾಡುತ್ತಿದ್ದರೆ ಅಂತಿಮವಲ್ಲಿ ಕೆಲಸ ಸುಗಮವಾಗುತ್ತದೆ. ವಿದ್ವಾಂಸರ ಅಂತಿಮಕಾಲವಾದ ಮೇಲೆ ಆಯಾಯಾ ಶಾಸ್ತ್ರದಲ್ಲಿ ಪರಿಣಿತರಾದವರೂ ಕಾಗದಪತ್ರ ವಿಜ್ಞಾನದಲ್ಲಿ ವಿಶೇಷ ತರಪೇತು ಹೊಂದಿದವರೂ ಒಟ್ಟುಗೂಡಿ ಖಾಯಮ್ಮಾಗಿ ಇಡಲು ಯೋಗ್ಯವಾದ ಕಾಗದಗಳ ಆಯ್ಕೆ ಮಾಡುವುದು ಉತ್ತಮ. ಮೊದಲನೆಯವರಿಂದ ಲಭಿಸುವುದು ತತ್ತದ್ವಿಜ್ಞಾನ ದೃಷ್ಟಿ; ಎರಡನೆಯವರಿಂದ ಲಭಿಸುವುದು ಅವಿಶೇಷ ಸಾರ್ವತ್ರಿಕ ಐತಿಹಾಸಿಕ ದೂರದೃಷ್ಟಿ. ಇವರೀರ್ವರಲ್ಲಿ ಯಾರೊಬ್ಬರು ಕಾಗದವೊಂದು ಮುಖ್ಯವೆಂದು ಪರಿಗಣಿಸಿದರೂ ಅದನ್ನು ರಕ್ಷಿಸುವುದು ಉತ್ತಮ. ಸರಕಾರಿ ಪತ್ರಗಳ ಆಯ್ಕೆಯ ಕ್ರಮವೂ ಈ ತತ್ವವನ್ನೇ ಅವಲಂಬಿಸಿದೆ.

ಮತ್ತೊಂದು ವಿಚಾರ ಈ ಕ್ರೋಡೀಕರಣ ಕಾರ್ಯವನ್ನು ಯಾರು ಕೈಗೊಳ್ಳ ಬೇಕೆಂಬುದು. ಆಯಾಯಾ ಶಾಸ್ತ್ರಕ್ಕೆ, ಕಲೆಗೆ ಸಂಬಂಧಪಟ್ಟ ಸಂಸ್ಥೆಗಳಾಗಲಿ, ವಿಶ್ವವಿದ್ಯಾಲಯದಂತಹ ಸರ್ವಶಾಸ್ತ್ರ ಅಧ್ಯಯನ ಸಂಸ್ಥೆಗಳಾಗಲಿ, ಉತ್ತಮ ಸಾಂಸ್ಕೃತಿಕ ಕೇಂದ್ರಗಳಾಗಲಿ, ಈ ಜವಾಬ್ದಾರಿಯನ್ನು ವಹಿಸುವುದು ಉತ್ತಮ. ಇವರಿಗೆ ನಿಜವಾದ, ಸ್ಥಿರವಾದ, ನಿರಂತರವಾದ ಆಸಕ್ತಿ ಇರುತ್ತದೆ; ಜಳ್ಳುಕಾಳನ್ನು ಬೇರ್ಪಡಿಸುವ ತಜ್ಞತೆ ಇರುತ್ತದೆ; ಈ ಕಾಗದಪತ್ರಗಳನ್ನು ಬಳಸಿಕೊಳ್ಳುವ ಸಂಶೋಧಕರೂ ಇವರ ಆಶ್ರಯದಲ್ಲಿರುವರು. ಇಂದಿನ ದೇಶದ ಪರಿಸ್ಥಿತಿಯಲ್ಲಿ, ಹಣಕಾಸಿಗಿರುವ ಮುಗ್ಗಟ್ಟನಲ್ಲಿ, ಈ ಮಹತ್ಕಾರ್ಯವನ್ನು ಸರಕಾರಿ ಪತ್ರಾಗಾರಗಳೂ ಕೈಕೊಂಡರೆ ಉತ್ತಮ. ಇವರ ಜೊತೆಗೆ ಪೌರಸಂಸ್ಥೆಯಂತಹ ಸ್ಥಳೀಯ ಸರಕಾರ ಗಳು ಸಾಂಸ್ಕೃತಿಕ ಕೇಂದ್ರಗಳೂ ಆಸಕ್ತಿಭರಿತರಾಗಿ ನೆರವು ನೀಡಬಹುದು. ಒಟ್ಟಿನಲ್ಲಿ ನಶಿಸಿಹೋಗುವ ಸಂಕಲನಗಳನ್ನು ಯಾರೊಬ್ಬರು ಭಕ್ತಿ ವಿಶ್ವಾಸ ತೋರಿಸಿ ಕಾದಿಡಲು ಸಹಾಯಮಾಡಿದರೂ ಉತ್ತಮ, ಪ್ರಶಂಸನೀಯ.

ಪಂಡಿತವರ್ಗದ ಕಾಗದಪತ್ರಗಳಲ್ಲಿ ಜಾಗೃತಿ ಸಾರ್ವತ್ರಿಕವಾಗಿ ಹೆಚ್ಚ ಬೇಕೆಂಬುದು ಒಟ್ಟಿನ ಮಾತು. ಮುಖ್ಯವಾಗಿ ಈ ಜಾಗೃತಿ ಪ್ರತಿಯೊಬ್ಬ ವಿದ್ವಾಂಸನಿಗಿರ ಬೇಕು, ಅವನ ವಾರಸುದಾರರಿಗೆ ಮಗುದಷ್ಟಿರಬೇಕು. ಇದು ಜನಿಸಬೇಕಾದರೆ ಈಗಾಗಲೆ ಹಲವು ಸಂಸ್ಥೆಗಳಲ್ಲಿ ಲಭಿಸುವ ಉತ್ತಮ ಸಂಕಲನಗಳ ವಿಮರ್ಶಾತ್ಮಕ ಲೇಖನಗಳ ಪ್ರಕಾಶನ ಅಗತ್ಯ. ಇದಕ್ಕೆ ಅರ್ಹವಾದವು ನ್ಯಾಷನಲ್ ಆರ್ಕೈವ್ಸ್-ನಲ್ಲಿರುವ ಮೇಲೆ ಹೇಳಿದ ಸಂಕಲನಗಳ ಜೊತೆಗೆ ಕಲ್ಕತ್ತಾ ನ್ಯಾಷನಲ್ ಲೈಬ್ರರಿ ಯಲ್ಲಿರುವ, ವಿಖ್ಯಾತ ಇತಿಹಾಸಕಾರ ಸರ್ ಜದುನಾಥ್ ಸರ್ಕಾರ್ ಅವರ ಸಂಕಲನ; ಇದರ ಪ್ರಮಾಣ, ಪ್ರೌಢತೆ, ವೈಶಾಲ್ಯ, ಅದ್ವಿತೀಯ. ನಮ್ಮ ಕನ್ನಡ ಪ್ರಪಂಚದಲ್ಲಿ ಶ್ರೀ. ನಂ. ಶ್ರೀ. ಯವರ ಪತ್ರವ್ಯವಹಾರದ ಬಗ್ಗೆ ನಾನು ಬರೆದಿರುವ ಚಿಕ್ಕದೊಂದು ಸಮೀಕ್ಷೆಯನ್ನೂ ನೋಡಬಹುದು; "ಶ್ರೀ.ನಂ.ಶ್ರೀ. ಸ್ಮಾರಕ ಗ್ರಂಥ —ಶ್ರೀಕಂಠತೀರ್ಥ"ದಲ್ಲಿ ಪ್ರಕಟಿತವಾಗಿದೆ.

ಕೊನೆಯ ಮಾತು: ಕಾಗದಪತ್ರ ರಕ್ಷಣೆಯ ವಿಶಾಲಕ್ಷೇತ್ರದಲ್ಲಿ ತಾತ್ಕಾಲಿಕವಾಗಿ ಬೆಳಗುವ ರಾಜಕೀಯ ನಾಯಕರಿಗೆ ದೊಡ್ಡ ಸ್ಥಾನವಿದೆ, ಸಮಾಜದ ಜ್ಞಾನ ಭಂಡಾರದ ಜನಕರಾದ ವಿದ್ವಾಂಸರಿಗೆ ಮನ್ನಣೆಯೇ ಇಲ್ಲ, ಎಂದು ಮೇಲೆ ಹೇಳಿದೆ. ವಿಬುಧವರ್ಗದ ಅಂತರ್ಯಸ್ಥಿತಿ ನೋಡಿದಲ್ಲಿ ಎಲ್ಲೆಡೆಯೂ ಸಾಹಿತಿಗಳಿಗಿರುವ ಸ್ಥಾನಮಾನ ಇತರರಿಗಿಲ್ಲ. ಇವರ ಕಾರ್ಯರಂಗ ಜನರಂಜಕವಾದ್ದರಿಂದ ಇದು ಸಹಜವಿರಬಹುದು. ಆದರೆ ಸಾಹಿತ್ಯ ಶಾಸ್ತ್ರಪ್ರಪಂಚದ ಒಂದು ಭಾಗ ಮಾತ್ರ. ಜನಸಾಮಾನ್ಯರ ದೃಷ್ಟಿಗೆ ಬೀಳಲಿ ಬೀಳದಿರಲಿ ಇತರ ವಿದ್ವಾಂಸರ ಕೊಡುಗೆ ಯಾವುದರಲ್ಲೂ ಕಡಮೆ ಇಲ್ಲ. ಕ್ರೋಡೀಕರಣಕ್ಷೇತ್ರದಲ್ಲಿ ದುಡಿಯುವವರ ದೃಷ್ಟಿ ಸಮವಾಗಿ, ಸಾರ್ವತ್ರಿಕವಾಗಿ, ಸಮರ್ಪಕವಾಗಿ ಹರಿಯಬೇಕು.

—o—



# ಕೇಂದ್ರ ಹಸ್ತಪ್ರತಿ ಭಂಡಾರದ ಆವಶ್ಯಕತೆ

ಬಿ. ಎಸ್. ಸಣ್ಣಯ್ಯ

ಕೈಯಿಂದ ಬರೆದ ಬರವಣಿಗೆಯುಳ್ಳ ಯಾವುದೇ ವಿಧವಾದ ವಸ್ತುವಿಗೆ ಹಸ್ತಪ್ರತಿ ಎನ್ನುತ್ತೇವೆ. ಆದರೆ ಇದು ಓಲೆ ಕಡತ ಕಾಗದಗಳಿಗೆ ಮಾತ್ರ ಮೀಸಲಾಗಿರುವುದು ಕಂಡುಬರುತ್ತದೆ. ಓಲೆಗ್ರಂಥಗಳನ್ನು ಓಲೆಕಟ್ಟುಗಳೆನ್ನುವುದು ಸಾಮಾನ್ಯ ಮಾತು. ಅಚ್ಚಿನ ಸೌಕರ್ಯ ಇಲ್ಲದಿದ್ದ ಕಾಲದಲ್ಲಿ ತಮಗೆ ಸುಲಭವಾಗಿ ದೊರೆಯುವ, ಬಹಳಕಾಲ ಬಾಳಿಕೆ ಬರುವ ವಸ್ತುಗಳನ್ನು ತಮ್ಮ ಬರವಣಿಗೆಗಾಗಿ ಜನ ಆಯ್ದುಕೊಂಡರು. ಅವುಗಳಲ್ಲಿ ಓಲೆ ಅಥವಾ ತಾಳಪತ್ರಗಳು ದಕ್ಷಿಣಭಾರತದಲ್ಲಿ ಬಹು ಪ್ರಸಿದ್ಧಿಯನ್ನು ಪಡೆದಿವೆ. ಕಾಗದ ಕೈಗೆ ಸುಲಭವಾಗಿ ದೊರೆಯುವವರೆಗೂ ಇವುಗಳಲ್ಲಿ ನಕಲು ಮಾಡುವ ಕೆಲಸ ಸಾಂಗೋಪಾಂಗವಾಗಿ ನಡೆದುಕೊಂಡು ಬಂದಿದೆ. ಭಾರತದಲ್ಲಿ ೧೫ನೆಯ ಶತಮಾನಕ್ಕೆ ಕಾಗದ ಬಳಕೆಗೆ ಬಂದರೂ ಸಾಮಾನ್ಯ ಜನತೆಯ ಕೈಗೆ ಸುಲಭವಾಗಿ ದೊರೆಯದೆ ಹೋದುದರಿಂದ ೧೯ನೆಯ ಶತಮಾನದವರೆಗೂ ಓಲೆಗಳಲ್ಲಿ ಈ ಪ್ರತಿಗಳನ್ನು ಮಾಡಿರುವುದು ಕಂಡುಬರುತ್ತದೆ. ೧೮೫೦ರಲ್ಲಿದ್ದ ಅಳಿಯ ಲಿಂಗರಾಜನ ಪ್ರಭಾವತೀ ಪರಿಣಯ ಮತ್ತು ಮುಮ್ಮಡಿ ಕೃಷ್ಣರಾಜರ ಕೃತಿಗಳು ಇದಕ್ಕೆ ಸಾಕ್ಷಿಯಾಗಿ ನಿಂತಿವೆ.

ಅನೂಚಾನವಾಗಿ ಹಲವಾರು ಶತಮಾನಗಳಿಂದ ಪ್ರತಿಗಳಾಗಿ, ಮರುಪ್ರತಿಗಳಾಗಿ ಬಂದ ಹಸ್ತಪ್ರತಿಗಳೆಲ್ಲವೂ ನಮಗೆ ಈಗ ದೊರೆತಿಲ್ಲ. ಆದರೆ ದೊರೆತ ಹಸ್ತಪ್ರತಿಗಳು ವಿವಿಧ ಎಡೆಗಳಲ್ಲಿ ಸಂಗ್ರಹವಾಗಿ, ಕೆಲವು ಉಪಯೋಗವಾದರೆ ಮತ್ತೆ ಕೆಲವು ಮೂಲೆಗುಂಪಾಗಿ ಹಾಳಾಗಿಹೋಗಿರುವುದುಂಟು. ಈಗ ದೊರೆಯುವಷ್ಟನ್ನಾದರೂ ಸಂಗ್ರಹಿಸಿ ಸಂರಕ್ಷಿಸಬೇಕೆಂಬ ಬಯಕೆಯಿಂದ ಹಲವು ಸಂಸ್ಥೆಗಳು ಕೆಲಸ ಮಾಡುತ್ತಿವೆ. ಅವು ಸರ್ಕಾರ, ಸ್ವಾಯತ್ತ ಹಾಗೂ ಖಾಸಗಿ ಸಂಸ್ಥೆಗಳಾಗಿರುತ್ತವೆ. ಇವುಗಳು ಈ ಕೆಲಸವನ್ನು ಹೆಚ್ಚುಕಡಿಮೆ ಒಂದು ಶತಮಾನದಿಂದ ಮಾಡಿದರೂ ಎಲ್ಲ ಹಸ್ತಪ್ರತಿಗಳ ಸಂಗ್ರಹ ಬಯಸುವವರೆಲ್ಲರ ಕೈಗೆ ದೊರಕುವಂತೆ ಮಾಡುವುದು ಸಾಧ್ಯವಾಗಿಲ್ಲದಿರುವುದು ತುಂಬಾ ವಿಷಾದನೀಯ. ಈ ದಿಸೆಯಲ್ಲಿ ಹಲವರು ಮಹನೀಯರು ತಮ್ಮ ಆಸಕ್ತಿ ಅಭಿರುಚಿಗಳಿಂದ ದುಡಿದರೂ ಸಾಕಷ್ಟು ಯಶಸ್ಸನ್ನು ಗಳಿಸಲಾರದಾದರು. ಏಕೆಂದರೆ ಯಾರೇ ಒಬ್ಬ ವ್ಯಕ್ತಿ ಅಥವಾ ಸಂಸ್ಥೆ ಒಂದು ಕಾಲದಲ್ಲಿ ಮಾಡಿದಂತಹ ಕೆಲಸವನ್ನು ಅನಂತರ ಬಂದವರು ಅದೇ ಆಸಕ್ತಿಯಿಂದ ಮುಂದುವರಿಸದಿರುವುದು

ಒಂದು ಕಾರಣವಾದರೆ, ಸಾಕಷ್ಟು ಹಣ, ಸರಿಯಾದ ಸಾಧನಗಳು, ತಕ್ಕಂತಹ ಯೋಜನೆಗಳು ದೊರೆಯದೇ ಹೋಗಿರುವುದು ಮತ್ತೊಂದು ಕಾರಣ. ಈ ಎಲ್ಲಕ್ಕಿಂತ ಮಿಗಿಲಾಗಿ ಹಣವನ್ನೊದಗಿಸುವ ಅಧಿಕಾರವರ್ಗದವರ ಈ ಬಗೆಗಿನ ಅನಾಸಕ್ತಿ ಮುಖ್ಯ ಕಾರಣವೆನ್ನದೆ ವಿಧಿಯಿಲ್ಲ. ಈ ಬಗೆಗಿನ ಯಾವುದೇ ಯೋಜನೆಯನ್ನು ಮುಂದಿಟ್ಟರೂ ಇದಕ್ಕೆ ಒಪ್ಪಿಗೆ ಕೊಡುವಂತಹ ಅಧಿಕಾರಿಗಳು ಯಾವ ತಿಳಿವಳಿಕೆಯೂ ಇಲ್ಲದೆ, ತಿಳಿದವರನ್ನು ಕೇಳುವ ಗೋಜಿಗೇ ಹೋಗದೆ ತಳ್ಳಿಹಾಕುವಂತಹ ಕಾರ್ಯ ನಡೆಯುತ್ತಿರುವುದರಿಂದ ಇಂತಹ ಪರಿಸ್ಥಿತಿ ಉಂಟಾಗಿದೆ. ಈ ಎಲ್ಲ ಕಾರಣಗಳಿದ್ದರೂ ಸಾಕಷ್ಟು ಮಟ್ಟಿಗೆ ಈ ದಿಸೆಯಲ್ಲಿ ಕಾರ್ಯಸಾಧನೆ ಮಾಡಿರುವ ಕೆಲವು ಸಂಸ್ಥೆಗಳಿವೆ. ಅವುಗಳು ಬೇರೆ ಬೇರೆ ಸ್ಥಳಗಳಲ್ಲಿ ಹಸ್ತಪ್ರತಿಗಳನ್ನು ಕೂಡಿಟ್ಟಿವೆ. ಆದರೆ ಇವುಗಳ ಉಪಯೋಗ ಎಲ್ಲ ವಿದ್ವಾಂಸರಿಗೆ ಒದಗುವುದು ಮಾತ್ರ ದುಸ್ತರವಾಗಿಯೇ ಪರಿಣಮಿಸಿದೆ. ಧಾರವಾಡದಲ್ಲಿನ ಒಬ್ಬರು ಮೂಡಬಿದರೆಯಲ್ಲಿರುವ ಪ್ರತಿಯನ್ನು ನೋಡಬೇಕೆಂದರೆ ಅದು ಪ್ರಯಾಸದ ಮಾತೇ ಆಗುತ್ತದೆ. ಈ ಸಂಗ್ರಹ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿರದೆ ಇಡೀ ಭಾರತದ ಅಷ್ಟೇಕೆ ಲಂಡನ್ನಿಗೂ ವ್ಯಾಪಿಸಿರುವುದು ಮತ್ತೂ ದುಸ್ತರವಾಗಿದೆ.

ಹಸ್ತಪ್ರತಿಗಳ ಸಂಗ್ರಹ ಮಾಡುವಾಗ ಭಾಷೆಯ, ವಿಷಯದ ಯಾವ ತಾರತಮ್ಯವೂ ಇಲ್ಲದೆ ಒಟ್ಟನಲ್ಲಿ ಸಂಗ್ರಹವಾಗಿರುವುದರಿಂದ ಕೆಲವೆಡೆ ಕನ್ನಡ ಹಸ್ತಪ್ರತಿಗಳನ್ನು ವರ್ಷಾನುಗಟ್ಟಲೆ ತೆರೆದು ನೋಡುವವರೂ ಇಲ್ಲದೆ, ಸಂಗ್ರಹವಾದಾಗ ಇದ್ದವರ ಆಸ್ಥೆ ಆಸಕ್ತಿಗಳು ಕ್ರಮೇಣ ಬಂದವರಲ್ಲಿ ಇಲ್ಲದೆ. ಅವು ಇಟ್ಟೆಡೆಯಲ್ಲೇ ನಶಿಸಿ ಹೋಗಿರುವುದನ್ನು ನಾನು ನೋಡಿದ್ದೇನೆ. ಕೆಲವೆಡೆ ಹಸ್ತಪ್ರತಿಗಳ ರಕ್ಷಣಾಕ್ರಮಗಳೇ ತಿಳಿಯದೆ ಅವುಗಳಿಗೆ ಬರುವ ಕ್ರಿಮಿಕೀಟಗಳನ್ನು ಹೋಗಲಾಡಿಸಲು ಡಿ.ಡಿ.ಟಿ. ಇತ್ಯಾದಿ ಕ್ರಿಮಿನಾಶಕಗಳನ್ನು ಲೆಕ್ಕವಿಲ್ಲದೆ ಸುರಿದು ಹುಳುಗಳು ನಾಶವಾಗುವುದರ ಜೊತೆಗೆ ಹಸ್ತಪ್ರತಿಗಳೂ ಹಾಳಾಗಿರುವುದನ್ನು ಕಂಡಿದ್ದೇನೆ. ಇಂತಹುದೆಲ್ಲದರಿಂದ ಹಸ್ತಪ್ರತಿಗಳನ್ನು ಉಳಿಸಿ ಉಪಯೋಗಕ್ಕೆ ಬರುವಂತೆ ಮಾಡುವ ಕಾರ್ಯವನ್ನು ಈಗಲಾದರೂ ಕೈಗೊಂಡರೆ ಮೇಲು. ಈಗ ದೊರೆತಿರುವಷ್ಟನ್ನು ಒಂದೆಡೆ ಸೇರಿಸಿ ಕೇಂದ್ರ ಹಸ್ತಪ್ರತಿ ಭಂಡಾರವನ್ನು ಮಾಡುವುದು ತೀರ ಅಗತ್ಯವೂ ಯೋಗ್ಯವೂ ಆಗಿದೆ ಎಂಬುದನ್ನು ಈ ದಿಸೆಯಲ್ಲಿ ಯೋಚಿಸುವ ಎಲ್ಲರೂ ಒಪ್ಪುವುದರಲ್ಲಿ ನನಗೆ ಸಂಶಯವಿಲ್ಲ. ಈ ಹಸ್ತಪ್ರತಿ ಭಂಡಾರದಲ್ಲಿ ಕನ್ನಡ ಭಾಷೆಯ ಎಲ್ಲ ರೀತಿಯ ಹಸ್ತಪ್ರತಿಗಳೂ ಸಂಗ್ರಹವಾಗಬೇಕು.

ಕೇಂದ್ರ ಹಸ್ತಪ್ರತಿ ಭಂಡಾರ ಎಂದಾಗ ನನ್ನ ನೆನಪಿಗೆ.ಬರುವ ಅಂಶವೆಂದರೆ ನಾನು ಬರೆದ 'ಕನ್ನಡಕ್ಕೊಂದು ಕೇಂದ್ರ ಗ್ರಂಥಾಲಯ' ಎಂಬ ಲೇಖನ. ಇದರಲ್ಲಿ ಎಲ್ಲ ಗ್ರಂಥಗಳು, ಹಸ್ತಪ್ರತಿಗಳು, ಶಾಸನಗಳು, ಮೂಲ ದಾಖಲೆಗಳು ಮೊದಲಾದುವನ್ನು ಹೇಗೆ ಸಂಗ್ರಹಿಸಬೇಕೆಂಬ ವಿಷಯವನ್ನು ತಿಳಿಸಿದ್ದೇನೆ. ಈಗ ಕನ್ನಡ ಹಸ್ತ

ಪ್ರತಿಗಳಿಗೇ ಮೀಸಲಾಗಿರುವ ಕೇಂದ್ರ ಹಸ್ತಪ್ರತಿ ಭಂಡಾರ ಹೇಗೆ ರೂಪುಗೊಳ್ಳಬೇಕು? ಅದರ ಯೋಜನೆಗಳೇನು? ಪ್ರಯೋಜನಗಳೇನು? ಎಂಬುದರ ಬಗೆಗೆ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ.

ಖಾಸಗಿ ವ್ಯಕ್ತಿಗಳಲ್ಲಿ, ಮಠಮಂದಿರಗಳಲ್ಲಿ ದೊರೆಯುವ ಹಸ್ತಪ್ರತಿಗಳನ್ನು ಉಚಿತವಾಗಿ ನೀಡಿದರೆ ತೆಗೆದುಕೊಂಡು, ಇಲ್ಲವೆ ಕೊಂಡುಕೊಂಡು ಸಂಗ್ರಹಿಸುವುದು. ಹಾಗೆ ಕೊಡಲು ಅವರು ನಿರಾಕರಿಸಿದರೆ ಅವುಗಳನ್ನು ಮೈಕ್ರೋಫಿಲಂ ಪ್ರತಿಗಳ ಮೂಲಕ ಸಂಗ್ರಹಿಸುವುದು, ಸೂಕ್ತವಾಗಿದೆ.

ಸರ್ಕಾರಿ ಮತ್ತು ವಿಶ್ವವಿದ್ಯಾನಿಲಯಗಳ ಅಧೀನಕ್ಕೊಳಪಟ್ಟ ಸಂಸ್ಥೆಗಳು ಹಲವಾರಿವೆ. ಅವುಗಳಲ್ಲಿ ಸಾಕಷ್ಟು ಕನ್ನಡ ಹಸ್ತಪ್ರತಿಗಳಿವೆ. ಅಲ್ಲದೆ ಕನ್ನಡ ಹಸ್ತಪ್ರತಿಗಳಿಗೇ ಮೀಸಲಾಗಿರುವ ಸಂಸ್ಥೆಗಳಿವೆ. ಈ ಎಲ್ಲವನ್ನೂ ಮೈಕ್ರೋಫಿಲಂ ಮೂಲಕ ಸಂಗ್ರಹಿಸಬೇಕು.

ಕರ್ನಾಟಕದಲ್ಲಲ್ಲದೆ ಹೈದರಾಬಾದ್, ಕೊಲ್ಹಾಪುರ, ಪೂನಾ, ದೆಹಲಿ, ಆರಾ, ಕಾರಂಜಾ—ಮೊದಲಾದ ಹಲವಾರು ಕಡೆಗಳಲ್ಲಿ ಕನ್ನಡ ಹಸ್ತಪ್ರತಿಗಳು ದೊರೆಯುತ್ತವೆ. ಇಲ್ಲಿರುವ ಕನ್ನಡ ಹಸ್ತಪ್ರತಿಗಳ ಸಂಗ್ರಹ ಆಗಬೇಕು.

ಇಂತಹ ಕೆಲಸವನ್ನು ಕೈಗೊಂಡು ಮೈಕ್ರೋಫಿಲಂ ಮೂಲಕ ಸಾಕಷ್ಟು ಹಸ್ತಪ್ರತಿಗಳನ್ನು ಸಂಗ್ರಹಿಸಿರುವ ಸಂಸ್ಥೆಯೆಂದರೆ ಮೈಸೂರು ಕನ್ನಡ ಅಧ್ಯಯನ ಸಂಸ್ಥೆ. ಆದರೆ ಈ ಕಾರ್ಯ ಪೂರ್ಣವಾಗಿಲ್ಲವಾದುದರಿಂದ ಈ ಕೆಲಸ ಮುಂದುವರಿಯಬೇಕಾಗಿದೆ.

ಈ ಕೇಂದ್ರ ಹಸ್ತಪ್ರತಿಭಂಡಾರ ಎಲ್ಲಿಯೋ ಸ್ಥಾಪನೆಯಾಗಬಹುದು. ಅದು ಎಲ್ಲ ಜನರ ಸ್ವತ್ತಾಗಿರುವುದಂತೂ ಸೂಕ್ತವಾದುದು. ಯಾವುದೋ ಖಾಸಗಿ ಸಂಸ್ಥೆಯೊಂದು ಕೈಗೊಂಡರೆ ಅದಕ್ಕೆ ಸರಿಯಾದ ನಿಯಮಾವಳಿಗಳ ರಚನೆಯಾಗಬೇಕು. ಇದರಲ್ಲಿ ಒಂದು ಕೊರತೆಯೇನೆಂದರೆ ಇಂದಿರುವ ಅಧಿಕಾರಿವರ್ಗವೇ, ಇಂತಹ ಆಸಕ್ತಿಯುಳ್ಳವರೇ ಮುಂದೂ ಇರುತ್ತಾರೆಂದು ಭಾವಿಸುವುದಕ್ಕಾಗುವುದಿಲ್ಲ. ಆದರೆ ಮದರಾಸಿನಲ್ಲಿರುವ ಅಡಿಯಾರ ಗ್ರಂಥಭಂಡಾರದಂತಹ ಸಂಸ್ಥೆ ನಡೆಯುತ್ತಿರುವುದು ಸಂತೋಷಕರವಾದುದು. ಇದೇ ಮಾದರಿಯಲ್ಲಿ ಈ ಭಂಡಾರ ರಚನೆಯಾಗುವುದು ಸೂಕ್ತವಾದುದೆಂದು ಭಾವಿಸಿದ್ದೇನೆ.

ಈ ಭಾಂಡಾಗಾರ ಮೈಸೂರು ನಗರದಲ್ಲಿ ಸ್ಥಾಪನೆಯಾದರೆ ಉತ್ತಮವೆಂದು ನಾನಾದರೂ ಭಾವಿಸಿದ್ದೇನೆ. ಏಕೆಂದರೆ ಇದು ಈ ಕಾಲದಲ್ಲಿಯೂ ಶಾಂತ ವಾತಾವರಣದಲ್ಲಿ ಹಾಗೂ ಹಲವಾರು ಹಳೆಯ ಗ್ರಂಥಭಂಡಾರಗಳನ್ನು ಹೊಂದಿರುವುದು ವಿದ್ವಾಂಸರಿಗೆ ತುಂಬಾ ಉಪಯುಕ್ತವಾಗುತ್ತದೆ. ಬೆಂಗಳೂರಿನಂತಹ ಕೈಗಾರಿಕಾಕೇಂದ್ರ ನಗರದಲ್ಲಿ ಸ್ಥಾಪನೆಯಾದರೆ ಒಂದಿಲ್ಲೊಂದು ಕಾರಣದಿಂದ ಜೀವನ ದುಬಾರಿಯಾಗಿ ನಾಲ್ಕು ದಿನ ಇರಬೇಕಾದ ವ್ಯಕ್ತಿ ಎರಡೇ ದಿನದಲ್ಲಿ ಸ್ಥಳ

ಖಾಲಿ ಮಾಡಬೇಕಾದ ಪರಿಸ್ಥಿತಿಯೊದಗಬಹುದೆನ್ನಿಸುತ್ತದೆ. ಆದರೆ ಹಸ್ತಪ್ರತಿ ಭಂಡಾರಕ್ಕೆ ಹೊಂದಿಕೊಂಡಂತೆ ವಸತಿ ಸೌಕರ್ಯವಿರುವುದಾದರೆ ಇದರ ಸಮಸ್ಯೆ ಕಡಮೆಯಾಗುತ್ತದೆ. ಹಾಗಾದಾಗ ಇದನ್ನು ಎಲ್ಲಿಯಾದರೂ ಸ್ಥಾಪಿಸಬಹುದು. ಈ ಕೇಂದ್ರ ಭಾಂಡಾಗಾರದ ಉಪಕೇಂದ್ರಗಳನ್ನು ಬೆಂಗಳೂರು, ಧಾರವಾಡ ಮೊದಲಾದ ಇತರ ಸ್ಥಳಗಳಲ್ಲಿ ಸ್ಥಾಪಿಸಬಹುದು. ಈ ಹಸ್ತಪ್ರತಿಗಳೆಲ್ಲವೂ ಮೈಕ್ರೋಫಿಲಂ ಪ್ರತಿಗಳ ರೂಪದಲ್ಲಿ ಸಂಗ್ರಹವಾಗುವುದರಿಂದ ಅವುಗಳ ಮರುಪ್ರತಿಗಳನ್ನು ಸುಲಭ ವಾಗಿ ಮಾಡಿಕೊಳ್ಳಬಹುದು. ಕೇಂದ್ರ ಭಂಡಾರದಲ್ಲಿಯೂ ಮರುಪ್ರತಿಯನ್ನು ಉಪಯೋಗಕ್ಕಿಟ್ಟು ಮೂಲಪ್ರತಿಯನ್ನು (Master Negative) ಸುರಕ್ಷಿತವಾಗಿ ಕಾಪಾಡಬೇಕಾಗುತ್ತದೆ.

ಮೈಕ್ರೋಫಿಲಂ ರೂಪದಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವುದರಿಂದ ಹಲವಾರು ಉಪಯೋಗಗಳಿವೆ. ಅವುಗಳು ಹೆಚ್ಚು ಸ್ಥಳವನ್ನು ಆಕ್ರಮಿಸಿಕೊಳ್ಳುವುದಿಲ್ಲ. ಅದರ ಎಷ್ಟು ಮರುಪ್ರತಿಗಳನ್ನದರೂ ಸುಲಭವಾಗಿ ತಯಾರಿಸಿಕೊಳ್ಳಬಹುದು. ಅವುಗಳಿಗೆ ಮೂಲಪ್ರತಿಯ ಬೆಲೆಯೇ ಇರುತ್ತದೆ. ಅವುಗಳ ಫೋಟೋಸ್ಟ್ಯಾಟ್ (Photostat) ಪ್ರತಿಗಳನ್ನು ತಯಾರಿಸಿಕೊಂಡರೆ ತಾವಿದ್ದಲ್ಲಿಯೇ ಅವುಗಳನ್ನು ತರಿಸಿಕೊಂಡು ಉಪಯೋಗಮಾಡಿಕೊಳ್ಳಬಹುದು. ಮೂಲಪ್ರತಿಗಳನ್ನು ಶಾಶ್ವತ ವಾಗಿ ಸಂರಕ್ಷಿಸಿದಂತಾಗುತ್ತದೆ.

ಈ ಭಾಂಡಾಗಾರಕ್ಕೆ ಮುಖ್ಯವಾಗಿ ಇದರ ಬಗ್ಗೆ ಆಸಕ್ತಿಯನ್ನು ಹೊಂದಿರುವ, ಈ ಬಗೆಗೆ ಅಧ್ಯಯನ ಮಾಡಿರುವ ಯೋಗ್ಯವ್ಯಕ್ತಿಯೊಬ್ಬ ಪ್ರಧಾನಾಧಿಕಾರಿಯಾಗಿರ ಬೇಕು. ಈತನಿಗೆ ಸಹಾಯಕವಾಗಿ ಸಲಹಾಸಮಿತಿಯೊಂದು ನೇಮಕವಾಗಬೇಕು. ಹಸ್ತಪ್ರತಿಗಳನ್ನು ಓದಬಲ್ಲಂತಹ ತಜ್ಞರು, ಛಾಯಾಚಿತ್ರ ಉಪಕರಣಗಳು, ಅವು ಗಳನ್ನು ಫೋಟೋ ತೆಗೆಯಬಲ್ಲಂತಹ ಯೋಗ್ಯಚಿತ್ರಗ್ರಾಹಕ, ಮೈಕ್ರೋಫಿಲಂ ಓದಬಹುದಾದ 'ರೀಡರು'ಗಳು, ಅವುಗಳನ್ನು ನೋಡಿಕೊಳ್ಳುವ ಮತ್ತು ಓದುಗರಿಗೆ ಸಹಾಯಮಾಡಬಲ್ಲ ಸಹಾಯಕ ಸಿಬ್ಬಂದಿ, ಮೈಕ್ರೊಫಿಲಂನಿಂದ ಮರುಪ್ರತಿ ಮಾಡುವ ಡ್ಯುಪ್ಲಿಕೇಟರ್, ಫೋಟೋಸ್ಟ್ಯಾಟ್ ಪ್ರತಿ ಮಾಡಬಲ್ಲಂತಹ ಪ್ರಿಂಟರ್ ಸಲಕರಣೆಗಳು ಅತ್ಯಂತ ಆವಶ್ಯಕ.

ಹೀಗೆ ಕೇಂದ್ರ ಹಸ್ತಪ್ರತಿಭಂಡಾರವೊಂದಿದ್ದರೆ ಎಲ್ಲೆಲ್ಲಿಯೋ ಹಾಳಾಗು ತ್ತಿರುವ ಹಸ್ತಪ್ರತಿಗಳ ರಕ್ಷಣೆಯಾದಂತಾಗುತ್ತದೆ. ಯಾವುದೇ ಹಸ್ತಪ್ರತಿಯನ್ನು ಯಾವುದೇ ವ್ಯಕ್ತಿ ಬಯಸಿದರೆ ನೇರವಾಗಿ ಬಂದು ಅದರ ಸಹಾಯ ಪಡೆಯಬಹುದು, ಇಲ್ಲವೆ ಮೈಕ್ರೋಫಿಲಂ ಅಥವಾ ಫೋಟೋಸ್ಟ್ಯಾಟ್ ರೂಪದಲ್ಲಿ ತರಿಸಿಕೊಳ್ಳಬಹುದು.

ಈ ಎಲ್ಲಕ್ಕೂ ಮಿಗಿಲಾಗಿ ಸಂಗ್ರಹವಾದ ಹಸ್ತಪ್ರತಿಗಳ ರಕ್ಷಣೆ ಸರಿಯಾದ ರೀತಿಯಲ್ಲಿ ನಡೆಯಬೇಕಾಗುತ್ತದೆ. ಅವುಗಳ ವರ್ಗೀಕರಣ, ಸೂಚೀಪಟ್ಟಿಕೆಗಳ

ತಯಾರಿಕೆ—ಕೃತಿಸೂಚಿ, ಕರ್ತೃಸೂಚಿ, ವಿಷಯಸೂಚಿಗಳು, ವರ್ಣನಾತ್ಮಕಸೂಚಿಗಳ ತಯಾರಿಕೆ ಮತ್ತು ಪ್ರಕಟನೆ ಅಗತ್ಯವಾಗಿ ಆಗಬೇಕಾಗುತ್ತದೆ. ಈ ಕೆಲಸಕ್ಕೆ ಬೇಕಾದ ಸಿಬ್ಬಂದಿಯ ನೇಮಕ ಸಂಗ್ರಹವಾದ ಹಸ್ತಪ್ರತಿಗಳ ಸಂಖ್ಯೆಯ ಮೇಲೆ ನಿರ್ಧರವಾಗಬೇಕಾಗುತ್ತದೆ.

ಕರ್ನಾಟಕದಲ್ಲಿ ಇಂತಹ ಕೇಂದ್ರ ಹಸ್ತಪ್ರತಿಭಂಡಾರ ಸ್ಥಾಪಿಸಿದರೆ ಅದು ನಿಜಕ್ಕೂ ಕನ್ನಡಿಗರ ಹೆಮ್ಮೆಯ ಕೇಂದ್ರವಾಗಿ ಅನೇಕ ವಿದ್ವಾಂಸರ ಕಣ್ಮಣಿಯಾಗಿ ಮೆರೆಯುವುದರಲ್ಲಿ ಸಂಶಯವಿಲ್ಲ. ಇದು ಕನಸಿನ ಲೋಕವೆಂದು ಕೈಲಾಗದವರು ಹೇಳಬಹುದು. ಆದರೆ ಕಾರ್ಯತತ್ಪರನಾದ ಯಾವ ವ್ಯಕ್ತಿಯೂ ಇದು ಅಸಾಧ್ಯದ ಮಾತೆಂದು ಹೇಳಲಾರ. ಅದಕ್ಕೆ ಬೇಕಾದುದು ಧನಸಹಾಯ, ದುಡಿಯುವ ವ್ಯಕ್ತಿಗಳು. ಇಷ್ಟಾದರೆ ಈ ಕನಸಿನ ಲೋಕ ವಾಸ್ತವವಾಗಿ ಕನ್ನಡಿಗರ ಉಪಯೋಗಕ್ಕೆ ಬರುವಂತಾಗುವುದು ಬಹು ದೂರವಲ್ಲ.

—o—

# ಕನ್ನಡ ಹಸ್ತಪ್ರತಿ ಸೂಚಿಗಳು

ಎಸ್. ಶಿವಣ್ಣ

ಕನ್ನಡ ಭಾಷೆಯಲ್ಲಿ ಕೃತಿರಚನೆ ಕ್ರಿ. ಶ. ೯ನೆಯ ಶತಮಾನದಲ್ಲಿ ರಚಿತವಾದ ಶ್ರೀವಿಜಯಕೃತ ಕವಿರಾಜಮಾರ್ಗಕ್ಕೆ ಪೂರ್ವದಲ್ಲಿಯೇ ಆರಂಭವಾಗಿತ್ತೆಂಬುದರ ಬಗೆಗೆ ಸಂದೇಹವಿಲ್ಲ. ಕೃತಿಯಲ್ಲಿನ ಗದ್ಯ–ಪದ್ಯ ಕರ್ತೃಗಳ ಉಲ್ಲೇಖ, ದೇಸಿ ಪ್ರಭೇದಗಳು, ಉತ್ತರ–ದಕ್ಷಿಣಮಾರ್ಗಗಳ ಪ್ರಸ್ತಾಪಗಳು ಪೂರ್ವದ ಉಪಲಬ್ಧ ಸಾಹಿತ್ಯಕ್ಕೆ ಸಾಕ್ಷಿಗಳಾಗಿವೆ. ಕ್ರಿ. ಶ. ೫ನೆಯ ಶತಮಾನದಿಂದೀಚೆಗೆ ಕನ್ನಡ ಭಾಷೆಯ ಶಾಸನಗಳು ದೊರಕಿವೆ. ಆದರೆ ಕವಿರಾಜಮಾರ್ಗಪೂರ್ವದ ಯಾವ ಸಾಹಿತ್ಯಕೃತಿಗಳೂ ಉಪಲಬ್ಧವಾಗಿಲ್ಲ. ಉಪಲಬ್ಧ ಕೃತಿಗಳಲ್ಲಿ ಕವಿರಾಜಮಾರ್ಗವೇ ಮೊದಲನೆಯದಾಗಿದೆ.

ಉಪಲಬ್ಧ ಕೃತಿಗಳನ್ನೆಲ್ಲ ಹಿಂದಿನ ಕಾಲದಲ್ಲಿ ಓಲೆ ಹಾಗೂ ಕೆಲಕಾಲನಂತರ ಕಾಗದಗಳ ಮೇಲೆ ಬರೆಯಲಾಗುತ್ತಿತ್ತು. ಹಿಂದಿನ ಕಾಲದಲ್ಲೇ ಆಗಲಿ, ಇಂದಿನ ಕಾಲದಲ್ಲೇ ಆಗಲಿ ಉಪಲಬ್ಧ ಗ್ರಂಥಗಳೆಲ್ಲವನ್ನೂ ಯಾವುದೇ ಒಂದು ಸ್ಥಳದಲ್ಲಿ ಒಟ್ಟಿಗೆ ಕಾಣುವ ಸಂಭವವಿರಲಿಲ್ಲವೆಂದೇ ಹೇಳಬಹುದು. ಸಾಮಾನ್ಯವಾಗಿ ಅರಮನೆ, ಗುರುಮನೆ, ಮಠಗಳು, ಬಸದಿಗಳು, ವಿದ್ವಾಂಸರ ವೈಯಕ್ತಿಕ ಸಂಗ್ರಹ ಗಳು, ಕೃತಿಸಂಗ್ರಹಗಳ ಮೂಲ ನೆಲೆಗಳಾಗಿದ್ದವು. ಅಲ್ಲದೆ ಆ ಆ ಧರ್ಮಗಳಿಗೆ ಸಂಬಂಧಿಸಿದ ಕೃತಿಗಳು ಆ ಆ ಧರ್ಮಿಗಳ ಸಂಗ್ರಹಗಳಲ್ಲಿ ಶೇಖರವಾಗಿರುತ್ತಿದ್ದುದೇ ಬಹು ಸಾಮಾನ್ಯ ರೀತಿಯಾಗಿತ್ತು. ಹೀಗಾಗಿ ಆಸಕ್ತಿಯುಳ್ಳ, ಅಭಿರುಚಿಯುಳ್ಳ ವ್ಯಕ್ತಿಗಳಿಗೆ ತಾವು ನೋಡಬಯಸಿದ ಕೃತಿಗಳ ಸುಳುಹು ಹಾಗೂ ಪರಿಶೀಲನೆಗೆ ಕೃತಿ ಗಳು ದೊರಕುವುದು ಕಠಿಣತರವಾಗಿದ್ದಿತು.

ಭಾರತದಲ್ಲಿ ಆಂಗ್ಲೇಯ ವಿದ್ಯಾಭ್ಯಾಸ ಪ್ರಸಾರವಾದಂತೆ ಸರ್ಕಾರಗಳು ಹಸ್ತ ಪ್ರತಿಗಳ ಸಂಗ್ರಹ–ಸಂರಕ್ಷಣೆ–ಪ್ರಕಟನೆಗಳಲ್ಲಿ ಆಸಕ್ತಿಯನ್ನು ವಹಿಸಲಾರಂಭಿಸಿದವು. ಪ್ರಾಚ್ಯ ಸಂಶೋಧನಾಲಯಗಳಲ್ಲಿ ಹಾಗೂ ಹಲವಾರು ವಿಶ್ವವಿದ್ಯಾನಿಲಯಗಳಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವ ಕಾರ್ಯ ಪ್ರಾರಂಭವಾಯಿತು. ಇಲ್ಲಿ ವಿವಿಧ ಧರ್ಮಗಳ, ವಿವಿಧ ಭಾಷೆಗಳ, ವಿವಿಧ ಲಿಪಿಗಳ ಕೃತಿರಾಶಿ ಒಂದೆಡೆಯಲ್ಲಿ ಸಂಗ್ರಹ ಗೊಂಡು ಅಭ್ಯಾಸಿಗಳಿಗೆ ಸುಲಭವಾಗಿ ಪರಿಶೀಲನೆಗೆ ದೊರೆಯುವಂತಾಯಿತು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತದಲ್ಲಿನ ಪೂನ, ಮದ್ರಾಸ್,

ತಂಜಾವೂರು, ಮೈಸೂರಿನಲ್ಲಿನ ಸಂಗ್ರಹಗಳು ತುಂಬ ಪ್ರಸಿದ್ಧಿ ಪಡೆದ ಕೇಂದ್ರಗಳಾಗಿ ಪರಿಣಮಿಸಿದವು. ಹೀಗೆ ಸಂಗ್ರಹಗೊಂಡ ಕೃತಿರಾಶಿಯ ವಿವರಗಳು ಕಾಲಾನುಕ್ರಮದಲ್ಲಿ ಸೂಚಿಗಳ ರೂಪದಲ್ಲಿ ಪ್ರಕಟಗೊಳ್ಳಲಾರಂಭಿಸಿದವು.

ಕನ್ನಡದಲ್ಲಿ ಕರ್ನಲ್ ಮೆಕೆಂಜಿಯೇ (೧೭೫೪–೧೮೨೧) ಹಸ್ತಪ್ರತಿಗಳನ್ನು ಸಂಗ್ರಹಿಸಿದವರಲ್ಲಿ ಮೊದಲಿಗ. '೧೮೭೦ರಲ್ಲಿ ಮದ್ರಾಸಿನಲ್ಲಿ ಸ್ಥಾಪಿತವಾದ ಸರ್ಕಾರಿ ಹಸ್ತಪ್ರತಿ ಭಂಡಾರಕ್ಕೆ ಸೇರ್ಪಡೆಯಾದ ಮೆಕೆಂಜಿ ಸಂಗ್ರಹವೇ ಪ್ರಪ್ರಥಮ ಸಾರ್ವಜನಿಕ ಕನ್ನಡ ಹಸ್ತಪ್ರತಿ ಭಂಡಾರ' (ಎಚ್. ದೇವೀರಪ್ಪ : ಕನ್ನಡ ಹಸ್ತಪ್ರತಿಗಳ ಇತಿಹಾಸ, ಬೆಂಗಳೂರು, ೧೯೭೭, ಪುಟ ೧೦೧.)

ಹಸ್ತಪ್ರತಿಗಳ ಬಾಹ್ಯ ಹಾಗೂ ಆಂತರಿಕ ವಿವರಗಳನ್ನು ಒಳಗೊಂಡ ಸೂಚಿಗಳೇ ಹಸ್ತಪ್ರತಿ ಸೂಚಿಗಳು. ಬಾಹ್ಯ ವಿವರಗಳಲ್ಲಿ ಹಸ್ತಪ್ರತಿಗಳ ವಸ್ತು (ಓಲೆ, ಶ್ರೀತಾಳ, ಕಾಗದ, ಇ.) ; ಪ್ರತಿಗಳ ಆಕಾರ ಅಂದರೆ ಉದ್ದ ಅಗಲಗಳು, ಗರಿಗಳ ಹಾಳೆಗಳ ಸಂಖ್ಯೆಗಳು, ಸೂಚಿತವಾಗುತ್ತವೆ. ಆಂತರಿಕ ವಿವರಗಳಲ್ಲಿ ಪ್ರತಿ ಗರಿಯ ಅಥವಾ ಹಾಳೆಯಲ್ಲಿನ ಒಂದು ಪಾರ್ಶ್ವದಲ್ಲಿನ ಸಾಲುಗಳ ಸಂಖ್ಯೆ, ಪ್ರತಿಸಾಲಿನಲ್ಲಿನ ಅಕ್ಷರಗಳ ಸಂಖ್ಯೆ, ಕೃತಿಯ ಆದಿ ಮತ್ತು ಅಂತ್ಯಗಳ ಉಲ್ಲೇಖಗಳು ಬರುತ್ತವೆ. ಇನ್ನುಳಿದ ಸೂಚಿಗಳಲ್ಲಿ ಕೃತಿಯ ಹೆಸರು, ಕರ್ತೃ, ಕಾಲಗಳನ್ನು ಸೂಚಿಸಿರುತ್ತದೆ.

ಕನ್ನಡದಲ್ಲಿ ಪ್ರಕಟವಾಗಿರುವ 'ವರ್ಣನಾತ್ಮಕ ಹಸ್ತಪ್ರತಿ ಸೂಚಿ'ಗಳಲ್ಲಿ ಮಾತ್ರ ಮೇಲಿನ ಬಾಹ್ಯ ಹಾಗೂ ಆಂತರಿಕ ವಿವರಗಳನ್ನು ಕಾಣಬಹುದಾಗಿದೆ. ಉಳಿದ ಹಸ್ತಪ್ರತಿ ಸೂಚಿಗಳಲ್ಲಿ ಇವುಗಳಲ್ಲಿನ ಕೆಲವಾರು ಅಂಶಗಳು ಮಾತ್ರ ಇರುತ್ತವೆ.

ಕನ್ನಡದಲ್ಲಿ ಪ್ರಕಟವಾದ ಮೊದಲ ಹಸ್ತಪ್ರತಿಸೂಚಿ ಮೆಕೆಂಜಿ ಸಂಗ್ರಹಕ್ಕೆ ಸಂಬಂಧಿಸಿದುದಾಗಿದೆ. ಈ ಸೂಚಿ 'Mackenzie Collection : A Descriptive Catalogue of the Oriental Manuscripts, Ed. H.H. wilson, vol. I, 1828' ಎಂಬ ಹೆಸರಿನಲ್ಲಿದೆ. ಇದರಲ್ಲಿ ಕನ್ನಡಕ್ಕೆ ಸಂಬಂಧಿಸಿದ ೧೫೨ ಕೃತಿಗಳ ವಿವರವಿದೆ. (ಎಚ್. ದೇವೀರಪ್ಪ, ಕನ್ನಡ ಹಸ್ತಪ್ರತಿಗಳ ಇತಿಹಾಸ, ೧೯೭೭, ಪುಟ. ೧೦೦). ಹೀಗೆಯೇ ಕನ್ನಡದಲ್ಲಿ ೧೯೫೪ ರಲ್ಲಿ ಪ್ರಕಟವಾದ ಮೊದಲ 'ವರ್ಣನಾತ್ಮಕ ಹಸ್ತಪ್ರತಿಸೂಚಿ'ಯ ಕೀರ್ತಿ ಮದ್ರಾಸ್ ಸರ್ಕಾರಕ್ಕೆ ಸಲ್ಲತಕ್ಕದ್ದಾಗಿದೆ.

ಕನ್ನಡದಲ್ಲಿ ಪ್ರಕಟವಾಗಿರುವ ಹಲವಾರು ಹಸ್ತಪ್ರತಿ ಸೂಚಿಗಳು ಮತ್ತು ವರ್ಣನಾತ್ಮಕ ಹಸ್ತಪ್ರತಿ ಸೂಚಿಗಳನ್ನು ಈ ಕೆಳಗೆ ಹೆಸರಿಸಲಾಗಿದೆ :

1 A Classified catalogue of Sanskrit and Kannada Manuscripts in the Sarasvati Bhandaram (Palace Sanskrit

(Library of H.H. the Maharaja of Mysore. Collections of 1900–1905. (Myore, 1905.)
ಇದರಲ್ಲಿ ಸುಮಾರು ೩೦೦ ಓಲೆ ಕೃತಿಗಳ ವಿವರಗಳಿವೆ.

2 A Catalogue of Samskrita, Prakrita and Hindi works in the Jain Siddhanta Bhavana, Arrah.
೧೯೧೯ರಲ್ಲಿ ಶ್ರೀ. ಸುಪಾರ್ಶ್ವ ದಾಸ್‌ಗುಪ್ತ ಮತ್ತು ಮೂಲಚಂದ್ರಜೈನ್ ಅವರಿಂದ ಸಂಪಾದಿತವಾಗಿ ದೇವನಾಗರಿ ಲಿಪಿಯಲ್ಲಿ ಪ್ರಕಟಿತವಾಗಿದೆ. ಸುಮಾರು ೫೦೦ ಕೃತಿಗಳ ವಿವರಗಳಿವೆ.

3 An Alphabetical Index of Kanarese Manuscripts in the Government Oriental Manuscripts Library, Madras. (ಸ.) ಎಸ್. ಕುಪ್ಪುಸ್ವಾಮಿ ಶಾಸ್ತ್ರಿ.
ಇದರಲ್ಲಿ ೧೫೪೦ ಕೃತಿಗಳ ವಿವರಗಳಿವೆ.

4 A Devanagari Printed Catalogue of the Manuscripts in the Mutt of Sri Lakshmisena Bhattaraka Mahasvamin, Kolhapur. Sam 1900.

5 A Descriptive Catalogue of the Kanarese Manuscripts in the Government Oriental Manuscripts Library, Madras.
ಮೇಲಿನ ಶೀರ್ಷಿಕೆಯಲ್ಲಿ ೧೯೩೪–೧೯೫೮ರ ಕಾಲಾವಧಿಯಲ್ಲಿ ೭ ಸಂಪುಟಗಳು ಪ್ರಕಟವಾಗಿವೆ. ಇಲ್ಲಿ ಒಟ್ಟು ೧೪೦೫ ಕೃತಿಗಳ ವಿವರವಿದೆ.

6 ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚೀ.
೧೯೪೮ ರಲ್ಲಿ ಕೆ. ಭುಜಬಲಿ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ದೇವನಾಗರಿ ಲಿಪಿಯಲ್ಲಿ ಪ್ರಕಟವಾಗಿದೆ.

7 A Descriptive Catalogue of Manuscripts in the Kannada Research Institue, Dharwar.
ಮೇಲಿನ ಶೀರ್ಷಿಕೆಯಲ್ಲಿ ೧೯೫೩–೧೯೭೬ ರ ವರೆಗೆ ೧೦ ಸಂಪುಟಗಳು ಪ್ರಕಟವಾಗಿವೆ. ಇಲ್ಲಿರುವ ಒಟ್ಟು ಕೃತಿ ಸಂಖ್ಯೆ ೬೭೩.

8 ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ.
ಮೇಲಿನ ಶೀರ್ಷಿಕೆಯಲ್ಲಿ ೧೯೬೨-೧೯೬೩ ರಲ್ಲಿ ೪ ಸಂಪುಟಗಳು ಪ್ರಕಟವಾಗಿದ್ದು ೨೦೬೬ ಕೃತಿಗಳ ವಿವರಗಳಿವೆ.
ಈಚೆಗೆ ೧೯೮೦–೮೧ ರಲ್ಲಿ ಐದರಿಂದ ಒಂಬತ್ತನೆಯ ಸಂಪುಟಗಳ ಪ್ರಕಟನೆ ಆಗಿದ್ದು ೩೨೮೫ ಕೃತಿಗಳ ವಿವರಗಳಿವೆ.

9 A Descriptive Catalogue of the Kannada Manuscripts in the Osmania University Library.
೧೯೬೬ರಲ್ಲಿ ಪ್ರಕಟವಾದ ಈ ಸೂಚಿಯಲ್ಲಿ ೨೯೫ ಕೃತಿಗಳ ವಿವರಗಳಿವೆ.

10 ಶ್ರವಣಬೆಳಗೊಳ ಶ್ರೀ ಜೈನಮಠದ ತಾಡಪತ್ರೀಯ ಗ್ರಂಥಸೂಚಿ.
೧೯೮೦ ರಲ್ಲಿ ಪ್ರಕಟವಾಗಿದ್ದು ೪೪೮ ಓಲೆ ಹಾಗೂ ೧೯ ಕಾಗದದ ಕಟ್ಟುಗಳ ವಿವರಗಳಿವೆ.

ಕನ್ನಡ ಹಸ್ತಪ್ರತಿಸೂಚಿಗಳಿಂದಾಗುವ ಕೆಲವು ಉಪಯೋಗಗಳನ್ನು ಈ ಮುಂದೆ ಪ್ರಸ್ತಾಪಿಸಿದೆ :

೧) ಕಾಲ ಲಿಖಿತವಾಗಿರುವ ಹಸ್ತಪ್ರತಿಗಳನ್ನು ಆಧರಿಸಿ ಕನ್ನಡ ಲಿಪಿಯ ಬೆಳವಣಿಗೆಯನ್ನು ಕಾಲಾನುಗುಣವಾಗಿ ಗುರುತಿಸಬಹುದಾಗಿದೆ. ಅಲ್ಲದೆ ಕಾಲ ನಿರ್ದೇಶವುಳ್ಳ ಶಾಸನಗಳ ಲಿಪಿಯೊಡನೆ ಹೋಲಿಸಿ ಸಾಮ್ಯ–ವೈಷಮ್ಯಗಳನ್ನು ಗಮನಿಸಬಹುದಾಗಿದೆ.

೨) ಸಾಹಿತ್ಯಚರಿತ್ರೆಗೆ ಸಂಬಂಧಿಸಿದಂತೆ ಕವಿಗಳ–ಕೃತಿಗಳ ಕಾಲನಿರ್ಣಯದ ಬಗೆಗೆ ಸಮರ್ಥನೆ ದೊರೆಯುತ್ತದೆ.

೩) ಒಂದು ಕೃತಿಯ ಉಪಲಬ್ಧ ಹಸ್ತಪ್ರತಿಗಳಲ್ಲಿ ಪ್ರಾಚೀನತಮವಾದುದನ್ನು ಗುರುತಿಸಲು ಹಾಗೂ ಹಸ್ತಪ್ರತಿಗಳ ವಂಶವೃಕ್ಷ ರಚಿಸಲು ಸಹಾಯ.

೪) ಹಸ್ತಪ್ರತಿಗಳು ಪ್ರತಿಯಾದ ವಿವಿಧ ಸ್ಥಳ ನಿರ್ದೇಶನಗಳ ಬಗೆಗೆ ಮಾಹಿತಿ ದೊರೆಯುತ್ತದೆ.

೫) ಮಠಗಳ, ಬಸದಿಗಳ ಉಲ್ಲೇಖಗಳ ಬಗೆಗೆ ಹಾಗು ಗುರುಪರಂಪರೆಗಳ ಬಗೆಗೆ ಮಾಹಿತಿ.

೬) ನಾಮಾವಶೇಷವಾಗಿರುವ ಬಸದಿ, ಮಠಗಳ ಬಗೆಗೆ, ವಿವರಗಳು ದೊರೆಯುತ್ತವೆ.

೭) ಚಿಕ್ಕ-ಪುಟ್ಟ ರಾಜವಂಶಗಳ ಬಗೆಗೆ ಮಾಹಿತಿ.

ಹೀಗೆ ಹಲವಾರು ದೃಷ್ಟಿಗಳಿಂದ ಸೂಚಿಗಳ ಅಭ್ಯಾಸ ಅಗತ್ಯವಾಗಿದ್ದು, ಸೂಚಿಗಳು ದೇಶದ ರಾಜಕೀಯ, ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕಾದಿ ರಂಗಗಳಲ್ಲಿ ಇತಿಹಾಸದ ಪುನರ್ವಿರಚನೆಗೆ ಮೂಲಭೂತವಾದ ಆಧಾರ ಸಾಮಗ್ರಿಯನ್ನು ಒದಗಿಸುತ್ತವೆ.

—o—

# ಕನ್ನಡ ಮೋಡಿ ಲಿಪಿ

ಕೆಳದಿ ಗುಂಡಾಜೋಯಿಸ್

## ಹಿನ್ನೆಲೆ

ರಾಷ್ಟ್ರದ ಸಮಗ್ರ ಇತಿಹಾಸ ರಚನೆಗೆ ಶಾಸನಗಳು, ಅಳಿದುಳಿದ ಕೋಟೆ–ಕೊತ್ತಲಗಳು, ಭೂಗತ ಅವಶೇಷಗಳ ಜೊತೆಗೆ ಆಯಾ ಕಾಲದಲ್ಲಿ ಉಲ್ಲೇಖನಗೊಂಡ ದಫ್ತರಗಳು, ದಿನಚರಿಗಳು, ಕೈಫಿಯತ್ತು ಹಾಗೂ ಬಖೈರುಗಳು, ವ್ಯಕ್ತಿಗಳ ಹಾಗೂ ರಾಜ್ಯಗಳ ನಡುವೆ ನಡೆದ ಪತ್ರವ್ಯವಹಾರಗಳು ಮುಖ್ಯ ಮೂಲ ಸಾಮಗ್ರಿಗಳಾಗಿವೆ. ವಿಜಯನಗರದ ಅನಂತರದ ಕಾಲಾವಧಿಯ ಕರ್ನಾಟಕ ಇತಿಹಾಸ ರಚನೆಗೆ ಶಾಸನಗಳಿಗಿಂತ ತುಸು ಮುಂದೆ ಅಭಿವೃದ್ಧಿಗೊಂಡು ಇವು ಸಾಮಗ್ರಿಗಳನ್ನು ಒದಗಿಸುತ್ತವೆ. ಈ ಬಗೆಯ ದಾಖಲೆಗಳು ಕೇವಲ ಐತಿಹಾಸಿಕ ಘಟನೆಗಳ ಮೇಲಷ್ಟೆ ಅಲ್ಲ ; ಆರ್ಥಿಕ ಸಾಮಾಜಿಕ ಹಾಗೂ ಜನಜೀವನದ ಮೇಲೂ ವಿಪುಲವಾಗಿ ಬೆಳಕು ಚೆಲ್ಲುತ್ತವೆ. ವಿವಿಧ ರಾಷ್ಟ್ರಗಳ ನಾನಾ ಮೂಲೆಗಳಲ್ಲಿ ಕಾಲಕಾಲಕ್ಕೆ ಬಹುಮುಖ ಜೀವನದಲ್ಲಿ ಪಾಲ್ಗೊಂಡಿದ್ದ ಎಲ್ಲ ವರ್ಗದ ಜನತೆಯೂ ಇಂತಹ ಒಂದಲ್ಲ ಒಂದು ದಾಖಲೆಯನ್ನು ಹೊಂದಿರಬಹುದಾದ ಸಂಭವವುಂಟು. ಇವರ ಮಹತ್ವವನ್ನು ವಿಶ್ವದ ವಿವಿಧ ರಾಷ್ಟ್ರಗಳೂ ಗಮನಿಸಿ ಪ್ರಾಮುಖ್ಯತೆ ನೀಡಿರುವುದನ್ನು Encyclopaedia Brittanica, vol. II ನಲ್ಲಿರುವ ಅಂಶಗಳಲ್ಲಿ ಗಮನಿಸಬಹುದಾಗಿದೆ. ರಾಷ್ಟ್ರದ ಉದ್ದಗಲಕ್ಕೆ ಅನೇಕ ಖಾಸಗಿ ಮನೆತನಗಳಲ್ಲಿ ದೇವಾಲಯ, ಮಠ, ಅರಮನೆಗಳಲ್ಲಿ ಅಡಗಿದ್ದು ಮೂಲೆಗುಂಪಾಗಲಿರುವ ಐತಿಹಾಸಿಕ ಕಾಗದಪತ್ರಗಳ ಲಿಖಿತ ದಾಖಲೆಗಳನ್ನು ಒಂದೆಡೆ ಕ್ರೋಢೀಕರಿಸಿ, ಇತಿಹಾಸ ಸಂಶೋಧನೆಗೆ ಹಾಗೂ ಮುಂದಿನ ಪೀಳಿಗೆಗೆ ಮಾರ್ಗದರ್ಶನಕ್ಕಾದರೂ ರಕ್ಷಿಸಿ ಕಾಪಾಡುವುದು ಸೂಕ್ತ.

## ಮೋಡಿಲಿಪಿಯಲ್ಲಿರುವ ಲಿಖಿತಗಳು

೧. **ದಫ್ತರಖಾನೆ :** ಇಂತಹ ದಾಖಲೆಗಳು ಕಡತಗಳು ಹಾಗೂ ಕೋರಿ ಕಾಗದಗಳು ಮುಂತಾದುವುಗಳಲ್ಲಿದ್ದು ದಫ್ತರಖಾನೆಗಳಲ್ಲಿ ಅಪಾರವಾಗಿ ಉಪಲಬ್ಧವಿರುತ್ತವೆ. ಕರ್ನಾಟಕದಲ್ಲಿ ಇತ್ತೀಚಿಗಿನ ನಾಲ್ಕು ಶತಮಾನಗಳ ಇತಿಹಾಸವು ಪರಿಪೂರ್ಣವಾಗಿ ಬರೆಯಲ್ಪಡಬೇಕಾದರೆ ಈ ದಾಖಲೆಗಳ ಅನ್ವೇಷಣೆ, ರಕ್ಷಣೆ,

ಅಧ್ಯಯನ ತೀವ್ರಗತಿಯಿಂದ ಆಗಬೇಕಾದುದು ಅಗತ್ಯ. ಏಕೆಂದರೆ ಕಾಗದಪತ್ರಗಳು ಹಾಗೂ ಕಡತಗಳು[1] ತೇವ, ಗೆದ್ದಲು ಹುಳು ಹಾಗೂ ಉಪೇಕ್ಷೆಗೆ ಶೀಘ್ರ ಪಕ್ಕಾಗಿ ನಾಶವಾಗತಕ್ಕವುಗಳಾಗಿವೆ.

ಕರ್ನಾಟಕದ ಅನೇಕ ಕಛೇರಿಗಳು,[2] ಸೆಕ್ರೆಟೇರಿಯಟ್ ಹಾಗೂ ನ್ಯಾಯಾಲಯ ಮುಂತಾದೆಡೆಗಳಲ್ಲಿರುವ ಸ್ವಾತಂತ್ರ್ಯಪೂರ್ವದ ಅನೇಕ ದಾಖಲೆಗಳು ಐತಿಹಾಸಿಕ ಸಂಶೋಧನೆಯಲ್ಲಿ ವಿಶಿಷ್ಟ ಪಾತ್ರವನ್ನು ವಹಿಸಬಲ್ಲವಾಗಿವೆ. ದಫ್ತರಖಾನೆಯಲ್ಲಿರುವ ಕಡತಗಳಲ್ಲಿ ನಿರೂಪ, ಬಿನ್ನವತ್ತಳೆ, ಉತಾರ, ರಶೀದಿ, ನಿಶುಪಿ ನಿರೂಪ (?), ಉೃತ್ತಿ (ವೃತ್ತಿ), ಸ್ವಾಸ್ತೆ, ಪಟ್ಟೆಪ್ರತಿ, ಗುತ್ತಿಗೆ ವಪ್ಪಿ(ತ ?)ಪ್ರತಿ, ಲಿಡದಸ್ವಾಸ್ತೆ(?), ಲೆಕ್ಕಪತ್ರಗಳು ಮುಂತಾದ ಅಂಶಗಳದ್ದು ಮೋಡಿ ಲಿಪಿಯಲ್ಲಿ ಉಲ್ಲೇಖನಗೊಂಡಿವೆ.

**ಕಡತ (ಕಡಿತ) :** ಕಡತವು ಕಾಗದದಂತೆ ಬರವಣಿಗೆಯ ಸಾಧನೆಗಳಲ್ಲಿ ಒಂದು. ಸುಮಾರು ಒಂದು ಅಡಿ ಅಗಲ, ಹಲವು ಅಡಿಗಳಷ್ಟು ಉದ್ದವೂ ಆಗಿರುವ ಮತ್ತು ಸ್ವಲ್ಪ ಮಟ್ಟಿಗೆ ಮಂದವಾಗಿರುವ ಹತ್ತಿಯ ಬಟ್ಟೆಗೆ ಹುಣಿಸೆ ಬೀಜದ ಚರಿಯನ್ನು ಸಮತಲವಾಗಿ ಮೆತ್ತಿ, ನಯವಾದ ಗಾರೆಕಲ್ಲಿನಿಂದ ಉಜ್ಜಿ, ಹದವಾಗಿ ಒಣಗಿಸಿ, ಅದಕ್ಕೆ ಇದ್ದಲು ಪುಡಿಯನ್ನೋ ದೀಪದ ಕಾಡಿಗೆಯನ್ನೋ ಬಳಿದು ಬಳಪದಿಂದ ಬರೆಯುತ್ತಿದ್ದರು. ಕಡತವನ್ನು ಅದರ ಅಗಲಕ್ಕೆ ತಕ್ಕಂತೆ ಎಡಕ್ಕೊಂದು ಹಾಗೂ ಬಲಕ್ಕೊಂದು ಸಲ ಮಡಿಸಿ ಇಕ್ಕಡೆಯಲ್ಲಿಯೂ ರಟ್ಟನ್ನು ಹಾಕಿ ಕಟ್ಟುತ್ತಿದ್ದರು. ರಾಜ್ಯದ ಆಡಳಿತ ನಡೆಸುವವರು, ಆಯ–ವ್ಯಯದ ಲೆಕ್ಕಗಳನ್ನು ಬರೆದಿಡುವುದಕ್ಕಾಗಿಯೂ, ರಾಜನಿರೂಪಗಳ ನಕಲನ್ನು ಮಾಡುವುದಕ್ಕಾಗಿಯೂ ಇದನ್ನು ಉಪಯೋಗಿಸುತ್ತಿದ್ದರು. ಖಾಸಗಿ ಜನರು ತಮ್ಮ ಜಮಾಖರ್ಚು ಹಾಗೂ ವೈಯಕ್ತಿಕ ಸಂಗತಿಗಳನ್ನು ಇವರಲ್ಲಿ ಬರೆಯುತ್ತಿದ್ದರು. ಇವುಗಳೆಲ್ಲವೂ ಮೋಡಿ ಲಿಪಿಗಳಲ್ಲಿವೆ.

## ಮೋಡಿಯ ಸ್ವರೂಪ

ಗ್ವಾಲಿಯರ್ ಸಂಸ್ಥಾನದಲ್ಲಿ ೧೯೦೧ರಲ್ಲಿ ಕೈಗೊಂಡ ಗಣತಿಯ ವರದಿಯಲ್ಲಿ (Census Report) ಮೋಡಿ ಲಿಪಿಯ ಮಾಹಿತಿ ಬೆಳಕಿಗೆ ಬಂದಿತು. ೧೯೪೧ರಲ್ಲಿ ಈ ವರದಿಯನ್ನು ಸಿದ್ಧಪಡಿಸಿದ್ದ ಮಿ. ಜೇನ್ಸ್‌ರವರು ಕ್ರಿ. ಶ. ೧೭ ಹಾಗೂ ೧೮ನೇ ಶತಮಾನಗಳಲ್ಲಿ ಇದು ಪರ್ಶಿಯಾದ ಶಿಕಸ್ತಾ ರೂಪದಲ್ಲಿದ್ದು ಬ್ರಿಟಿಷ್ ಅಧಿಕಾರಿ ಹಾಗೂ ಸೇನಾಧಿಕಾರಿಗಳು ಬಳಸುತ್ತಿದ್ದರೆಂದು ವಿಶದೀಕರಿಸಿದ್ದಾರೆ. ಮರಾಠಾ ರಾಜವಾಡೆಯಲ್ಲಿ ಮೋಡೀ ಲಿಪಿ ಶಿವಾಜಿಯ ಕಾರ್ಯದರ್ಶಿ ಅಥವಾ ಚಿಟ್ನೀಸ್ ಆದ ಬಾಲಾಜಿ ಆವಜಿಯವರಿಂದ ರೂಢಮೂಲವಾಗಿ ಜಾರಿಗೆ ಬಂತು. ಇದೇ ಪರಂಪರೆಯಲ್ಲಿ ಜಂಜೀರಾದ ಸಿದ್ದಿ ಸಹೋದರರು ಕವಲ ತೀರದಿಂದ ದೆಹಲಿಗೆ ಇವುಗಳನ್ನು ಕೊಂಡೊಯ್ದರು. **ಒಂದು ವಿಧವಾದ ಸಂಕ್ಷಿಪ್ತ ಬರವಣಿಗೆ ಹಾಗೂ ಸೇರಿಸಿ**

**ಬರೆಯುವ ಮುಖಾಂತರ ಉಪಯೋಗಿಸಲಾದ ಲಿಪಿಗಳಿಗೆ ಮೋಡಿ ಲಿಪಿ ಎಂದು ಹೆಸರು.** ಇದಕ್ಕೆ **ಚಿಟ್ನೀಸೀ ವಾಲನ್** ಎಂಬುದಾಗಿಯೂ ಹೇಳುವುದುಂಟು. ಸತಾರಾ ಮುಖ್ಯರೂ ಬಾಲಾಜಿ ಲಿಪಿಗಳನ್ನು ತುಸು ಮಾರ್ಪಡಿಸಿ **ಬಿವಲ್ಕಾರಿ** ಎಂಬುದಾಗಿ ಪರಿವರ್ತಿಸತೊಡಗಿದರು. ಮೋಡಿ ಸ್ವರೂಪವು 'ಹೇಮಾದ್ ಪಂತ್'ನಿಂದ ಭಾರತಕ್ಕೆ ಬಂತೆಂದು ಗೊತ್ತಾಗಿದೆ.[3]

ಶಿವಾಜಿಯ ಕಾಲದಲ್ಲಿ ಶೀಘ್ರಲಿಪಿ ಪರಿಷ್ಕರಣೆಯಲ್ಲಿ ಸಾಕಷ್ಟು ಸುಧಾರಣೆಗಳು ಕಂಡುಬಂದವು. ಶಿವಾಜಿಗೆ ಓದಲೂ ಹಾಗೂ ಬರೆಯಲೂ ಬರುತ್ತಿರಲಿಲ್ಲ. ಈ ಕಾರಣಗಳಂಥ ರಾಜಾಜ್ಞೆ ಅಥವಾ ಹುಕುಂ ಜಾರಿ ಮಾಡಲು ಬಾಲಾಜಿಯ ಉಪಯೋಗಕ್ಕಾಗಿ 'ಕಲಂದಾನ್' (ಲೇಖಣಿ–ಮಸಿಕುಡಿಕೆ) ಯಾವಾಗಲೂ ಸನಿಹದಲ್ಲಿಯೇ ಇರುತ್ತಿತ್ತು. ಶಿವಾಜಿಯ ಆಜ್ಞೆ ಸಾಮಾನ್ಯವಾಗಿ ಔರಂಗಾಬಾದ್ ಕಾಗದದಲ್ಲಿ ಮೋಡೀ ಲಿಪಿಯನ್ನೇ ಒಳಗೊಂಡಿತ್ತು. ಉತ್ತರ ಕನ್ನಡ, ದಕ್ಷಿಣ ಕನ್ನಡ, ಮಹಾರಾಷ್ಟ್ರ ಹಾಗೂ ಮಲೆನಾಡಿನ ವಿವಿಧ ಭಾಗಗಳಲ್ಲಿ ಮೋಡೀ ಲಿಪಿಗಳನ್ನೊಳಗೊಂಡ ಕಾಗದಗಳು, ಕಡತಗಳು ಹೇರಳವಾಗಿ ಉಪಲಬ್ಧವಿವೆ. ಆದರೆ ಶಿವಾಜಿಗಿಂತ ಹಿಂದಿನವು ಹಾಗೂ ಆತನ ಕಾಲದ ಉಲ್ಲೇಖಗಳು ಸಾಕಷ್ಟು ಅಪುರೂಪವಾಗಿಯೇ ಇವೆ.

## ಹಳಗನ್ನಡ ಮೋಡಿಯಲ್ಲಿ ಮರಾಠಿ ದಾಖಲೆಗಳು

ಕಾಗದ ಪ್ರತಿಗಳಲ್ಲಿ ಸರಕಾರಿ ನಿರ್ದೇಶನಗಳು, ಲೆಕ್ಕಪತ್ರಗಳು, ಇನಾಂ ಹಾಗೂ ಉಂಬಳಿ ವ್ಯವಹಾರಗಳು, ಕುಟುಂಬದ ಪತ್ರಗಳು, ರಾಜಕೀಯ ಹಾಗೂ ಸಾಮಾಜಿಕ ವ್ಯವಹಾರಗಳು ಸೇರಿವೆ. ಇವುಗಳೆಲ್ಲವೂ ಮೋಡಿ ಲಿಪಿಯಲ್ಲಿವೆ. ಮರಾಠಿ ದಾಖಲೆಗಳು ಅಪಾರವಾಗಿ ಹಳಗನ್ನಡ ಮೋಡಿ ಲಿಪಿಗಳಲ್ಲಿ ಉಲ್ಲೇಖನಗೊಂಡಿರುವುದನ್ನು ಗೋವಾದ ಡಾ|| ಗಜಾನನ ಘಾಟ್‌ಕರ್ ಹಾಗೂ ಡಾ|| ಪಿಸುರ್ಲೇಂಕರ್‌ರವರು Marathi Records in Hala Kannada Script ಎಂಬಲ್ಲಿ ಪ್ರತಿಪಾದಿಸಿದ್ದಾರೆ.[4] ಸ್ವಾತಂತ್ರ್ಯ ಪೂರ್ವದಲ್ಲಿನ (೧೯೪೭ಕ್ಕೆ ಮುಂಚೆ) ಬ್ರಿಟಿಷ್ ಅಧಿಕಾರಿಗಳೂ ಕನ್ನಡದಲ್ಲಿ ಉಲ್ಲೇಖಿಸಿದ ದಾಖಲೆಗಳೂ ಅಪುರೂಪವೇನಲ್ಲ.[5] ಕರ್ನಾಟಕದ ಚರಿತ್ರೆಗೆ ಸಂಬಂಧಿಸಿದ ಇಂತಹ ವಿವಿಧ ಸಾಮುಗ್ರಿಗಳು ಪೂನಾ, ದೆಹಲಿ ಹಾಗೂ ಭಾರತದ ಇತರೆಡೆಗಳಲ್ಲಿಯೂ ಸಾಕಷ್ಟು ವಿಪುಲವಾಗಿ ಉಪಲಬ್ಧವಿವೆ.

## ಕನ್ನಡ ಮೋಡಿ ಲಿಪಿ

"ಬಳಸಿ ಬರೆಯಲು ಕಂಠಪತ್ರದ ಉಲುಹು ಕೆಡದ ಅಗ್ಗಳಿಕೆ" ಎಂಬುದಾಗಿ ಕುಮಾರವ್ಯಾಸನ ಉಕ್ತಿಯಂತೆ ಅಕ್ಷರಗಳನ್ನು 'ಬಳಸಿ' ಬರೆಯುವಾಗ ಯೋಚಿಸದೆ ಲಿಪಿಗಳನ್ನು ಸೇರಿಸಿ ಬರೆಯುವುದೂ ಒಂದು ಕಲೆ. ಮೋಡೀ ಲಿಪಿಗಳಲ್ಲಿ ಮಧ್ಯೆ

ಏನನ್ನೂ ಸೇರಿಸುವ ಹಾಗಿಲ್ಲ ಎಂಬುದೂ ಗಮನಾರ್ಹವಾದುದು.[6] ಕನ್ನಡ ಮೋಡಿ ಲಿಪಿಯ ಮೊಟ್ಟಮೊದಲ ಸಂಗ್ರಹಗಳು 'ಹೇಮಾದ್ರಿ'ಯಿಂದ ನಿರೂಪಿಸಲ್ಪಟ್ಟಿರುವುದಾಗಿ ಡಾ|| ಎ. ವಿ. ನರಸಿಂಹಮೂರ್ತಿಯವರ ಅಭಿಪ್ರಾಯವಾಗಿದೆ. ೧೮೭೮ ರಲ್ಲಿ ಗೋವಾದ ಸುರಿಯುಗಿ ಆನಂದರಾವ್ (Suriagy Anada Rau) ರವರು 'ಗ್ರಮಾಟಿಕಾ ಡಾ ಲಿಂಗ್ವಾ ಮರಾಠಾ' (Gramatika da Lingva Maratha) ಎಂಬ ಗ್ರಂಥದಲ್ಲಿ ಇದನ್ನು 'ಕಾನಡೀ' (Kanadi) ಅಥವಾ 'ಕಂಡೇವಿ' (Candevi) ಎಂಬುದಾಗಿ ಕರೆದಿದ್ದಾರೆ. ಅವರು ಮುಂದುವರಿದು—

The earliest instance of this script we have in a petition addressed by a certain Raulu Chatim, most probably a Gaocar of Caraim in the Islands of Goa, to the King of Portugal about 19 years after the conquest of Goa by Alfonso de Albuquerque. This petition is endorsed with a couplet of signatures of Raulu Chatim in Roman script and in Candevi. The Devanagari rendering of this letter would be as follows : ರವಳ ಸೇಟೀ ಬರಹ (ಈ ಬರಹ ನಾಗರಿ ಲಿಪಿಯಲ್ಲಿ ಇದೆ.) which means "writting of Raval Seti.'[7]

## ಗೋವಾದಲ್ಲಿ ಕನ್ನಡ ಮೋಡಿ ಬೆಳವಣಿಗೆ

ಪ್ರೊ|| ಪಿ. ಪಿಸುರ್ಲೆಂಕರ್‌ರವರು ಪಾಳೆಯಗಾರರುಗಳು, ಪ್ರಧಾನಿಗಳು, ನಿಯೋಗಿಗಳು, ಅಧಿಕಾರಿಗಳು, ಮಠ ಹಾಗೂ ದೇವಾಲಯಗಳು, ವರ್ತಕರು ಹಾಗೂ ರಾಜವಾಡೆಗಳು, ಮುಂತಾದೆಡೆಗಳಲ್ಲಿ ಅನ್ವೇಷಣೆಗಳನ್ನು ಕೈಗೊಂಡು ಕನ್ನಡ ಮೋಡಿ ಲಿಪಿಗಳನ್ನು ವಿಶೇಷವಾಗಿ ಅಧ್ಯಯನಮಾಡಿ A proposito de alguns vocabulos luso Indianos ಮುಂತಾದ ತಮ್ಮ ಗ್ರಂಥಗಳಲ್ಲಿ ವಿಶದೀಕರಿಸಿದ್ದಾರೆ. ಕನ್ನಡ ಹಾಗೂ ಇತರ ಮೋಡೀ ಲಿಪಿಗಳನ್ನು ಅಧ್ಯಯನಮಾಡಿ, ಅಮೂಲ್ಯ ಚಾರಿತ್ರಿಕ ದಾಖಲೆಗಳನ್ನು ಪ್ರಕಟಿಸಿ, ಮರಾಠಾ ಹಾಗೂ ಗೋವಾ ಸರಕಾರಗಳು ಈ ದಿಶೆಯಲ್ಲಿ ವಿಪುಲವಾಗಿ ಅಭಿವೃದ್ಧಿಯನ್ನು ಸಾಧಿಸಿವೆ. ಇದು ನಿಜಕ್ಕೂ ಶ್ಲಾಘನೀಯವಾಗಿದ್ದು, ಹೊರನಾಡಿನಲ್ಲಿರುವ ಕನ್ನಡದ ಪ್ರಗತಿ ಒಳನಾಡ ಕನ್ನಡಿಗರು ತಲೆ ತಗ್ಗಿಸುವಂತಿದೆ. ಕರ್ನಾಟಕ ಸರಕಾರವು 'ಅಭಿಲೇಖಾ ಇಲಾಖೆ'ಯ ಪ್ರಥಮ ನಿರ್ದೇಶಕ ಡಾ|| ಎಸ್. ವಿ. ದೇಶಿಕಾಚಾರ್‌ರವರ ನೇತೃತ್ವದಲ್ಲಿ ವಿವಿಧ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಂಡಿತ್ತು. ಇವುಗಳಲ್ಲಿ ಕನ್ನಡ ಮೋಡಿ ಲಿಪಿಯ ಪುನರುದ್ಧಾರದ ಕಾರ್ಯಭಾರವು ನನ್ನ ಪಾಲಿಗೆ ಬಂದಿತ್ತು. ಈ ದಿಸೆಯಲ್ಲಿ ಇಲಾಖೆಯ ಸಾಧನೆಯು ಮುಂದಗತಿಯಲ್ಲಿರುವುದು ವಿಷಾದನೀಯವಾಗಿದೆ. ಭಾರತದ ಇತರ ರಾಜ್ಯ ಹಾಗೂ ರಾಜಧಾನಿಗಳಲ್ಲಿ ಅಪಾರವಾದ ಕನ್ನಡ ಮೋಡಿ

ಲಿಪಿಯ ಸಂಗ್ರಹಗಳನ್ನು ಕೊಂಡೊಯ್ಯಲಾಗಿದ್ದು (ಇವುಗಳಲ್ಲಿ ಎಷ್ಟು ನಾಶ ಪಡಿಸಲ್ಪಟ್ಟವೋ ಬಲ್ಲವರಾರು?), ಆಸಕ್ತಿಯುರುವ ಸಹೃದಯ ವಿದ್ವಾಂಸರಿಂದ ಪ್ರಕಟಿತವಾಗಿದ್ದು, ಸಂಶೋಧನೆಯ ಹಲವಾರು ಅಂಶಗಳಲ್ಲಿ ಒಂದನ್ನು ಈ ಕೆಳಗೆ ನಿರೂಪಿಸಲಾಗಿದೆ:

In the bargain, I was surprised to learn that our Candevi was not very dissimilar from the 17th century Kannada Script. This I could gather from a comparison of my deciphered documents with the text of a treaty between the Portuguese and Virappa Nayak, the king of Ikkeri of about March, 1631. The so-called Goy Kanadi or Candevi was then no more than a regional variation of the contemporary Kannada Script.[9]

ಇದೇ ರೀತಿಯಲ್ಲಿ ಪೂನಾ ವಿಶ್ವವಿದ್ಯಾಲಯದ ಡಾ|| ಚಿಟ್ನೀಸ್, ಗೋವಾದ ಡಾ|| ಬಿ. ಎಸ್. ಶಾಸ್ತ್ರಿ ಮುಂತಾದವರು ಕನ್ನಡ–ಮರಾಠಿ ಹಾಗೂ ಕನ್ನಡ ಪೋರ್ಚುಗೀಸ್ ದಾಖಲೆಗಳನ್ನು ಪರಿಶೋಧಿಸಿ ಪ್ರಕಟಿಸಿದ್ದಾರೆ. ಗೋವಾದ ಪರ್ತಗಾಳಿ ಮಠದಲ್ಲಿ ಸರಕಾರದ ಆದೇಶದ ಮೇರೆಗೆ ನಾನು ದಾಖಲೆಗಳನ್ನು ಪರಿಶೋಧಿಸಿದ್ದು 'ಪರ್ತಗಾಳಿ ಮಠದ ಪ್ರಾಚ್ಯ ಪರಿಸರಗಳು' ಎಂಬ ಕಿರುಹೊತ್ತಿಗೆಯಲ್ಲಿ ಇವುಗಳನ್ನು ಅವಲೋಕಿಸಬಹುದಾಗಿದೆ.

## ಕನ್ನಡ ಮೋಡಿ ದಾಖಲೆಯ ಪರಿವೀಕ್ಷಣೆ

ನಾನು ಧಾರವಾಡ ಜಿಲ್ಲೆಯ ತಿಲವಳ್ಳಿ ಗ್ರಾಮದಲ್ಲಿ ಪರಿವೀಕ್ಷಣೆಯನ್ನು ಕೈಗೊಂಡಾಗ ಶ್ರೀ ಶಿವಣ್ಣ ನಾಡಿಗೇರ್‌ರವರ ಮನೆಯಲ್ಲಿ ಕನ್ನಡ ಹಾಗೂ ಮರಾಠಿ ಮೋಡಿ ಲಿಪಿಗಳ ಅಪಾರ ಸಂಗ್ರಹವೊಂದು ಗೋಚರಿಸಿತು. ಈ ಸಂಗ್ರಹಣೆಯಲ್ಲಿ ಸ್ವಾತಂತ್ರ್ಯಪೂರ್ವದ ಹಾಗೂ ೧೮ನೆಯ ಶತಮಾನದ ವಿವಿಧ ಸಾಮಗ್ರಿಗಳು ಗೋಚರವಾಗಿದ್ದು ಇತಿಹಾಸದ ಮೌಲ್ಯ ಸಮರ್ಥನೆಯಲ್ಲಿ ಇವುಗಳು ಮಹತ್ವದ ಪಾತ್ರ ವಹಿಸಲಿವೆ. ಈ ಮನೆಯ ಸನಿಹದಲ್ಲಿಯೇ ಇರುವ ಬೃಹತ್ ಕಟ್ಟಡವೊಂದರಲ್ಲಿ ಒಮ್ಮೆ ಧೋಂಡಿಯಾ ವಾಘ್ ಬೀಡುಬಿಟ್ಟದ್ದನೆಂಬುದಾಗಿಯೂ ಕಂಡು ಬರುತ್ತದೆ.[10] ಈತನು ಬ್ರಿಟಿಷರ ವಿರುದ್ಧವಾಗಿ ಹೋರಾಟ ನಡೆಸಿದ್ದನು. ಈ ನಾಡಿಗರ ಮನೆಯಲ್ಲಿ ಉಪಲಬ್ಧವಿರುವ ಸಂಗ್ರಹಗಳಲ್ಲಿ ಸವಣೂರು ನವಾಬರ ಹಾಗೂ ಲ್ಯೂಯೀ ರೈಸ್ ಸಾಹೇಬರ ದಾಖಲೆಗಳು ಗಮನಾರ್ಹವಾಗಿವೆ.[11]

## ಉಪಸಂಹಾರ

ಅನೇಕ ವಿಶ್ವವಿದ್ಯಾನಿಲಯಗಳು, ಪತ್ರಾಗಾರ ಇಲಾಖೆಗಳು, ವಸ್ತು ಸಂಗ್ರಹಾಲಯಗಳು, ಮಠಗಳು, ದೇವಾಲಯಗಳು, ಖಾಸಗೀ ಹಾಗೂ ಇತರೆಡೆ

ಗಳಲ್ಲಿ ಲಭಿಸುವ ಕನ್ನಡ ಮೋಡೀ ದಾಖಲೆಗಳನ್ನು ಅಧ್ಯಯನ ಮಾಡಿ, ಪ್ರಕಟಿಸುವುದು ಕನ್ನಡಿಗರ ಗುರುತರ ಜವಾಬ್ದಾರಿಗಳಲ್ಲೊಂದಾಗಿದೆ. ಕನ್ನಡ ಮೋಡೀ ಲಿಪಿಗಳ ವಿನ್ಯಾಸಗಳನ್ನು ಶಾಸನ ಶಾಸ್ತ್ರದ ರೀತಿಯಲ್ಲಿಯೇ ಲಿಪಿಗಳ ಆವಿಷ್ಕಾರ ಹಾಗೂ ಅವುಗಳ ಸ್ಖಾಲಿತ್ಯಗಳನ್ನು ಶಾಸ್ತ್ರೀಯ ಹಾಗೂ ವೈಜ್ಞಾನಿಕ ರೀತಿಗಳಲ್ಲಿ ಅಧ್ಯಯನ ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ಗೋವಾ ಸರಕಾರವು ೧೯೭೩ರಲ್ಲಿಯೇ ಕನ್ನಡ ಮೋಡೀ ಲಿಪಿಯಲ್ಲಿ ನಡೆಸಿದ ಸಂಶೋಧನೆಗಳು ಶ್ಲಾಘ್ಯವಾಗಿದ್ದು ಕನ್ನಡಿಗರಾದ ನಾವು ತಲೆತಗ್ಗಿಸಬೇಕಾಗಿದೆ.[12] ಕನ್ನಡ ಮೋಡೀಲಿಪಿತಜ್ಞರಿಂದ ತರಬೇತಿ ಶಿಬಿರವನ್ನು ಏರ್ಪಡಿಸಬೇಕಾಗಿರುವುದು ಅಭಿಲೇಖಾ ಇಲಾಖೆಯ ಆದ್ಯ ಕರ್ತವ್ಯವಾಗಿದೆ. ಈ ದಿಸೆಯಲ್ಲಿ ಮಂಜೂರಾಗಿರುವ ಯೋಜನೆಯೊಂದು ಏನಾಗಿದೆಯೋ ತಿಳಿಯದು.

ಈಗಲಾದರೂ ಎಚ್ಚೆತ್ತು ಕನ್ನಡದ ಅಪೂರ್ವ ದಾಖಲೆಗಳು ನಾಶವಾಗುವ ಮುಂಚೆ ಅಳಿದುಳಿದುವನ್ನಾದರೂ ಸಂಗ್ರಹಿಸಿ, ಅವನ್ನೂ ಸಂಗ್ರಹವಾಗಿರುವವನ್ನೂ ಅಧ್ಯಯನಮಾಡಿ, ಸೂಕ್ತ ರೀತಿಯಲ್ಲಿ ರಕ್ಷಿಸಿ ಕಾಪಾಡುವುದು ಕರ್ನಾಟಕದ ಹಾಗೂ ಕನ್ನಡದ ಹಿರಿಮೆಗೆ ನಾವು ಸಲ್ಲಿಸುವ ಹಿರಿಯ ಕಾಣಿಕೆಯಾಗುವುದರಲ್ಲಿ ಸಂದೇಹವಿಲ್ಲ.

## ಅಡಿಟಿಪ್ಪಣಿಗಳು

1. ಡಾ|| ಸೂರ್ಯನಾಥ ಕಾಮತ್ ಅವರು ಡಾ. ಜಿ. ಎಸ್. ದೀಕ್ಷಿತ್, ಡಾ. ದೇಶಿಕಾಚಾರ್, ಕೆನಡಾದ ಡಾ|| ಹಾರ್ಡರ್, ಡಾ|| ಎ.ಕೆ. ಶಾಸ್ತ್ರಿಗಳವರೊಂದಿಗೆ ಶೃಂಗೇರಿ ಮಠದಲ್ಲಿರುವ ಕಡತಗಳ ಪರಿಶೋಧನೆಯಲ್ಲಿ ತೊಡಗಿದ್ದಾಗ ಅಪಾರ ಸಂಖ್ಯೆಯ ಕಡತಗಳು ತುಂಗಾ ನೀರಿನ ಪಾಲಾಗಿರುವುದು ತಿಳಿದುಬಂತು. ಅಂತೆಯೇ ಮೈಸೂರು ಅರಮನೆಯ ಕಡತಗಳಿಗೂ ಈ ದುರವಸ್ಥೆ ಒದಗಿಬಂದುದು ಇತಿಹಾಸಕ್ಕೆ ಆಘಾತವೇ ಸರಿ.
2. ಧಾರವಾಡದ ಕಲೆಕ್ಟರ ಕಛೇರಿಯಲ್ಲಿ ಮುಂಡರಗಿ ಭೀಮರಾಯರ ಪ್ರಕರಣಕ್ಕೆ ಸಂಬಂಧಪಟ್ಟ ಪತ್ರಗಳಿವೆ.
3. 'The Modi Character', By B. A. Gupte, P. 27. The Indian Antiquary, Feb. 1905. ಇದಕ್ಕೆ ಸಹಕಾರ ನೀಡಿದ ಮೈಸೂರು ವಿಶ್ವವಿದ್ಯಾನಿಲಯದ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳಿಗೆ ಕೃತಜ್ಞನಾಗಿದ್ದೇನೆ.
4. ಅನುಬಂಧ I ನೋಡಿರಿ.
5. ಸಾಗರದ ನ್ಯಾಯಾಲಯವೊಂದರಲ್ಲಿ ಇಂತಹ ಅಪೂರ್ವ ಸಂಗ್ರಹವಿದ್ದುದು ನಾಶವಾಗಿರುವುದು ವಿಷಾದನೀಯ.
6. ಸಂಕ್ಷಿಪ್ತ ಕನ್ನಡ ನಿಘಂಟು, ಪು. ೭೦೫.
7. 'An Introduction to Goa Marathi Records in Halakannada Script' by Shri Gajanana Ghautkar-Srinivas S. B. Caculo, Margoa-Goa (1973)

8. 'ಮಹಾರಾಷ್ಟ್ರಾತೀಲ ಪತ್ರಖಾನೆ' ಅವಲೋಕಿಸಿರಿ.

9. Assoutos do Conselho do Estado, Vol. I, Bastora (Goa), 1953, pp. 536-537.

10. ಸಿಕಾರಿಪುರದ ಶ್ರೀ ಹುಚ್ಚರಾಯಸ್ವಾಮಿ ದೇವಾಲಯದಲ್ಲಿ 'ಥೋಂಡಿಯಾ ವಾಘ್‌ನ ಕರವಾರ' ಕತ್ತಿಯೊಂದಿದೆ.

11. ಕೆಳದಿ ಪ್ರಾಚ್ಯವಸ್ತು ಸಂಶೋಧನಾಲಯದಲ್ಲಿರುವ ಈ ಸಂಗ್ರಹಗಳನ್ನು ಅವಲೋಕಿಸಬಹುದಾಗಿದೆ.

12. ಅನುಬಂಧ II ನೋಡಿರಿ. ನಾನು ದೆಹಲಿಯಲ್ಲಿದ್ದಾಗ ತಜ್ಞರೊಬ್ಬರು ಹೇಳಿದ ನುಡಿ ನೆನಪಿಗೆ ಬರುತ್ತದೆ. ಅವರು ನುಡಿದಂತೆ — ಕನ್ನಡಿಗರು 'ಸಾಹಸ ಪ್ರವೃತ್ತಿ'ಯುವರಲ್ಲವೆಂದೂ ಇರುವಷ್ಟರಲ್ಲಿಯೇ ಜೀವಿಸುವವರಾಗಿರುವುದರಿಂದ ಇತರೇ ರಾಜ್ಯಗಳು ಹಾಗೂ ವಿದೇಶೀಯರು ಕನ್ನಡದ ಪನ್ನಡೆಗೆ ಶ್ರಮಿಸುತ್ತಿರುವುದಾಗಿಯೂ ಹೇಳಿದ ಮಾತು ಈ ಸಂದರ್ಭದಲ್ಲಿ ನಿಜವೆನಿಸಿದೆ.

—o—

## ಕನ್ನಡ ಲಿಪಿಯ ಸೊಬಗು

ಬಿಂದುವಿನೊಂದು ಶೋಭೆ, ತಲೆಕಟ್ಟಿನ ಪೊರ್ಕುಳಿ ಚೆಲ್ವು, ಮಾತ್ರೆಯೊಳ್
ನಿಂದ ಬೆಡಂಗು, ಬಳ್ಳಿಯೊಳೊಡಂಬಡುತಿರ್ಪ ನಯಂ, ವಿಸರ್ಗದೊ-
ಳ್ಪೊಂದಿರಲಕ್ಕರಕ್ಕೆ ಬರೆವಂ ಚದುರರ್ ಪರಿವರ್ಣಿಸಲ್ ನವಿ-
ಲ್ಪಂಪದ ಮಾದಿರಾಜ ವಿಬುಧಂ ವಿಬುಧೋದಿತ ನವ್ಯಕಾವ್ಯಮಂ.

ಉದ್ಧೃತಿ: 'ಕನ್ನಡ ಗ್ರಂಥಸಂಪಾದನೆ', ಪು. ೫೬

# ಗ್ರಂಥ-ಅರವ ಲಿಪಿಗಳು

---

ಪಿ. ವಿ. ಕೃಷ್ಣಮೂರ್ತಿ

ಯಾವುದೇ ಲಿಪಿಯನ್ನು ಯಶಸ್ವಿಯಾಗಿ ಓದಲು, ಆ ಲಿಪಿಯ ಐತಿಹಾಸಿಕ ಹಿನ್ನೆಲೆ ಮತ್ತು ವಿವಿಧ ಶತಮಾನಗಳಲ್ಲಿ ಅದು ಹೊಂದಿದ ನಿರ್ದಿಷ್ಟ ಸ್ವರೂಪವನ್ನು ನಿಶ್ಚಿತವಾಗಿ ಅರಿಯುವುದು ಅತ್ಯವಶ್ಯ. ಈ ದಿಶೆಯಲ್ಲಿ ಕಳೆದ ನಾಲ್ಕಾರು ದಶಕಗಳಿಂದ ನಡೆದಿರುವ ಸಂಶೋಧನೆ ಹಾಗೂ ಅಧ್ಯಯನಗಳ ಪರಿಣಾಮವಾಗಿ ಪ್ರಪಂಚದ ಪ್ರಾಚೀನತಮವಾದ ಚಿತ್ರಲಿಪಿಯಿಂದ ಇಂದಿನ ವರ್ಣಲಿಪಿಯವರೆಗಿನ ಅನೇಕ ಲಿಪಿಗಳ ಉಗಮ ಮತ್ತು ವಿಕಾಸಗಳ ಬಗ್ಗೆ ಹಲವಾರು ಕುತೂಹಲಕರ ಅಂಶಗಳು ಬೆಳಕಿಗೆ ಬಂದಿವೆ.

ಭಾರತದ ಪ್ರಾಚೀನತಮ ಸಂಸ್ಕೃತಿಯ ಅನುಪಮ ಕಾಣಿಕೆಯಾದ ಸಿಂಧೂ ಕಣಿವೆಯ ಲಿಪಿಯ ಬಗ್ಗೆ ಇತ್ತೀಚಿನ ವರ್ಷಗಳಲ್ಲಿ ನಡೆಯುತ್ತಿರುವ ಸಂಶೋಧನೆಗಳು ಆಶಾದಾಯಕವಾಗಿದ್ದು, ನಮ್ಮ ಪ್ರಾಚೀನ ಸಂಸ್ಕೃತಿಯ ಬಗ್ಗೆ ಅನೇಕ ಹೊಸ ವಿಷಯಗಳು ಬೆಳಕಿಗೆ ಬರುವಂತಾಗಿದೆ. ಆದರೆ ಸುಮಾರು ಕ್ರಿ. ಪೂ. ೨೫೦೦ರ ಸಿಂಧೂಕಣಿವೆಯ ನಾಗರಿಕತೆಯ ತರುವಾಯ ಕ್ರಿ. ಪೂ. ೩೦೦ರ ವರೆಗೆ, ಭಾರತದಲ್ಲಿ ನಿರ್ದಿಷ್ಟವಾದ ಲಿಪಿಯೊಂದು ಬಳಕೆಯಲ್ಲಿದ್ದ ಬಗ್ಗೆ ಸ್ಪಷ್ಟ ಆಧಾರಗಳು ದೊರೆತಿಲ್ಲ. ಬೌದ್ಧ ಹಾಗೂ ಜೈನ ಸಾಹಿತ್ಯ, ಪಾಣಿನಿಯ ಅಷ್ಟಾಧ್ಯಾಯೀ, ಮೊದಲಾದುವುಗಳಿಂದ ಕ್ರಿ. ಪೂ. ಮೂರನೆಯ ಶತಮಾನಕ್ಕೂ ಪೂರ್ವದಲ್ಲಿ ಭಾರತದಲ್ಲಿ ಯಾವುದೋ ಒಂದು ಲಿಪಿ ಬಳಕೆಯಲ್ಲಿತ್ತೆಂಬ ಬಗ್ಗೆ ಸುಳಿವನ್ನೇನೋ ನೀಡುತ್ತವೆಯಾದರೂ, ಆ ಕಾಲಕ್ಕೆ ಸೇರಿದ ಯಾವುದೇ ನಿರ್ದಿಷ್ಟ ಲಿಪಿ ಈವರೆಗೆ ಉಪಲಬ್ಧವಾಗಿಲ್ಲ. ಭಾರತದಲ್ಲಿ ದೊರೆತಿರುವ, ಓದಲು ಸಾಧ್ಯವಾಗಿರುವ, ಪ್ರಾಚೀನತಮ ವರ್ಣಲಿಪಿಯ ಶಾಸನಗಳೆಂದರೆ, ಕ್ರಿ. ಪೂ. ೩೦೦ರಲ್ಲಿದ್ದ ಮೌರ್ಯ ಸಾಮ್ರಾಟ ಅಶೋಕನವೇ ಆಗಿವೆ. ಅವುಗಳು ಪ್ರಧಾನವಾಗಿ ಪ್ರಾಕೃತ ಭಾಷೆ ಮತ್ತು ಬ್ರಾಹ್ಮೀ ಲಿಪಿಯಲ್ಲಿವೆ.

ಬ್ರಾಹ್ಮೀ ಲಿಪಿ ಭಾರತ ಮತ್ತು ಬೃಹತ್‌ಭಾರತದ ಅನೇಕ ಲಿಪಿಗಳ ಉಗಮಕ್ಕೆ ಕಾರಣವಾಗಿದ್ದು ಪ್ರಪಂಚದ ಅತಿಮುಖ್ಯ ಲಿಪಿಗಳಲ್ಲಿ ಒಂದಾಗಿದೆ. ಇಂದಿನ ಭಾರತೀಯ ಲಿಪಿಗಳ ಅಧ್ಯಯನವು, ಅವುಗಳೆಲ್ಲದರ ಉಗಮಕ್ಕೆ ಕಾರಣವಾದ ಬ್ರಾಹ್ಮೀ ಲಿಪಿಯನ್ನು ಓದುವುದರಿಂದ ಆರಂಭವಾಯಿತು. ಬ್ರಾಹ್ಮೀ ಲಿಪಿಯನ್ನು ಮೊದಲಬಾರಿಗೆ ಕಲ್ಕತ್ತಾದ ಟಂಕಶಾಲೆಯ ಅಧಿಕಾರಿಯಾಗಿದ್ದ ಜೇಮ್ಸ್ ಪ್ರಿನ್ಸೆಪ್

ಎಂಬವನು ಕ್ರಿ.ಶ. ೧೮೩೭ರಲ್ಲಿ ಯಶಸ್ವಿಯಾಗಿ ಓದಿದನು. ಆವರೆಗೂ ಕುಂಠಿತ ಗತಿಯಲ್ಲಿ ಸಾಗಿದ್ದ ಭಾರತೀಯ ಲಿಪಿಗಳ ಅಧ್ಯಯನವು ವೇಗವನ್ನು ಪಡೆದುಕೊಂಡಿತು. ತತ್ಪರಿಣಾಮವಾಗಿ ಭಾರತದಲ್ಲಿ ಬಳಕೆಯಲ್ಲಿದ್ದ ಮತ್ತು ಇರುವ ಬಹುತೇಕ ಲಿಪಿಗಳು ಪ್ರಧಾನವಾದ ಮೂರು ಶಾಖೆಗಳಲ್ಲಿ ವಿಕಾಸವಾಗಿರುವುದನ್ನು ಗುರುತಿಸಲಾಯಿತು. ಅವು ಯಾವುವೆಂದರೆ :

೧) ನಾಗರೀ ಮತ್ತು ಅದರಿಂದ ಉಂಟಾದ ಲಿಪಿಗಳು,

೨) ಕನ್ನಡ–ತೆಲುಗು ಲಿಪಿಗಳು ಮತ್ತು

೩) ಗ್ರಂಥ–ಅರವ, ವಟ್ಟೆಜುತ್ತು ಲಿಪಿಗಳು.

ಪ್ರಸ್ತುತ ಮೂರನೇ ಗುಂಪಿಗೆ ಸೇರಿದ ಲಿಪಿಗಳಲ್ಲಿ ಪ್ರಧಾನವಾದ ಅರವ (ತಮಿಳು) ಮತ್ತು ಗ್ರಂಥ ಲಿಪಿಗಳ ಬಗ್ಗೆ ಪರಿಚಯಿಸುವುದು ಈ ಲೇಖನದ ಉದ್ದೇಶ. ಈ ಮೊದಲೇ ತಿಳಿಸಿರುವಂತೆ ಯಾವುದೇ ಲಿಪಿಯನ್ನು ಯಶಸ್ವಿಯಾಗಿ ಓದಲು ಆ ಲಿಪಿಯ ಐತಿಹಾಸಿಕ ಹಿನ್ನೆಲೆ ಮತ್ತು ವಿವಿಧ ಶತಮಾನಗಳಲ್ಲಿ ಅದು ಪಡೆದುಕೊಂಡ ಸ್ವರೂಪವನ್ನು ತಿಳಿಯಬೇಕಷ್ಟೆ. ಆದ್ದರಿಂದ ಆ ರೀತಿಯ ವಿಕಾಸ ಅಥವಾ ಬದಲಾವಣೆಗೆ ಕಾರಣವಾದ ಅಂಶಗಳನ್ನು ಮೊದಲಿಗೆ ಸ್ಥೂಲವಾಗಿಯಾದರೂ ತಿಳಿಯುವುದರಿಂದ ಯಾವುದೇ ಲಿಪಿ ಹೇಗೆ ಕಾಲಾಂತರದಲ್ಲಿ ವಿಕಾಸವನ್ನು ಪಡೆದು ಕೊಂಡಿತು ಎಂಬುದರ ಸ್ಪಷ್ಟ ಕಲ್ಪನೆಯುಂಟಾಗುತ್ತದೆ.

ಯಾವುದೇ ಲಿಪಿಯ ರೂಪಾಂತರ (ಬದಲಾವಣೆ) ಅಥವಾ ವಿಕಾಸಕ್ಕೆ ಮುಖ್ಯವಾಗಿ ಮೂರು ಅಂಶಗಳು ಕಾರಣವಾಗಿರುತ್ತವೆ. ಅವು ಯಾವುವೆಂದರೆ: ೧) ಕೈಬರಹದ ವೇಗ; ೨) ಲಿಪಿಕಾರನ ಆಲಂಕಾರಿಕ ಪ್ರವೃತ್ತಿ ಮತ್ತು ೩) ಬರಹಕ್ಕೆ ಬಳಸಲಾಗುವ ಲೇಖನ ಸಾಮಗ್ರಿ.

ಪ್ರಾಚೀನ ಕಾಲದಲ್ಲಿ ಶಾಸನಗಳನ್ನು ಶಿಲೆ ಮತ್ತು ತಾಮ್ರದ ತಗಡುಗಳ ಮೇಲೆ ಬರೆಯಲಾಗುತ್ತಿತ್ತು. ದಕ್ಷಿಣ ಭಾರತದಲ್ಲಿ ಹೊತ್ತಗೆಗಳ ಬರವಣಿಗೆಗೆ ತಾಳೆಗರಿಯನ್ನು ವಿಶೇಷವಾಗಿ ಬಳಸುತ್ತಿದ್ದರು. ತಾಳೆಗರಿಗಳ ಮೇಲೆ ಸಮತಲ ಗೆರೆಗಳನ್ನು ಬರೆಯುವುದು ಕಷ್ಟ. ಅದರಿಂದಾಗಿ ತಾಳೆಗರಿಯ ಮೇಲಿನ ಬರಹದಲ್ಲಿ ಕ್ರಮೇಣ ಸರಳರೇಖೆಗಳ ಸ್ಥಳವನ್ನು ಡೊಂಕು ರೇಖೆಗಳು ಆಕ್ರಮಿಸತೊಡಗಿದವು. ಹಾಗೆಯೇ ಶಿಲೆಯ ಮೇಲೆ ಡೊಂಕು ರೇಖೆಗಳ ಬದಲಾಗಿ ಕೋನ ಅಥವಾ ಸರಳರೇಖೆಗಳ ಲಿಪಿಗಳು ಆಕ್ರಮಿಸಿದವು. ಉದಾಹರಣೆಗೆ, ಬ್ರಾಹ್ಮಿಯ 'ಟ'ವನ್ನು ಅರ್ಧವೃತ್ತಾಕಾರದಲ್ಲಿ ಬರೆಯಲಾಗಿದೆ; ಈ ಅರ್ಧವೃತ್ತಾಕಾರವು (ನೋಡಿ : ಲಿಪಿವಿನ್ಯಾಸ ೧) ಶಿಲೆಯ ಮೇಲೆ ಕಾಟಕೋನಾಕಾರವನ್ನು (ವಿನ್ಯಾಸ ೨) ಪಡೆದುಕೊಂಡಿತು.

ತಾಳೆಗರಿಯ ಮೇಲೆ ಬರೆಯುವಾಗ ಲಿಪಿಕಾರರು ಸಾಮಾನ್ಯವಾಗಿ ಲೇಖನಿಯಿಂದ ಒಂದು ಪಂಕ್ತಿಯನ್ನು ಪ್ರಾರಂಭಿಸಿದರೆ ಆ ಪಂಕ್ತಿ ಮುಕ್ತಾಯವಾಗುವವರೆಗೆ ಲೇಖನಿಯನ್ನು ಮೇಲೆತ್ತುತ್ತಲಿರಲಿಲ್ಲ. ಇದರಿಂದಾಗಿ ಇಂದಿನ ಅನೇಕ ಲಿಪಿಗಳಲ್ಲಿ

ಅನಾವಶ್ಯಕವಾದ ಅನೇಕ ಅಂಶಗಳು ಬಂದು ಸೇರಿಕೊಂಡು, ಕಾಲಾಂತರದಲ್ಲಿ ಅವು ಆ ಲಿಪಿಯ ಅವಿಭಾಜ್ಯ ಅಂಗವಾಗಿ ಬೆಳೆದುಬಿಟ್ಟವೆ. ಉದಾಹರಣೆಗೆ 'ಕ' ಅಕ್ಷರವನ್ನು ಬ್ರಾಹ್ಮಿಯಲ್ಲಿ ಶಿಲುಬೆ (ವಿ. ೩) ಆಕಾರದಂತೆಯೂ ತಾಳೆಗರಿಯ ಮೇಲೆ ಆ ಲಿಪಿಯ ಲಂಬಗೆರೆಯ ಕೆಳಭಾಗವು ಅದೇ ಲಿಪಿಯ ಅಡ್ಡಗೆರೆಯೊಂದಿಗೆ ಕೂಡಿಕೊಂಡಂತೆ (ವಿ. ೪) ಕಾಣುತ್ತಿತ್ತು. ಇದೇ ರೀತಿ ಬೇರೆ ಬೇರೆ ಅಕ್ಷರಗಳನ್ನು ಒಂದರ ಪಕ್ಕದಲ್ಲೊಂದು ಬರೆದಾಗ ಅವು ಒಂದಕ್ಕೊಂದು ಕೂಡಿಕೊಂಡಂತೆ ಕಾಣುತ್ತಿದ್ದವು. ಉದಾಹರಣೆಗೆ 'ಟ' ಮತ್ತು 'ಕ' ಗಳನ್ನು ಒಂದರಪಕ್ಕದಲ್ಲೊಂದನ್ನು ಬರೆದರೆ ವಿ.೧ + ವಿ. ೪ ಕೂಡಿದಂತೆ ಕಾಣುತ್ತದೆ.

ಬೇಗ ಬರೆಯಬೇಕೆಂಬ ಲಿಪಿಕಾರನ ಪ್ರವೃತ್ತಿ ಕೂಡ ನಿಧಾನವಾಗಿ ಅಕ್ಷರಗಳ ವಿಕಾಸದಲ್ಲಿ ಪ್ರಭಾವವನ್ನು ಬೀರಿದೆ. 'ಕಿ' ಯನ್ನು ಬ್ರಾಹ್ಮಿಯಲ್ಲಿ ವಿನ್ಯಾಸ ಚಿತ್ರ ೬(a)ದಲ್ಲಿದ್ದಂತೆ ಬರೆಯಲಾಗಿದೆ. ಅದನ್ನೆ ಬೇಗ ಬರೆದಾಗ ಚಿತ್ರ ೬(b)ಯಲ್ಲಿ ಇರುವಂತೆ ಕಾಣುತ್ತದೆ. ಕಾಲಾಂತರದಲ್ಲಿ 'ಕಿ' ಅಕ್ಷರದ ಸ್ವರಚಿಹ್ನೆ ಕನ್ನಡದಲ್ಲಿ ವೃತ್ತಾಕಾರವನ್ನು (ಚಿತ್ರ ೬e) ಪಡೆದುಕೊಂಡರೆ, ಅರವ ಮತ್ತು ಗ್ರಂಥಗಳಲ್ಲಿ ವ್ಯಂಜನದಿಂದ ಬೇರ್ಪಟ್ಟು, ಚಿತ್ರ ೬(c) ದಂತೆ ಆಕಾರವನ್ನು ಪಡೆಯುತ್ತದೆ. ಅನಂತರದಲ್ಲಿ ಚಿತ್ರ ೬ (d) ದಲ್ಲಿರುವಂತೆ ಅಕ್ಷರದ ಬಲಭಾಗಕ್ಕೆ ವರ್ಗವಾಗುತ್ತದೆ.

ಲಿಪಿಕಾರ ಈ ರೀತಿಯಾಗಿ ತನಗರಿವಿಲ್ಲದೆಯೇ ಲಿಪಿಗಳಲ್ಲಿನ ಅನೇಕ ರೂಪಾಂತರಗಳಿಗೆ ಕಾರಣನಾಗಿದ್ದಾನೆ.

ಇನ್ನು ಲಿಪಿಗಳ ರೂಪಾಂತರದಲ್ಲಿ ಲಿಪಿಕಾರನ "ಆಲಂಕಾರಿಕ ಪ್ರವೃತ್ತಿ" ಹೇಗೆ ಪರಿಣಾಮ ಬೀರಿದೆ ಎಂಬುದನ್ನು ತಿಳಿಯುವ. ಲಿಪಿಕಾರ ಸ್ವಲ್ಪ ಶ್ರಮವನ್ನು ವಹಿಸಿ ತನ್ನ ಅಕ್ಷರಗಳನ್ನು ನೋಡಿದೊಡನೆಯೇ ಮನಸೆಳೆಯುವಂತೆ ಇರಬೇಕೆಂಬ ಆಶಯದಿಂದಾಗಿ ಲಿಪಿಗಳಿಗೆ ಅನೇಕ ಹೊಸ ಅಂಶಗಳನ್ನು ಸೇರಿಸಿಬಿಡುತ್ತಾನೆ. ಈ ತೆರನಾದ ಆಲಂಕಾರಿಕ ಲಿಪಿಗಳಿಗೆ ಕರ್ನಾಟಕದ ಶ್ರವಣಬೆಳಗೊಳದ ಶಾಸನಗಳು, ತಮಿಳು ನಾಡಿದ ಕಾಂಚೀಪುರದ ರಾಜಸಿಂಹೇಶ್ವರ ದೇವಾಲಯದ ಶಾಸನಗಳು ಪ್ರಸಿದ್ಧವಾಗಿವೆ. ಅಷ್ಟೇ ಅಲ್ಲದೆ ಕನ್ನಡ ಶಾಸನವೊಂದರಲ್ಲಿ ತಾನು ಅಕ್ಷರಗಳನ್ನು "ಆನೆಯ ಸಿಂಘದ ಗಿಳಿಗಳ/ನಾನಾ ರೂಪುಗಳನಕ್ಕರಂಗಳೊಳೆಸೆಯಲ್/ತಾನಳವಡಿಸುವನ್" ಎಂದು ಹೇಳಿಕೊಂಡಿರುವ ಉದಾಹರಣೆಯುಂಟು. (ಡಿ. ಎಲ್. ಎನ್ : 'ಗ್ರಂಥ ಸಂಪಾದನೆ', ೧೯೬೪, ಪು.೫೬). ಇವುಗಳ ಜೊತೆಗೆ ಕೆಲವು ಲಿಪಿಕಾರರು ಹಲವಾರು ಭಾಷೆಯ ಲಿಪಿಗಳನ್ನು ಬರೆಯಬಲ್ಲವರಾಗಿದ್ದರು ಎಂಬ ವಿಷಯ ಹಿರೇಹಡಗಲಿ ಶಾಸನದ ಲಿಪಿಕಾರನಿಂದ ತಿಳಿದುಬರುತ್ತದೆ.

ಇನ್ನು ಲಿಪಿಕಾರನು ತನ್ನ ಅಲಂಕಾರ ಪ್ರವೃತ್ತಿಯಿಂದ ಲಿಪಿಗಳನ್ನು ಹೇಗೆ ರೂಪಾಂತರಿಸುತ್ತಾನೆಂಬುದನ್ನು ಉದಾಹರಣೆಯೊಂದರ ಮೂಲಕ ತಿಳಿಯುವ. ಅಲಂಕಾರ ಪ್ರವೃತ್ತಿಯುಳ್ಳ ಲಿಪಿಕಾರ ಸಾಮಾನ್ಯವಾಗಿ ಮೂಲಲಿಪಿಯ ಡೊಂಕು

ಗೆರೆಗಳಿಗೆ ಬದಲಾಗಿ ಕೋನಾಕಾರಗಳನ್ನು ಹಾಗೇ ಕೋನಾಕಾರಗಳಿಗೆ ಬದಲಾಗಿ ಡೊಂಕು ಗೆರೆಗಳನ್ನು ಸೇರಿಸಿಬಿಡುವುದುಂಟು. ಬ್ರಾಹ್ಮಿಯ 'ಬ' ಅಕ್ಷರವನ್ನು ಚಿತ್ರ ೭ (a) ನಂತೆ ಬರೆಯುತ್ತಿದ್ದರು. ಆದರೆ ಲಿಪಿಕಾರ ಚಿತ್ರ ೭ (b) ನಲ್ಲಿ ತೋರಿಸಿರುವಂತೆ ಅನೇಕ ವಿಧಗಳಲ್ಲಿ ಬರೆದುಬಿಡುತ್ತಿದ್ದರು. ಇದು ಬಹುಮಟ್ಟಿಗೆ ಲಿಪಿಗಳನ್ನು ಅಲಂಕಾರಗೊಳಿಸಲು ತೆಗೆದುಕೊಂಡ ಕೇವಲ ಶ್ರಮದ ಪರಿಣಾಮ ಎನ್ನಬಹುದು.

ಕೊನೆಯದಾಗಿ, ಅಕ್ಷರಗಳ ರೂಪಾಂತರಕ್ಕೆ ಕಾರಣವಾದ ಮತ್ತೊಂದು ಅಂಶವುಂಟು : ನಾವು ಸಾಮಾನ್ಯವಾಗಿ ಅಕ್ಷರಗಳನ್ನು ಎಡದಿಂದ ಬಲಕ್ಕೆ ಬರೆಯುತ್ತೇವೆ. ಹಾಗೆ ಬರೆಯುವಾಗ ಕೆಲವು ಅಕ್ಷರಗಳನ್ನು ಪ್ರದಕ್ಷಿಣ ದಿಕ್ಕಿನಲ್ಲೂ, ಮತ್ತೆ ಕೆಲವನ್ನು ಅಪ್ರದಕ್ಷಿಣ ದಿಕ್ಕಿನಲ್ಲೂ ಬರೆಯುವುದು ಸರಿಯಷ್ಟೆ. ಆದರೆ ಅರವ ಮತ್ತು ಗ್ರಂಥಗಳ ಬಹುಪಾಲು ಅಕ್ಷರಗಳನ್ನು ಪ್ರದಕ್ಷಿಣ ರೀತಿಯಲ್ಲೇ ಬರೆಯುತ್ತಾರೆ. ಕನ್ನಡ–ತೆಲುಗು ಮತ್ತು ವಟ್ಟೆಲುತ್ತು ಲಿಪಿಗಳನ್ನು ಅಪ್ರದಕ್ಷಿಣ ದಿಕ್ಕಿನಲ್ಲಿ ಬರೆಯಲಾಗುತ್ತದೆ. ಈ ರೀತಿ ಅಪ್ರದಕ್ಷಿಣ ರೀತಿಯಲ್ಲಿ ಬರೆಯಲಾಗುವ ಲಿಪಿಗಳಲ್ಲಿ ನೇರವಾದ ಅಂದರೆ ಸರಳರೇಖೆಯ ತೆರನಾದ ಗೆರೆಗಳನ್ನು ಬರೆಯಲಾಗುವುದಿಲ್ಲ. ಅದರಿಂದಾಗಿಯೇ ಕನ್ನಡ-ತೆಲುಗು, ವಟ್ಟೆಲುತ್ತು ಲಿಪಿಗಳು ದುಂಡನೆಯ ಆಕಾರವನ್ನು ಪಡೆದಿರುವುವು. ಸಾಮಾನ್ಯವಾಗಿ ಪ್ರದಕ್ಷಿಣ ದಿಕ್ಕಿನಲ್ಲಿ ಬರೆಯುವ ಅರವ ಮತ್ತು ಗ್ರಂಥ ಲಿಪಿಗಳಲ್ಲಿ ಅನೇಕ ಲಂಬ ಸರಳರೇಖೆಗಳಿರುವುದನ್ನು ಕಾಣಬಹುದು.

ಇಂದು ಲಿಪಿಗಳು ಒಂದು ನಿರ್ದಿಷ್ಟ ರೂಪವನ್ನು ಪಡೆದಿವೆ. ಪ್ರಾಯಶಃ ಇನ್ನು ಮುಂದೆ ಲಿಪಿಗಳಲ್ಲಿ ಹೆಚ್ಚು ಬದಲಾವಣೆಗಳನ್ನು ಕಾಣಲಾರೆವು. ಇದಕ್ಕೆ ಪ್ರಮುಖ ಕಾರಣ ಮುದ್ರಣ ಸೌಲಭ್ಯ. ಇನ್ನು ಮುಂದೇನಾದರೂ ಲಿಪಿಗಳಲ್ಲಿ ವಿಕಾಸ ಅಥವಾ ಬದಲಾವಣೆ ಉಂಟಾಗಬೇಕಾದರೆ, ಕೆಲವೊಮ್ಮೆ ಸರ್ಕಾರಗಳು ಕಾನೂನಿನ ಮೂಲಕ ಬದಲಾವಣೆಗಳನ್ನು ಮಾಡಬೇಕಾಗುತ್ತದೆಯೇನೊ. ತಮಿಳುನಾಡು ಮತ್ತು ಕೇರಳಗಳಲ್ಲಿ ಇತ್ತೀಚೆಗೆ, ಮುದ್ರಣ ಮತ್ತು ಬೆರಳಚ್ಚಿನ ಅನುಕೂಲಕ್ಕಾಗಿ ಕೆಲವೊಂದು ಬದಲಾವಣೆಗಳನ್ನು ತಮ್ಮ ಲಿಪಿಗಳಲ್ಲಿ ಮಾಡಿರುವುದಾಗಿ ಸರ್ಕಾರಗಳು ಘೋಷಿಸಿದ ವಿಷಯ ನನ್ನ ಈ ಮಾತಿಗೆ ಪೋಷಕವಾಗಿದೆ.*

---

* ಬಿ. ಎಂ. ಶ್ರೀ.ಯವರು ತಾವು ಕ. ಸಾ. ಪರಿಷತ್ತಿನ ಉಪಾಧ್ಯಕ್ಷರಾಗಿದ್ದಂದು ಕನ್ನಡ ಲಿಪಿ ಸಂಸ್ಕರಣ ಸಮ್ಮೇಳನವನ್ನೇ ಏರ್ಪಡಿಸಿದ್ದರು. ಅದರ ತೀರ್ಮಾನಗಳಿಗೆ ಅನುಗುಣವಾಗಿ, ಸಂಯುಕ್ತಾಕ್ಷರವಿಲ್ಲದ ಲಿಪಿಮಾದರಿಯಲ್ಲಿ 'ಕನ್ನಡ ಬಾವುಟ'ದಲ್ಲಿ ಅದೇ ಹೆಸರಿನ ಅವರ ಕವನ ಅಚ್ಚಾಗಿರುವುದನ್ನು ನೋಡಬಹುದು. ಬೆರಳಚ್ಚುಯಂತ್ರ, ಮುದ್ರಣ ಸೌಕರ್ಯಗಳನ್ನು ಗಮನಿಸಿಯೇ ಲಿಪಿಸುಧಾರಣೆಯ ತೀರ್ಮಾನಗಳಾಗಿದ್ದವು. ಬಳಿಕ ಮೈಸೂರು ಸರ್ಕಾರ ಅದೇ ಉದ್ದೇಶದಿಂದ ಶರ್ಮಸಮಿತಿಯನ್ನು ನೇಮಕಮಾಡಿತು. ಈ ಸಮಿತಿ ಎರಡೇ ಮಾರ್ಪಾಡುಗಳನ್ನು ಸೂಚಿಸಿತ್ತು. ನಮ್ಮ ಕನ್ನಡ ಜನ ಲಿಪಿಸುಧಾರಣೆಗೆ 'ಅಲರ್ಜಿ' ತೋರುತ್ತಿರುವುದು ಸೋಜಿಗದ ಸಂಗತಿ.—ಸಂ.

**ಗ್ರಂಥಲಿಪಿ:** ಈ ಲಿಪಿ ತಮಿಳುನಾಡಿನ ಉತ್ತರ ಆರ್ಕಾಟು, ದಕ್ಷಿಣ ಆರ್ಕಾಟು, ಸೇಲಂ, ತಿರಚಿನಾಪಳ್ಳಿ, ಮಧುರೆ ಮತ್ತು ತಿರುನೆಲ್ವೇಲಿ ಜಿಲ್ಲೆಗಳಲ್ಲಿ ವಿಶೇಷ ಬಳಕೆಯಲ್ಲಿತ್ತು. ಕ್ರಿ.ಶ. ೭ನೇ ಶತಮಾನದಿಂದ ೧೫ನೇ ಶತಮಾನದವರೆಗೆ ವಿಕಾಸಕ್ರಮದಲ್ಲಿ ಅನೇಕ ತೆರನಾದ ರೂಪಾಂತರಗಳನ್ನು ಹೊಂದುತ್ತಾ ಈಗಿನ ಗ್ರಂಥ ಲಿಪಿಯ ರೂಪವನ್ನು ಪಡೆದಿದೆ. ಗ್ರಂಥ ಲಿಪಿಯಿಂದ ಮಲೆಯಾಳಂ ಲಿಪಿ ಉಗಮವಾಗಿದೆ. ಇದನ್ನು ಮಲೆಯಾಳ ಪ್ರದೇಶದಲ್ಲಿ 'ಆರ್ಯಎಜುತ್ತು' (ಆರ್ಯಲಿಪಿ) ಎಂದು ಕರೆಯುತ್ತಿದ್ದರು. ತುಳುವಿನ ಕೆಲವು ಶಾಸನಗಳು ಈ ಲಿಪಿಯಲ್ಲಿ ದೊರೆತಿವೆ. ಸಂಸ್ಕೃತ ಭಾಷೆಯನ್ನು ಬರೆಯಲು ಬೇಕಾದ ಎಲ್ಲ ವರ್ಣಗಳು (ಧ್ವನಿಗಳು) ತಮಿಳು ಲಿಪಿಯಲ್ಲಿ ಇಲ್ಲದಿರುವ ಕಾರಣ ತಮಿಳು ಪ್ರದೇಶದಲ್ಲಿ ಸಂಸ್ಕೃತದ ಗ್ರಂಥಗಳನ್ನು ಬರೆಯಲು ಈ ಲಿಪಿಯನ್ನು ಬಳಸುತ್ತಿದ್ದರು. ಸಂಸ್ಕೃತದಲ್ಲಿ 'ಗ್ರಂಥ' ಎಂದರೆ ಸಾಹಿತ್ಯಕೃತಿ ಎಂಬ ಅರ್ಥವಿದೆ. ಅಂದರೆ ಸಂಸ್ಕೃತದ ಗ್ರಂಥಗಳನ್ನು ಬರೆಯಲು ಈ ಪ್ರದೇಶದಲ್ಲಿ ಬಳಸಲಾದ ವಿಶಿಷ್ಟ ಲಿಪಿಗೆ 'ಗ್ರಂಥ' ಎಂಬ ಹೆಸರು ಸಹಜವಾಗಿಯೇ ಬಳಕೆಯಲ್ಲಿತ್ತೆನ್ನಬಹುದು. ಈ ಲಿಪಿಯನ್ನು ಮೊದಲಿಗೆ ವಿಶೇಷವಾಗಿ ಪಲ್ಲವರು, ಅನಂತರದಲ್ಲಿ ಪಾಂಡ್ಯ, ಚೋಳ ವಂಶೀಯರು, ಅಲ್ಲದೆ ವೆಂಗಿಯ ಪೂರ್ವ ಚಾಲುಕ್ಯರು ಗಂಗ ವಂಶೀಯರು, ಬಾಣವಂಶೀಯರು, ವಿಜಯನಗರದ ಸಾಮ್ರಾಟರು ತಮ್ಮ ಶಿಲಾ ಹಾಗೂ ತಾಮ್ರ ಶಾಸನಗಳಲ್ಲಿ ಬಳಸಿದ್ದಾರೆ.

ಗ್ರಂಥ ಲಿಪಿ, ಪ್ರಾರಂಭಾವಸ್ಥೆಯಲ್ಲಿ, ಅಂದರೆ ಕ್ರಿ. ಶ. ೭ನೇ ಶತಮಾನದ ಪ್ರಾರಂಭದಲ್ಲಿ ಸಮಕಾಲೀನ (೭ನೇ ಶತಮಾನದ) ಕನ್ನಡ–ತೆಲುಗು ಲಿಪಿಗಳೊಂದಿಗೆ ಬಹುಮಟ್ಟಿಗೆ ಹೋಲುತ್ತಿದ್ದವು. ಇದಕ್ಕೆ ಉದಾಹರಣೆಯಾಗಿ, ಮಹಾಬಲಿಪುರದ ರಥಗಳ ಮೇಲಿರುವ, ಕಂಚಿಯ ಕೈಲಾಸನಾಥೇಶ್ವರ ದೇವಾಲಯದ ಪ್ರಾಕಾರದ ಗೋಡೆಯಲ್ಲಿರುವ ಪಲ್ಲವರ ಶಾಸನಗಳನ್ನು ಗಮನಿಸಬಹುದಾಗಿದೆ. ಪಲ್ಲವರ ಅನಂತರದ ಬರಹಗಳಲ್ಲಿ ಗ್ರಂಥಲಿಪಿಯ ಅಡ್ಡ ಹಾಗೂ ಉದ್ದಗೆರೆಗಳು ತುಸು ಡೊಂಕಾಗಿ ಅಂದರೆ ಮುಂಡಾಗಿ ಮಾರ್ಪಟ್ಟವಲ್ಲದೆ ಅಲ್ಲಲ್ಲಿ—ಪ್ರಾರಂಭ, ಮಧ್ಯ ಮತ್ತು ಕೊನೆಗಳಲ್ಲಿ, ಸುರುಳಿ ಸುತ್ತುವ ಪ್ರವೃತ್ತಿಯು ಕಾಣಿಸಿಕೊಂಡು ಒಂದು ತೆರನಾದ ವಿಲಕ್ಷಣತೆಯು ಕ್ರಮಕ್ರಮವಾಗಿ ಬಂದುಬಿಟ್ಟಿತು. ಅದರಿಂದಾಗಿಯೇ ಈಗಿನ ಗ್ರಂಥ-ಲಿಪಿಗೂ ಪ್ರಚಲಿತ ಕನ್ನಡ–ತೆಲುಗು ಲಿಪಿಗಳಿಗೂ ಏನೇನೂ ಸಂಬಂಧವಿಲ್ಲವೇನೋ ಎನ್ನುವಷ್ಟು ರೂಪಾಂತರಗಳನ್ನು ಪಡೆದುಕೊಂಡುಬಿಟ್ಟವೆ.

ವಾಸ್ತವವಾಗಿ ಮಲೆಯಾಳ ಪ್ರದೇಶದಲ್ಲಿ ಮೊದಲಿಗೆ ಗ್ರಂಥಲಿಪಿಯ ಬಳಕೆ ಹೆಚ್ಚು ಇದ್ದಂತೆ ತೋರುವುದಿಲ್ಲ. ಎಂದಿನಿಂದ ಮಲೆಯಾಳ ಭಾಷೆಯು ಸಂಸ್ಕೃತದಿಂದ ಹೆಚ್ಚು ಹೆಚ್ಚು ಪದಗಳು ಮತ್ತು ವ್ಯಾಕರಣಾಂಶಗಳನ್ನು ಸ್ವೀಕರಿಸತೊಡಗಿತೋ ಅಂದಿನಿಂದ ಆ ಪ್ರದೇಶದಲ್ಲಿ "ಆರ್ಯ ಎಜುತ್ತು" (ಆರ್ಯಲಿಪಿ) ಎಂಬ ಹೆಸರಿನಲ್ಲಿ ಗ್ರಂಥ

ಲಿಪಿ ಬಳಕೆಗೆ ಬಂದು ಬೇರೂರಿತು. ಇಂದಿಗೂ ಗ್ರಂಥ ಮತ್ತು ಮಲೆಯಾಳಂ ಲಿಪಿಗಳಲ್ಲಿ ಹೇಳಿಕೊಳ್ಳುವಂತಹ ಭೇದಗಳಿಲ್ಲವೆಂದೇ ಹೇಳಬಹುದು.

ತಮಿಳು ಶಾಸನಗಳಲ್ಲಿ ಸಂಸ್ಕೃತ ಪದ ಮತ್ತು ಭಾಗಗಳನ್ನು ಬರೆಯಲು ಮಧ್ಯೇ ಮಧ್ಯೇ ಗ್ರಂಥಲಿಪಿಗಳನ್ನು ಬಳಸುವ ವಾಡಿಕೆ ಮೊದಲಿನಿಂದಲೂ ಇದೆ. ಅಲ್ಲದೆ, ತಮಿಳು ಲಿಪಿಯ ಉ, ಟ, ಣ, ತ, ನ, ಯ ಮತ್ತು ವ ಅಕ್ಷರಗಳಿಗೂ ಗ್ರಂಥಲಿಪಿಯ ಅವೇ ಅಕ್ಷರಗಳಿಗೂ ಭೇದವಿಲ್ಲ. ಅಲ್ಲದೆ ಕ, ರ ಅಕ್ಷರಗಳಲ್ಲಿ ಹೆಚ್ಚಿನ ಸಾಮ್ಯತೆಯಿದೆ. ಇನ್ನುಳಿದ ಅಕ್ಷರಗಳಲ್ಲಿ ಕೂಡ ಗುರುತಿಸಬಹುದಾದಷ್ಟು ಸಾಮ್ಯತೆಗಳನ್ನು ಕಾಣಬಹುದಾಗಿದೆ. ವ್ಯಂಜನಗಳಿಗೆ ಅಂಟಿಸುವ ಸ್ವರಚಿಹ್ನೆಗಳಾದ ಆ, ಇ, ಈ, ಎ ಮತ್ತು ಒ ಕಾರಗಳು ಒಂದೇ ರೀತಿಯಲ್ಲಿವೆ. 'ಉ'ಕಾರವು ಕೂಡ ಹೆಚ್ಚಿನ ಸಾಮ್ಯತೆ ಪಡೆದಿದೆ. ಇದರಿಂದಾಗಿಯೇ ವಿದ್ವಾಂಸರು ತಮಿಳು ಲಿಪಿಯನ್ನು "ಗ್ರಂಥ-ತಮಿಳು ಲಿಪಿ" ಎಂದು ಕರೆದಿದ್ದಾರೆ.

**ಅರವ ಲಿಪಿ :** 'ಅರವ' ಎಂಬ ಪದಕ್ಕೆ ಕಿಟ್ಟೆಲ್ ನಿಘಂಟುವಿನಲ್ಲಿ ಅರವ, ಅರವು, ಅರುವು ಎಂದು ಮುಂತಾಗಿ ಕೊಟ್ಟು, ಅರುವಾ, One of the twelve districts which sorrounds the country wherein elegant Tamil is spoken, and in which an inferior Tamil, the common one, is in use'' ಎಂದು ಅರ್ಥವನ್ನು ಕೊಟ್ಟಿದೆ. ಇದರಿಂದ ಸ್ಪಷ್ಟಪಡುವ ಅಂಶವೆಂದರೆ, ಜನಸಾಮಾನ್ಯರು ಮಾತನಾಡುವ ಸಾಮಾನ್ಯಮಟ್ಟದ ತಮಿಳು ಭಾಷೆಯೇ 'ಅರವ' ಎಂಬುದು. ತಮಿಳೇತರರು ತಮಿಳನ್ನು ಸಾಮಾನ್ಯವಾಗಿ 'ಅರವ' ಎಂದು ಕರೆಯುವ ರೂಢಿಯಿದೆ. ಅದರಲ್ಲೂ ತೆಲುಗಿನವರು ತಮಿಳನ್ನು 'ಅರವ' ಎಂದೇ ಕರೆಯುತ್ತಾರೆ. ಲೂಯಿ ರೈಸ್ ಅವರು ಸಂಪಾದಿಸಿರುವ 'ಎಪಿಗ್ರಾಫಿಯ ಕರ್ನಾಟಿಕಾ' ಸಂಪುಟಗಳಲ್ಲಿ, ತಮಿಳನ್ನು 'ಅರವ' ಎಂದು ಕನ್ನಡದಲ್ಲೂ, Tamil ಎಂದು ಇಂಗ್ಲಿಷ್‌ನಲ್ಲೂ ಬಳಸಿರುತ್ತಾರೆ. ಈ ಅರವ ಅಥವಾ ತಮಿಳು ಭಾಷೆಯನ್ನು ಅನೇಕ ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ 'ತಿಗಳ' ಎಂದು ಕರೆದಿರುವ ಉಲ್ಲೇಖಗಳಿವೆ. ಒಟ್ಟಾರೆ 'ಅರವ' ಅಥವಾ 'ತಮಿಳು' ಎಂಬವು ಅಭಿನ್ನವಾದವು.

ಅರವ ಅಥವಾ ತಮಿಳು ಲಿಪಿಗಳು, ಎಲ್ಲ ಭಾರತೀಯ ಲಿಪಿಗಳಂತೆ, ಅಶೋಕನ ಬ್ರಾಹ್ಮೀ ಲಿಪಿಗಳಿಂದಲೇ ವಿಕಾಸಪಡೆದವಾಗಿವೆ. ತಮಿಳು ಭಾಷೆಯಲ್ಲಿವೆಯೆಂದು ಹೇಳಲಾಗುತ್ತಿರುವ ಬ್ರಾಹ್ಮೀ ಲಿಪಿಯಲ್ಲಿರುವ ಹಲವಾರು ಶಾಸನಗಳು ತಮಿಳುನಾಡಿನ ದಕ್ಷಿಣಭಾಗದ ಜಿಲ್ಲೆಗಳಾದ ಮಧುರೆ, ರಾಮನಾಥಪುರ, ತಿರುನೆಲ್ವೇಲಿ, ತಿರುಚನಾಪಳ್ಳಿ ಪ್ರದೇಶಗಳಲ್ಲಿ ಕಂಡುಬಂದಿವೆ. ಸಾಮಾನ್ಯವಾಗಿ ಒಂದೆರಡು ಪಂಕ್ತಿಗಳಲ್ಲಿರುವ ಈ ಬ್ರಾಹ್ಮೀಲಿಪಿಯ ಶಾಸನಗಳನ್ನು, ಸ್ವಾಭಾವಿಕ ಗುಹೆ ಮತ್ತು ಬೆಟ್ಟಗಳ ಬಂಡೆಗಳ ಮೇಲೆ ಕೊರೆಯಲಾಗಿದೆ. ತಮಿಳು ವಿದ್ವಾಂಸರನೇಕರು ಇವು ಅಶೋಕನ ಸಮಕಾಲೀನವೆಂದು ಭಾವಿಸಿದ್ದಾರೆ. ಆದರೆ ಲಿಪಿಶಾಸ್ತ್ರ ದೃಷ್ಟಿಯಿಂದ ಇವು

ಕ್ರಿಸ್ತಪೂರ್ವ ಮೊದಲ ಇಲ್ಲವೆ ಕ್ರಿಸ್ತಶಕ ಮೊದಲ ಶತಮಾನಕ್ಕೆ ಸೇರಿದವಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇನ್ನು ಈ ಶಾಸನಗಳ ಭಾಷೆಯ ಬಗ್ಗೆಯೂ ವಾದ ವಿವಾದಗಳಿದ್ದು, ಕೆಲವರು ಪ್ರಾಕೃತವೆಂತಲೂ ಮತ್ತೆ ಕೆಲವರು ತಮಿಳೆಂತಲೂ ವಾದಿಸಿದ್ದಾರೆ. ಅಲ್ಲದೆ ತಮಿಳು ನಾಡಿನಲ್ಲಿ ಇಂದು ಬಳಕೆಯಲ್ಲಿರುವ, ಹಿಂದೆ ಬಳಕೆಯಲ್ಲಿದ್ದ, ಎಲ್ಲ ಲಿಪಿಗಳಿಗೂ ಈ ಲಿಪಿಗಳೇ ಮೂಲವೆಂದು ಹೇಳುವವರೂ ಇದ್ದಾರೆ.

ಸರ್ವಸಮ್ಮತವಾಗಿ ಒಪ್ಪಿಕೊಂಡಿರುವಂತೆ, ತಮಿಳು ಭಾಷೆ ಮತ್ತು ಲಿಪಿಯಲ್ಲಿರುವ ಶಾಸನಗಳು ಕ್ರಿ.ಶ. ೭ನೇ ಶತಮಾನದ ಪ್ರಾರಂಭದಿಂದ ಪಲ್ಲವರ ಪ್ರದೇಶದಲ್ಲಿ ಕಾಣಸಿಗುತ್ತವೆ. ಕ್ರಿ.ಶ. ಹನ್ನೊಂದನೆಯ ಶತಮಾನದ ಪ್ರಾರಂಭದವರೆಗೆ ಈ ಲಿಪಿಯಲ್ಲಿರುವ ಶಾಸನಗಳು ತಮಿಳು ನಾಡಿನ ಉತ್ತರ ಭಾಗ ಅಂದರೆ ತೊಂಡೈನಾಡು, ಚೋಳಮಂಡಲ ಮತ್ತು ಕೊಂಗು ದೇಶಗಳ ಪ್ರದೇಶದಲ್ಲಿ ಮಾತ್ರ ಕಾಣಸಿಗುತ್ತವೆ. ತೀರ ದಕ್ಷಿಣದ ಕೊನೆಯಲ್ಲಿ, ಅಂದರೆ ಪಾಂಡ್ಯರು ಆಳ್ವಿಕೆ ನಡೆಸಿದ ಪ್ರದೇಶದಲ್ಲಿ 'ವಟ್ಟೆಳುತ್ತು' ಲಿಪಿ ಬಳಕೆಯಲ್ಲಿದ್ದಿತು. ('ವಟ್ಟೆಳುತ್ತು' ಎಂಬುದು ತಮಿಳು ಭಾಷೆಯನ್ನು ಬರೆಯಲು ಬಳಸುತ್ತಿದ್ದ ಮತ್ತೊಂದು ತೆರನಾದ ಲಿಪಿ. ಕ್ರಿ. ಶ. ೮ನೇ ಶತಮಾನದ ಮಧ್ಯಕಾಲದಿಂದ ಕಾಣಿಸಿಕೊಂಡು, ೧೨ನೇ ಶತಮಾನದ ಬಳಿಕ ಬಳಕೆ ಕಳೆದುಕೊಳ್ಳುತ್ತದೆ.) ಪಾಂಡ್ಯ ರಾಜ್ಯವನ್ನು ಚೋಳರು ಆಕ್ರಮಿಸಿಕೊಂಡ ನಂತರ ಅಂದರೆ ಹನ್ನೊಂದನೆಯ ಶತಮಾನದ ಬಳಿಕ ತಮಿಳು ಲಿಪಿ ದಕ್ಷಿಣಕ್ಕೂ ಹರಡಿತು.—ಇವಿಷ್ಟು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತಮಿಳು ಲಿಪಿಯ ಉಗಮ-ವಿಕಾಸಗಳನ್ನು ಗುರುತಿಸುವುದಾದರೆ, ಅದು ದಕ್ಷಿಣ ಭಾರತದ ಎಲ್ಲ ಲಿಪಿಗಳಂತೆಯೇ ಅಶೋಕನ ಬ್ರಾಹ್ಮೀ ಲಿಪಿಗಳಿಂದಲೇ ಉಗಮವಾದದ್ದೆಂದು ಹೇಳಬಹುದಾಗಿದೆ. ಈ ಲಿಪಿಗಳು ತಮಿಳು ನಾಡಿನ ಉತ್ತರ ಭಾಗದಲ್ಲಷ್ಟೆ ಪ್ರಾರಂಭದಲ್ಲಿ ಬಳಕೆಯಲ್ಲಿದ್ದುದರಿಂದ, ತಮಿಳು ನಾಡಿನ ದಕ್ಷಿಣ ಭಾಗದಲ್ಲಿ ದೊರೆತ ಪ್ರಾಚೀನ ಬ್ರಾಹ್ಮೀ ಲಿಪಿಯ ಪ್ರಭಾವ ಈ ಲಿಪಿಗಳ ಮೇಲೆ ಆಗಿಲ್ಲವೆಂದು ಹೇಳಬೇಕಾಗಿದೆ.

ಮೂಲತಃ ತಮಿಳಿನಲ್ಲಿ ಸ್ವರಗಳಾದ ಋ, ೠ ಗಳಾಗಲೀ ಅನುಸ್ವಾರ ವಿಸರ್ಗಗಳಾಗಲೀ ಇಲ್ಲ. ವರ್ಗೀಯ ವ್ಯಂಜನಗಳಲ್ಲಿ ವರ್ಗಪ್ರಥಮಾಕ್ಷರಗಳು ಮತ್ತು ವರ್ಗಪಂಚಮಾಕ್ಷರಗಳಾದ ಅನುನಾಸಿಕಗಳು ಮಾತ್ರ ಇವೆ. ಅವರ್ಗೀಯ ವ್ಯಂಜನಗಳಲ್ಲಿ ಷ, ಶ, ಸ, ಹ ಅಕ್ಷರಗಳ ಬಳಕೆಯಿಲ್ಲ. ಆದರೆ ಹಳಗನ್ನಡದಲ್ಲಿರುವಂತೆ 'ೞ' ಮತ್ತು 'ಱ' ಅಕ್ಷರಗಳು ಇಂದಿಗೂ ಬಳಕೆಯಲ್ಲಿವೆ. ಜೊತೆಗೆ ಅನುನಾಸಿಕ 'ನ' ಅಕ್ಷರವಲ್ಲದೆ ಮತ್ತೊಂದು 'ನ಼' ಅಕ್ಷರವೂ ಬಳಕೆಯಲ್ಲಿದೆ.

ತಮಿಳು ಲಿಪಿ, ಗ್ರಂಥಲಿಪಿಯಂತೆ, ಪಲ್ಲವ ಪ್ರದೇಶದಲ್ಲಿಯೇ ಉಗಮಿಸಿ, ಗ್ರಂಥಲಿಪಿಯೊಂದಿಗೆ ಅನೇಕ ರೀತಿಯ ಹೋಲಿಕೆಗಳನ್ನು ಪಡೆದಿದ್ದು, ಅವೆರಡರಲ್ಲೂ ಇಂದಿಗೂ ಸಮಾನವಾದ ಅನೇಕ ಅಕ್ಷರಗಳು ಬಳಕೆಯಲ್ಲಿರುವುದೂ ಗಮನಾರ್ಹ

ನಾಮುದು. ಈ ಎರಡೂ ಲಿಪಿಗಳು ಪ್ರಾರಂಭಾವಸ್ಥೆಯಲ್ಲಿ ಸಮಕಾಲೀನ ಕದಂಬರ ಕನ್ನಡ-ತೆಲುಗು ಲಿಪಿಯೊಂದಿಗೆ ಸಾಕಷ್ಟು ಹೋಲಿಕೆಯನ್ನು ಪಡೆದಿರುವುದೂ ಗಮನಾರ್ಹ ಅಂಶಗಳಾಗಿವೆ.

ತಮಿಳು ಲಿಪಿ ಕ್ರಿ. ಶ. ಸು. ೧೧ನೆಯ ಶತಮಾನದ ನಂತರ ದಕ್ಷಿಣ ತಮಿಳು ನಾಡಿನ ಪ್ರದೇಶಕ್ಕೂ ವ್ಯಾಪಿಸಿ ಪ್ರಚಾರವನ್ನು ಪಡೆದುಕೊಂಡು ಕ್ರಿ. ಶ. ಸು. ೧೪-೧೫ ಶತಮಾನದ ವೇಳೆಗಾಗಲೇ ಪೂರ್ಣ ಬೆಳವಣಿಗೆಯನ್ನು ಪಡೆದುಕೊಂಡಿತೆನ್ನ ಬಹುದು. (ಕನ್ನಡ ಲಿಪಿಯು ತನ್ನ ಬೆಳವಣಿಗೆಯನ್ನು ೧೪ನೆಯ ಶತಮಾನದ ಅನಂತರವೂ, ಅಂದರೆ ಮುದ್ರಣ ಸೌಕರ್ಯ ಬರುವವರೆಗೂ, ಮುಂದುವರಿಸಿತೆನ್ನ ಬಹುದು.) ಅಶೋಕನ ಬ್ರಾಹ್ಮೀ ಲಿಪಿಯಲ್ಲಿನ ಉ, ಎ, ಚ, ತ, ಟ, ತ, ಪ, ಯ, ಲ ಮುಂತಾದ ಅಕ್ಷರಗಳು ಇಂದಿನ ತಮಿಳಿನ ಇವೇ ಅಕ್ಷರಗಳೊಂದಿಗೆ ಈಗಲೂ ಗುರುತಿಸಲು ಸಾಧ್ಯವಾಗುವಷ್ಟರ ಮಟ್ಟಿನ ಸಾಮ್ಯತೆಯನ್ನು ಪಡೆದುಕೊಂಡಿವೆ.

## ಗ್ರಂಥಋಣ

1. ಮಾಧವ ನಾ. ಕಟ್ಟಿ–ಲಿಪಿಶಾಸ್ತ್ರ ಪ್ರವೇಶ (೧೯೭೨)
2. T. N. Subramaniam (Ed) - *South Indian Temple Inscriptions. Vol. III, pt II* (1957)
3. G. H. Ozha – ಭಾರತೀಯ ಪ್ರಾಚೀನ ಲಿಪಿಮಾಲ (ಹಿಂದಿ), 1918.
4. C. Sivaramamurti – *Indian Epigraphy and South Indian Scripts*. (1952).
5. T. V. Mahalingam – *Early Indian Palaeography*.
6. K. V. Ramesh – *'Historical Study of Dravidian ಱ and ೞ'. Q. J. M. S., Vol. LIII, No. 3., p. 77* (Oct. 1962)

—o—



# ತಿಗಳಾರಿ ಲಿಪಿ ಮತ್ತು ಅದರ ಹಸ್ತಪ್ರತಿಗಳು

ಜಿ. ಎಂ. ಹೆಗಡೆ

ಒಂದು ನಾಡಿನ ಸಂಸ್ಕೃತಿಯ ಅಧ್ಯಯನಕ್ಕೆ ಆ ನಾಡಿನ ಜನರ ಭಾಷಾ ಸಾಹಿತ್ಯಗಳು ಪ್ರಮುಖ ಸಾಮಗ್ರಿಯಾಗಿರುವಂತೆ ಅವುಗಳನ್ನು ಬಹು ಚೆನ್ನಾಗಿ ಪ್ರತಿ ಬಿಂಬಿಸುವ ಲಿಪಿಯೂ ತಕ್ಕಮಟ್ಟಿಗೆ ನೆರವು ನೀಡುತ್ತದೆ. ಈ ದೃಷ್ಟಿಯಿಂದ ದೇಶದ ತುಂಬ ಹರಡಿ ನಿಂತ ಲಿಪಿಗಳನ್ನು ಸಂಶೋಧಿಸಿ ವಿವೇಚಿಸುವುದು ಅತ್ಯಗತ್ಯ ವಾಗಿದೆ. ಯಾವುದೇ ಲಿಪಿಯ ಹುಟ್ಟು, ಬೆಳವಣಿಗೆ ಮತ್ತು ಬಳಕೆಯಲ್ಲಿ ಆಯಾ ಪ್ರದೇಶದ ಜನರ ಮನೋಧರ್ಮ, ಸಂಸ್ಕೃತಿಯ ವೈಶಿಷ್ಟ್ಯಗಳು ವಿದಿತವಾಗುತ್ತವೆ. ದ್ರಾವಿಡ ಜನಸಮೂಹದಲ್ಲಿ ಬೆಳೆದುಬಂದ ಲಿಪಿಗಳನ್ನು ಸಂಶೋಧಿಸಿ ವ್ಯಾಸಂಗ ನಡೆಸಲು ಸಾಕಷ್ಟು ಅವಕಾಶವಿದೆ.

ದ್ರಾವಿಡ ಭಾಷಾವಿಜ್ಞಾನ, ಸಾಹಿತ್ಯ, ಸಂಸ್ಕೃತಿ, ಜಾನಪದ, ಸಾಮಾಜಿಕ–ಮಾನಸಿಕ ಅಧ್ಯಯನಗಳು ಇಂದು ವ್ಯಾಪಕವಾಗಿ ನಡೆಯುತ್ತಿವೆ. ವಾಸ್ತವಿಕವಾಗಿ ದ್ರಾವಿಡ ಭಾಷೆಗಳ ಶೋಧಕಾರ್ಯ ಈ ಶತಮಾನದಲ್ಲಿ ಕಳೆದ ಕೆಲವು ದಶಕಗಳಲ್ಲಿ ನಡೆದಷ್ಟು ಹಿಂದೆಂದೂ ನಡೆದಿರಲಿಲ್ಲವೆಂದು ಹೇಳಬಹುದು. ೨೨ ಭಾಷೆಗಳನ್ನೂ, ೧೧ ಉಪಭಾಷೆಗಳನ್ನೂ ವಿದ್ವಾಂಸರು ಈವರೆಗೆ ಸಂಶೋಧಿಸಿ ಅವುಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ದಕ್ಷಿಣ ದ್ರಾವಿಡ, ಉತ್ತರ ದ್ರಾವಿಡ ಮತ್ತು ಮಧ್ಯ ದ್ರಾವಿಡವೆಂದು ಇವುಗಳ ವಿಂಗಡನೆಯನ್ನು ಮಾಡಲಾಗುತ್ತದೆ. ದ್ರಾವಿಡ ಭಾಷೆಯನ್ನಾಡುವ ಜನರು ದಕ್ಷಿಣಭಾರತವಷ್ಟೇ ಏಕೆ ಭಾರತದ ಹೊರನಾಡುಗಳಾದ ಸಿಂಹಳ, ಆಫಘಾನಿ-ಸ್ತಾನ ಮೊದಲಾದೆಡೆ ನೆಲೆಸಿದ್ದಾರೆ. ದ್ರಾವಿಡ ಭಾಷೆಗಳಲ್ಲಿ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಭಾಷೆಗಳನ್ನು ಬಿಟ್ಟರೆ ದ್ರಾವಿಡದ ಉಳಿದ ಭಾಷೆಗಳಿಗೆ ಲಿಪಿ ಯಿಲ್ಲವೆಂಬುದೇ ಈವರೆಗಿನ ತಿಳವಳಿಕೆಯಾಗಿದೆ. ದ್ರಾವಿಡ ಭಾಷಾಪರಿವಾರದಲ್ಲಿ ಬಹುಕಾಲದಿಂದಲೂ ಬೆಳೆದುಬಂದ 'ತಿಗಳಾರಿ ಲಿಪಿ'ಯ ಬಗೆಗೆ ನಮ್ಮ ಪಂಡಿತಲೋಕ ಗಮನ ಹರಿಸದೇ ಇರುವದು ಆಶ್ಚರ್ಯದ ಸಂಗತಿಯಾಗಿದೆ. ಈ ತಿಗಳಾರಿ ಲಿಪಿ ಮತ್ತು ಅದರ ಹಸ್ತಪ್ರತಿಗಳ ಬಗೆಗೆ ವಿವೇಚನೆ ನಡೆಸುವದೇ ಈ ಪ್ರಬಂಧದ ಉದ್ದೇಶವಾಗಿದೆ.

ಭಾಷೆಗೆ ಶ್ರಾವಣ ಮತ್ತು ಚಾಕ್ಷುಷ ರೂಪಗಳಿರುತ್ತವೆಂದು ಹೇಳುವುದು ರೂಢಿ ಯಾಗಿದೆ.[1] ಶ್ರಾವಣರೂಪಕ್ಕೆ ಪ್ರಾದೇಶಿಕ (Regional) ಮತ್ತು ಸಾಮಾಜಿಕ

(Social) ರೂಪಗಳಿರುವಂತೆಯೇ ಚಾಕ್ಷುಷಕ್ಕೂ ಪ್ರಾದೇಶಿಕ ಮತ್ತು ಸಾಮಾಜಿಕ ಸ್ವರೂಪ ಪ್ರಾಪ್ತವಾಗುವುದುಂಟು. ಇವಕ್ಕೆ ತಿಗಳಾರಿ ಲಿಪಿಯು ಒಂದು ಉತ್ತಮ ನಿದರ್ಶನವಾಗಿದೆ. ತಿಗಳಾರಿ ಲಿಪಿಯು ಕರ್ನಾಟಕದ ಕರಾವಳಿ, ಮಲೆನಾಡು, ಮತ್ತು ದಕ್ಷಿಣೋತ್ತರ ಕನ್ನಡ ಜಿಲ್ಲೆಯಲ್ಲಿ ಬಹುಕಾಲದಿಂದಲೂ ಪ್ರಾದೇಶಿಕವಾಗಿ ಉಳಿದುಕೊಂಡ ಪುರಾತನ ಲಿಪಿಯಾಗಿದೆ. ಈ ತಿಗಳಾರಿ ಲಿಪಿ ಸಾಮಾನ್ಯವಾಗಿ ಬಳಕೆಯಲ್ಲಿದ್ದು ಬೆಳೆದುಕೊಂಡು ಬಂದಿರುವದು ಬ್ರಾಹ್ಮಣರಾದ ವೈದಿಕರ ಮನೆತನ ಗಳಲ್ಲಿ. ಹೀಗೆ ಸಮಾಜದ ಉಚ್ಚವರ್ಗಗಳಲ್ಲಿ ಬಳಕೆಯಾಗುತ್ತ ಬಂದ ಈ ಲಿಪಿ ಯನ್ನು ಸಾಮಾಜಿಕ ಲಿಪಿ(Social Script) ಮತ್ತು ಪ್ರಾದೇಶಿಕ ಲಿಪಿ(Regional Script) ಎಂದೂ ಬಹುಮಟ್ಟಿಗೆ ಕರೆಯಬಹುದು.

'ತಿಗಳಾರಿ' ಕೆಲವೊಮ್ಮೆ 'ತಿಕಳಾರಿ' ಎಂದು ಕರೆಸಿಕೊಳ್ಳುವುದುಂಟು. ತಿಗಳಾರಿ ಲಿಪಿಯ ನಿಷ್ಪತ್ತಿ ವಿಚಾರ, ಅವರ ಲಿಪಿಯಷ್ಟೇ ಅಪರಿಚಿತವಾಗಿದೆ. ತಿಗುಳ+ಆರಿ ಎಂದು ಇದನ್ನು ಬಿಡಿಸಬಹುದಾಗಿದೆ. ಇಲ್ಲಿ ತಿಗುಳ ಎಂದರೆ ತಮಿಳು. ಪ್ರಾಚೀನ ಕರ್ನಾಟಕದಲ್ಲಿ ತಮಿಳರನ್ನು ತಿಗುಳರೆಂದೇ ಕರೆಯುತ್ತಿದ್ದರೆಂಬುದು ಶಾಸನ ಮತ್ತು ಕನ್ನಡ ಕಾವ್ಯಗಳಿಂದ ತಿಳಿದು ಬರುತ್ತದೆ.[2] ಎಂದರೆ 'ತಮಿಳು ಆರ್ಯ' ಎಂಬುದರ ಆದುನಿಕ ರೂಪವಾಗಿರುವದು. ದ್ರಾವಿಡ ಪ್ರದೇಶದಲ್ಲಿ ನೆಲೆನಿಂತ ಬ್ರಾಹ್ಮಣರು ಬಳಸುವ ಲಿಪಿಯೇ ಈ 'ತಿಗಳಾರಿ' ಲಿಪಿಯಾಗಿದೆ.

ತಿಗಳಾರಿ ಲಿಪಿ ಐವತ್ತು ಅಕ್ಷರಗಳ ಧ್ವನಿಸಂಕೇತವನ್ನು (Sound Symbols) ಹೊಂದಿದ್ದು ತನ್ನದೇ ಆದ ಕಾಗುಣಿತ ಮಾದರಿಯನ್ನು ಒಳಗೊಂಡಿದೆ. ಧ್ವನಿಯನ್ನು ಕೊರತೆಯಿಲ್ಲದೇ ಸೂಚಿಸಲಿಕ್ಕೆ ಉಪಯುಕ್ತವಿದೆ. ವ್ಯಂಜನಾಕ್ಷರ ಗಳೊಡನೆ ಸ್ವರಗಳ ಸಂಯೋಗವಿದ್ದುದನ್ನು ಲಿಪಿಯಲ್ಲಿ ಕಾಣಬಹುದು. ಇದರಲ್ಲಿ ದೇವನಾಗರಿಯಂತೆ ದೀರ್ಘ 'ಏ' 'ಓ' ಕಾರಗಳಿಲ್ಲ; ಬದಲು ಲ್ಯ 'ಲ್ಯೂ' ವಿದೆ. ಸಂಸ್ಕೃತ ವಾಙ್ಮಯವನ್ನು ದ್ರಾವಿಡ ನಾಡಿನಲ್ಲಿ ಹಬ್ಬಿಸುವ ಪ್ರಯತ್ನ; ಅದರಿಂದ ಪ್ರಭಾವಿತವಾದ ಸ್ವರೂಪ ಈ ಲಿಪಿಯಲ್ಲಿ ಅಚ್ಚಳಿಯದಂತೆ ಉಳಿದುಕೊಂಡಿದೆ. ಲಿಪಿಯ ಕಾಲಾನುಸಾರಿಯಾದ ವಿಕಾಸವನ್ನು ಹಸ್ತಪ್ರತಿಗಳಲ್ಲಿ ಕಾಣುವುದು ಸಾಧ್ಯ. ತಮಿಳಿಗಿಂತ ಹೆಚ್ಚಾಗಿ ಮಲೆಯಳಿ ಲಿಪಿಗೆ ಅಧಿಕವಾದ ಸಾಮ್ಯದಿಂದ ಹತ್ತಿರದ ಸಂಬಂಧವನ್ನು ಲಿಪಿಯ ಬೆಳವಣಿಗೆಯಲ್ಲಿ ಕಾಣಬಹುದು. ದ್ರಾವಿಡ ಲಿಪಿಗಳ ಸಮೀಪದ ಪ್ರಭಾವದಿಂದ ಹಸ್ತಪ್ರತಿಗಳಲ್ಲಿ ಬೇರೆ ಬೇರೆ ಪ್ರಯೋಗಳು ಅಕ್ಷರಗಳಿಗೆ ಬಳಕೆಯಾಗಿವೆ. ಇವು ಲಿಪಿಯ ವರ್ಣನಾತ್ಮಕ ಪರಿಶೀಲನೆಯಿಂದ ಗೊತ್ತಾಗುವ ಮಹತ್ವದ ಅಂಶಗಳು. ತಿಳಗಾರಿ ಲಿಪಿಕಾರರು ಹಸ್ತಪ್ರತಿಗಳಲ್ಲಿ ಆ ವರ್ಣಮಾಲೆಯ ಜೊತೆಗೆ ಕನ್ನಡ ಅಂಕಿಗಳನ್ನು ತಿಗಳಾರಿ ಅಂಕಿಗಳೆಂದೇ ಬಳಸಿರುವುದು ಕಂಡು ಬರುವುದು.

ತಿಗಳಾರಿ ಲಿಪಿಯ ಹುಟ್ಟು ಮತ್ತು ಬೆಳವಣಿಗೆಯ ಬಗೆಗೆ ಕೆಲವು ಐತಿಹ್ಯಗಳಿವೆ. ಉತ್ತರಕನ್ನಡ ಜಿಲ್ಲೆಯ ತಿಗಳಾರಿ ಲಿಪಿಕಾರರು, ಇದು ಮಲೆಯಾಳದೇಶದಿಂದ ಕರ್ನಾಟಕಕ್ಕೆ ಬಂದುದಾಗಿ ಹೇಳುತ್ತಾರೆ. ಹಿಂದೆ ಜ್ಯೋತಿಷ, ಆಯುರ್ವೇದ, ಶಾಸ್ತ್ರಗಳನ್ನು ಅಧ್ಯಯನ ಮಾಡುವ ಬ್ರಾಹ್ಮಣರು ಕೇರಳಕ್ಕೆ ಹೋಗಿಬರುತ್ತಿದ್ದಂತೆ. ಅಲ್ಲಿಂದ ಈ ಲಿಪಿಯನ್ನು ಅವರು ಕಲಿತು ವ್ಯವಹಾರದಲ್ಲೂ ಹಸ್ತಪ್ರತಿಗಳಲ್ಲೂ ಬಳಸುತ್ತ ಬಂದರೆಂಬುದು ಒಂದು ಐತಿಹ್ಯ. ಇದೇ ರೀತಿಯಲ್ಲಿ ವೇದಶಾಸ್ತ್ರಗಳು ಸಾಮಾನ್ಯರ ಕೈಯಲ್ಲಿ ಬೀದಿಪಾಲಾಗಿ ಹೋಗಬಾರದು; ಅವುಗಳ ಮಹತ್ವವನ್ನೂ ಪಾವಿತ್ರ್ಯವನ್ನೂ ಕಾಪಾಡಲು ತಿಗಳಾರಿ ಲಿಪಿಯನ್ನು ಇವರು ಬಳಸಿದರೆಂಬುದು ಎರಡನೆಯ ಐತಿಹ್ಯವಾಗಿದೆ.

ತಿಗಳಾರಿ ಲಿಪಿ ಅತ್ಯಂತ ಪ್ರಾಚೀನವಾದುದೆಂಬುದಕ್ಕೆ ಸಾಕಷ್ಟು ಆಧಾರ ಶಾಸನಗಳಲ್ಲಿ ದೊರಕುತ್ತದೆ. "ಕ್ರಿ. ಶ. ೧೫೮೦ರ ಮೈಸೂರು ಜಿಲ್ಲೆಯ ಮಾಲಿಂಗ ಎಂಬ ಅಗ್ರಹಾರದಲ್ಲಿನ ಶಾಸನದಲ್ಲಿ ಋಗ್ವೇದವನ್ನು 'ಒದಗಿಸುವ ಉಪಾಧ್ಯಾಯರಿಗೆ ಮತ್ತು 'ನಾಗರಕನ್ನಡ ತಿಗುಳಾರ್ಯಮನೋದಿಸುವ ಬಾಲಶಿಕ್ಷೆ'ಯ ಉಪಾಧ್ಯಾಯರಿಗೆ ದತ್ತಿಗಳನ್ನು ಕೊಟ್ಟ ವಿಷಯವನ್ನು ಹೇಳಿದೆ."[3] ಎಂದರೆ ನಾಗರ, ಕನ್ನಡ ಮತ್ತು ತಿಗಳಾರಿ ಲಿಪಿಗಳನ್ನು ಬಾಲಕರಿಗೆ ವಿದ್ಯಾಭ್ಯಾಸ ಮಾಡಿಸುವ ಸಂಪ್ರದಾಯದ ಚಿತ್ರ ಸುಸ್ಪಷ್ಟವಾಗಿದೆ. ಪ್ರಾಚೀನ ಕರ್ನಾಟಕದಲ್ಲಿ ತಿಗಳಾರಿ ಲಿಪಿ ವಿದ್ಯಾಭ್ಯಾಸದಲ್ಲೂ ಬಳಕೆಯಲ್ಲಿತ್ತೆಂಬುದು ಗಮನಾರ್ಹ ಸಂಗತಿಯಾಗಿದೆ.

ಬೃಹತ್ ಭಾರತ ದೇಶದ ಎಲ್ಲ ಲಿಪಿಗಳೂ ಬ್ರಾಹ್ಮೀ ಲಿಪಿಯಿಂದಲೇ ಹುಟ್ಟಿಕೊಂಡಿರುವದಾಗಿ ವಿದ್ವಾಂಸರ ಅಭಿಮತವಿದೆ.[4] ಹೀಗೆ ಬ್ರಾಹ್ಮಿಯಿಂದ ಜನಿಸಿದ ಭಾರತದ ಲಿಪಿಗಳನ್ನು (೧) ನಾಗರಿ ಮತ್ತು ಅದರಿಂದ ಉದ್ಭವಿಸಿದ ಲಿಪಿಗಳು, (೨) ಕನ್ನಡ–ತೆಲುಗು ಲಿಪಿ, (೩) ಗ್ರಂಥ, ತಮಿಳು, ಮಲೆಯಾಳಂ ಮತ್ತು ವಟ್ಟೆಜುತ್ತು ಲಿಪಿಗಳು ಈ ಮೂರು ಮುಖ್ಯ ಶಾಖೆಗಳಲ್ಲಿ ಗುರುತಿಸಬಹುದು.[5] ತಿಗಳಾರಿ ಲಿಪಿ ಮಲೆಯಾಳಂ ಮತ್ತು ವಟ್ಟೆಜುತ್ತು ಲಿಪಿಯೆರಡರಿಂದ ಕವಲೊಡೆದ ಮಧ್ಯಂತರದ ಲಿಪಿಯೆಂದು ನಮಗೆ ತೋರುತ್ತದೆ. ಇವು ಯಾವ ಯಾವ ಕಾಲದಲ್ಲಿ ಕವಲೊಡೆದು ರೂಪಾಂತರವನ್ನು ಹೊಂದಿ ಅಸ್ತಿತ್ವವನ್ನು ಪಡೆದುಕೊಂಡುವೆಂಬುದನ್ನು ಊಹಿಸುವುದು ಕಷ್ಟವಾಗುತ್ತದೆ. ತಿಗಳಾರಿಯೇ ಗ್ರಂಥಲಿಪಿಯೆಂದು ಕೆಲವರು ಹೇಳಿರುವುದುಂಟು. ಆದರೆ ಗ್ರಂಥಲಿಪಿಗೂ ತಿಗಳಾರಿಗೂ ಸಾಕಷ್ಟು ವ್ಯತ್ಯಾಸವಿದೆ.

ತಿಗಳಾರಿ ತುಳುಲಿಪಿಯೆಂದು ಕೆಲ ವಿದ್ವಾಂಸರು ಹೇಳಿರುವದುಂಟು. ದಕ್ಷಿಣ ಭಾರತದ ಲಿಪಿಗಳ ಬಗೆಗೆ ಅಧ್ಯಯನ ನಡೆಸಿರುವ ಡಾ|| ಎ. ಸಿ. ಬರ್ನೆಲ್ ಅವರು. ಸಂಪದ್ರಾವಿಡಭಾಷೆಗಳಲ್ಲಿಂದಾದ 'ತುಳು' ಲಿಪಿಯುಳ್ಳ ಭಾಷೆಯಾಗಿರಬೇಕು. ತಿಗಳಾರಿ ಲಿಪಿಯೇ ತುಳು ಭಾಷೆಯ ಲಿಪಿ ಎಂಬ ಸಂಶಯವನ್ನು ಡಾ|| ಬರ್ನೆಲ್

ಹುಟ್ಟಿಸಿದ್ದಾರೆ. ವಾಸ್ತವಿಕವಾಗಿ ತಿಗಳಾರಿ ತುಳು ಲಿಪಿಯಲ್ಲವೆನ್ನಲು ಸಾಕಷ್ಟು ಆಧಾರಗಳಿವೆ. 'ತುಳು ಲಿಪಿಯನ್ನು ಬಳಸುವ ತುಳುವನೊಬ್ಬನೂ ಪ್ರಾಯಶಃ ಇಲ್ಲ.'[6] ಇದನ್ನು ಡಾ|| ಬಾರ್ನೆಲ್‌ರೂ ಒಪ್ಪಿ ತಮ್ಮ ಗ್ರಂಥದ ವಿಷಯವಿವರಣೆಯಲ್ಲಿ ಸ್ಪಷ್ಟ ಪಡಿಸಿದ್ದಾರೆ.[7] ತಿಗಳಾರಿ ಹಸ್ತಪ್ರತಿ ಮತ್ತು ತಾಡಪೋಲೆಗಳಲ್ಲಿ ತುಳುಭಾಷೆಯ ನುಡಿಗಳು ಎಲ್ಲೂ ಕಾಣಿಸಿಕೊಳ್ಳುವದಿಲ್ಲ. ಹಾಗೆಯೇ ತಿಗಳಾರಿ ಲಿಪಿಯ ವರ್ಣ ಮಾಲೆಗೂ ತುಳುನುಡಿಯ ವರ್ಣಮಾಲೆಗೂ ಸಾಕಷ್ಟು ಅಂತರವಿದೆ. "ಅಚ್ಚ ತುಳು ಭಾಷೆಯ ವರ್ಣಸಮಾಮ್ನಾಯ ನೋಡಿದಾಗ ಅದರಲ್ಲಿ ಕನ್ನಡದಂತೆಯೇ ಮಹಾ ಪ್ರಾಣಾಕ್ಷರಗಳಿಲ್ಲ."[8] ಹೀಗಾಗಿ ತಿಗಳಾರಿ ಮತ್ತು ತುಳುಭಾಷೆಯ ನಡುವೆ ಸಾಕಷ್ಟು ವ್ಯತ್ಯಾಸವಿದೆ. ತುಳುನುಡಿಗೆ ಲಿಪಿಯಿಲ್ಲ. ತಿಗಳಾರಿ ಲಿಪಿಯೇ ತುಳುಲಿಪಿಯಲ್ಲ— ಎಂಬುದು ಸತ್ಯನಿಷ್ಠ ಸಂಗತಿಯಾಗಿದೆ.

## ತಿಗಳಾರಿ ಲಿಪಿಯ ಹಸ್ತಪ್ರತಿಗಳು

"ಜೀರ್ಣಂ ಜಿನಗೃಹಂ ಬಿಂಬಂ, ಪುಸ್ತಕಂ ಶ್ರಾದ್ಧಮೇವ ವಾ
ಉದ್ಧಾರ್ಯ ಸ್ಥಾಪನಂ ಪೂರ್ವಪುಣ್ಯತೋಧಿಕಮುಚ್ಯತೇ."
"ತೈಲಾದ್ರಕ್ಷೇಚ್ಛಲಾದ್ರಕ್ಷೇತ್ ರಕ್ಷೇಚ್ಛಿಥಿಲಬಂಧನಾತ್
ಮೂರ್ಖಹಸ್ತೇ ನ ದಾತವ್ಯಂ ಏವಂ ವದತಿ ಪುಸ್ತಕಂ."
"ಪುಸ್ತಕಂ ವನಿತಾ ವಿತ್ತಂ ಪರಹಸ್ತಗತಂಗತಂ
ಅಥವಾ ಪುನರಾಯಾತಂ ಜೀರ್ಣಂ ಭ್ರಷ್ಟಾಚ ಖಂಡಶಃ."

ಈ ಸೂಕ್ತಿಗಳು ಗ್ರಂಥದ ಸ್ವರೂಪ, ರಕ್ಷಣೆ, ಮಹತ್ವಗಳನ್ನೂ ಭಾರತೀಯರ ಭಾವನೆಗಳನ್ನೂ, ಅವರಿಟ್ಟುಕೊಂಡ ಆದರ್ಶವನ್ನೂ ಪ್ರತಿಪಾದಿಸುತ್ತವೆ. ಪ್ರಾಚೀನ ಕಾಲದಿಂದಲೂ ಗ್ರಂಥವು ದೈವೀಸ್ವರೂಪವೆಂಬಂತೆ, ಪರಂಪರೆಯ ಆಸ್ತಿಯೆಂದು ಭಾರತೀಯರು ವಿಶಿಷ್ಟ ಮಹತ್ವವನ್ನು ನೀಡಿರುವದು ಕಂಡುಬರುತ್ತದೆ. ತಿಗಳಾರಿ ಲಿಪಿಯ ಹಸ್ತಪ್ರತಿಗಳಿಗೂ ಇಂತಹದೇ ಮಹತ್ವ ಲಭಿಸಿರುವದು ಸುಸ್ಪಷ್ಟ. ಒಂದು ದೃಷ್ಟಿಯಿಂದ ವೇದ, ಪುರಾಣ, ಉಪನಿಷತ್ತು ಹಾಗೂ ಸಾಹಿತ್ಯ ಶಾಸ್ತ್ರಗಳು ಜನಸಾಮಾನ್ಯರ ಕೈಯಲ್ಲಿ ಸಿಕ್ಕು ನಶಿಸಿಹೋಗಬಾರದೆಂದು, ಅವುಗಳಿಗೆ ಪರಂಪರೆಯ ಮಹತ್ವ ಕೊಟ್ಟು ಗುಪ್ತಲಿಪಿಯಂತಿರುವ ತಿಗಳಾರಿಯಲ್ಲಿ ಅನೇಕ ತಾಡವೋಲೆಗಳಲ್ಲಿ ಬರೆದಿಡಲಾಯಿತು. ಸಮಾಜದ ಉಚ್ಚವರ್ಗದವರೇ ವಿಶೇಷವಾಗಿ ಈ ಲಿಪಿಯನ್ನು ಹಸ್ತಪ್ರತಿಗಳಲ್ಲಿ ಬಳಸಿರುವದು ಕಂಡುಬರುತ್ತದೆ.

ತಿಗಳಾರಿ ಲಿಪಿಯ ಹಸ್ತಪ್ರತಿ(ತಾಡೋಲೆ)ಗಳ ಸಂಖ್ಯೆ ಅಸಂಖ್ಯಾತವಾಗಿದೆ. ಶೃಂಗೇರಿಯ ಶಾರದಾಂಬಾ ದೇವಾಲಯದ ಅಟ್ಟದ ಮೇಲಿರುವ ಗ್ರಂಥಾಲಯದಲ್ಲಿ ೫೦೦ ತಾಡೋಲೆಗಳು ಬಿದ್ದಿವೆ. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ೨೦೦ಕ್ಕೂ ಹೆಚ್ಚು ತಾಡೋಲೆಗಳಿವೆ. ಉತ್ತರ ಕನ್ನಡದ ಸಿದ್ದಾಪುರದ ಗಾಳಿಮನೆಯ

ಸಣ್ಣಭಟ್ಟರ ಮನೆಯಲ್ಲಿ ೫೦೦ಕ್ಕೂ ಹೆಚ್ಚು ಪ್ರತಿಗಳನ್ನು ಬುಟ್ಟಿಯಲ್ಲಿ ಎಸೆದಿರುವದನ್ನು ಕ್ಷೇತ್ರಕಾರ್ಯಕ್ಕೆ ಹೋದಾಗ ಈ ಲೇಖಕ ಗಮನಿಸಿರುವದುಂಟು. ಉತ್ತರ ಕನ್ನಡದ ಇನ್ನಿತರ ವೈದಿಕರ ಮನೆತನಗಳಲ್ಲಿ ಸಾವಿರಾರು ಹಸ್ತಪ್ರತಿಗಳು ಇಂದಿಗೂ ಉಪಲಬ್ಧವಿವೆ. ಅವುಗಳನ್ನು ಕೂಡಿಸಿ ಕಲೆಹಾಕುವ ಪ್ರಯತ್ನ ನಡೆದೇ ಇಲ್ಲವೆಂದು ಹೇಳಬಹುದು. ಕನ್ನಡ ಅಧ್ಯಯನ ಪೀಠ ಮತ್ತು ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಗಳಲ್ಲೂ ಸಾಕಷ್ಟು ತಿಗಳಾರಿ ಹಸ್ತಪ್ರತಿಗಳಿವೆ. ಒಟ್ಟಿನಲ್ಲಿ ಹಲವು ಸಾವಿರದಷ್ಟು ತಿಗಳಾರಿಲಿಪಿಯ ತಾಡೋಲೆಗಳು ಎಲ್ಲೆಡೆ ದೊರಕುತ್ತವೆ.

ತಿಗಳಾರಿ ಲಿಪಿಯ ಹಸ್ತಪ್ರತಿಗಳನ್ನು ತಿಗಳಾರಿಯಲ್ಲಿರುವ ಕನ್ನಡ ಭಾಷೆಯ ಹಸ್ತಪ್ರತಿಗಳೆಂದೂ ಸಂಸ್ಕೃತ ಭಾಷೆಯಲ್ಲಿರುವ ತಿಗಳಾರಿ ಹಸ್ತಪ್ರತಿಗಳೆಂದೂ ಭಾಷೆಯ ದೃಷ್ಟಿಯಿಂದ ವರ್ಗೀಕರಿಸಿ ಹೇಳಬಹುದು. ವಸ್ತುವಿನ ದೃಷ್ಟಿಯಿಂದ ವೇದಾಗಮ, ಉಪನಿಷತ್ತು, ಪುರಾಣಗಳಿಗೆ ಸಂಬಂಧಿಸಿದವುಗಳೆಂದೂ ಸಾಹಿತ್ಯಕ್ಕೆ ಸಂಬಂಧಿಸಿದವುಗಳೆಂದೂ ಆಯುರ್ವೇದ, ಜ್ಯೋತಿಷ ಮೊದಲಾದ ಶಾಸ್ತ್ರಗಳಿಗೆ ಸಂಬಂಧಿಸಿದವುಗಳೆಂದೂ ಮೂರು ರೀತಿಯಲ್ಲಿ ವಿಂಗಡಿಸಿ ಹೇಳಬಹುದು.

ತಿಗಳಾರಿ ಲಿಪಿಯಲ್ಲಿರುವ ಹಸ್ತಪ್ರತಿಗಳು ನಾಲ್ಕು ವೇದಗಳನ್ನೂ, ೧೮ ಪುರಾಣಗಳನ್ನೂ ಉಪನಿಷತ್ತುಗಳನ್ನೂ ಒಳಗೊಂಡಿವೆ. ರಾಮಾಯಣ, ಮಹಾಭಾರತ, ಭಾಗವತ ಮೊದಲಾದ ರಾಷ್ಟ್ರೀಯ ಕಾವ್ಯಗಳಲ್ಲದೆ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿರುವ 'ನಳೊದಯ ಕಾವ್ಯ', 'ಅಗಸ್ತ್ಯಾಶ್ರಮ ವರ್ಣನೆ', 'ನರ್ಮದಾ ಮಹಾತ್ಮೆ' ಮೊದಲಾದವು ಉತ್ತಮ ಕನ್ನಡ ಕಾವ್ಯ ಕೃತಿಗಳಾಗಿವೆ. 'ನಳೋದಯ ಕಾವ್ಯ' ಒಂದು ಅಪುರೂಪವಾದ ಸಾಹಿತ್ಯಕೃತಿಯೆಂದು ಹೇಳಬಹುದು. ಇದೇ ಹಸ್ತಪ್ರತಿಭಂಡಾರದಲ್ಲಿರುವ 'ಶೈವ ಕರುಣಾಮೃತ ಸಿದ್ಧಾಂತ', 'ಶಿವತತ್ವ ವಿವೇಕಾಖ್ಯಾನ', 'ಸಾಂಖ್ಯಯೋಗ', 'ಪ್ರಾಯಶ್ಚಿತ್ತೇಂದುಶೇಖರ', 'ಜಾತಕಲೇಖನ ಸಂಗ್ರಹ', 'ವೈದ್ಯಸಾರ', 'ತರ್ಕಸಂಗ್ರಹ', 'ಮಂತ್ರವಾದ', 'ಅಭಿನವ ಸಾರಾವಲಿ' ಮೊದಲಾದ ಹಸ್ತಪ್ರತಿಗಳು ಅತ್ಯಂತ ಕುತೂಹಲಕರ ರಚನೆಗಳಾಗಿವೆ.

ವೈದ್ಯಕೀಯ, ಜ್ಯೋತಿಷ, ಯೋಗಶಾಸ್ತ್ರ, ತರ್ಕಶಾಸ್ತ್ರ, ಮಂತ್ರವಿದ್ಯೆಗಳಲ್ಲಿ ಕನ್ನಡಿಗರು ಎಷ್ಟು ಮುಂದುವರಿದಿದ್ದರೆಂಬುದು ಇವುಗಳ ಅವಲೋಕನದಿಂದ ಸಾಧ್ಯವಾಗುತ್ತದೆ. ವಾಸ್ತವಿಕವಾಗಿ ಭಾರತೀಯ ಸಂಸ್ಕೃತಿಯ ಸಾರಭೂತವಾದ ಈ ತಾಡೋಲೆಗಳು ಪ್ರಾಚೀನ ಜನತೆಯ ಜ್ಞಾನಾನುಭವಗಳನ್ನು ಬಹು ಅರ್ಥವತ್ತಾಗಿ ಪ್ರತಿನಿಧಿಸುತ್ತವೆ. ಕನ್ನಡದ ಅನೇಕ ಪ್ರಾಚೀನ ಸಾಹಿತ್ಯಕೃತಿಗಳ ಹಸ್ತಪ್ರತಿಗಳು ಕಾಣಿಸದಿರುವಾಗ ಈ ತಿಗಳಾರಿ ಲಿಪಿಯ ತಾಡವೋಲೆಗಳನ್ನು ಜಾಲಾಡಿ ಪರಿಶೀಲಿಸುವ ಅಗತ್ಯವಿದೆ. ಸಂಸ್ಕೃತದಂತೆ ಕನ್ನಡ ಭಾಷೆ, ಸಾಹಿತ್ಯ ಮತ್ತು ಶಾಸ್ತ್ರಗಳನ್ನು ಅಧ್ಯಯನ ಮಾಡಲು ಈ ತಿಗಳಾರಿ ಲಿಪಿಯ ಹಸ್ತಪ್ರತಿಗಳು ಸಹಾಯಕವಾಗಿವೆ. ಕೆಲವು ವರ್ಷಗಳ ಹಿಂದೆ ಸಾಕ್ಷಭಾರತದ ಏಕ ಹಸ್ತಪ್ರತಿಯಿಂದ ಹಂಪನಾ ಅವರು ಅದನ್ನು

ಸಂಪಾದಿಸಿ ಪ್ರಕಟಿಸಿದರು. ಅವರ ಬೇರೆ ಪ್ರತಿಗಳು ತಿಗಳಾರಿ ಲಿಪಿಯಲ್ಲಿ ಇರುವದಾಗಿ ಶೃಂಗೇರಿಯ ಪಂಡಿತರೊಬ್ಬರು ತಿಳಿಯಪಡಿಸಿದರು. ಕನ್ನಡದ ಪ್ರಾಚೀನ ಕಾವ್ಯಗಳ ಅನೇಕ ಪಾಠಗಳನ್ನು ಗುರುತಿಸಲಿಕ್ಕೂ ಈ ಹಸ್ತಪ್ರತಿಗಳು ನೆರವು ನೀಡುತ್ತವೆ. ಅನರೆ ಈ ಎಲ್ಲ ಹಸ್ತಪ್ರತಿಗಳನ್ನು ಪರಿಶೀಲಿಸಿದಾಗ ಬೇರೆ ಬೇರೆ ಕಾಲದ, ಕನ್ನಡ ನಾಡಿನ ರಾಜಕೀಯ, ಆರ್ಥಿಕ ಪರಿಸ್ಥಿತಿಗಳನ್ನೂ ಸಾಮಾಜಿಕ, ಸಾಂಸ್ಕೃತಿಕ ಸ್ಥಿತಿಗಳನ್ನೂ ನಾವು ಅಧ್ಯಯನ ಮಾಡಬಹುದಾಗಿದೆ. ಆದುದರಿಂದ ನಮ್ಮ ಪ್ರಾಚೀನ ವಿದ್ಯೆಯನ್ನು ರಕ್ಷಿಸಿ ಉತ್ತೇಜನ ನೀಡುವ ನಮ್ಮ ನಾಡಿನ ಸಂಸ್ಥೆಗಳು ತಿಗಳಾರಿ ಲಿಪಿಯ ಹಸ್ತಪ್ರತಿಗಳನ್ನು ಸಂಕಲಿಸಿ, ಅವುಗಳನ್ನು ವರ್ಗೀಕರಿಸಿ, ಗುರುತಿಸಿ, ವಿಶೇಷ ವ್ಯಾಸಂಗ ನಡಸುವುದು ಇಂದಿನ ಸಂದರ್ಭದಲ್ಲಿ ಅತ್ಯಂತ ಉಚಿತವಾಗಿದೆ. ಕಾಲ ಕಳೆದಂತೆ ಈ ತಿಗಳಾರಿ ಲಿಪಿ ಯಾರಿಗೂ ಬರದಿರುವುದರಿಂದ ಅದರ ಹಸ್ತಪ್ರತಿಗಳು ಆಶ್ರಯವಿಲ್ಲದ ಬಳ್ಳಿಯಂತೆ ಹಾಳಾಗಿಹೋಗುವ ಸಂಭವ ಬಹುವಾಗಿದೆ. ಆದುದರಿಂದ ತಿಗಳಾರಿಯ ಹಸ್ತಪ್ರತಿಗಳ ಬಗೆಗೆ ನಮ್ಮ ಪಂಡಿತಲೋಕ ತೀವ್ರ ಗಮನವೀಯಬೇಕು.

## ಟಿಪ್ಪಣಿಗಳು

1. ವ್ಯವಹರಿಪುವೆರಡು ರೂಪಿಂ
   ದವಕ್ಕರಂ ಶ್ರಾವಣಂ ಸ್ವನೈಕಾಕಾರಂ
   ವಿವಿಧಾಕಾರಂ ಲಿಪಿಭೇ
   ದ ವೃತ್ತಿಯಿಂ ಚಾಕ್ಷುಷಂ ಪುರಾತನ ಮತದಿಂ
   ಎಂದು ಬಹು ಹಿಂದೆಯೇ ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಹೇಳಿರುವುದುಂಟು. ಪ್ರಪಂಚದಲ್ಲಿರುವ ಅನೇಕ ಭಾಷೆಗಳು ಶ್ರಾವಣ ಮತ್ತು ಚಾಕ್ಷುಷ ರೂಪಗಳನ್ನು ಒಳಗೊಂಡಿವೆ. ಆದರೆ ಚಾಕ್ಷುಷ ರೂಪದಲ್ಲಿಯೇ ಇರುವಂಥವುಗಳು ಬಹು ಕಡಿಮೆ.
2. S. E. I. IX—೧೧೮, ಹಿರೇಹಡಗಲಿ, ಬಳ್ಳಾರಿ ಜಿಲ್ಲೆ (೧೦೫೭) ಮತ್ತು ಸರ್ವಜ್ಞನ ವಚನಗಳು—ಸಂ : ಉತ್ತಂಗಿ ಚೆನ್ನಪ್ಪ, ನೀತಿಪದ್ಧತಿ, ಪದ್ಯ ೧೩೭೬—ಪು. ೨೧೯. ಇವುಗಳನ್ನು ನೋಡಬಹುದಾಗಿದೆ.
3. E.C. III, Tn 27, 1290 A.D. ಎಂ. ಚಿದಾನಂದ ಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೪೨.
4. ಜಿ. ಎಸ್. ಗಾಯಿ : 'ಕರ್ನಾಟಕದಲ್ಲಿ ಅಶೋಕನ ಧರ್ಮಲಿಪಿಗಳು' ; ಪ್ರಬುದ್ಧ ಕರ್ಣಾಟಕ, ಸಂ : ೪೯. ಸಂ. 1.
5. ಮಾಧವ ನಾ. ಕಟ್ಟಿ, ಲಿಪಿಶಾಸ್ತ್ರಪ್ರವೇಶ, ಪು. ೩೯.
6. ಕೆ. ವೆಂಕಟರಾಯಾಚಾರ್ಯ : 'ತೌಳವಭಾಷೆ' ; ಪ್ರಬುದ್ಧ ಕರ್ಣಾಟಕ, ಸಂ. ೪೭. ಸಂಚಿಕೆ 2. (೧೯೬೫), ಪು. ೧೩೫.
7. A. C. Burnel : *Elements of South Indian Palaeography ;* Page 41.
8. ಬಿ. ವಿವೇಕ ರೈ : 'ತುಳುಭಾಷೆ—ಒಂದು ಅಧ್ಯಯನ' ; ಪ್ರಬುದ್ಧ ಕರ್ಣಾಟಕ, ಸಂ ; ೫೩, ಸಂಚಿಕೆ 2, ಪು. ೮೨-೮೩.

# ಪ್ರಾಚೀನತಮ ಕನ್ನಡ ಹಸ್ತಪ್ರತಿಯ ಲಿಪಿವಿನ್ಯಾಸ

**ಎಚ್. ಆರ್. ರಘುನಾಥ ಭಟ್**

ಅಧಿಕೃತವಾದ ಹಸ್ತಪ್ರತಿಗಳು ನಾಡಿನ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಅಧ್ಯಯನದಲ್ಲಿ ಅಮೂಲ್ಯ ಆಕರಗಳಾಗಿವೆ ಎನ್ನುವಲ್ಲಿ ಭಿನ್ನಾಭಿಪ್ರಾಯವಿರಲಿಕ್ಕಿಲ್ಲ. ಆದರೆ ಹಸ್ತಪ್ರತಿಗಳಲ್ಲಿ ಅಡಕವಾಗಿರುವ ವಿಷಯಕ್ಕೆ ಕೊಟ್ಟ ಮಹತ್ವವನ್ನು ಲಿಪಿ ವಿನ್ಯಾಸ, ಚಿತ್ರವಿನ್ಯಾಸ ಹಾಗೂ ಬರವಣಿಗೆ ಶೈಲಿಗಳಿಗೆ ಕೊಟ್ಟಂತಿಲ್ಲ. ಪ್ರಸ್ತುತದಲ್ಲಿ ಕನ್ನಡದ ಪ್ರಾಚೀನತಮ ಹಸ್ತಪ್ರತಿಯೆಂದು ಹೇಳಲಾದ ಕವಿ ವಿಠ್ಠಲನ 'ವಿದಗ್ಧ ಚೂಡಾಮಣಿ'ಯಲ್ಲಿ ಕಂಡುಬರುವ ಲಿಪಿವಿನ್ಯಾಸ ಹಾಗೂ ಅಲಂಕರಣೆಗಳನ್ನು ಸಮಕಾಲೀನ ಶಾಸನ ಲಿಪಿವಿನ್ಯಾಸ ಹಾಗೂ ಆಲಂಕಾರಿಕ ಚಿಹ್ನೆಗಳೊಟ್ಟಿಗೆ ಹೋಲಿಸಿದಾಗ ಹೊರ ಬರುವ ಕೆಲವಂಶಗಳನ್ನು ಸೂಚಿಸುವ ಒಂದು ಪ್ರಯತ್ನ ಮಾಡಲಾಗಿದೆ.[1]

ಇದುವರೆಗೆ ನಮಗೆ ತಿಳಿದುಬಂದಿರುವಂತೆ, ಕವಿ ವಿಠ್ಠಲನ **ವಿದಗ್ಧ ಚೂಡಾಮಣಿ** ತೇದಿ ವಿವರಗಳನ್ನೊಳಗೊಂಡ ಕನ್ನಡದ ತಾಳೆಗರಿಪ್ರತಿಗಳಲ್ಲಿ ಅತ್ಯಂತ ಪ್ರಾಚೀನವಾದದ್ದು.[2] ಸುಮಾರು ಎಂಟುನೂರ ಐವತ್ತು ವರ್ಷಗಳಿಗೂ ಹಿಂದಿನ ಈ ತಾಳೆಗರಿಪ್ರತಿಯ ಕೊನೆಯಲ್ಲಿ ತೇದಿವಿವರಗಳನ್ನು ಹೀಗೆ ಕೊಡಲಾಗಿದೆ:

**ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಸಕವರ್ಷ ೧೦೫೪ ನೆಯ ಸೌಮ್ಯ ಸಂವತ್ಸರದ ಮಾಘ ಬಹಳ ಏಕಾದಶಿ ಗುರುವಾರದಲ್ಲು** ...

ಇದರಿಂದ ಈ ಕೃತಿಯಕಾಲ ೬–೨–೧೧೩೦ರ ಗುರುವಾರ ಎಂಬುದು ಸ್ಪಷ್ಟವಾಗುತ್ತದೆ. ಇದು ಅಮರಕೋಶದ ಕನ್ನಡ ಟೀಕೆ; ಬಹುಶಃ ಪ್ರಾಚೀನತಮ ಕನ್ನಡಟೀಕೆಯೆಂದೂ ಹೇಳಬಹುದು. **ವಿದಗ್ಧ ಚೂಡಾಮಣಿ**ಯ ಗರಿಗಳು ಶಿಥಿಲವಾಗಿವೆ; ಮುಟ್ಟಿದರೆ ಮುರಿಯುವಂತಿವೆ. ಸಣ್ಣ ಸಣ್ಣ ಅಕ್ಷರಗಳಲ್ಲಿ ಬರೆಯಲಾಗಿದೆ. ಇವನ್ನು ಮುತ್ತಿನಂತಹ ಅಕ್ಷರಗಳೆಂದು ಧಾರಾಳವಾಗಿ ವರ್ಣಿಸಬಹುದು. ಇದರ ಲಿಪಿಕಾರ ನಿಜಕ್ಕೂ ಕುಶಲಿ–ಕಲಾವಿದ. ಆತನ ಹೆಸರು ಈ ಗ್ರಂಥದಲ್ಲಿ ಕಂಡುಬಂದಿಲ್ಲ.[3] ಈತ ಕಲ್ಯಾಣಚಾಲುಕ್ಯ–ಹೊಯ್ಸಳರ ಕಾಲದ ಒಬ್ಬ ಕುಶಲ ಲಿಪಿ–ಕಲಾಕಾರ ಎನ್ನುವುದು ಹಸ್ತಪ್ರತಿಯ ಲಿಪಿವಿನ್ಯಾಸ ಹಾಗೂ ಅಲಂಕರಣೆಗಳನ್ನು ನೋಡಿದರೆ ತಿಳಿಯುತ್ತದೆ. ಸುಂದರ ಅಕ್ಷರಜ್ಞಾನದ ಈತನ ಹಸ್ತಾಕ್ಷರ ಮುದ್ದಾಗಿದೆ. ಈತ ಬರೆದ ಲಿಪಿ ಸ್ವಲ್ಪ ಹೆಚ್ಚು ಕಡಿಮೆ, ಸಮಕಾಲೀನ ಶಾಸನ ಲಿಪಿಶೈಲಿಯಲ್ಲಿದೆಯೆಂಬುದು ತೋಲನಾತ್ಮಕ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಮಧ್ಯಕಾಲೀನ ಸುಂದರ–ಸಾಲಂಕೃತ ಲಿಪಿ

ಸೂಕ್ಷ್ಮತೆ ಹಾಗೂ ಲಿಪಿಗಾರಿಕೆ ತಾಳೆಗರಿ ಪ್ರತಿಯಲ್ಲಿ ಮೂಡಿಬಂದಿದೆ. ಇಲ್ಲಿಯ ಅಕ್ಷರಗಳನ್ನು ಹೊಸಮುತ್ತುಗಳೊಡನೆ ಹೋಲಿಸುವುದು ಯಥೋಚಿತ.

ದಬ್ಬಣದಂತಹ ಚೂಪಾದ ಕಂಠದಿಂದ ತಾಳೆಗರಿಯ ಮೇಲೆ ಕೊರೆದು ಬರೆಯುಲಾದ ಲಿಪಿಗಳ ಸೌಂದರ್ಯ, ಹಾಗೂ ಲಿಪಿಶೈಲಿ ಬಹುತೇಕವಾಗಿ ಆ ಪರ್ಣ ಜಾತಿಯ ಮೂಲಭೂತ ಸೌಲಭ್ಯ ಮತ್ತು ಅಸೌಲಭ್ಯಗಳನ್ನು ಅವಲಂಬಿಸಿರುತ್ತದೆ. ಸಸ್ಯ-ಶಾಸ್ತ್ರ ರೀತ್ಯ ಗರಿಗಳನ್ನು ವಿಶ್ಲೇಷಿಸಿದಾಗ ತಿಳಿಯುವಂತೆ ಎಲೆಗಳ ರಚನೆ ಮತ್ತು ಬಂಧಗಳಲ್ಲಿ ಸಮಾಂತರ ರೇಖೆಗಳು ಪ್ರಧಾನವಾಗಿವೆ. ಅಂತೆಯೇ ಇವನ್ನು ಬಾಳೆಯೆಲೆಯಂತೆ ಅಡ್ಡ ಹರಿಯಬಹುದು. ಈ ಗುಣಾವಗುಣಗಳು ಇದರ ಮೇಲೆ ಬರೆಯುವಾತನ ಕಂಠದ ಮೇಲೆ ಮತ್ತು ಆ ಮೂಲಕ ಲಿಪಿಗಾರಿಕೆಯ ಮೇಲೆ ಪ್ರಭಾವ ಬೀರುತ್ತದೆ. **ವಿದಗ್ಧಚೂಡಾಮಣಿ**ಯಲ್ಲಿ ಕಂಡುಬರುವಂತೆ ಅಕ್ಷರಗಳು ಹೊರನೋಟಕ್ಕೆ ದುಂಡಾಗಿ ಕಂಡುಬಂದರೂ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವು ಅಡ್ಡ-ಚಪ್ಪಟೆಯಾಗಿದೆ. ತಲೆಕಟ್ಟಿನ ತುದಿ ತುಸು ಹೊರಬಾಗಿದೆ. ಅಕ್ಷರದ ಲಂಬಾಂತರ ರೇಖೆಗಳು ನೇರವಾಗಿರದೆ ವಕ್ರವಾಗಿವೆ. ಪೂರ್ಣವಿರಾಮ ಚಿಹ್ನೆಗಳಲ್ಲಿ ಏಕತೆಯಿಲ್ಲ. ಅವೂ ಅಲ್ಲಲ್ಲಿ ವಕ್ರವಾಗಿವೆ. ದುಂಡನೆಯ ಅಕ್ಷರಗಳ ಸಾಲನ್ನು ತುಸು ಒತ್ತಿದಂತೆ ಅಥವಾ ಜಜ್ಜಿದಂತಿವೆ. ಕೆಲವೆಡೆ ಲಿಪಿಗಾರಿಕೆ ಅತ್ಯಂತ ಸೂಕ್ಷ್ಮವಾಗಿದೆ. ಈ ಎಲ್ಲ ಮಿತಿಗಳಿದ್ದರೂ ಮಧ್ಯಕಾಲೀನ ಲಿಪಿಸ್ವರೂಪ, ಲೇಖನ ಪರಿಣತಿ ಮತ್ತು ಲಿಪಿಸೌಂದರ್ಯ **ವಿದಗ್ಧಚೂಡಾಮಣಿ**ಯಲ್ಲಿ ಒಟ್ಟಾರೆ ಮೂಡಿಬಂದಿದೆ. ಸಮಕಾಲೀನ ಶಾಸನಲಿಪಿಗೂ, ಈ ಪ್ರತಿಯ ಲಿಪಿಗೂ ವೈದೃಶ್ಯಗಳಿಗಿಂತ ಸಾದೃಶ್ಯಗಳೇ ಹೆಚ್ಚಾಗಿವೆ.

ಮಧ್ಯಕಾಲದಲ್ಲಿ ಅದರಲ್ಲೂ ಹನ್ನೆರಡನೆಯ ಶತಮಾನದಲ್ಲಿ ಅಕ್ಷರಗಳನ್ನು ಆಲಂಕಾರಿಕವಾಗಿ ಬರೆಯುವುದು ಒಂದು ವಿಶೇಷವೆಂದು ತೋರುತ್ತದೆ. ಆ ಕಾಲದ ಶಿಲ್ಪಕಲೆಯಲ್ಲಿದ್ದ ಅಲಂಕರಣಗಳು ಲಿಪಿಗಾರಿಕೆಯ ಮೇಲೆ ಪ್ರಭಾವಬೀರಿವೆ. ರಾಷ್ಟ್ರಕೂಟರ ತಾಮ್ರಶಾಸನ ಒಂದರಲ್ಲಿ 'ಶ್ರೀಧರ' ಎಂಬ ಪದದಲ್ಲಿ ಶ್ರೀಕಾರವನ್ನು ಆಲಂಕಾರಿಕವಾಗಿ ಬರೆಯಲಾಗಿದೆ. ಚಿತ್ರದುರ್ಗದ ಶಾಸನ ಒಂದರಲ್ಲಿ 'ಭ' ಅಕ್ಷರವನ್ನು ಹಂಸದಂತೆ ಬರೆಯಲಾಗಿದೆ. 'ಚಂದ್ರ' ಎಂಬ ಶಬ್ದವನ್ನು ಸ್ವಾರಸ್ಯಕರವಾಗಿ ಕೊರೆಯಲಾಗಿದೆ. ಹೊಯ್ಸಳರ ತಾಮ್ರಶಾಸನಗಳಲ್ಲಿ ಸಾಲಿನ ಕೊನೆಯ ಅಕ್ಷರಗಳನ್ನು ಅಲಂಕರಣೆಗಳಿಂದ ತುಂಬಲಾಗಿದೆ. ಇವಲ್ಲದೆ ಮಂಗಳ ಚಿಹ್ನೆಗಳಾದ ಸ್ವಸ್ತಿಕ, ಪದ್ಮ, ಶಂಖ, ಚಕ್ರ, ನಕ್ಷತ್ರ, ಸೂರ್ಯ, ಚಂದ್ರ ಮುಂತಾದವೂ ಅಷ್ಟೆ ಕಲಾತ್ಮಕವಾಗಿ ಮೂಡಿ ಬಂದಿವೆ. ಈ ಬಗೆಯ ಆಲಂಕಾರಿಕ ಲಿಪಿ ಹಾಗೂ ಚಿಹ್ನೆಗಳು **ವಿದಗ್ಧಚೂಡಾಮಣಿ**ಯಲ್ಲೂ ಅಲ್ಲಲ್ಲಿ ಮೂಡಿಬಂದಿವೆ. (ಚಿತ್ರನೋಡಿ).

ಹಸ್ತಪ್ರತಿಯ ಲಿಪಿವಿನ್ಯಾಸ ಹಾಗೂ ಅಲಂಕರಣೆಗಳ ಅಧ್ಯಯನದ ಪ್ರಯೋಜನವಾದರೂ ಏನು? ಪುಸ್ತಕವೊಂದರಲ್ಲಿ ವಿಷಯವೇನಿದೆಯೆಂಬುದು ಮುಖ್ಯವಾಗುತ್ತದೆಯೆ ಹೊರತು, ಅದನ್ನು ಅಚ್ಚಿಸಲು ಬಳಸಿದ ಲಿಪಿವಿನ್ಯಾಸ, ಚಿತ್ರ, ಮಸಿ, ಕಾಗದಗಳ ನಮೂನೆ ಅಲ್ಲ ಎಂದು ಹೇಳುವವರಿದ್ದಾರೆ. ಆದರೆ ಪ್ರಾಚೀನ ಹಸ್ತಪ್ರತಿಗಳಿಗೆ ಅದರಲ್ಲೂ ಅವುಗಳ ಲಿಪಿ, ಚಿತ್ರ, ಅಲಂಕರಣೆಗಳಿಗೆ ಸಂಬಂಧಿಸಿದಂತೆ ಈ ಮಾತನ್ನು ನೇರವಾಗಿ ಅನ್ವಯಿಸಿ ಹೇಳಲಾಗದು. ಹಸ್ತಪ್ರತಿಯಲ್ಲಿ ಕಾಲಗಣನೆ ನಮೂದಿತವಾಗಿಲ್ಲದಾಗ ಅದನ್ನು ನಿರ್ಧರಿಸುವ ಇತರ ಆಧಾರಗಳ ಕೊರತೆ ಇದ್ದಾಗ ಅದರ ಲಿಪಿಸ್ವರೂಪ ಹಾಗೂ ಲಿಪಿಶೈಲಿ ಸಹಾಯಕ್ಕೆ ಬರುತ್ತವೆ. ಈ ದಿಶೆಯಲ್ಲಿ ಇವು ಪೂರಕ ಮಾಹಿತಿಯನ್ನು ನೀಡುತ್ತವೆ. ಇವುಗಳ ಅಧ್ಯಯನದಿಂದ ಲಿಪಿಕಾರನ ಮನೋಭಾವ, ಲೇಖನೋದ್ಯಮದ ಪರಿಸರ ಹಾಗೂ ಕಲಾವಂತಿಕೆ ತಿಳಿಯುತ್ತದೆ. ದೇವಾಲಯಗಳಂಥ ಪವಿತ್ರ ಕಲಾಮಂದಿರಗಳ ಪರಿಸರದಲ್ಲಿ ಕುಳಿತು ಬರೆದ ಹಸ್ತಪ್ರತಿಗಳಲ್ಲಿ ಅಲ್ಲಿಯ ಕಲಾವಂತಿಕೆ ಸ್ಫೂರ್ತಿ ನೀಡಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಅಲ್ಲಿಯ ಶಾಸನ ಲಿಪಿ ಶೈಲಿ ಹಾಗೂ ಶಿಲ್ಪಾಲಂಕರಣಗಳು ಪ್ರಭಾವ ಬೀರಿದ್ದರೂ ಬೀರಿರಬಹುದು. ಈ ಹಿನ್ನೆಲೆಯಲ್ಲಿ **ವಿದಗ್ಧ ಚೂಡಾಮಣಿ**ಯ ಮೇಲೆ ಕಣ್ಣಾಡಿಸಿದಾಗ ಅನಾಮಧೇಯ ಲಿಪಿಕಾರನ ಲಿಪಿಪರಿಣತಿ, ಓರಣದ ಒಲವು ಹಾಗೂ ಲಿಪಿ ಸೌಂದರ್ಯಪ್ರಜ್ಞೆಗಳ ಬಗೆಗಿನ ಅವನ ಆಸಕ್ತಿ ಸುಸ್ಪಷ್ಟವಾಗುತ್ತವೆ. ಈ ದೃಷ್ಟಿಯಿಂದ ಹಸ್ತಪ್ರತಿಗಳ ಅಧ್ಯಯನವೆಂದರೆ ಸಮಕಾಲೀನ ಲಿಪಿಕಾರನ ಮನೋಧರ್ಮಗಳನ್ನು, ಶೈಲಿಸ್ವರೂಪಗಳನ್ನು ತಿಳಿಯುವುದೆಂದರೂ ತಪ್ಪಾಗಲಿಕ್ಕಿಲ್ಲ. ವೈವಿಧ್ಯಮಯ ಲಿಪಿಗಾರಿಕೆಯನ್ನು ಮೈಗೂಡಿಸಿಕೊಂಡು ಬಂದ ಈ ಬಗೆಯ ಕಲಾವಿದ ಲಿಪಿಕಾರರು ಕನ್ನಡನಾಡಿನ ಸಾವಿರಾರು ಹಸ್ತಪ್ರತಿಗಳ ಜನ್ಮದಾತರಷ್ಟೇ ಅಲ್ಲ, ಹಸ್ತಪ್ರತಿ ಲಿಪಿಸೌಂದರ್ಯವನ್ನು ಶ್ರೀಮಂತಗೊಳಿಸಿದವರೆಂದು ಹೇಳಬೇಕು. ಹಸ್ತಪ್ರತಿಯ ಕರ್ತೃ ಮತ್ತು ಅದಕ್ಕೆ ಕಾರಣರಾದವರಿಗೆ ಕೊಡುವ ಮಹತ್ವವನ್ನು ಲಿಪಿಕಾರನಿಗೂ ಕೊಡಬೇಕು; ಹಸ್ತಪ್ರತಿಯ ವಸ್ತು, ವಿಶೇಷ, ಭಾಷಾ ಸ್ವರೂಪಗಳಿಗೆ ನೀಡುವ ಮಹತ್ವವನ್ನು ಅದರ ಲಿಪಿಸ್ವರೂಪ ಮತ್ತು ವಿನ್ಯಾಸಗಳಿಗೂ ಕೊಡಬೇಕು–ಎಂಬುದು 'ವಿದಗ್ಧ ಚೂಡಾಮಣಿ'ಯಂಥ ಕಂಠದಿಂದ ಕೊರೆದುಬರೆದ ಹಸ್ತಪ್ರತಿಯಿಂದಾಗಲಿ, 'ಧವಲತ್ರಯ'ದಂತಹ ಕುಂಚಬಣ್ಣದಿಂದ ಬರೆದ ಹಸ್ತಪ್ರತಿಗಳಿಂದಾಗಲಿ ಸ್ಪಷ್ಟವಾಗುತ್ತದೆ. ಅಂತೆಯೆ ಗ್ರಂಥ ಪರಿಷ್ಕರಣ ಕಾರ್ಯದಲ್ಲಿ ಲಿಪಿಗಾರಿಕೆ ಹಾಗೂ ಕಲಾಪ್ರಜ್ಞೆಗಳನ್ನು ತಪ್ಪದೆ ಗಮನಿಸಬೇಕು. ಲಿಪಿಗಾರಿಕೆ ಒಂದು ಪ್ರಮುಖ ಕಲೆ; ಕಾರ್ಯನಿರತ ಲಿಪಿಕಾರರ ಪಾತ್ರ ಕನ್ನಡ ನಾಡಿನ ಸಾಂಸ್ಕೃತಿಕ ಜೀವನದಲ್ಲಿ ಕಡಿಮೆ ಗಣನೀಯವೇನಲ್ಲ ಎಂಬುದನ್ನು ಮನಗಾಣಬೇಕು. ಅಷ್ಟೇ ಅಲ್ಲ; ಹಸ್ತಪ್ರತಿ ಲಿಪಿಗಾರಿಕೆಗೂ ಸಮಕಾಲೀನ ಶಾಸನ ಲಿಪಿಗಾರಿಕೆಗೂ ನೇರಸಂಬಂಧವಿದೆಯೆಂಬುದೂ ಪ್ರಸ್ತುತ ಅಧ್ಯಯನದಿಂದ ಇನ್ನೂ ಸ್ಪಷ್ಟವಾಗುವುದು.[4]

## ಟಿಪ್ಪಣಿಗಳು

1. ಈ ದಿಶೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ವಿದಗ್ಧಚೂಡಾಮಣಿ ಪ್ರತಿಗಳನ್ನು ಅಧ್ಯಯನ ಮಾಡಲು ಪರವಾನಿಗೆ ನೀಡಿ ಪ್ರೋತ್ಸಾಹಿಸಿದ ಸಂಸ್ಥೆಯ ನಿರ್ದೇಶಕರಾದ ಡಾ॥ ಹಾ.ಮಾ. ನಾಯಕರಿಗೂ, ಹಸ್ತಪ್ರತಿ ವಿಭಾಗದ ಉಪನಿರ್ದೇಶಕರಾದ ಶ್ರೀ ಎನ್. ಬಸವರಾಧ್ಯರಿಗೂ ಕೃತಜ್ಞತೆಗಳು.
2. ನೋಡಿ. ಕಸಾಪ ಪತ್ರಿಕೆ. ೬೧-೨ (೧೯೭೬);
   ಎಚ್. ದೇವೀರಪ್ಪ, ಕನ್ನಡ ಹಸ್ತಪ್ರತಿಗಳ ಇತಿಹಾಸ, ಬೆಂಗಳೂರು, ೧೯೭೭, ಪು. ೧೮
3. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಇನ್ನೂ ಕೆಲವು ವಿದಗ್ಧಚೂಡಾಮಣಿ ಪ್ರತಿಗಳಿವೆ. ನಾನು ಕೆ ೨೮೨ ಪ್ರತಿಯನ್ನಾಧರಿಸಿ ಈ ಲೇಖನ ಬರೆದಿದ್ದೇನೆ; ಉಳಿದ ಪ್ರತಿಗಳನ್ನೂ ಪರಿಶೀಲಿಸಿದ್ದೇನೆ. ನೋಡಿ: ಮೈಹಸೂ ||. ಸಂ. ೭೬೮. ಕೆ. ೨೮೨. ಶ್ರವಣಬೆಳಗೊಳದ ಜೈನಮಠದಲ್ಲೂ ಕೆಲವು ವಿದಗ್ಧಚೂಡಾಮಣಿ ಪ್ರತಿಗಳಿವೆಯೆಂದು ತಿಳಿದು ಬಂದಿದೆ. ಅವನ್ನು ನೋಡಲಾಗಲಿಲ್ಲ.
4. ಈ ಲೇಖನಕ್ಕೆ ಪೂರಕವಾಗಿ ನೀಡಿದ ಚಿತ್ರಗಳಿಂದ ಇದು ಮನವರಿಕೆಯಾದೀತು.

—o—

# ತಾಳೆಗರಿ ಗ್ರಂಥಗಳಲ್ಲಿ ಚಿತ್ರವಿನ್ಯಾಸ

ಎ. ಟಿ. ಎಸ್. ರಾವ್

ಕರ್ನಾಟಕಕ್ಕೇ ವೈಶಿಷ್ಟ್ಯವೆನಿಸಿರುವ, ಹಾಗೂ ಮತ್ತೆಲ್ಲಿಯೂ ಕಾಣಸಿಗದ ತಾಳೇಗರಿಗಳ ಮೇಲಿನ ಚಿತ್ರವಿನ್ಯಾಸಗಳ ಪರಿಚಯ ಪಡೆಯುವ ಮೊದಲು, ಕರ್ನಾಟಕದ್ದೇ ಆದ ಕಲಾಶೈಲಿಯೊಂದು ರೂಪುಗೊಂಡು ಬೆಳೆದುಬಂದ ರೀತಿಯ ಸಿಂಹಾವಲೋಕನ ಮಾಡುವುದು ಅಪ್ರಸ್ತುತವಾಗಲಾರದು.

ನಮ್ಮ ಕರ್ನಾಟಕದ ಭವ್ಯ ನಾಗರಿಕತೆಯ ಶ್ರೇಷ್ಠ ಇತಿಹಾಸ ಸೃಷ್ಟಿಯಲ್ಲಿ ಸೌಂದರ್ಯಬೋಧನೆಯ ಉದ್ದೇಶಕ್ಕಾಗಿ ನಾಡಿನ ಚಿತ್ರಕಲಾವಿದರು ಘನವೆತ್ತ ರಾಜಮನೆತನಗಳ ಕೃಪಾಛತ್ರದಡಿಯಲ್ಲಿ ಹೇಗೆ ತಮ್ಮ ಕಲಾಪ್ರತಿಭೆಯನ್ನು ಬೆಳಗಿಸಿ-ದರೆಂಬುದನ್ನು ಅರಿಯೋಣ.

ಕರ್ನಾಟಕದ ಚಿತ್ರಕಲಾಪರಂಪರೆಯು ಶಾತವಾಹನರ ಕಾಲಕ್ಕಿಂತ ಮುಂಚಿನಿಂದಲೂ ನಡೆದು ಬಂದುದರ ಕುರುಹುಗಳನ್ನು ಮತ್ತು ತಲುಪಿದ ಮಟ್ಟವನ್ನು ಅಜಂತೆಯ ೯ ಮತ್ತು ೧೦ನೆಯ ಗವಿಗಳಲ್ಲಿ ರಚಿತವಾದ ಚಿತ್ರಗಳಿಂದ ಅಳೆಯಬಹುದು. ಅಲ್ಲಿನ ಚಿತ್ರಗಳ ಭಾವ, ಭಂಗಿ, ಮುದ್ರೆಗಳು; ಕೇಶಾಲಂಕಾರ, ಉಡಿಗೆ, ತೊಡಿಗೆ, ಆಭರಣ, ಗಿಡ, ಮರ, ಬಳ್ಳಿ—ಇವೆಲ್ಲವೂ ಕಲಾವಿದ ಸಾಧಿಸಿದ ಸಿದ್ಧಿಯನ್ನು ಎತ್ತಿ ತೋರಿಸುತ್ತವೆ. ಆದರೆ ಇದಕ್ಕೂ ಹಿಂದಿನ ಚಿತ್ರಗಳು (ಆದಿ ಮಾನವನ ಗುಹಾಚಿತ್ರಗಳನ್ನು ಬಿಟ್ಟರೆ) ಉಪಲಬ್ಧವಿಲ್ಲ. ಕನ್ನಡ ಕಲಾವಿದರಿಂದ ರಚಿತವಾದ ಈ ಚಿತ್ರಗಳಲ್ಲಿ ಆಗಿನ ರಾಜ, ರಾಣಿಯರ ಅಲಂಕರಣ ವೈವಿಧ್ಯ, ಕೇಶವಿನ್ಯಾಸ ಮುಂತಾದವು ಸಾಮಜಾತಕ ಮತ್ತು ಚೌವಂತ ಜಾತಕ ಕಥೆಗಳ ಕಥಾಚಿತ್ರಗಳಾಗಿ ಸುಂದರವಾಗಿ ರಚಿತವಾಗಿವೆ. ಅಲ್ಲದೆ ಅಮರಾವತಿ, ಕಾರ್ಲೆ, ಸಾಂಚಿ, ಮುಂತಾದೆಡೆಯ ಬೌದ್ಧ ಸ್ತೂಪಗಳ ಶಿಲ್ಪಕಲಾ ವಿನ್ಯಾಸಗಳನ್ನೂ ತಮ್ಮ ಚಿತ್ರಗಳಲ್ಲಿ ಒಡಮೂಡಿಸಿ, ಕಲಾಭ್ಯಾಸಿಗಳಿಗೆ ಕಲಾಪರಂಪರೆಯ ಮುನ್ನಡೆಯನ್ನು ತೋರಿಸಿರುವರು.

ಚಾಲುಕ್ಯ ಚಕ್ರವರ್ತಿಗಳ ಕಾಲದಲ್ಲಿ ಅದರಲ್ಲಿಯೂ ಮಂಗಳೇಶ ಮತ್ತು ಇಮ್ಮಡಿ ಪುಲಿಕೇಶಿಯರ ಕಲಾಪ್ರೇಮವನ್ನು ಬದಾಮಿಯ ಗುಹಾಂತರ್ದೇವಾಲಯಗಳಲ್ಲಿ ಅದರಲ್ಲಿಯೂ ನಾಲ್ಕನೆಯ ವೈಷ್ಣವ ಗುಹೆಯಲ್ಲಿ ಕಾಣಬಹುದು. ಅಜಂತೆಯ ಚಿತ್ರಗಳನ್ನು ರಚಿಸಿದ ಕನ್ನಡ ಕಲಾವಿದರೇ ಇಲ್ಲಿಯೂ ಗುಹೆಗಳ ಮಾಡುಗಳ ಮೇಲೆ ಮತ್ತು ಬೋದಿಗೆಗಳ ಮೇಲೆ, ಅರಮನೆಯಲ್ಲಿ ರಾಜನಿಂದ ನೃತ್ಯಗೀತೆಗಳ ವೀಕ್ಷಣೆಯ

ನೃತ್ಯವನ್ನು ಬಹು ಸುಂದರವಾಗಿ ಒಡಮೂಡಿಸಿರುವರು. ತಿಳುನೀಲಿ ಮತ್ತು ಹಸಿರು ವರ್ಣಗಳಿಂದ ಚಿತ್ರಿತವಾದ ಈ ಚಿತ್ರಗಳಲ್ಲಿ ಚಾಲುಕ್ಯ ಚಕ್ರೇಶ್ವರನು ಎಡಗಾಲನ್ನು ಮಡಿಸಿ ಬಲಗಾಲನ್ನು ಪಾದಪೀಠದ ಮೇಲಿರಿಸಿ, ದೀರ್ಘ ಬಾಹುವೂ, ಉತ್ತಮ ದುಕೂಲ—ಮಕುಟಧಾರಿಯೂ ಆಗಿ ರತ್ನಹಾರಗಳಿಂದಲೂ ಮತ್ತು ರಾಷ್ಟ್ರಕೂಟ ಲಾಂಛನವಾದ ವೈಜಯಂತಿ ಹಾರದಿಂದಲೂ ಶೋಭಿತನಾಗಿರುವನು. ಮತ್ತೊಂದು ಚಿತ್ರದಲ್ಲಿ ಆಜ್ಞಾಪಾಲಕ ಮಾಂಡಲಿಕರ ನಡುವೆ ಕುಳಿತಿರುವಂತಿದ್ದರೆ, ಬೇರೊಂದು ಚಿತ್ರದಲ್ಲಿ ಪುಲಿಕೇಶಿಯ ತಂದೆ ಕೀರ್ತಿವರ್ಮನು ದೇವಸಭೆಯಲ್ಲಿ ಇಂದ್ರನ ಸಮಾನ ಪೀಠದಲ್ಲಿ ಆಸೀನನಾಗಿರುವಂತೆ ಚಿತ್ರಿಸಲಾಗಿದೆ. ಹೀಗೆ ಅಂದಿನ ಚಿತ್ರಕಲಾಕಾರನು ತಮ್ಮ ಸ್ವಾಮಿಯ ಪಿತನನ್ನು ಅಮರತ್ವದ ಪಟ್ಟಕ್ಕೇರಿಸಿ ಅತ್ಯಂತ ಭವ್ಯವಾದ ತನ್ನ ಕಾಣಿಕೆಯನ್ನು ಅರ್ಪಿಸಿರುವನು. ಇವಲ್ಲದೆ ಬೋದಿಗೆಗಳ ಮೇಲೆ ಚಿತ್ರಿತವಾಗಿರುವ ಹಾರುತ್ತಿರುವ ವಿದ್ಯಾಧರ ದಂಪತಿಗಳ ಚಿತ್ರಗಳೂ ಅತ್ಯಂತ ಮನೋಹರವಾಗಿವೆ. ಈಗ ಈ ಚಿತ್ರಗಳು ಕಾಲನ ಕ್ರೂರ ಹಸ್ತಕ್ಕೆ ಸಿಕ್ಕಿ ರೂಪು ಕಳೆದುಕೊಂಡು, ಬಣ್ಣಗಳು ಮಾಸಿದ್ದರೂ ಅತ್ಯಂತ ಸೂಕ್ಷ್ಮಾವಲೋಕನದಿಂದ ಈ ಚಿತ್ರಗಳ ಅಸ್ತಿತ್ವವನ್ನು ಗುರುತಿಸಬಹುದು. ಇದೇ ಕಾಲದ ಅಜಂತೆಯ ಗುಹೆಗಳಲ್ಲಿ ಕನ್ನಡ ಕಲಾಕಾರರಿಂದ ರಚಿತವಾದ ಇಮ್ಮಡಿ ಪರಮೇಶ್ವರ ಪುಲಿಕೇಶಿಯು ಇರಾಣದ ರಾಯಭಾರಿಗಳನ್ನು ಭೇಟಿ ಮಾಡುತ್ತಿರುವ ದೃಶ್ಯಾವಳಿಯೂ ಮತ್ತು ಆತನ ಸಮುದ್ರ ಸಾರ್ವಭೌಮತ್ವ ವನ್ನು ದೃಢೀಕರಿಸುವ ರಾಜವಿಲಾಸ ನೌಕೆಯ ಮತ್ತೊಂದು ಚಿತ್ರವೂ ಚಾಲುಕ್ಯರ ಕಲಾಕೀರ್ತಿ ವೈಭವದ ಸಂಕೇತಗಳಾಗಿವೆ.

ಚಾಲುಕ್ಯರ ಉತ್ತರಾಧಿಕಾರಿಗಳಾದ ರಾಷ್ಟ್ರಕೂಟರು ಅದರಲ್ಲಿಯೂ ರಾಷ್ಟ್ರಕೂಟ ಚಕ್ರವರ್ತಿ ೧ನೆಯ ಕೃಷ್ಣನ ಕಾಲದಲ್ಲಿ ಕನ್ನಡ ಕಲಾವಿದರು ತಮ್ಮ ಕಲಾಪ್ರತಿಭೆಯನ್ನು ಶಿಲ್ಪಕಲೆಯ ಅದ್ಭುತ ಎಂರು ಈಗಲೂ ಕರೆಸಿಕೊಳ್ಳುತ್ತಿರುವ ಕೈಲಾಸನಾಥ ದೇವಾಲಯದ ಛಾವಣಿ ಚಿತ್ರಗಳಲ್ಲಿ ಹಾಗೂ ಇನ್ನಿತರ ಗುಹಾಂತರ ದೇವಾಲಯಗಳ ಬೋದಿಗೆಗಳ ಮೇಲೆ ರಚಿಸಿರುವರು. ಈ ಚಿತ್ರಗಳು ರೇಖಾ ನೈಪುಣ್ಯದಲ್ಲಿ ಪ್ರತಿಮಾಶಾಸ್ತ್ರದ ನಿಷ್ಕರ್ಷಿತ ತಾಲಪ್ರಮಾಣಗಳ ಸೂಚಿಗಳಾಗಿರುವು ವಲ್ಲದೆ, ನಾನಾ ವಿಧವಾದ ಹೂಬಳ್ಳಿಗಳು, ಮೃಗಗಳು ಮತ್ತು ಪಶುಪಕ್ಷಿ ಸಂಕುಲದ ಸುಂದರ ಸಂಯೋಜನೆಯಿಂದ ಕೂಡಿವೆ. ಇಲ್ಲಿನ ಚಿತ್ರಗಳಲ್ಲಿ ಮುಖ್ಯವಾಗಿ ಲಿಂಗೋದ್ಭವ ಶಿವ, ಆತನ ಇಕ್ಕೆಲಗಳಲ್ಲಿರುವ ಮಿಕ್ಕಿಬ್ಬರು ತ್ರಿಮೂರ್ತಿಗಳು, ಗರುಡಾರೂಢ ವಿಷ್ಣು, ಭುಜಂಗಭೂಷಿತ ನಟರಾಜ, ಹಾಗೂ ಕಮಲ ಸರೋವರದಲ್ಲಿ ವಿಹರಿಸುತ್ತಿರುವ ಆನೆಗಳ ಚಿತ್ರಗಳು, ಹಾರುತ್ತಿರುವ ವಿದ್ಯಾಧರ ಗಾಯಕರ ಚಿತ್ರಗಳೂ ಸುಂದರವಾಗಿ ರಚಿಸಲ್ಪಟ್ಟಿವೆ.

ರಾಷ್ಟ್ರಕೂಟರ ಪರಂಪರೆಯನ್ನು ಮುಂದುವರಿಸಿ, ಅವರ ಮತ್ತು ಆ ವರೆಗಿನ ಕಲಾಶೈಲಿಗಳನ್ನು ರೂಢಿಸಿಕೊಂಡು ತಮ್ಮದೇ ಆದ ವೈಶಿಷ್ಟ್ಯವನ್ನು ಮೆರೆಸಿ

ಅಜರಾಮರರಾದವರು ಹೊಯ್ಸಳ ಕಲಾವಿದರು. ಸಳನು ಹೊಯ್ಸಳ ಅರಸರ ಮೂಲಪುರುಷನಾದರೂ ವಿಕ್ರಮಾದಿತ್ಯನ ಮೊಮ್ಮಗ ಬಿಟ್ಟಿದೇವ ಅಥವ ಬಿಟ್ಟಿಗ ಕಲ್ಯಾಣಿಯ ಚಾಲುಕ್ಯರ ಸಾಮಂತಿಕೆಯನ್ನು ತೊಡೆದುಹಾಕಿ ಸ್ವತಂತ್ರನಾದ ಸಾಮ್ರಾಟ. ಜಿನಧರ್ಮಿಯಾಗಿದ್ದ ಈತ ರಾಮಾನುಜರ ಶಿಷ್ಯನಾಗಿ ವಿಷ್ಣುವರ್ಧನನಾದರೂ ಈತನ ನಾಟ್ಯಕಲಾಕೋವಿದೆಯಾದ ಪತ್ನಿ ಶಾಂತಲದೇವಿ ಜಿನಧರ್ಮಾವಲಂಬಿ, ಈಕೆಯ ತಂದೆ ಮಾರಸಿಂಗಯ್ಯ ಶೈವಮತಾವಲಂಬಿ. ಇದೇ ರೀತಿ ಆಗಿನ ಹೊಯ್ಸಳೇಶ್ವರನ ಸಾಮಂತರು, ಮಂತ್ರಿ, ಸೇನಾನಾಯಕರೂ ತಮ್ಮ ಜೀವಿತ ಕ್ರಮದಲ್ಲಿ ತಮಗಿಷ್ಟಬಂದ ದೈವನಿಷ್ಠೆಯುಳ್ಳವರಾಗಿದ್ದರು. ಹೀಗಾಗಿ ಮೇಲ್ಕಂಡ ಮೂರು ಧರ್ಮಗಳ ಕಲಾಪ್ರಕಾರಗಳ ಸಂಗಮದಲ್ಲಿ ಮೇಲೆದ್ದು ಶೋಭಿಸಿದ ಶೈಲಿ ಹೊಯ್ಸಳ ಶೈಲಿ.

ಆ ಕಾಲದ ಅತ್ಯಂತ ಪರಾಕಾಷ್ಠೆಯ ಕಲಾಪ್ರಕಾರಗಳಾದ ದೇವಾಲಯಗಳು ಹೊಯ್ಸಳ ಕಲೆಯ ಅನರ್ಘ್ಯ ರತ್ನಗಳು. ಈಗಲೂ ಹೊಯ್ಸಳರ ಶಿಲ್ಪಕಲಾ ವೈಭವವು ಅವರ ಅದ್ವಿತೀಯ ಸೌಂದರ್ಯದ ದೇವಾಲಯಗಳಿಂದಲೇ ಅಚ್ಚಳಿಯದೆ ಉಳಿದಿದೆ. ಇಂತಹ ಕಲಾವಿದರು, ಕಲಾಪ್ರೇಮಿಗಳು ಬಾಳಿ ಬದುಕಿದ ಕಾಲದಲ್ಲಿ ಚಿತ್ರಕಲೆ ಅನಾರ್ಜಿತವಾಗಿದ್ದಿತೇ! ಶಿಲ್ಪಕಲೆಯ ಅಂಗವಾಗಿ ಪ್ರಸಿದ್ಧಿಗೆ ಬಾರದಾಗಿ ಇದ್ದಿತೇ! ಅಥವಾ ಮೂರ್ತಿಶಿಲ್ಪಕ್ಕೆ ಸಿಕ್ಕಿದ ಪ್ರಾಧಾನ್ಯ ವರ್ಣಚಿತ್ರಕಲೆಗೆ ಸಿಕ್ಕದೆ ಮೂಲೆಗುಂಪಾಯಿತೆ? ಚಿತ್ರಕಲಾ ಪ್ರಪಂಚಕ್ಕೆ ಹೊಯ್ಸಳರ ಕೊಡುಗೆ ಏನೂ ಇಲ್ಲವೆ? ಈ ಮುಂತಾದ ಸಂದೇಹಗಳು ನಮಗೆ ಬರಬಹುದು.

ಆದರೆ ಹೊಯ್ಸಳರ ಭವ್ಯ ಶಿಲ್ಪಕಲಾವೈಭವದಂತೆಯೇ ಅವರ ವರ್ಣಚಿತ್ರಕಲೆಯೂ ಅಚ್ಚಳಿಯದೆ ಸುಸ್ಥಿತಿಯಲ್ಲಿ ಕನ್ನಡ ನಾಡಿನ ಜಿನಮಂದಿರ, ಮಠಗಳಲ್ಲಿ ಈಗಲೂ ಉಳಿದು ಶೋಭಿಸುತ್ತಿರುವ ಸಂಗತಿಯನ್ನು ಅನೇಕರು ಅಷ್ಟಾಗಿ ಗಮನಿಸಿಲ್ಲ. ಹೊಯ್ಸಳರ ಕಾಲದ ಉತ್ತಮ ಚಿತ್ರಕಲಾವಿದರು ಜೈನಪುರಾಣೋಕ್ತ ಕಥಾಚಿತ್ರಗಳನ್ನು ಶ್ರವಣಬೆಳಗೊಳದ ಜೈನಮಠದ ಗೋಡೆಗಳ ಮಾಡಗಳ ಮೇಲೆ ಭಿತ್ತಿಚಿತ್ರಗಳಾಗಿ ಚಿತ್ರಿಸಿ ಹೊಯ್ಸಳರ ಚಿತ್ರಕಲಾವೈಭವವನ್ನು ಪ್ರದರ್ಶಿಸಿರುವರು. ಇವೆಲ್ಲಕ್ಕಿಂತಲೂ ಹೆಚ್ಚಿನ ಅವರ ಕಾಣಿಕೆ. ಆವರೆಗಿನ ಚಿತ್ರೀಕರಣದ ಮಾಧ್ಯಮಗಳಾದ ಭಿತ್ತಿ, ಫಲಕ, ದುಕುಳ ಪಟ (ಬಟ್ಟೆ). ಇವನ್ನು ಬಿಟ್ಟು ಪ್ರಪ್ರಥಮವಾಗಿ ಆಗಿನ ಲೇಖನ ಸಾಮಗ್ರಿಯಾದ ತಾಳಪತ್ರಗಳ ಮೇಲೆ ಚಿತ್ರಗಳನ್ನು ಬಿಡಿಸಿ, ಪ್ರಾಚೀನ ಹಸ್ತಪ್ರತಿಗಳಿಗೆ ಅಪೂರ್ವ ಶೋಭೆಯನ್ನು ತಂದು, ಈಗಲೂ ಸುಸ್ಥಿತಿಯಲ್ಲಿ ಅವು ಕಲೋಪಾಸಕರ ಮನತಣಿಯುವಂತೆ ಬಿಟ್ಟುಹೋಗಿರುವುದು. ಆಗಿನ ಲೇಖನಸಾಮಗ್ರಿಗಳು, ಉತ್ತರ ಭಾರತದಲ್ಲಿ ಭೂರ್ಜ ವೃಕ್ಷದ ಒಳತೊಗಟೆಯಾದರೆ, ದಕ್ಷಿಣದಲ್ಲಿ ಹತ್ತಿಯ ಬಟ್ಟೆಯಿಂದ ವಿಶೇಷ ರೀತಿಯಲ್ಲಿ ತಯಾರಿಸಿದ "ಕಡತ" ಹಾಗೂ ರೇಷ್ಮೆ ವಸ್ತ್ರಗಳನ್ನು ಬಿಟ್ಟರೆ ತಾಳಪತ್ರಗಳೇ ಪ್ರಾಧಾನ್ಯವನ್ನು

ಬರೆದಿದ್ದವು. ಇವುಗಳ ಬಳಿಕ ಕ್ರಿ. ಶ. ೭ನೇ ಶತಮಾನದ ಹ್ಯುಯೆನ್ ತ್ಸಾಂಗನ ಕಾಲಕ್ಕೂ ಹಿಂದಿನಿಂದ ಇದ್ದುದಾಗಿ ತಿಳಿದುಬರುತ್ತದೆ. ಭಾರತದಲ್ಲಿ ಅದರಲ್ಲೂ ದಕ್ಷಿಣ ಭಾರತದಲ್ಲಿ ತಾಳಪತ್ರಗಳು "ಕೋರಿಫ ಅಂಬ್ರಾಕ್ಯುಲಿಫೆರ" ಅಥವಾ "ಬೋರಾಸಸ್ ಫ್ಲಾಬೆಲಿಫೆರ" ಎಂಬ ಮರದ ಎಲೆಗಳಿಂದ ಮಾಡಲ್ಪಟ್ಟುದಾಗಿರುತ್ತದೆ. ಇವರ ಎಲೆಗಳು ಉದ್ದವಾಗಿ ಕೊನೆಯಲ್ಲಿ ಮೊನಚಾಗಿ ಇದ್ದು ಮಧ್ಯೆ ಕಡ್ಡಿಯಂತೆ ದಪ್ಪ ಭಾಗವು ಎಲೆಯ ಉದ್ದಕ್ಕೂ ಇರುತ್ತದೆ. ಇವನ್ನು ಗ್ರಂಥದ ಆಕಾರಕ್ಕೆ ತಕ್ಕಂತೆ ಕತ್ತರಿಸಿ, ಮಧ್ಯೆ ರಂಧ್ರವನ್ನು ಕೊರೆದು ಕಟ್ಟುಕಟ್ಟಿ ಇಡಲು ಗ್ರಂಥದ ಮೇಲ್ಮುಖ ಮತ್ತು ಕೆಳಮುಖಗಳ ಮೇಲೆ, ಹಗುರವಾದ ಮರದ ಹಲಗೆಗಳನ್ನು ಜೋಡಿಸಿ, ಹಸ್ತಪ್ರತಿಯ ಜಾಗರೂಕ ರಕ್ಷಣೆಯನ್ನು ಮಾಡಿರುತ್ತಿದ್ದರು. ಮತ್ತು ಆ ರೀತಿ ತಯಾರಿಸಿದ ತಾಳಪತ್ರಗಳ ಸಂಕುಲದಲ್ಲಿ ವೇದಾಂತ, ಧರ್ಮ, ರಾಜಕೀಯ, ಸಾಹಿತ್ಯ, ಕಲೆ, ಶಿಲ್ಪ, ಇತಿಹಾಸ, ಪುರಾಣ, ನಿಘಂಟು, ವ್ಯಾಕರಣ, ಗಣಿತ, ವೈದ್ಯಕ ಮುಂತಾದ ಶಾಸ್ತ್ರಗಳನ್ನು ಬರೆದಿಡುತ್ತಿದ್ದರು. ಮೇಲ್ಕಂಡ ವಿಷಯಗಳಲ್ಲಿ ಧಾರ್ಮಿಕ ಗ್ರಂಥಗಳಿಗೇ ಪ್ರಾಧಾನ್ಯವಿರುತ್ತಿತ್ತು. ಈ ರೀತಿಯ ಗ್ರಂಥಗಳಲ್ಲಿ ಲಿಪಿಕಾರನು ಅಂಚುಗಳನ್ನು ರೇಖಾವಿನ್ಯಾಸದಿಂದ ಅಲಂಕರಿಸುತ್ತಿದ್ದನಾದರೂ, ಅದನ್ನೇ ಮಾಧ್ಯಮವಾಗಿ ಉಪಯೋಗಿಸಿ ಧರ್ಮಗ್ರಂಥಕ್ಕೆ ವಸ್ತುವಿಷಯವನ್ನು ನಿರೂಪಿಸಲು ಚಿತ್ರಮಾಧ್ಯಮವನ್ನು ಉಪಯೋಗಿಸಿ ಗ್ರಂಥದ ಮಹತ್ವವನ್ನು ಮೊತ್ತಮೊದಲಿಗೆ ಹೆಚ್ಚಿಸಿದವರು ಹೊಯ್ಸಳ ಚಿತ್ರಕಲಾವಿದರು. ಈ ರೀತಿಯ ಧರ್ಮಗ್ರಂಥಗಳು ಅಪುರೂಪವಾಗಿ ದಕ್ಷಿಣಕಾಶಿ, ಜೈನಕಾಶಿ ಎಂದು ಪ್ರಸಿದ್ಧವಾದ ಮೂಡಬಿದ್ರಿಯ ಜೈನಮಠದ ಸಿದ್ಧಾಂತ ಬಸದಿಯಲ್ಲಿ ಈಗಲೂ ಸುಸ್ಥಿತಿಯಲ್ಲಿ ಪೂಜೆಗೊಳ್ಳುತ್ತಲಿವೆ. ಈ ಗ್ರಂಥಗಳ ಚಿತ್ರನೈಪುಣ್ಯವನ್ನು ಅರಿಯುವ ಮೊದಲು ಗ್ರಂಥಗಳ ಬಗ್ಗೆ ಸ್ವಲ್ಪ ತಿಳಿದುಕೊಳ್ಳುವುದು ಒಳ್ಳಿತು.

ಭಗವಾನ್ ಮಹಾವೀರ ಸ್ವಾಮಿಯವರ ಬೋಧನೆಗಳು ಅವರ ಶಿಷ್ಯರಾದ ಇಂದ್ರಭೂತಿ ಗೌತಮ ಮುನಿಗಳಿಂದ ಅಲಿಖಿತವಾಗಿ ಆಗಿನ ಸಂಪ್ರದಾಯದಂತೆ ವಾಕ್, ಶ್ರವಣ, ಮನನಗಳ ಮೂಲಕ ಮುಂದಿನವರಿಗೆ ತಲುಪಿಸಲ್ಪಟ್ಟವು. ಆದರೆ ಈ ಬೋಧನೆಗಳು ಎಷ್ಟರಮಟ್ಟಿಗೆ ಮರೆಯಲು ಪ್ರಾರಂಭವಾದುವೆಂದರೆ, ಅವನ್ನು ಪುನಃ ಉದ್ಧರಿಸಲೇಬೇಕಾಯಿತು. ಆಗ ಕ್ರಿಸ್ತ ಪೂರ್ವ ಒಂದನೇ ಶತಮಾನದವರಾದ ಗುಣಧರ ಮತ್ತು ಕ್ರಿಸ್ತ ಶಕ ಒಂದನೇ ಶತಮಾನದಲ್ಲಿದ್ದ ಧರಸೇನರೆಂಬ ಮಹಾನ್ ಆಚಾರ್ಯರುಗಳು ಈ ಬೋಧನೆಗಳನ್ನು ಶೇಖರಿಸಿ, ಸಂಗ್ರಹಿಸಿ, ಜೈನತತ್ವಶಾಸ್ತ್ರಗಳಾದ "ಕಷಾಯ ಪಹುಡ" ಮತ್ತು "ಶ್ರುತಸ್ಕಂದಾಗಮ"ಗಳಾಗಿ ಬರೆದರು. ಶ್ರುತಸ್ಕಂದಾಗಮದ ಮೇಲಿನ ಭಾಷ್ಯವೇ "ಧವಳ". ಇದರ ಕರ್ತೃ ವೀರಸೇನ. ಈತನೇ "ಕಷಾಯ ಪಹುಡ" ಗ್ರಂಥಕ್ಕೂ ಭಾಷ್ಯವನ್ನು ಬರೆದಿರುವನು. ಇವೇ "ಜಯಧವಳ" ಮತ್ತು "ಮಹಾಧವಳ" ಗ್ರಂಥಗಳು. ಮೂಲ ದಿಗಂಬರ

ಸಂಪ್ರದಾಯದ ೧೨ ಅಂಗಗಳ ನಿರೂಪಣೆ ಇಲ್ಲಿದೆ. ಈ ಅಮೂಲ್ಯವಾದ ಗ್ರಂಥಗಳ ಹಸ್ತಪ್ರತಿಗಳೇ ಮೂಡಬಿದ್ರಿಯ ಸಿದ್ಧಾಂತ ಬಸದಿಯಲ್ಲಿರುವುವು. ಈ ಗ್ರಂಥಗಳಲ್ಲಿ ವಿಷಯ ನಿರೂಪಣಾ ಚಿತ್ರರಚನೆಗೆ ಸಾಮಾನ್ಯವಾಗಿ ವಿಶಾಲವಾಗಿರುವ ತಾಳೆಗರಿಗಳನ್ನು ಆರಿಸಿ ಚಿತ್ರಗಳನ್ನು ಕೊರೆಯಲಾಗಿದೆ. ಕೂರ್ಚಿಕೆಯೆಂಬ ವಿಶೇಷ ಲೇಖನಿಗಳಿಂದ ಹಾಗೂ ತೂಲಿಕಾಶಲಾಕಗಳೆಂಬ ವಿಶೇಷ ತೂಲಿಕೆ(ಬ್ರಷ್)ಗಳಿಂದ ರೇಖಾರಚನೆ ಹಾಗೂ ವರ್ಣಸಂಯೋಜನೆ ಮಾಡಲಾಗಿದೆ. ಉಪಯೋಗಿಸಿರುವ ವರ್ಣಗಳು ಹೆಚ್ಚಿನವು ವನಸ್ಪತಿಮೂಲದವಾಗಿವೆ. ಕೆಲವು ಕಡೆ ಧಾತು ವರ್ಣಗಳನ್ನೂ ಪ್ರಖರತೆಗಾಗಿ ಬಳಸಲಾಗಿದೆ. ಆ ಕಾಲದ ಪ್ರಮುಖವರ್ಣಗಳೆಂದು ನಿರ್ದಿಷ್ಟವಾಗಿ ನಿಷ್ಕರ್ಷಿತವಾಗಿಪ್ಪ ಗೈರಿಕ (ಕೆಂಪು), ನೀಲ, ಶುಷ್ಪ (ಬಿಳುಪು), ಕಜ್ಜಲ (ಕಪ್ಪು), ಹರಿತಾಳ (ಹಳದಿ) ಇವುಗಳನ್ನು ಪ್ರಮಾಣಬದ್ಧವಾಗಿ ಮಿಶ್ರಣಮಾಡಿ ಭಾವಾಭಿಜ್ಞತೆಗೆ ತಕ್ಕಂತೆ ತ್ಯಾಗದ ಸಂಕೇತಕ್ಕೆ ಕೆಂಪು ಕಾವಿಯನ್ನೂ, ಸರ್ವವ್ಯಾಪಕತೆಯ ಸಂಕೇತಕ್ಕೆ ನೀಲಿಯನ್ನೂ, ಸಂಪತ್ತಿನ ಸೂಚನೆಗೆ ಹಸಿರು ಬಣ್ಣವನ್ನೂ ರೂಪ ಭೇದ ಭಾವ, ಲಾವಣ್ಯಗಳಿಗೆ ಅನುಗುಣವಾಗಿರುವಂತೆ ನಿಯಮಾನುಸಾರವಾಗಿ ಲೇಪಿಸಿ ಚಿತ್ರಕಲಾತಂತ್ರ ಭಾವಾಭಿಜ್ಞತೆಯನ್ನು ಹೊಯ್ಸಳ ಚಿತ್ರಕಾರನು ತನ್ನ ಸೀಮಿತ ಮಿತಿಯಾದ ತಾಳೆಗರಿಯ ಚಿಕ್ಕ ಅಂಕಣಗಳಲ್ಲಿ ನಿರೂಪಿಸಿರುವನು. ಚಿತ್ರಗಳಲ್ಲಿ ಈಗಲೂ ಕಂಡುಬರುವ ಅಚ್ಚಳಿಯದ ವರ್ಣಗಳ ಪ್ರಖರತೆ ಆಗಿನ ಹೊಯ್ಸಳ ಚಿತ್ರಕಲಾವಿದರ ವರ್ಣ ಮಿಶ್ರಣ ಕೌಶಲ್ಯ ಮತ್ತು ನಿಪುಣತೆಯನ್ನು ಪ್ರತಿಬಿಂಬಿಸುತ್ತವೆ. ಚಿತ್ರಗಳ ಅಂಚುಗಳಲ್ಲಿ ಬಿಡಿಸಿರುವ ವಿನ್ಯಾಸ, ಮತ್ತು ರೇಖೆಗಳ ಲಾಸ್ಯ ಲಾಲಿತ್ಯಗಳು ಬೇಲೂರು ದೇವಾಲಯದಲ್ಲಿರುವ ತಾಮ್ರ ಶಾಸನಗಳನ್ನು ಬಹುವಾಗಿ ಹೋಲುವುದರಿಂದ ಹಾಗೂ ಈ ತಾಮ್ರ ಶಾಸನಗಳ ಬರವಣಿಗೆಯೂ ತಾಳಪತ್ರಗಳ ಬರವಣಿಗೆಯೂ ಏಕರೂಪವಾಗಿರುವುದರಿಂದಲೂ ಈ ಚಿತ್ರಪಟಗಳನ್ನು ತಾಳೇಗರಿ ಗ್ರಂಥಗಳಲ್ಲಿ ಅಳವಡಿಸಿರುವ ಕಾಲ ಹೊಯ್ಸಳೇಶ್ವರ ವಿಷ್ಣುವರ್ಧನನ ಕಾಲವೆಂದೇ ದೃಢವಾಗಿ ಹೇಳಬಹುದು. ಚಿತ್ರಗಳ ಅಂಚುಗಳಲ್ಲಿ ಚಿತ್ರಗಳ ನಿರೂಪಣೆಯನ್ನು ಮುದ್ದಾದ ಅಕ್ಷರಗಳಿಂದ ಒಡಮೂಡಿಸಿರುವರು.

ನಿರಾಡಂಬರ, ನಿರಾಲಂಕೃತ ನಗ್ನ ಮೂರ್ತಿಗಳಾದ ಜಿನಬಿಂಬಗಳನ್ನು ಕಲಾವಿದನು ಕಲಾಚಾತುರ್ಯದಿಂದ, ಚಿತ್ರದ ಗಾಂಭೀರ್ಯಕ್ಕೆ ಭಂಗಬಾರದಂತೆ ಮನೋಹರವಾಗಿ ಚಿತ್ರಿಸಿರುವನು. ಚಿತ್ರ ೧ರಲ್ಲಿ ಮಕರಪೀಠದ ಮೇಲೆ ಗರ್ಜಿಸುವ ಸಿಂಹಗಳ ಹಿನ್ನೆಲೆಯಲ್ಲಿ ಇಕ್ಕೆಲಗಳಲ್ಲಿ ಚೌರಿ ಬೀಸುವವರ ಸುಂದರ ಸಂಯೋಜನೆಯಿಂದ ನಿಷ್ಕರ್ಷಿತ ಪ್ರಮಾಣದಲ್ಲಿ ತೀರ್ಥಂಕರರ ಮತ್ತು ಚಾಮರಧಾರಿಗಳಾದ ಬುಧ ಮತ್ತು ನಾಗರಾಜರ ಚಿತ್ರಗಳು ಅತ್ಯಂತ ಸತ್ವಶಾಲಿಯಾಗಿ ಮೂಡಿಬಂದಿವೆ. ಕೆಳಗಿನ ಅಂಕಣದಲ್ಲಿ ಪಾರ್ಶ್ವನಾಥಸ್ವಾಮಿಯು ನಿರಾಡಂಬರ ವೈರಾಗ್ಯಮೂರ್ತಿಯನ್ನು ಸೌಂದರ್ಯಕ್ಕೆ ಭಂಗಬಾರದ ರೀತಿಯಲ್ಲಿ ಚಿತ್ರಿಸಲಾಗಿದೆ.

ಚಿತ್ರ ೮ರಲ್ಲಿ ಬಾಹುಬಲಿ ಮೂರ್ತಿಯು ಲೌಕಿಕ ವ್ಯವಹಾರಗಳನ್ನು ತೊರೆದು, ಸರ್ವಸ್ವವನ್ನೂ ತ್ಯಾಗಮಾಡಿ ತಪಸ್ಸಿಗೆ ಹೊರಟುನಿಂತಾಗ ಆತನ ಇಬ್ಬರು ಸಹೋದರಿಯರು ತಡೆಯಲು ಬರುತ್ತಿರುವ ದೃಶ್ಯ ಎಲ್ಲೋರ ಗುಹೆಯ ಇದೇ ವಸ್ತುವನ್ನು ಹೊಂದಿ ರಚಿತವಾದ ಚಿತ್ರವನ್ನು ನೆನಪಿಗೆ ತರುತ್ತದೆ. ಕೆಳಗಿನ ಅಂಕಣದಲ್ಲಿ ಆಸನಾರೂಢಳಾದ ಶ್ರುತದೇವಿಯನ್ನೂ ಇಕ್ಕೆಲಗಳಲ್ಲಿ ಚಾಮರಧಾರಿಗಳಾದ ಕನ್ಯೆಯರನ್ನೂ ಚಿತ್ರಿಸಿರುವ ರೇಖಾನೈಪುಣ್ಯ ಮತ್ತು ಲಾಲಿತ್ಯಗಳು ಅವರ ಬಾಗಿ ಬಳುಕಿರುವ ಕತ್ತು ಕಾಲುಗಳೂ ಪಕ್ಕದ ಮಾವಿನ ಮರಗಳೂ ಅಂಚಿನ ವಿನ್ಯಾಸವೂ ಹೊಯ್ಸಳ ಚಿತ್ರಕಾರನ ಕಲಾಚಾತುರ್ಯಕ್ಕೆ ನಿದರ್ಶನಗಳಾಗಿವೆ.

ಚಿತ್ರ ೯ರಲ್ಲಿ ಪಾರ್ಶ್ವನಾಥ ಸ್ವಾಮಿಯು ನಾಗಪೀಠದ ಮೇಲೆ ನಾಗಛತ್ರಿಯ ಕೆಳಗೆ ಧ್ಯಾನಮಗ್ನನಾಗಿ ಕುಳಿತಿರುವ ಭಂಗಿಯೂ ಇಕ್ಕೆಲಗಳಲ್ಲಿ ಕೈಮುಗಿದು ಕುಳಿತಿರುವ ಶಿಷ್ಯದ್ವಯರೂ ಮುಖಭಾವ ಸಂಯೋಜನೆಗೆ ಉತ್ತಮ ಉದಾಹರಣೆಗಳಾದರೆ ಕೆಳಗಿನ ಅಂಕಣದಲ್ಲಿ ಮಾತಂಗ ಯಕ್ಷನು ತನ್ನ ವಾಹನವಾದ ಆನೆಯೊಂದಿಗೆ ತಲೆ ಎತ್ತಿ ತೊಡೆಎತ್ತಿ ಕುಳಿತಿರುವ ಭಂಗಿಯೂ ಇಕ್ಕೆಲಗಳಲ್ಲಿರುವ ವೃಕ್ಷಗಳ ಸಂಯೋಜನೆಯೂ ಸುಂದರವಾಗಿ ಚಿತ್ರಿತವಾಗಿವೆ.

ಚಿತ್ರ ೪ರಲ್ಲಿ ಮಹಾ ಮಾನಸಿದೇವಿ ಮತ್ತು ಅಜಿತ ಯಕ್ಷರ ಚಿತ್ರಗಳು, ಮಕರ ಪೀಠದ ಮೇಲೂ ಹಾಗೂ ಹಂಸಪೀಠದ ಮೇಲೂ ಚಿತ್ರಿತವಾಗಿವೆ. ಈ ರೀತಿಯ ಅನೇಕ ಚಿತ್ರಗಳಲ್ಲಿ ಒಂದು ಚಿತ್ರ ಕಾಳಿ ಮತ್ತು ಅವಳ ಭಕ್ತರದಾಗಿದೆ. ಇದರಲ್ಲಿ ರಾಜ, ರಾಣಿ ಮತ್ತು ಸೇವಕರಿರುವರು. ಈ ಚಿತ್ರದ ಮೇಲುಭಾಗದ ಮುಖಗಳು ಕಿತ್ತುಹೋಗಿರುವುದರಿಂದ ಗುರುತಿಸಲಾಗದಾಗಿವೆ. ಬಹುಶಃ ಇವು ವಿಷ್ಣುವರ್ಧನ ಮತ್ತು ಶಾಂತಲದೇವಿಯರ ಚಿತ್ರಗಳೇ ಇರಬಹುದೇನೋ. ಕರ್ನಾಟಕಕ್ಕೇ ವಿಶಿಷ್ಟವಾದ ಈ ತಾಳೆಗರಿ ಗ್ರಂಥಗಳ ಚಿತ್ರಗಳನ್ನು ರಕ್ಷಿಸಿರುವ ಮೂಡಬಿದ್ರಿಯ ಜೈನ ಬಸದಿಯ ಪದಾಧಿಕಾರಿಗಳು ಸ್ತುತ್ಯರ್ಹರು. ಈ ಚಿತ್ರಗಳ ವಿಶಿಷ್ಟ ಅಭಿವ್ಯಕ್ತಿಗಳಾದ ಸೌಮ್ಯತೆಯ, ಪ್ರಸನ್ನತೆಯ ಕರಚರಣ ವಿನ್ಯಾಸಗಳು, ಶರೀರ ಭಂಗಿಗಳು ಮುಖ ಮುದ್ರೆಗಳು ಭಾವನಾಲೋಲವಾಗಿ ಪರಮಾರ್ಥದ ದಿಕ್ಕಿಗೆ ಎಳೆದೊಯ್ಯುತ್ತವೆ. ಈ ಚಿತ್ರಕಾರರು ಬಳಸಿರುವ ದೇಶೀವರ್ಣಗಳು ಮನಸ್ಸನ್ನು ಎಂದಿಗೂ ಕಲಕುವುದಿಲ್ಲ. ಇಂದಿಗೂ ಆ ವರ್ಣಗಳ ಶಕ್ತಿ ಕುಂದಿಲ್ಲದೆ, ಕುಗ್ಗಿಲ್ಲದೆ ಬಿಡಿಸಲಾರದ ಮರ್ಮದಂತಿದೆ.

ಹೊಯ್ಸಳರ ಕಾಲದ ದೇವಾಲಯ ರಚನೆಯಲ್ಲಿ ಶಿಲ್ಪಕಲೆಗೆ ಮಾತ್ರ ಪ್ರಾಧಾನ್ಯ ದೊರೆತು ಚಿತ್ರರಚನೆಗೆ ಮಾಧ್ಯಮಗಳನ್ನು ಬೇರೆಡೆ ಅರಿಸಲಾಗಿರಬಹುದು. ಹಾಗೆ ಅರಿಸುವಾಗ ನಿರಾಡಂಬರ ನಿರ್ಮಾಣಗಳಾದ ಜಿನಮಂದಿರಗಳ ಕಡೆ ಆಗಿನ ಚಿತ್ರಕಾರರ ಗಮನ ಹರಿದಿರಬೇಕು. ಹಾಗೂ ತಾಳಪತ್ರಗಳನ್ನು ಉಪಯೋಗಿಸಿ ತಮ್ಮ ಚಿತ್ರಗಳನ್ನು ಧಾರ್ಮಿಕ ಗ್ರಂಥಗಳಲ್ಲಿ ಅಳವಡಿಸಿ ಅವುಗಳ ಉಪಯುಕ್ತತೆ, ಮಹತ್ವ ಮತ್ತು ಪಾವಿತ್ರ್ಯಗಳನ್ನು ಹೆಚ್ಚಿಸಿದ ಹೊಯ್ಸಳ ಚಿತ್ರಕಾರರ ಚಾತುರ್ಯವನ್ನು

ಮೆಚ್ಚಲೇಬೇಕು. ಆಗಿನ ಶಿಲ್ಪಿಗಳು ಸರ್ವಸ್ವತಂತ್ರರಾಗಿ ತಮ್ಮ ನಾಮಧೇಯಗಳನ್ನು ತಮ್ಮ ಕೃತಿಗಳ ಕೆಳಗೆ ಕೊರೆದಂತೆ ಚಿತ್ರಕಾರರು ತಮ್ಮ ಹೆಸರುಗಳನ್ನು ಬರೆದಿಲ್ಲವಾದರೂ ಜೈನ ಕಾವ್ಯಗಳಲ್ಲಿ ದೊರೆಯುವ ಒಬ್ಬ ಚಿತ್ರಕಾರನ ಹೆಸರು "ಚೀರಘಟಿ".

ಹೊಯ್ಸಳ ಚಿತ್ರಕಾರರು ತಮ್ಮ ವಿಶಿಷ್ಟ ಶೈಲಿಯಾದ ವಿಶಾಲ ಎದೆ, ಅಗಲವಾಗಿ ಚಿತ್ರಿಸಿದ ಕಣ್ಣುಗಳು, ಎರಡೂ ಕಣ್ಣುಗಳನ್ನು ಎತ್ತಿ ತೋರಿಸುವ ವೈಶಿಷ್ಟ್ಯ, ಮುಂದೆ ಬಂದಿರುವ ತ್ರಿಕೋನಾಕಾರದ ಚೂಪು ಮೂಗು, ದೀರ್ಘವಾದ ಕಣ್ಣಿನಮೂಲೆಗಳು, ಬಿಲ್ಲಿನಾಕಾರದ ಹುಬ್ಬುಗಳು, ಕೋನಯುಕ್ತವಾದ ಮುಖ, ಸುಂದರ ಗಲ್ಲಗಳು, ಸಪೂರಾದ ಸೊಂಟ, ಹಾಗೂ ಹಿತಮಿತವಾದ ವರ್ಣಸಂಯೋಜನೆ ಇವುಗಳಿಂದ ತಮ್ಮತನವನ್ನು ಉಳಿಸಿಕೊಂಡು ಮುಂದಿನ ಚಿತ್ರಕಾರರಿಗೆ ಕಲಾಗುರುಗಳಾಗಿರುವರು. ಇವರ ಪ್ರಭಾವ ಮುಂದಿನ ವಿಜಯನಗರ ಚಿತ್ರಕಾರರ ಮೇಲೆ ಸ್ಪಷ್ಟವಾಗಿ ಬಿದ್ದಿರುವ ಸಂಗತಿ ಆಂಧ್ರಪ್ರದೇಶದ ಲೇಪಾಕ್ಷಿಯ ಪಾಪನಾಶೇಶ್ವರ ದುರ್ಗಾ ದೇವಾಲಯದ ಭಿತ್ತಿ ಚಿತ್ರಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

ಹೊಯ್ಸಳ ಚಿತ್ರಕಾರರು ಮೇಲೆ ಹೇಳಿದ ಕಾರಣಕ್ಕಾಗಿ ತಮ್ಮ ಚಿತ್ರರಚನೆಗೆ ಜೈನ ಮತಮಂದಿರಗಳನ್ನು ಆರಿಸಿದುದರಿಂದ ಈ ಶೈಲಿಯನ್ನು ಕಲಾವಿಮರ್ಶಕರು "ಜೈನ ಚಿತ್ರಕಲೆ" ಎಂದು ಕರೆದಿರುವರು. ಆದರೆ ಈ ಕಲಾಪ್ರಕಾರವನ್ನು ಸರಿಯಾದ ರೀತಿಯಲ್ಲಿ ಗುರುತಿಸಿ, ಗೌರವಿಸಿ, ಹೊಯ್ಸಳ ಚಿತ್ರಕಲಾಪ್ರಕಾರದ ವಿಶಿಷ್ಟತೆಯನ್ನು ಕಲಾಪ್ರಪಂಚಕ್ಕೆ ಸರಿಯಾಗಿ ಪರಿಚಯಿಸುವ ಕಾರ್ಯ ನಡೆಯಬೇಕಾಗಿದೆ.

—o—





ಆಕೃತಿ 1. ನಾವಿನಿಮ್ಮಡಿಯ ಸ್ಮಾರಕ (ಪು. 180)



ಆಕೃತಿ 6. ಖಜುರಾಹೋ (ಪ್ರ. 182)



ಆಕೃತಿ 7. ಖಜುರಾಹೋ (ಪ್ರ. 182)

ತಿಗಳಾರಿ ಲಿಪಿ

ಅ ಆ ಇ ಈ ಉ ಊ ಋ ೠ ಌ ೡ ಎ ಐ ಒ ಔ ಅಂ ಅಃ

ಕ ಖ ಗ ಘ ಙ ಚ ಛ ಜ ಝ ಞ ಟ ಠ ಡ ಢ ಣ ತ ಥ ದ ಧ ನ ಪ ಫ ಬ ಭ ಮ

ಯ ರ ಲ ವ ಶ ಷ ಸ ಹ ಳ ಕ್ಷ ಜ್ಞ

ಕ ಕಾ ಕಿ ಕೀ ಕು ಕೂ ಕೆ ಕೈ ಕೊ ಕೌ ಕಂ ಕಃ

(ಪುಟ 400 ರಿಂದ 405)

[ಡಾ|| ಫ. ಗು. ಹಳಕಟ್ಟಿ ಅವರು ಹೊಳಲು ಹಿರೇಮಠದ ಶ್ರೀ ಚಂದ್ರಶೇಖರ ಶಾಸ್ತ್ರಿಗಳು 'ವ್ಯಾಕರಣ ತೀರ್ಥ' ಅವರಿಗೆ ಬರೆದ ಕಾರ್ಡಿನ ಪಡಿಯಚ್ಚು.]

[illegible]

ಡಾ|| ಹಳಕಟ್ಟಿ ಅವರ ಹಸ್ತಾಕ್ಷರಗಳಿರುವ ಈ ಅಮೂಲ್ಯ ಅಂಚೆ ಕಾರ್ಡನ್ನು ಪ್ರೊ|| ಜಿ. ಎಂ. ಉಮಾಪತಿ ಶಾಸ್ತ್ರಿಗಳು ಹುಬ್ಬಳ್ಳಿಯ ಶ್ರೀ ಮೂರು ಸಾವಿರ ಮಠದ ರದ್ದಿ ಕಾಗದಗಳ ರಾಶಿಯಲ್ಲಿ ಸಂಪಾದಿಸಿದರು.

[ಪಡಿಯಚ್ಚುಗಾರರು : ಶ್ರೀ ಶಾರದಾ ಪ್ರೊಸೆಸ್ ಸ್ಟುಡಿಯೊ, ಧಾರವಾಡ-8]



ಕರ್ನಲ್ ಮೆಕೆಂಜಿ (೧೭೫೪–೧೮೨೧)
(Colonel Colin Meckenzie)

ಕೃಪೆ: ಎಂ. ಜಿ. ಹೆಗ್ಡೆ

# ಅನುಬಂಧಗಳು

## ೧. ಫ. ಗು. ಹಳಕಟ್ಟಿಯವರ ಜೀವನದ ಮಹತ್ವದ ಘಟನೆಗಳು

೨-೭-೧೮೮೦ —ಜನನ

೪-೭-೧೮೮೩ —ತಾಯಿ ದಾನಮ್ಮನವರ ಮರಣ

೧೮೯೬ —ಮ್ಯಾಟ್ರಿಕ್ಯುಲೇಶನ್

೯-೨-೧೮೯೬ —ಮದುವೆ

೧೯೦೨ —ಬಿ. ಎ. ಪದವಿ

೧೯೦೩ —ಶಿವಲಿಂಗಪ್ಪ ಮಂಚಾಲಿಯವರ ಮನೆಯಲ್ಲಿ 'ಷಟ್‌ಸ್ಥಲ ತಿಲಕ' ಮತ್ತು 'ಪ್ರಭುದೇವರ ವಚನ'ಗಳ ತಾಳೆಗರಿಗಳನ್ನು ನೋಡಿ ಆಕರ್ಷಿತರಾದುದು

೧೯೦೪ —ಎಲ್ಎಲ್‌ಬಿ. ಪ್ರಥಮವರ್ಗದಲ್ಲಿ ಪಾಸಾಗಿ ವಿಜಾಪುರದಲ್ಲಿ ವಕೀಲಿ ವೃತ್ತಿಯನ್ನಾರಂಭಿಸಿದುದು

೫-೧೧-೧೯೦೬ —ಚಂದ್ರಶೇಖರನ ಜನನ

೧೯೧೦ —ಬಿ. ಎಲ್. ಡಿ. ಇ. ಸಂಸ್ಥೆ ಸ್ಥಾಪಿಸಿದ್ದು

೧೯೧೨ —ಶ್ರೀ ಸಿದ್ಧೇಶ್ವರ ಬ್ಯಾಂಕ್ ಸ್ಥಾಪಿಸಿದ್ದು ಮತ್ತು ಅದರ ಅಧ್ಯಕ್ಷರಾದುದು

೧೯೧೩ —ಸಹಕಾರಿ ಸಂಘಗಳ ಗೌರವ ಸಂಘಟಕರಾಗಿ ಕಾರ್ಯಮಾಡಿದುದು

೨೩-೭-೧೯೧೩ —ಗುರುಪುತ್ರನ ಜನನ

೧೯೧೪ —ಸಿದ್ಧೇಶ್ವರ ಹೈಸ್ಕೂಲ್ ಸ್ಥಾಪಿಸಿದುದು

೧೯೧೭ —ವಿಜಾಪುರ ಜಿಲ್ಲಾ ಕಾಂಗ್ರೆಸ್ ಕಮಿಟಿ ಕಾರ್ಯದರ್ಶಿಯಾದುದು

೧೯೧೯ —[illegible] ಉಪಾಧ್ಯಕ್ಷರಾದುದು ಮ [illegible]

[illegible]

[illegible]

೧೯೨೧ —ಚಿಕ್ಕಮಗಳೂರು ಸಾಹಿತ್ಯ ಪರಿಷತ್ತಿನಲ್ಲಿ ವಚನಗಳ ವಿಷಯವಾಗಿ ವ್ಯಾಖ್ಯಾನ ಮಾಡಿದುದು

೧೯೨೨ —ಬಸವೇಶ್ವರ ವಚನದ ಇಂಗ್ಲೀಷ್ ಅನುವಾದವನ್ನು ಇಂಡಿಯನ್ ಆ್ಯಂಟಿಕ್ವರಿಯಲ್ಲಿ ಪ್ರಕಟಿಸಿದುದು

೧೯೨೩ —ಮತ್ತೆ ವಿಜಾಪುರಕ್ಕೆ ಬಂದು ನೆಲಸಿ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು 'ಗವರ್ನಮೆಂಟ ಪ್ಲೀಡರ್' ಎಂದು ನೇಮಕರಾದುದು

೨೨-೧೧-೧೯೨೫—'ಹಿತಚಿಂತಕ' ಮುದ್ರಣಾಲಯ ಸ್ಥಾಪಿಸಿದುದು

೧-೨-೧೯೨೬ —'ಶಿವಾನುಭವ' ತ್ರೈಮಾಸಿಕ ಪತ್ರಿಕೆ ಪ್ರಾರಂಭಿಸಿದುದು

೧೯೨೬ —ಬಳ್ಳಾರಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದುದು.

೬-೧೦-೧೯೨೭ —'ನವಕರ್ನಾಟಕ' ವಾರಪತ್ರಿಕೆ ಆರಂಭಿಸಿದುದು

೧೯೩೩ —ಧಾರವಾಡದಲ್ಲಿ ನಡೆದ ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾದುದು

೨೭-೮-೧೯೩೬ —ತಂದೆ ಗುರುಬಸಪ್ಪನವರ ಮರಣ

೧೯೩೮ —'ವಿಲ್ಸನ್ ಆಂಟಿಫ್ಯಾಮಿನ್ ಇನ್ಸ್ಟಿಟ್ಯೂಟ್'ಗೆ ಸದಸ್ಯ ಹಾಗೂ ಕಾರ್ಯದರ್ಶಿಗಳಾದುದು.

೧೨-೧೦-೧೯೪೪—ರಾಣಿಬೆನ್ನೂರಿನಲ್ಲಿ ಮಾನಪತ್ರ ಸ್ವೀಕರಿಸಿದುದು

೧೯೫೦ —ಹಿರಿಯಮಗ ಚಂದ್ರಶೇಖರ ಲಿಂಗೈಕ್ಯನಾದುದು

೧೧-೪-೧೯೫೧ —ನವಲಗುಂದದಲ್ಲಿ ಮಾನಪತ್ರ ಸ್ವೀಕರಿಸಿದುದು

ಡಿಸೆಂಬರ್ ೧೯೫೧—'ಶಿವಾನುಭವ' ಬೆಳ್ಳಿಸಂಚಿಕೆ ಪ್ರಕಟನೆ

೩೧-೪-೧೯೫೪ —ಸಿಂದಗಿಯಲ್ಲಿ ಮಾನಪತ್ರ ಸ್ವೀಕರಿಸಿದುದು

೧೯೫೬ —ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಿಲಿಟ್ ಪದವಿ ಸ್ವೀಕಾರ

೧೨-೧೨-೧೯೫೬—ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮಾನಪತ್ರ ಸ್ವೀಕರಿಸಿದುದು

೬-೩-೧೯೫೭ —ಬಂಥನಾಳದಲ್ಲಿ ಸಂಗನ ಬಸವ ಶಿವಯೋಗಿಗಳಿಂದ ಕೃಪಾಶೀರ್ವಾದ ಹಾಗೂ ಮಾನಪತ್ರ ಸ್ವೀಕರಿಸಿದುದು

೨೫-೪-೧೯೫೭ —ಸಿದ್ಧೇಶ್ವರ ಬ್ಯಾಂಕಿನಿಂದ ೫೮೦೦ ರೂಗಳ ಹಮ್ಮಿಣಿ ಮತ್ತು ಮಾನಪತ್ರ ಸ್ವೀಕರಿಸಿದುದು

೧೬-೧-೧೯೬೦ —ಧಾರವಾಡದಲ್ಲಿ ಹಮ್ಮಿಣಿ ಹಾಗೂ ಮಾನಪತ್ರ ಸ್ವೀಕರಿಸಿದುದು

೧೯-೨-೧೯೬೪ —ವಿಜಾಪುರ ಕಾಮರ್ಸ್ ಕಾಲೇಜಿನ ಕರ್ನಾಟಕ ಸಂಘದ ವಾರ್ಷಿಕೋತ್ಸವದ ಮುಖ್ಯ ಅತಿಥಿಗಳಾಗಿದ್ದುದು

೨೫-೫-೧೯೬೪ —ಸತಿ ಭಾಗೀರಥೀದೇವಿಯವರು ಲಿಂಗೈಕ್ಯರಾದುದು

೨೯-೬-೧೯೬೪ —ಮರಣ

ಆಧಾರ: ಹಳಕಟ್ಟಿ ಫಕೀರಪ್ಪನವರು; ಪ್ರೊ॥ಸಂಗಮನಾಥ ಹಂಡಿ; ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ; ಪು: ಉ೫.

—o—

ವಿ. ಸೂ: ಹಳಕಟ್ಟಿ ವಾಙ್ಮಯ ಸೂಚಿಯ ಹೆಚ್ಚಿನ ವಿವರಗಳಿಗೆ (ಹಳಕಟ್ಟಿಯವರ ಶಿವಾನುಭವ ಕೃತಿಸೂಚಿ, ಶಿವಾನುಭವ ಲೇಖನಸೂಚಿ, ಇತರ ಪತ್ರಿಕೆ ಗ್ರಂಥಗಳ ಲೇಖನ ಸೂಚಿ, ಭಾಷಣ ಸೂಚಿ, ಹಳಕಟ್ಟಿಯವರನ್ನು ಕುರಿತ ಲೇಖನ ಸೂಚಿ ಇತ್ಯಾದಿಗಳಿಗೆ) 'ಬಸವ ಪಥ' (ಬಸವ ಸಮಿತಿ ಬೆಂಗಳೂರು) ಸಂಪುಟ ೨ ರ ಸಂಚಿಕೆ ೨ ಮತ್ತು ೩ ರಲ್ಲಿ ಶ್ರೀ ಎಸ್. ಶಿವಣ್ಣ ಅವರ 'ಡಾ॥ ಫ.ಗು. ಹಳಕಟ್ಟಿಯವರ ಲೇಖನ ಕೃತಿ ಇತ್ಯಾದಿಗಳ ಸೂಚಿ' ಎಂಬ ಲೇಖನವನ್ನು ನೋಡಿ.

## ೨. 'ಮಣಿಹ'ದ ಲೇಖಕರು

೧. ಡಾ|| ಸಿದ್ಧಯ್ಯ ಪುರಾಣಿಕ್
4/5A, 'ಶ್ರೀಗಿರಿ'
ಆಲಿ ಆಸ್ಕರ್ ರಸ್ತೆ,
ಬೆಂಗಳೂರು–52

೨. ಪ್ರೊ|| ಎಂ. ವಿ. ಸೀತಾರಾಮಯ್ಯ
54, 'ಅರವಿಂದ', 3 ನೇ ಕ್ರಾಸ್
ಗವಿಪುರಂ ವಿಸ್ತರಣ,
ಬೆಂಗಳೂರು–19

೩. ಡಾ|| ಆರ್. ಶೇಷಶಾಸ್ತ್ರಿ
L–45, ಟ್ಯಾಂಕ್ ಬಂಡ್ ರಸ್ತೆ
ಕಲಾಸಿಪಾಳ್ಯಂ, ಬೆಂಗಳೂರು–2

೪. ಪ್ರೊ|| ಗೌ.ಮ. ಉಮಾಪತಿ ಶಾಸ್ತ್ರಿ
ಹಿಂದಿ ಪ್ರಾಧ್ಯಾಪಕರು
ಬಸವೇಶ್ವರ ಕಾಲೇಜು,
ಬಾಗಲಕೋಟೆ

೫. ಶ್ರೀ ನಾ. ಗೀತಾಚಾರ್ಯ
ಕನ್ನಡ ಎಂ. ಎ. ವಿದ್ಯಾರ್ಥಿ
ಕನ್ನಡ ಅಧ್ಯಯನ ಕೇಂದ್ರ,
ಜ್ಞಾನಭಾರತಿ, ಬೆಂಗಳೂರು–56

೬. ಪ್ರೊ|| ಸ. ಸ. ಮಾಳವಾಡ
'ಪ್ರಶಾಂತ', ಕಲ್ಯಾಣನಗರ,
ಧಾರವಾಡ–7

೭. ಶ್ರೀ ಸೀತಾರಾಮ ಎಸ್.
ಜಾಗೀರ್‌ದಾರ್
ನಂ. 9, IIIನೇ ಮೇನ್,
ಸರಸ್ವತೀಪುರಂ, ಮೈಸೂರು–9

೮. ಶ್ರೀ ಎಸ್. ಆರ್. ಗುಂಜಾಳ
ಗ್ರಂಥಾಲಯ ವಿಜ್ಞಾನ ವಿಭಾಗ,
ಗುಲ್ಬರ್ಗ ವಿಶ್ವವಿದ್ಯಾಲಯ,
ಗುಲ್ಬರ್ಗ–5

೯. ಶ್ರೀ ಕೆ. ವೆಂಕಟರಾಯಾಚಾರ್ಯ
ವಿದ್ವಾನ್,
ಸುರತ್ಕಲ್, ದಕ್ಷಿಣ ಕನ್ನಡ

೧೦. ಪ್ರೊ|| ಬಿ. ಬಿ. ಮಹೀಶವಾಡಿ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ–3

೧೧. ಶ್ರೀ ಜಿ. ಅಶ್ವತ್ಥನಾರಾಯಣ
95, ಮಹಡಿ, 34ನೇ 'ಬಿ' ಕ್ರಾಸ್
16ನೇ ಮೇನ್, IV ನೇ 'ಟಿ'
ಬ್ಲಾಕ್, ಜಯನಗರ,
ಬೆಂಗಳೂರು–11

೧೨. ಡಾ|| ಬಿ. ಎಸ್. ಕುಲಕರ್ಣಿ
ನಿರ್ದೇಶಕರು, ಕನ್ನಡ ಅಧ್ಯಯನ
ಪೀಠ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ–3

೧೩. ಡಾ|| ಟಿ. ಎನ್. ನಾಗರತ್ನ
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು–6

೧೪. ಶ್ರೀ ಕೆ. ಆರ್. ಶೇಷಗಿರಿ
ಕನ್ನಡ ಅಧ್ಯಯನ ಕೇಂದ್ರ
ಮಾನಸಗಂಗೋತ್ರಿ, ಮೈಸೂರು-6

೧೫. ಶ್ರೀ ಎನ್. ಎಸ್.
ಲಕ್ಷ್ಮೀನಾರಾಯಣ ಭಟ್ಟ
ರೀಡರ್, ಕನ್ನಡ ಅಧ್ಯಯನ ಕೇಂದ್ರ
ಜ್ಞಾನ ಭಾರತಿ, ಬೆಂಗಳೂರು–56

೧೬. ಶ್ರೀ ಟಿ. ಕೇಶವ ಭಟ್ಟ
754, 'ಶ್ರೀವರ್ಧನ', 15ನೇ
ಮೇನ್, ಬನಶಂಕರಿ IIನೇ ಹಂತ,
ಬೆಂಗಳೂರು–90

೧೮. ಡಾ|| ಬಾ. ರಾ. ಗೋಪಾಲ್
ಶಾಸನ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ,
ಮೈಸೂರು–6

೧೯. ಪ್ರೊ||ಗರ್ಗೇಶ್ವರಿ ವೆಂಕಟಸುಬ್ಬಯ್ಯ
ಆಕ್ಟ್ಯುಯರಿ, 20, 'ಗಣೇಶಧಾಮ'
2ನೇ ಕ್ರಾಸ್, 9ನೇ ಮೇನ್,
ರಾಜಮಹಲ್ ವಿಲಾಸ ಬಡಾವಣೆ,
ಬೆಂಗಳೂರು–80

೨೦. ಶ್ರೀ. ನ. ಕೃಷ್ಣ ಜೋಯಿಸ್
ವಿದ್ವಾನ್, 1112,
ಝಾನ್ಸಿಲಕ್ಷ್ಮೀ ಬಾಯಿ ರಸ್ತೆ,
ವಿದ್ಯಾರಣ್ಯಪುರಂ, ಮೈಸೂರು–8

೨೧. ಡಾ|| ಕೆ. ವಿ. ಪುಟ್ಟಪ್ಪ
'ಉದಯರವಿ',
ವಾಣೀವಿಲಾಸ ಮೊಹಲ್ಲಾ,
ಮೈಸೂರು–2

೨೨. ಶ್ರೀ ಯತಿರಾಜ ಸಂಪತ್ಕುಮಾರ
ರಾಮಾನುಜ ಜೀಯರ್
ಯತಿರಾಜಮಠ
ಮಲ್ಲೇಶ್ವರಂ, ಬೆಂಗಳೂರು,–3

೨೩. ಡಾ|| ಜ್ಯೋತ್ಸ್ನಾ ಕಾಮತ್
ಬಿ. 2/6, ದತ್ತಕೃಪಾ ಫ್ಲ್ಯಾಟ್,
10ನೇ ಮೇನ್, 11ನೇ ಕ್ರಾಸ್
ಮಲ್ಲೇಶ್ವರಂ, ಬೆಂಗಳೂರು-3

೨೪. ಶ್ರೀ. ಎಂ. ಗೋವಿಂದರಾಜು
10, ಮಾಮುಂಡಿ ಪಿಳ್ಳೈಸ್ಟ್ರೀಟ್,
ಶಿವನ್‌ಶೆಟ್ಟಿ ಗಾರ್ಡನ್ಸ್
ಬೆಂಗಳೂರು–42

೨೫. ಡಾ|| ಜಿ. ಎಸ್. ಮೋಹನ್
ಅಧ್ಯಾಪಕರು, ತೆಲುಗು ವಿಭಾಗ
ಜ್ಞಾನ ಭಾರತಿ, ಬೆಂಗಳೂರು–50

೨೬. ಡಾ|| ಜಿ. ವರದರಾಜರಾವ್
'ಸುದರ್ಶನ', 17 ನೇ ಕ್ರಾಸ್,
ಜಯನಗರ, ಮೈಸೂರು–4

೨೭. ಶ್ರೀ ದೇವರ ಕೊಂಡಾರೆಡ್ಡಿ
ಸಂಶೋಧನ ವಿಭಾಗ,
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು–18

೨೮. ಶ್ರೀ ಎಂ. ಜಿ. ಹೆಗ್ಡೆ, ಹಲಸಿಗೆ
ಕ್ಷೇತ್ರ ಕಾರ್ಯ ಸಹಾಯಕರು
ಜನಪದ ವೈದ್ಯಕೋಶ
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು-18

೨೯. ಶ್ರೀ ಹೀ. ಚಿ. ಶಾಂತವೀರಯ್ಯ
ಸಂಪಾದಕರು, ಕನ್ನಡ ನಿಘಂಟು,
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು–18

೨೯. ಡಾ|| ಎನ್. ಅನಂತರಂಗಾಚಾರ್
2909, 'ನೃಸಿಂಹ ಪ್ರಸಾದಂ'
ಸರಸ್ವತೀಪುರಂ, ಮೈಸೂರು–9

೩೦. ಶ್ರೀಮತಿ ಎಂ. ಎ. ಸಿಂಗಮ್ಮ
'ಕಲಾನಿಧಿ', 9, ಮಹಂತು
ಲೇಔಟ್, ಬಸವನಗುಡಿ ರಸ್ತೆ,
ಬೆಂಗಳೂರು–19

೩೧. ಪಂಡಿತ ಶ್ರೀ ಕೆ. ಪಿ. ಶಿವಲಿಂಗಯ್ಯ
ವಾಗ್ವಿಲಾಸ ಪ್ರಕಾಶನ,
425–H, 'ಕುಮಾರ ನಿಲಯ',
ವಿಜಯನಗರ, ಬೆಂಗಳೂರು–40

೩೨. ಪ್ರೊ|| ಬಿ. ರಾಮಸ್ವಾಮಿ
9, 8ನೇ ಕ್ರಾಸ್
ಈಜುಕೊಳ ಬಡಾವಣೆ
ಬೆಂಗಳೂರು–3.

೩೩. ಶ್ರೀಮತಿ ಕೆ. ಶಾಂತ
76, 4ನೆಯ ಮೆಯ್ನ್,
ನರಸಿಂಹರಾಜ ಕಾಲೊನಿ,
ಬೆಂಗಳೂರು–19

೩೪. ಡಾ|| ಪಿ. ವಿ. ನಾರಾಯಣ
ಕನ್ನಡ ಅಧ್ಯಾಪಕ,
ವಿಜಯ ಕಾಲೇಜು
ಬೆಂಗಳೂರು–4.

೩೫. ಶ್ರೀ ಎನ್. ಎಸ್. ತಾರಾನಾಥ್
ಸಂಶೋಧನ ಸಹಾಯಕರು
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು–6

೩೬. ಶ್ರೀ ಟಿ. ಆರ್. ಮಹದೇವಯ್ಯ
ಉಪ ಸಂಪಾದಕರು,
ಕನ್ನಡ ನಿಘಂಟು
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು–18.

೩೭. ಶ್ರೀ ಸಿ. ಯು. ಮಂಜುನಾಥ್
ಕನ್ನಡ ಅಧ್ಯಾಪಕರು,
ಶ್ರೀ ಜಗದ್ಗುರು ರೇಣುಕಾಚಾರ್ಯ
ಕಲಾ ಕಾಲೇಜು, ಬೆಂಗಳೂರು–7

೩೮. ಡಾ|| ಎಂ. ಚಿದಾನಂದಮೂರ್ತಿ
ಪ್ರಾಧ್ಯಾಪಕರು,
ಕನ್ನಡ ಅಧ್ಯಯನ ಕೆಂದ್ರ
ಜ್ಞಾನ ಭಾರತಿ, ಬೆಂಗಳೂರು–56

೩೯. ಡಾ|| ಎಸ್. ವಿ. ದೇಶಿಕಾಚಾರ್
464, ವೆಸ್ಟ್ ಆಫ್ ಕಾರ್ಡ್ ರಸ್ತೆ,
2ನೇ ಹಂತ ರಾಜಾಜಿನಗರ,
ಬೆಂಗಳೂರು–10

೪೦. ಶ್ರೀ ಬಿ. ಎಸ್. ಸಣ್ಣಯ್ಯ
ಸಹಾಯಕ ನಿರ್ದೇಶಕರು,
ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು-6

೪೧. ಶ್ರೀ ಎಸ್. ಶಿವಣ್ಣ
ಸಂಪಾದಕರು, ಹಸ್ತಪ್ರತಿ ವಿಭಾಗ
ಕನ್ನಡ ಅಧ್ಯಯನ ಕೇಂದ್ರ
ಜ್ಞಾನ ಭಾರತಿ, ಬೆಂಗಳೂರು-56

೪೨. ಶ್ರೀ ಕೆಳದಿ ಗುಂಡಾ ಜೋಯಿಸ್
ಕೆಳದಿ ಮ್ಯೂಸಿಯಂ,
ಕೆಳದಿ.

೪೩. ಶ್ರೀ ಪಿ. ವಿ. ಕೃಷ್ಣಮೂರ್ತಿ
ದೇವಪ್ಪ ಲೇಔಟ್
ಕೃಷ್ಣಯ್ಯ ಪಾಳ್ಯ,
ಎನ್.ಜಿ.ಇ.ಎಫ್. ಹಿಂಭಾಗ,
ಬೆಂಗಳೂರು–38.

೪೪. ಶ್ರೀ ಜಿ. ಎಂ. ಹೆಗಡೆ
ಆನಂದಾಶ್ರಮ
ಮೂಳಮಡ್ಡಿ ಧಾರವಾಡ–7

೪೫. ಎಚ್. ಆರ್. ರಘುನಾಥ ಭಟ್
ಇತಿಹಾಸ ವಿಭಾಗ
ಮಾನಸಗಂಗೋ , ಮೈಸೂರು-6

೪೬. ಶ್ರೀ ವಿ. ಟಿ. ಎಸ್. ರಾವ್
120/35, 14ನೇ ಎ ಕ್ರಾಸ್
ವಯ್ಯಾಲಿ ಕಾವಲು
ಬೆಂಗಳೂರು–2

—೦—

# ತಿದ್ದುಪಡಿ

| ಪುಟ | ಸಾಲು | ತಪ್ಪು | ಸರಿ |
|---|---|---|---|
| 5 | 23 | ಹಳಕಟ್ಟಿಯ | ಹಳಕಟ್ಟಿಯ |
| 11 | 4 | ಕಟ್ಟೆಲ್ | ಕಿಟ್ಟೆಲ್ |
| 27 | 16 | ೧೯೦೪ | ೧೯೪೦ |
| 28 | 21 | ೧೯೮೧ | ೧೯೪೧ |
| 62 | 1 | correctone | correct one |
| 62 | 26 | Mibdle | Middle |
| 67 | 1 | ಹಸಪ್ರತಿಗಳ | ಹಸ್ತಪ್ರತಿಗಳ |
| 85 | 22 | ಗ್ರಂಥಪ್ರಪಟನೆ | ಗ್ರಂಥ ಪ್ರಕಟನೆ |
| 117 | 16 | ಶತದಲ್ಲಿ | ಶತಕದಲ್ಲಿ |
| 184 | 8 | ಒಲೆಯ | ಓಲೆಯ |
| 193 | 26 | Descriptue | Descriptive |
| 204 | 10 | ಸಾಯಕ | ನಾಯಕ |
| 218 | 15 | ನಪುಗೆ | ನಮಗೆ |
| 234 | 9 | ಯಾರು ಸಾಳಾವಳಿ | ಊರು ಸಾಲಾವಳಿ |
| 275 | 15 | ಕೋರುವ | ತೋರುವ |
| 411 | 21 | ಎಂರು | ಎಂದು |

## ಜಾಹಿರಾತುಗಳು

೧. ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ

೨. ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಂಪೆನಿ, ಬೆಂಗಳೂರು

೩. ಸ್ಟೇಟ್ ಬ್ಯಾಂಕ್ ಆಫ್ ಮೈಸೂರು

೪. ಎಲೆಕ್ಟ್ರಾನಿಕ, ಬೆಂಗಳೂರು–11

೫. ಎಲೆಕ್ಟ್ರಾನಿಕ್ ಲ್ಯಾಬ್, ಬೆಂಗಳೂರು–11

೬. ಸುರೇಶ್ ಎಲೆಕ್ಟ್ರಿಕಲ್ಸ್, ಬೆಂಗಳೂರು–11

೭. ಕಾಫೀ ಬೋರ್ಡ್

೮. ಲಿಪಿ ಮುದ್ರಣ

ಮೇಲ್ಕಂಡ ಜಾಹಿರಾತುದಾರರಿಗೆ ಪ್ರತಿಷ್ಠಾನ ಕೃತಜ್ಞವಾಗಿದೆ.

—ಸಂ.

ಮೇಲ್ಕಂಡ ಬ್ಯಾಂಕಿಗೆ ಜಾಹೀರಾತು ಕೊಟ್ಟಿದ್ದಕ್ಕಾಗಿ ಪ್ರತಿಷ್ಠಾನ ಕೃತಜ್ಞವಾಗಿದೆ.
—ಸಂ.

